# ಜನಪದ ಕಥನ ಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಮೇಘನಾಥ ಎ.ಕೆ.ಎನ್

ಮಾರ್ಗದರ್ಶಕರು
ಪ್ರೊ. ಸ.ಚಿ. ರಮೇಶ
ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬

# ಜನಪದ ಕಥನಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಮೇಘನಾಥ ಎ.ಕೆ.ಎನ್.**

ಮಾರ್ಗದರ್ಶಕರು

**ಪ್ರೊ. ಸ.ಚಿ. ರಮೇಶ**

ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೪

## ದೃಢೀಕರಣ ಪತ್ರ

ಜನಪದ ಕಥನಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಶ್ರೀ ಮೇಘನಾಥ ಎ.ಕೆ.ಎನ್.** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 7-8-2014
ಸ್ಥಳ : ವಿದ್ಯಾರಣ್ಯ

(ಡಾ. ಸ.ಚಿ. ರಮೇಶ)
ಮಾರ್ಗದರ್ಶಕರು
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

# ಪ್ರಮಾಣ ಪತ್ರ

ಜನಪದ ಕಥನಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರೊ. ಸ.ಚಿ. ರಮೇಶ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 7.8.2014
ಸ್ಥಳ : ವಿದ್ಯಾರಣ್ಯ

(ಮೇಘನಾಥ ಎ.ಕೆ.ಎಸ್.)
ಸಂಶೋಧಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

# ಕೃತಜ್ಞತೆಗಳು

**"ಜನಪದ ಕಥನಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ"** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲು ನನಗೆ ತುಂಬಾ ಹರ್ಷವೆನಿಸುತ್ತಿದೆ. ನಾನು ಕಟ್ಟಿಕೊಂಡಿದ್ದ ಸಂಶೋಧನೆಯ ಕನಸು ನನಸಾದದ್ದು ಪ್ರಸ್ತುತ ಮಹಾಪ್ರಬಂಧದ ಮೂಲಕ. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ನೆರವಾದವರಿಗೆ ಸ್ಮರಿಸುವುದು ನನ್ನ ಆದ್ಯ ಕರ್ತವ್ಯ ಹಾಗೂ ಸಂತೋಷದ ಸಂಗತಿ.

ಪ್ರಾರಂಭದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಂತಹ ಹಿಂದಿನ ಕುಲಪತಿಗಳಾದ ಪ್ರೊ. ಎ. ಮುರಿಗೆಪ್ಪ ಅವರಿಗೆ, ಈಗಿನ ಕುಲಪತಿಗಳಾದಂತಹ ಪ್ರೊ. ಹಿ.ಚಿ. ಬೋರಲಿಂಗಯ್ಯ ಅವರಿಗೆ ಹಾಗೂ ಕುಲಸಚಿವರಾದ ಡಾ. ಟಿ.ಪಿ. ವಿಜಯ್ ಅವರಿಗೂ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ಅಶೋಕ ಕುಮಾರ ರಂಜೇರೆ ಅವರಿಗೆ ಮೊದಲಿಗೆ ಕೃತಜ್ಞತೆಗಳನ್ನು ಹೇಳುತ್ತೇನೆ.

ನನ್ನ ಸಂಶೋಧನೆಗೆ ಸೂಕ್ತ ವಿಷಯವನ್ನು ನೀಡಿ ಅದಕ್ಕೆ ಪೂರಕವಾಗುವಂತೆ ಚರ್ಚಿಸುತ್ತಾ ಅಕ್ಷರ ಅಕ್ಷರವನ್ನೂ ಬಿಡದೆ ಪರಿಶೀಲಿಸಿ ಬರವಣಿಗೆಯ ಓರೆ ಕೋರೆಗಳನ್ನು ತಾಳ್ಮೆಯಿಂದ ತಿದ್ದಿ ತೀಡಿ ಆತ್ಮೀಯತೆಯಿಂದ ಸಹಕರಿಸಿದ ಮಾರ್ಗದರ್ಶಕರೂ ಆದ ಪ್ರೊ. ಸ.ಚಿ. ರಮೇಶ್ ಅವರಿಗೂ ಕೃತಜ್ಞತೆಗಳನ್ನು ಹೇಳುತ್ತೇನೆ.

ಶಿಸ್ತು ಹಾಗೂ ಶ್ರಮ ಸಂಸ್ಕೃತಿಯ ಪ್ರತೀಕವಾಗಿರುವ ಹಾಗೂ ಅದನ್ನು ವಿದ್ಯಾರ್ಥಿಗಳಿಗೂ ಕಲಿಸುವ ವಿಭಾಗದ ಪ್ರಾಧ್ಯಾಪಕರುಗಳಾದ ಡಾ. ಮಂಜುನಾಥ ಬೇವಿನಕಟ್ಟಿ, ಡಾ. ಮೊಗಳ್ಳಿ ಗಣೇಶ್, ಡಾ. ಹೆಬ್ಬಾಲೆ ಕೆ. ನಾಗೇಶ್, ಡಾ. ಸಿ.ಟಿ. ಗುರುಪ್ರಸಾದ್ ಹಾಗೂ ಕನ್ನಡ ಸಾಹಿತ್ಯ ವಿಭಾಗದ ಪ್ರಾಧ್ಯಾಪಕರಾದ ಡಾ. ರಹಮತ್ ತರೀಕೆರೆ, ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ. ಕೆ.ಎಂ. ಮೇತ್ರಿ ಅವರಿಗೂ ಕೃತಜ್ಞತೆಗಳು.

ಕರ್ನಾಟಕ ಜಾನಪದ ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರೊ. ಅಂಬಳಿಕೆ ಹಿರಿಯಣ್ಣ, ಕುಲಸಚಿವರಾದ ಡಾ. ಡಿ.ಬಿ. ನಾಯಕ್, ನಿರ್ದೇಶಕ ಮತ್ತು ಪ್ರಾಧ್ಯಾಪಕರಾದ ಡಾ. ಕೆ. ಪ್ರೇಮ ಕುಮಾರ, ಡಾ. ಚಂದ್ರಪೂಜಾರಿ ಹಾಗೂ ಬೊಧಕ, ಬೋಧಕೇತರ ಸಿಬ್ಬಂದಿಗಳಿಗೂ ಕೃತಜ್ಞತೆಗಳು.

ನನ್ನ ಓದಿನ ಹೆಗ್ಗಳಿಕೆಯನ್ನು ಸಾರುತ್ತ ಅನೇಕ ಕನಸುಗಳನ್ನು ಕಟ್ಟಿಕೊಂಡು ಅವು ಕೈಗೂಡುವ ಮುನ್ನವೇ ದಿವಂಗತರಾದ ನನ್ನ ತಂದೆ ಶ್ರೀ ನಾಗಭೂಷಣಪ್ಪ ಎ.ಕೆ., ನನ್ನ ಏಳ್ಗೆಯನ್ನು ಬಯಸುವ ತಾಯಿ ನಾಗಮ್ಮ ಅವರಿಗೂ ಶೈಕ್ಷಣಿಕ ಅಭಿವೃದ್ಧಿಗೆ ಬೆಂಬಲಿಗರಾಗಿರುವ ಅಣ್ಣನಾದ ಶ್ರೀ ತಿಮ್ಮಪ್ಪ ಎ.ಕೆ. ಹಾಗೂ ಶ್ರೀಮತಿ ಕಮಲಮ್ಮ ಮತ್ತು ಶ್ರೀ ಪರಮೇಶ್ವರಪ್ಪ ಶ್ರೀಮತಿ

ಹೊನ್ನೂರಮ್ಮ ಅವರಿಗೂ ಹಾಗೂ ನನ್ನ ಅಧ್ಯಯನದ ಎಲ್ಲ ಸಾಧ್ಯತೆಗಳನ್ನು ಪ್ರೋತ್ಸಾಹಿಸುತ್ತಾ ನನ್ನ ಏಳ್ಗೆಯನ್ನು ಸಂತೋಷಿಸುವ ಮಡದಿ ಶ್ರೀಮತಿ ವನಜಾಕ್ಷಿ, ಮುದ್ದು ಮಕ್ಕಳಾದ ಎಂ. ಆಪ್ತಿ, ಎಂ. ಆದರ್ಶ ಅವರಿಗೂ ನಾನು ಚಿರಋಣಿಯಾಗಿರುವೆ.

ಯಾವಾಗಲೂ ನನಗೆ ಒಳ್ಳೆಯದನ್ನೇ ಬಯಸುವ ಅಕ್ಕಂದಿರೂ ಮಾವಂದಿರಿಗೆ ಹಾಗೂ ಪುಟಾಣಿಗಳಾದ ಆನಂದ, ಸೌಮ್ಯ, ಗಂಗಾಧರ, ಪವಿತ್ರ, ಮರಿಸ್ವಾಮಿ ಉಮಾದೇವಿ, ರಾಧ, ಶ್ವೇತಾ, ನಾಗಭೂಷಣ, ವೇದಾಂತ ಹಾಗೂ ಪ್ರೌಢಶಾಲಾ ಮುಖ್ಯಗುರುಗಳಾದ ಶ್ರೀ ಕೃಷ್ಣಮೂರ್ತಿ, ದೈಹಿಕ ಶಿಕ್ಷಕರಾದ ಶ್ರೀ ಮಹಮ್ಮದ್ ಮಹೆಬೂಬ್, ಶಿಕ್ಷಕರಾದ ಶ್ರೀ ಎಂ. ಬಸವರಾಜ, ಶ್ರೀ ಕೆ. ಸಿದ್ದಪ್ಪ, ಶ್ರೀ ಗುರುಸಿದ್ದಪ್ಪ, ಶ್ರೀಮತಿ ಗಂಗಮ್ಮ, ಕು. ನೇತ್ರಾವತಿ, ಕು. ಹನುಮಕ್ಕ, ಶ್ರೀ ಮಹಾಂತೇಶ್ ಅವರಿಗೆ ಹಾಗೂ ನನ್ನ ಬದುಕಿಗೆ ಸ್ಫೂರ್ತಿಯ ಸೆಲೆಯಾಗಿ ನನ್ನ ಶ್ರೇಯೋಭಿಲಾಷಿಗಳಾಗಿ ತಮ್ಮದೆಂದೆ ಬಗೆಯುವ ಸ್ನೇಹಿತರಾದ ಡಾ. ಎಸ್. ಮೋಹನ್, ಡಾ. ಕುಪ್ಪೇರಾವ್, ಡಾ. ವೃಷಭಕುಮಾರ್, ಡಾ. ಚಂದ್ರಪ್ಪ ಸೊಬಟಿ, ಶ್ರೀಮತಿ ಮಂಜುಳಾ ಟಿ. ಬದಾಮಿ, ಜೋತ್ಸ್ನಾ ಚಂದ್ರಕಾಂತ, ಅಶ್ವಿನಿ, ಎಸ್. ಗೀತ, ಮಮತ, ಸುಜಾತ ನಿರಂಜಮೂರ್ತಿ, ರೇವಣಸಿದ್ದಪ್ಪ, ಎಂ. ವೇದಾಂತ, ಶ್ರೀಕಾಂತ ಬದಾಮಿ, ಶ್ರೀ ಅಜಿತ್ ಹಡಪದ ಅವರಿಗೂ ಅಭಾರಿಯಾಗಿರುವೆ.

ಕನ್ನಡ ವಿಶ್ವವಿದ್ಯಾಲಯದ ಗ್ರಂಥಪಾಲಕರಿಗೂ ಮತ್ತು ಜಾನಪದ ಅಧ್ಯಯನ ವಿಭಾಗದ ಸಿಬ್ಬಂದಿ ವರ್ಗದವರೆಲ್ಲರಿಗೂ, ಮತ್ತೊಮ್ಮೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅಧ್ಯಯನಕ್ಕೆ ನೆರವಾದ ವಿದ್ವಾಂಸರಿಗೂ ಮತ್ತು ನನ್ನ ಮಿತ್ರರಿಗೂ ಸದಾ ಅಭಿಮಾನದಿಂದ ಕಾಣುವ ನನ್ನೂರಿನ ಸಮಸ್ತ ಬಾಂಧವರಿಗೂ ಹಾಗೂ ಆತ್ಮೀಯತೆಯಿಂದ ಡಿಟಿಪಿ ಕೆಲಸಗಳಲ್ಲಿ ಸಹಕರಿಸಿದ ಜೆ. ಬಸವರಾಜ, ವಿಶ್ವ ಗುಜ್ಜರ್ ಮತ್ತು ರೇಖಾಚಿತ್ರಗಳನ್ನು ರಚಿಸಿಕೊಟ್ಟ ಶ್ರೀ ಮಾಲತೇಶ ಗರಡಿಮನಿ ಹಾಗೂ ಮಹಾಪ್ರಬಂಧವನ್ನು ಅಂದವಾಗಿ ಪುಟವಿನ್ಯಾಸ ಮಾಡಿದ ಶ್ರೀನಿವಾಸ ಕೆ. ಕಲಾಲ್, ಭಾವನಾ ಗ್ರಾಫಿಕ್ಸ್, ಕಮಲಾಪುರ ಇವರಿಗೂ ನಾನು ಅಭಾರಿಯಾಗಿರುವೆ.

**ಮೇಘನಾಥ ಎ.ಕೆ.ಎಸ್.**

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ ಮತ್ತು ವ್ಯಾಪ್ತಿ

### ಪ್ರವೇಶ

ಜಗತ್ತಿನಾದ್ಯಂತ ಪುರುಷಪ್ರಧಾನ ಸಂಸ್ಕೃತಿಯೇ ಕಂಡುಬರುತ್ತದೆ. ಇಂಥ ಸಂಸ್ಕೃತಿಯಲ್ಲಿ ಪುರುಷನ ಅಧೀನಳಾಗಿ ಬದುಕುವ ಹೆಣ್ಣಿನ ಸ್ಥಾನ ಎರಡನೆಯ ದರ್ಜೆಯದು. ಪುರುಷ ಶ್ರೇಷ್ಠ ಹೆಣ್ಣು ಕನಿಷ್ಠ ಎಂಬ ಮನೋಭಾವನೆ ಸಮಾಜದಲ್ಲಿ ಆಳವಾಗಿ ನೆಲೆಯೂರಿಬಿಟ್ಟಿದೆ. ಪುರುಷಕೇಂದ್ರಿತ ಸಮಾಜ ಬಹು ಚಾಕಚಕ್ಯತೆಯಿಂದ ಶೀಲ, ಚಾರಿತ್ರ್ಯ, ಪಾತಿವ್ರತ್ಯ, ವಿಧೇಯತೆ, ತ್ಯಾಗ, ಸಹನೆ, ಕಷ್ಟ ಸಹಿಷ್ಣುತೆ ಮುಂತಾದ ಗುಣಗಳನ್ನು ಹೆಣ್ಣಿನ ಪರಮೋಚ್ಛ ಗುಣಗಳೆಂದು ಆರೋಪಿಸಿ ಸೀತೆ ಸಾವಿತ್ರಿಯರಂಥ ಹೆಣ್ಣಿನ ಮಾದರಿಗಳನ್ನು ಚಾಲ್ತಿಯಲ್ಲಿ ತಂದಿದೆ. ಈ ಸ್ಥಾಪಿತ ಮೌಲ್ಯಗಳನ್ನು ಒಪ್ಪಿಕೊಂಡ ಹೆಣ್ಣಿಗೆ ಸಮಾಜದಲ್ಲಿ ಹೆಚ್ಚಿನ ಗೌರವವಿರುವುದರಿಂದ ಸಹಜವಾಗಿಯೇ ಜನಪದ ಮಹಿಳೆಯರು ಆ ಮೌಲ್ಯಗಳತ್ತ ಆಕರ್ಷಿತರಾಗಿದ್ದಾರೆ. ಆದರೆ ಶೀಲ ಪಾತಿವ್ರತ್ಯಗಳ ಕಟ್ಟುಪಾಡು, ಹೆಣ್ಣಿಗೆ ಮಾತ್ರ ಮೀಸಲಾಗಿದೆ. ಈ ದ್ವಂದ್ವ ನೀತಿಯಿಂದಾಗಿಯೇ ಅವಳ ಜೀವನ ಮತ್ತಷ್ಟು ದಾರುಣಗೊಂಡಿದೆ. ಜೊತೆಗೆ ಕೆರೆ, ಕೋಟೆ ಬಲಿದಾನ ಇತ್ಯಾದಿಗಳಿಗೆ ಮಹಿಳೆಯರನ್ನೇ ಬಲಿ ನೀಡುವುದರ ಮೂಲಕ ಪಕ್ಷಪಾತ ಧೋರಣೆ ಇನ್ನಷ್ಟು ಹೆಚ್ಚಿದೆ. ಹೀಗೆ ಸಮಾಜದ ಎಲ್ಲಾ ಅನಿಷ್ಟ ಪರಂಪರೆಗೂ ಗುರಿಯಾಗುತ್ತಾ, ಕೌಟುಂಬಿಕ ಶೋಷಣೆಯನ್ನು ಸಹಿಸಿಕೊಳ್ಳುತ್ತಾ ಹೆಣ್ಣುಕುಲ ಬದುಕುಳಿದಿರುವುದೇ ಸೋಜಿಗದ ಸಂಗತಿ. ಅಂತಹ ದುರ್ಭರವಾದ ಬದುಕಿನ ಮಧ್ಯೆಯೂ ಜೀವಿಸಬೇಕೆಂಬ ಆಕಾಂಕ್ಷೆಯೊಂದಿಗೆ ಅವಳು ಬಾಳಿನಲ್ಲಿ ಅದಮ್ಯ ಉತ್ಸಾಹ-ಪ್ರೀತಿಗಳನ್ನು ತೋರಿಸುತ್ತಾ ಬಂದಿದ್ದಾಳೆ. ಆದರೆ ಇಂತಹ ಜೀವನ ಪ್ರೀತಿ ಬಾಳಿನಲ್ಲಿ ಕಾಣಿಸಿಕೊಳ್ಳುವುದಕ್ಕೆ ಅಥವಾ ಜೀವನವನ್ನು

ಸಹಾಯ ಮಾಡಿಕೊಳ್ಳುವುದಕ್ಕೆ ಅವಳಿಗೆ ಹಾಡಿನ ಮಾಧ್ಯಮ ಸಹಾಯಕವಾಗಿರುವುದರಲ್ಲಿ ಸಂದೇಹವಿಲ್ಲ. ಜನಪದ ಗರತಿ ತನ್ನ ಬಾಳಿನ ಆಸರಿಕೆ, ಬೇಸರಿಕೆಗಳನ್ನೆಲ್ಲ ತೋಡಿಕೊಂಡಿದ್ದು, ಬೀಸಕಲ್ಲಿನ ಮುಂದೆ ಕುಟ್ಟುವ ಒನಕೆಯ ಮುಂದೆ ಆತ್ಮೀಯ ಗೆಳತಿಯರ ಸಮೂಹದಲ್ಲಿ ಎನ್ನಬಹುದು.

## ೧.೨. ಅಧ್ಯಯನದ ಉದ್ದೇಶ

ಜನಪದ ಗೀತೆಗಳು ಬಹುತೇಕ ತ್ರಿಪದಿಗಳು. ಹೆಣ್ಣಿನ ನೂರಾರು ಅನುಭವಗಳ ಅಭಿವ್ಯಕ್ತಿಯಾದ ಗೀತೆ ಮಹಿಳಾ ಜನಪದ ಪ್ರಕಾರವಾಗಿದೆ. ಆಕೆಯ ದೈನಂದಿನ ಬದುಕಿನೊಂದಿಗೆ ಬೆಸೆದುಕೊಂಡ ಗೀತೆಗಳು ಆಕೆಗೆ ಎದುರಾದ ಬಿಕ್ಕಟ್ಟು, ಸಂಘರ್ಷಕ್ಕೆ, ಸಂಕಟಕ್ಕೆ ನೀಡಿದ ಪ್ರತಿಕ್ರಿಯೆಯಾಗಿದೆ. ಕುಟ್ಟುವಾಗ, ಬೀಸುವಾಗ, ಕಳೆ ಕೀಳುವಾಗ, ಕಾಳು ಆಯುವಾಗ ಹೀಗೆ ಕೈಗಳು ಕೆಲಸದಲ್ಲಿ ತೊಡಗಿರುವಾಗಲೇ ಮನಸ್ಸು ಪಟ್ಟಪಾಡನ್ನು ಅಲ್ಲಲ್ಲೆ ಕಟ್ಟಿ ಹಾಡುತ್ತದೆ. ಜನಪದ ಕಥೆಗಿಂತ ಭಿನ್ನವಾದ ಆವರಣದಲ್ಲಿ ಜನಪದ ಗೀತೆಯು ಸೃಷ್ಟಿಯಾಗುತ್ತದೆ. ಗೀತೆಯಲ್ಲಿ ಕರ್ತೃ ಪ್ರದರ್ಶಕ ಹಾಗೂ ಪ್ರೇಕ್ಷಕ ಮೂವರು ಒಬ್ಬರೇ ಅಥವಾ ವ್ಯಕ್ತಿಯಾಗಿರುವ ಸಾಧ್ಯತೆಯಿದೆ. ಕಥೆಯಲ್ಲಿ ವಾಸ್ತವಿಕ ಬದುಕಿನ ಸತ್ಯಗಳಿಗೆ ಭಿನ್ನವಾಗಿ ಕಾಲ್ಪನಿಕ ಜಗತ್ತನ್ನು ಸೃಷ್ಟಿಸಿಕೊಂಡರೆ ಗೀತೆಗಳು ಒಡಲ ಅನುಭವಕ್ಕೆ ಜೀವಕೊಡುವ ನೇರ ಉತ್ಪನ್ನವಾಗಿವೆ. ಹೀಗಾಗಿ ಜನಪದ ಗೀತೆಗಳನ್ನು ಹೆಣ್ಣಿನ ದೈಹಿಕ ಶ್ರಮ ಪರಿಹಾರದ ಸಾಧನವೆಂದಷ್ಟೇ ಕಾಣದೆ ಅವಳ ಅನುಭವದ ಅಭಿವ್ಯಕ್ತಿಯಾಗಿ ಕಂಡುಕೊಳ್ಳಬೇಕಾಗಿದೆ. ಈ ಗೀತೆಗಳು ಆಕೆಯ ಆತ್ಮಕಥನಗಳು.

ಇತ್ತೀಚಿನ ಅಧ್ಯಯನ ವಿಧಾನಗಳು ಗಂಭೀರ ಮತ್ತು ಸೂಕ್ಷ್ಮವಾಗಿವೆ. ಮೌಖಿಕ ಸಾಹಿತ್ಯ ಪ್ರಕಾರಗಳ ಮೇಲೆ ನಡೆಯುವ ಅಧ್ಯಯನಗಳು ಫಲಕಾರಿಯಾಗಬೇಕಾದರೆ ಜನಪದ ಪ್ರಕಾರಗಳ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ವೈಚಾರಿಕ ಪ್ರಖರತೆಗೆ ಒಡ್ಡಬೇಕಾಗುತ್ತದೆ. ಭಾರತದ ಬಹುರೂಪಿ ಸಂಸ್ಕೃತಿ ಮಾತೃರೂಪಿಯಾದುದು. ಸಾಮಾಜಿಕ, ಸಾಂಸ್ಕೃತಿಕ ಸ್ತರದಲ್ಲಿ ಅದು ಇಂದೂ ಜೀವಂತವಾಗಿದೆ. ಸ್ತ್ರೀಕೇಂದ್ರಿತವಾದ ಮಾತೃಪ್ರಧಾನ ಸಮಾಜದ ಹೆಣ್ಣಿನ ಸ್ಥಾನಮಾನ ಪುರುಷಕೇಂದ್ರಿತ ಸಮಾಜಕ್ಕಿಂತ ತೀರಾ ಭಿನ್ನವಾಗಿದೆ. ಈ ಮಾತೃರೂಪಿ ಕುಟುಂಬದಲ್ಲಿ ಗಂಡುಮಕ್ಕಳು ಎಷ್ಟಿದ್ದರೂ ಕುಟುಂಬಕ್ಕೆ ಮನೆತನಕ್ಕೆ ಫಲವಿಲ್ಲ, ಶೋಭೆಯಲ್ಲ. ಕುಲದೀಪವಾಗಿ ಬೆಳಗುವವಳು ಕುಟುಂಬಕ್ಕೆ ಕಲಶ ಪ್ರಾಯವಾಗುವವಳು ಹೆಣ್ಣುಮಗಳು ಎನ್ನುವ ವಾಸ್ತವತೆಯನ್ನು ಮನಗಾಣಬೇಕಾಗಿದೆ.

ಕುಟುಂಬದ ಪ್ರೀತಿ, ಗೌರವ ಪಡೆದ ಹೆಣ್ಣು ತನ್ನ ಆತ್ಮವಿಶ್ವಾಸ ತುಂಬಿಕೊಂಡೇ ಬೆಳೆಯುತ್ತಾಳೆ. ಈಕೆ ಯಾರಿಗೂ ಅಂಜುವ, ಅಳುಕುವ ಮಗಳಲ್ಲ. ಪಿತೃಪ್ರಧಾನ ಸಮಾಜದ ಹೆಣ್ಣೊಬ್ಬಳು ಸಾಮಾಜಿಕ, ಸಾಂಸ್ಕೃತಿಕ ಪಲ್ಲಟ, ಸಂಘರ್ಷ ಈಕೆಯವಲ್ಲ. ಮದುವೆಯಾದರೂ ಹೆಣ್ಣುಕುಲಕ್ಕೆ ಹೊರಗಲ್ಲ. ಗಂಡನ ಮನೆಯ ಬಾಳುವೆ ಈಕೆಗೆ ಅನಿವಾರ್ಯವಲ್ಲ. ಪತಿಯೇ ಪರದೈವ. ಗಂಡನ ಮನೆಯೇ ಹೆಣ್ಣಿಗೆ ಮೋಕ್ಷ ಎನ್ನುವ ದೃಷ್ಟಿ ಇಲ್ಲಿನದಲ್ಲ. ಆ ಸಂಬಂಧ ಆಕೆಯ ಪ್ರಶ್ನೆಯದು. ಹೀಗಾಗಿ ಮದುವೆಯಾಗಿ ಗಂಡನ ಮನೆಗೆ ಮಗಳನ್ನು ಕಳುಹಿಸುವಾಗ ಹೆತ್ತವರ

ಹಿತನುಡಿ ಸಾಂಪ್ರದಾಯಿಕ ಹದಿಬದೆಯ ಕಿವಿಮಾತಿನ ದಾಟಿಯದಲ್ಲ. ಗಂಡನ ದೂರು ತವರಲ್ಲಿ ಆಡಿದರೆ ಹೆಣ್ಣೇ ನಿನ್‌ಬಾಳು ಹಾಳಕ್ಕು ಎನ್ನುವ ಕನ್ಯೋಪದೇಶಕ್ಕೆ ಬದಲಾಗಿ

ಅಂದ ಗಂಡನ ಮಾತ ಬಂದ್ಹೇಳು ನಮ್ಮಗ್ಗೆ
. . . ಆಡ್ಡಾತ ಬಂದೇಳು ನಿನ್ನ ತವರೀಗೆ

ಎನ್ನುವ ಬೆಂಬಲ ತವರಿನಿಂದ ಈ ಹೆಣ್ಣಿಗೆ ಗಂಡನಾದವನು ದೇವರೂ ಅಲ್ಲ. ಮದುವೆ ಸ್ವರ್ಗದಲ್ಲಿ ನಡೆದದ್ದೂ ಅಲ್ಲ.

ಈ ಸಂಬಂಧ ಜನ್ಮ ಜನ್ಮಾಂತರವಾಗಿರುವಂತಹದ್ದೂ ಅಲ್ಲ, ಗಂಡ ಹೆಣ್ಣೊಬ್ಬಳಿಗೆ ತನ್ನ ವಂಶಾಭಿವೃದ್ಧಿಯ ಅಗತ್ಯ ಅಷ್ಟೇ. ಹೀಗಾಗಿ ಗಂಡ ಆಕೆಗೆ ಯಾವತ್ತೂ ಹಿತವಾದವನಲ್ಲ. ಆ ಸಂಬಂಧ 'ಕೆಂಡದ ತಂಪಿ'ನಂತಹುದು. ನೀರು ಬೆರಸಿದ ಕೊಂಡ ಮಜ್ಜಿಗೆಯ ರುಚಿಯಂತಹುದು.

ಜಾನಪದವನ್ನು ರೂಪ, ತಂತ್ರ ಇವುಗಳ ದೃಷ್ಠಿಯಿಂದ ಪರಿಶೀಲಿಸಿದಾಗ, ಅದು ಪ್ರಸ್ತುತ ಪಡಿಸುವ ಸಮಾಜವನ್ನು ಮತ್ತು ಸಮಾಜದ ಅವಸ್ಥಾಂತರಗಳನ್ನು ಪರಿಶೋಧಿಸುವುದು ಅತ್ಯಂತ ಉಚಿತ ಕ್ರಮವಾಗಿದೆ. ಮನುಷ್ಯನ ಅನುಭವಗಳು, ಕ್ರಿಯೆಗಳು ಮತ್ತು ಬದುಕಿನ ಅನೇಕ ವಿವರಗಳು ಒಂದು ಕಾಲಮಾನದಲ್ಲಿ ಪ್ರಕಟಗೊಂಡ ಬಗೆಯನ್ನು ತಿಳಿಯಲು ಇದರಿಂದ ಸಾಧ್ಯವಾಗುತ್ತದೆ. ಈ ಬಗೆಯ ಅಧ್ಯಯನದಿಂದ ಒಂದು ಕಾಲದ, ಒಂದು ಜನಾಂಗದ ಹಾಗೂ ಒಂದು ನಿರ್ದಿಷ್ಟ ಸಂದರ್ಭದ ವಿವೇಚನೆಯೊಂದು ಹೊರಬರುತ್ತದೆ. ಈ ವಿಧಾನದಿಂದ ಕೃತಿ ನಿರ್ಮಾಣದ ಸಂದರ್ಭದಲ್ಲಿದ್ದ ಒತ್ತಡಗಳನ್ನು ಜೊತೆಗೆ ಆ ಕಾಲಮಾನದ ಆಲೋಚನೆಗಳ ಸ್ವರೂಪವನ್ನು ವಿಶ್ಲೇಷಣೆಗೆ ಗುರಿಪಡಿಸಲು ಸಾಧ್ಯವಾಗುತ್ತದೆ. ಲೇಖಕನ ಕೃತಿಯಲ್ಲಿ ಪ್ರತಿಪಾದಿತವಾಗಿರುವ ಆಲೋಚನೆಗೂ ಒಂದು ಕಾಲಮಾನದ ವಿಭಿನ್ನ ಕ್ರಿಯೆಗಳಿಗೆ ಇರುವ ಸಂಬಂಧ ಹೇಗೆ ಸಂಯೋಜಿತ ವಾಗಿದೆ ಎಂಬುದನ್ನು ಪರಿಶೀಲಿಸುವುದು ಪ್ರಸ್ತುತ ಅಧ್ಯಯನದ ಆಶಯ. ಇಂತಹ ವಿವೇಚನೆಯ ಗುರಿಯಾಗಿರುತ್ತದೆ. ಭೂತದಲ್ಲಿ ಪ್ರಕಟಗೊಂಡಿರುವ ವಾಸ್ತವಿಕ ವ್ಯಕ್ತಿಗಳನ್ನು ವರ್ತಮಾನದ ಸಂದರ್ಭಗಳಿಗೆ ಎದುರಾಗಿಸುವುದು ಇಂತಹ ಅಧ್ಯಯನದ ಪ್ರಧಾನ ಅಂಶವಾಗಿರುತ್ತದೆ. ಇದು ಜನಪದ ಹಾಗೂ ಶಿಷ್ಟ ಸಾಹಿತ್ಯಕ್ಕೆ ಒಟ್ಟಾರೆಯಾಗಿ ಹೇಳಬಹುದಾದ ಮಾತಾಗಿದೆ.

ಜಾನಪದ ಮತ್ತು ಇತಿಹಾಸ ಒಂದೇ ನಾಣ್ಯದ ಎರಡು ಮುಖಗಳಂತೆ ಕಂಡರೂ ಜಾನಪದದ ಸ್ವರೂಪವೇ ಬೇರೆ, ಇತಿಹಾಸದ ವಾಸ್ತವವೇ ಬೇರೆ. ಜಾನಪದವು ಸಾಂಸ್ಕೃತಿಕ ಸ್ತರದಲ್ಲಿ ಹುಟ್ಟಿಕೊಂಡ ಆಶಯ ಮಾತ್ರ, ಆದರೆ ಇತಿಹಾಸದ ವಿಷಯ ಹಾಗಲ್ಲ. ಅದು ವಾಸ್ತವದ ಘಟನೆ ಈ ವಾಸ್ತವ ಮತ್ತು ಆಶಯಗಳು ಅದಲು ಬದಲಾಗುವ ಸಾಧ್ಯತೆಯೂ ಉಂಟು. ಇದಕ್ಕೆಲ್ಲಾ ಕಠೋರವಾದ ವರ್ಣವ್ಯವಸ್ಥೆಯೂ ಮುಖ್ಯ ಕಾರಣಗಳಲ್ಲಿ ಒಂದು ಎನ್ನಬೇಕಾದುದು ಅನಿವಾರ್ಯ. ಈ ವಾದಕ್ಕೆ ಉದಾಹರಣೆಯಂತಿರುವ 'ಕೆರೆಗೆ ಹಾರ' ಉತ್ತರದೇವಿ ಕೆರೆಹೊನ್ನಮ್ಮ ಹಾಗೂ ಕೆರೆಗೆಹಾರವಾದ ಬಂದಮ್ಮನ ಇತಿಹಾಸವನ್ನು ಅವಲೋಕಿಸಬಹುದು.

ಮುಖ್ಯವಾಗಿ ಜಾನಪದ ಮೌಖಿಕ ಪರಂಪರೆಯನ್ನು ಅಧ್ಯಯನಕ್ಕೊಳಗೆ ಮಾಡಿಕೊಂಡಿರುವುದರಿಂದ ಜನಪದ ಕಥನ ಗೀತೆಗಳಲ್ಲಿ ಮಹಿಳೆಯನ್ನು ಯಾವ ನಿಟ್ಟಿನಲ್ಲಿ ಪ್ರತಿನಿಧಿಸಿಕೊಂಡಿದ್ದಾರೆ ಎನ್ನುವಂತಹ ವಿಚಾರವನ್ನು ಪ್ರಬಂಧದಲ್ಲಿ ಚರ್ಚಿಸಿದ್ದೇನೆ. ಮಹಿಳೆಯ ಕುರಿತು ಬಂದಿರುವ ಕಥನಗೀತೆಗಳಲ್ಲಿ ಶೋಷಣೆ, ಆಪ್ತತೆ ಮತ್ತು ತಾದ್ಯಾತ್ಮದ ಅಂಶಗಳು ಮಿಳಿತಗೊಂಡು ಕೇಳುಗರಿಗೆ ಹೃದ್ಯವೆನ್ನಿಸುತ್ತವೆ. ಕಥನಗೀತೆಯ ವಿಸ್ತಾರವಾದ ಹಂದರದಲ್ಲಿ ಕಥೆಯ ಘಟನೆಗಳನ್ನು ವಿವರವಾಗಿ ಬಣ್ಣಿಸಲು ಮತ್ತು ಆ ಕುರಿತು ಹೆಣ್ಣು ತನ್ನ ಅನಿಸಿಕೆಗಳನ್ನು ಸೂಕ್ಷ್ಮವಾಗಿಯಾದರೂ ವ್ಯಕ್ತಪಡಿಸಲು ಅವಕಾಶವಿರುತ್ತದೆ. ಉಪಲಬ್ಧ ಕಥನಗೀತೆಗಳನ್ನು ವಸ್ತುವಿನ ಆಧಾರದಿಂದ ವರ್ಗೀಕರಿಸಿಕೊಂಡು ಆ ಮೂಲಕ ಜನಪದ ಮಹಿಳೆಯನ್ನು ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಅಧ್ಯಯನದಲ್ಲಿ ಜನಪದರು ಅಳವಡಿಸಿಕೊಂಡಿರುವಂತಹ ವರ್ಣ, ಜಾತಿ, ಅಸ್ಪೃಶ್ಯತೆ, ವರ್ಗ ವಸಾಹತುಶಾಹಿ, ಸಂಪ್ರದಾಯ ಮತ್ತು ಆಚರಣೆ, ವ್ಯವಸ್ಥೆ, ಧರ್ಮ ಬಲಿದಾನ, ತ್ಯಾಗ, ವೈರತ್ವ, ಶೋಷಣೆ, ಹತ್ಯಾಚಾರಗಳಿಗೆ ಮೌಖಿಕ ಸಾಹಿತ್ಯದ ಅಭಿವ್ಯಕ್ತಿಗಳಲ್ಲಿ ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬುದನ್ನು ವಿಶೇಷವಾಗಿ ಚರ್ಚಿಸಿ ಒಳಗು ಮಾಡಲಾಗಿದೆ.

ಜನಪದ ಸಾಹಿತ್ಯವು ಮೌಲ್ಯ ಪರಿಪಾಲನೆಗೆ ಅನುಸಾರವಾಗಿ ರಚನೆಯಾದುದೆಂಬ ಅಭಿಪ್ರಾಯವಿದೆ. ಇದನ್ನು ಎಲ್ಲಾ ಸಂದರ್ಭಗಳಲ್ಲಿಯೂ ಒಪ್ಪಿಕೊಳ್ಳಲಾಗುವುದಿಲ್ಲ. ಜನಪದರು ಅನೇಕ ಸಂದರ್ಭದಲ್ಲಿ ಪ್ರತಿಭಟನೆ ಮಾಡಿರುವುದನ್ನು ಕೆಲವು ಕಾವ್ಯಗಳಲ್ಲಿ ಅಥವಾ ಕಥನಗೀತೆಗಳಲ್ಲಿ ಪ್ರತ್ಯಕ್ಷವಾಗಿ ವ್ಯಕ್ತಗೊಂಡರೆ ಇನ್ನೂ ಕೆಲವು ಕಾವ್ಯಗಳಲ್ಲಿ ಪರೋಕ್ಷವಾಗಿ ವ್ಯಕ್ತಗೊಂಡಿವೆ. ಹಾಗೆಯೇ ಕೆಲವು ಕಾವ್ಯಗಳಲ್ಲಿ ಪುರುಷ ತನ್ನ ಅಧಿಕಾರವನ್ನು ಚಲಾಯಿಸಿದರೆ ಅದೇ ಪುರುಷ ನಿಸ್ಸಾಹಯಕನಾಗಿರುವುದು ಸಹ ಕಂಡುಬರುತ್ತದೆ. ಹಾಗೆಯೇ ಹೆಣ್ಣು ತನ್ನ ಮನದ ದುಃಖಗಳನ್ನು ತನ್ನ ಗೆಳತಿಯರೊಂದಿಗೆ ಹಂಚಿಕೊಳ್ಳುವಂತಹ ಸಂದರ್ಭಗಳು ಸಹ ನೋಡಬಹುದಾಗಿದೆ. ಇನ್ನೂ ಕೆಲವು ಸಂದರ್ಭದಲ್ಲಿ ಹಾಡಿನ ಮುಖಾಂತರವೇ ಪ್ರತಿಭಟನೆಗೈದರೆ ಇನ್ನೂ ಕೆಲವು ಸೊಸೆಯರು ತಮ್ಮ ಮಾವನ ವಿರುದ್ಧ ಪ್ರತಿಭಟನೆ ಮಾಡಿರುವುದು ಕೆಲವೊಂದು ಕಥನಗೀತೆಗಳಲ್ಲಿ ಕಂಡುಬರುತ್ತದೆ. ಇಂತಹ ಒಂದು ಬಂಡಾಯವನ್ನು ಅದರ ಸೂಕ್ಷ್ಮ ಎಳೆಗಳನ್ನು ಸಂಗ್ರಹಿಸಿ ಅನಾವರಣಗೊಳಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಜನಪದರ ಅಂದಿನ ಕಾಲದ ಸ್ತ್ರೀ ಶೋಷಣೆಯನ್ನು ಪ್ರಸ್ತುತ ಸಮಾಜದ ಸ್ತ್ರೀ ಬದುಕಿನ ಜೀವನದೊಂದಿಗೆ ಹೋಲಿಕೆಯ ಕೆಲವೊಂದು ವ್ಯತ್ಯಾಸ ಹಾಗೂ ಸಮಸ್ಯೆಗಳನ್ನು ಕಟ್ಟಿಕೊಡುವಂತಹ ಕಾರ್ಯವನ್ನು ಸಹ ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ ಎಂಬುದನ್ನು ಅನಾವರಣಗೊಳಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ. ಶಿಷ್ಟ ಸಾಹಿತ್ಯದ ಧೋರಣೆಯಾದ ಬಂಡಾಯ ಪರಿಕಲ್ಪನೆಯ ಅಡಿಯಲ್ಲಿ ಈ ಕಥನಗೀತೆಗಳಲ್ಲಿ ಮಹಿಳೆಯನ್ನು ಯಾವ ನಿಟ್ಟಿನಲ್ಲಿ ಪ್ರತಿನಿಧಿಸಿಕೊಂಡಿದ್ದಾರೆಂಬುದನ್ನು ಅಧ್ಯಯನಕ್ಕೆ ಒಳಗು ಮಾಡುವುದರಿಂದ ಜಾನಪದಕ್ಕೆ ಹೊಸ ದೃಷ್ಟಿಕೋನಗಳು ಲಭ್ಯವಾಗುತ್ತವೆಂದು ಭಾವಿಸಬಹುದಾಗಿದೆ. ಈ ಹಿನ್ನೆಲೆಯಲ್ಲೇ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಧಾನ ಸಂಸ್ಕೃತಿ ಕೆಲವು ಮೌಲ್ಯ ಮಾದರಿಗಳನ್ನು ಸ್ಥಾಪಿಸುವ ಪ್ರಯತ್ನ ಮಾಡುತ್ತಿರುವಾಗಲೇ 'ಪರ್ಯಾಯ ಸಂಸ್ಕೃತಿ' ಚಿಂತನೆಗಳು ಆ ಪ್ರಯತ್ನವನ್ನು ಒಡೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತವೆ. ಈ ಪ್ರಕ್ರಿಯೆಯಾಗಿಯೇ ಮೌಖಿಕ ಪರಂಪರೆಯ ಜನಪದ ಕಥನಕವನ ಪುರಾಣಗಳನ್ನು ಕಾಣಬೇಕಾಗಿದೆ. ಈ ನೆಲೆಯಲ್ಲಿ ಜನಪದ ಮಹಾಭಾರತ, ಜನಪದ ರಾಮಾಯಣಗಳ ಅಧ್ಯಯನ ನಡೆಸಬೇಕಾಗಿದೆ. ಪರ್ಯಾಯ ಸಂಸ್ಕೃತಿಯ ಶೋಧನೆಗೆ ಕೆರೆಗೆಹಾರ, ದ್ರೌಪದಿ ಪಣ ಆಟ ಆಡಿದ್ದು ಹಾಗೂ ಪರತಿ ಮಂಗಣಿ ಎನ್ನುವ ಕನ್ನಡ, ತುಳು ಕಥನ ಕವನಗಳನ್ನು ನೋಡಬಹುದಾಗಿದೆ.

ಈ ದಿಕ್ಕಿನಲ್ಲಿ ಜಾನಪದ ಕ್ಷೇತ್ರದಲ್ಲಿ ನಡೆಸಬೇಕಾದ ಅನ್ವೇಷಣೆ ತುಂಬಾ ಇದೆ. ಜನಪದ ಸಾಹಿತ್ಯ, ಕಲೆ, ನಂಬಿಕೆ ಆಚರಣೆಗಳಲ್ಲಿ ಹುದುಗಿರುವ ಸ್ತ್ರೀ ಸಂಸ್ಕೃತಿಯ ಸ್ವರೂಪವನ್ನು ಕೈಗೆತ್ತಿಕೊಳ್ಳ ಬೇಕಾಗಿದೆ. ಮಾತೃಪ್ರಧ್ಯಾನ್ಯತೆ, ಮಾತೃವಂಶೀಯತೆಯ ಹಿನ್ನೆಲೆಯ ಅನೇಕ ಗುರುತುಗಳು ನಮ್ಮ ರೂಢಿಯಲ್ಲಿದ್ದವು. ಅಂದಿನ ಪಿತೃಪ್ರಧಾನ ಸಮಾಜದಲ್ಲಿ ಪುರುಷರದ್ದೇ ರಾಯಭಾರಿ. ಅಂತಹವರ ಒಂದು ಚಿತ್ರಣವು ನಮ್ಮ ಕಥನಗೀತೆಗಳು ಕಟ್ಟಿಕೊಡುತ್ತವೆ. ಅವೈದಿಕ ಸಂಸ್ಕೃತಿಯ ಅಭಿವ್ಯಕ್ತಿಯಾದ ಜನಪದ ಸಂಸ್ಕೃತಿ ಹೆಂಗಸಿನ ವಿಷಯದಲ್ಲಿ ಅಷ್ಟು ದಮನಕಾರಿಯಾಗಿಲ್ಲವೆಂದೇ ನಮಗೆ ತೋರುತ್ತದೆ. ಒಳಿತು, ಕೆಡಕುಗಳನ್ನು ಸಾರುವ ಈ ನಮ್ಮ ಜನಪದ ಕಥನಗೀತೆಗಳು ಇಂದಿಗೂ ಜೀವಂತ ಸಾಕ್ಷಿಯಾಗಿ ನೆಲೆನಿಂತಿರುವುದನ್ನು ಕೆಲವು ಕರೆಗಳು ಹಾಗೂ ಕೋಟೆಗಳು ಜನಪದರ ಬಾಯಲ್ಲಿ ಹರಿದಾಡುವ ಕಥನ ಗೀತೆಗಳೇ ಸಾಕ್ಷಿಯಾಗಿ ಪರಿಣಮಿಸುತ್ತವೆ. ಅಂತಹ ಕಥನಗೀತೆಗಳು ಬಹು ಪ್ರಭಾವವನ್ನು ಸಹ ಬೀರಿವೆ.

ಜನಪದ ಕಥನಗೀತೆಗಳಲ್ಲಿ ಅಸ್ಪೃಶ್ಯತೆಯ ಮನೋಭಾವನೆ ಹಿಂದಿನಿಂದಲೂ ಇದೆ. ಬಲಿಷ್ಠ ಸಮುದಾಯಗಳು ದುರ್ಬಲ ಸಮುದಾಯದ ಹೆಣ್ಣನ್ನು ಗುಲಾಮರನ್ನಾಗಿ ಮಾಡಿಕೊಳ್ಳುವುದರ ಜೊತೆಗೆ ಬಲಿ ಕೊಟ್ಟಿರುವ ನಿದರ್ಶನಗಳಿವೆ. ಅಂಥವುಗಳಲ್ಲಿ ಬಹುಮುಖ್ಯವಾಗಿ 'ಕೆರೆಗೆ ಹಾರವಾದ ಬಂದಮ್ಮ' ಕಥನಗೀತೆಗಳಲ್ಲಿ ಗೌಡನ ಮನೆಯಲ್ಲಿ ಜೀತವಾಗಿ ದುಡಿಯುತ್ತಿದ್ದ ದಲಿತ ವರ್ಗದ ಪುರುಷನ ಹೆಂಡತಿಯನ್ನು ಕೆರೆಗೆ ಹಾರವಾಗಿ ಕೊಟ್ಟಿರುವುದು. ಇಂದಿಗೂ ಆಂಧ್ರಪ್ರದೇಶದ ರಾಯದುರ್ಗ(ತಾ)ನ ಕಲ್ಯಾಣದುರ್ಗದ ಒಂದು ಕೆರೆಯ ಹತ್ತಿರವಿರುವ ಸಮಾಧಿಯೇ ನಿದರ್ಶನವಾಗಿ ಈಗಲೂ ಸಹ ಇದೆ. ಇದಕ್ಕೆ ಕೆಲವರು ಪೂಜೆ ಪುರಸ್ಕಾರಗಳನ್ನು ಮಾಡುತ್ತಿದ್ದು, ಅವರ ವಂಶಸ್ಥರು ಈಗಲೂ ಅದೇ ಗ್ರಾಮದಲ್ಲಿ ವಾಸವಾಗಿದ್ದಾರೆ. ಇಂತಹ ಅನೇಕ ಕಥನಗೀತೆಗಳು ಇವೆ. ಇದು ಪ್ರಾಚೀನ ಕಾಲದಿಂದಲೂ ಅಸಮಾನತೆ ಇತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಪ್ರಾಚೀನ ಕಾಲದಲ್ಲಿ ಸ್ವಾತಂತ್ರ್ಯ, ಸಮಾನತೆ ಕಳೆದುಕೊಂಡ ಜನವರ್ಗಗಳು ತಮ್ಮ ಹಕ್ಕುಗಾಗಿ ಹೋರಾಟ ನಡೆಸಿರುವುದು ಕಂಡುಬರುತ್ತದೆ. ಈ ಹೋರಾಟವನ್ನು ತರ್ಕದ ನಿಕಷಕ್ಕೆ ಒಡ್ಡಬೇಕಾಗಿದೆ. ಹಾಗಾದಾಗ ಸಮಾಜದ ಬಗೆಗಿನ ಅನೇಕ ಮಾಹಿತಿಗಳು ಹೊರಬರುತ್ತವೆ.

ಬಂಡಾಯ ಸಾಹಿತ್ಯಕ್ಕೆ ಒಂದು ತಾತ್ವಿಕ ತಳಹದಿಯಿದೆ. ಸಮಾಜದ ತುಳಿತಕ್ಕೆ ತಿರಸ್ಕಾರಕ್ಕೆ ಶೋಷಣೆಗೆ ಒಳಗಾದವರ ಅದರಲ್ಲೂ ಮುಖ್ಯವಾಗಿ ಹೆಣ್ಣು ತನ್ನ ಅಸ್ತಿತ್ವವನ್ನು ತನ್ನ ಜೀವವನ್ನು

ಉಳಿಸಿಕೊಳ್ಳಲು ಸಾಕಷ್ಟು ಆಸೆ ಆಕಾಂಕ್ಷೆಯಿದ್ದರು, ಸಮಾಜದ ಹಿತದೃಷ್ಟಿಯನ್ನು ಇಟ್ಟುಕೊಂಡು ತನ್ನ ಜೀವವನ್ನೇ ತೆತ್ತವರ ಮಹಾನ್ ಸ್ತ್ರೀಯರ ಒಂದು ಚಾರಿತ್ರಿಕ ಇತಿಹಾಸವನ್ನು ಜನಪದ ಕಥನ ಗೀತೆಗಳು ಕಟ್ಟಿಕೊಡುತ್ತವೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಬದಲಾವಣೆಯನ್ನು ಬಯಸಿ ನವ ಸಮಾಜ ನಿರ್ಮಾಣಕ್ಕೆ ಹಾತೊರೆಯುವ ಚಳುವಳಿ ಅಲ್ಲದೆ ಹೋದರು ತಮ್ಮ ಹಾಗೂ ಪುರುಷರ ಗೌರವಕ್ಕೆ ಧಕ್ಕೆಯಾಗದೇ ರೀತಿಯಲ್ಲಿ ತಮ್ಮ ಜೀವನವನ್ನೇ ಮುಡುಪಾಗಿರಿಸಿರುವ ಅನೇಕ ಸುಮಂಗಳಿಯರ ಇತಿಹಾಸ ಈ ಗೀತೆಗಳಿಂದ ತಿಳಿದುಬರುತ್ತದೆ. ಹಾಗಾಗಿ ಈ ಅಧ್ಯಯನದಲ್ಲಿ ಮಹಿಳೆಯರ ಅಧಿಕಾರ ರಹಿತರ, ನಿರಾಕರಣೆಗೆ ಒಳಗಾದವರ ದುಡಿಯುವ ಮಹಿಳೆ ಜನರ ಸಾಂಸ್ಕೃತಿಕ ಚರಿತ್ರೆಯನ್ನು ವ್ಯವಸ್ಥಿತವಾದ ರೀತಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಹೆಣ್ಣು ತನ್ನ ಬದುಕಿನ ಬಗೆಗೆ ಅಪಾರ ಹಂಬಲವಿರುತ್ತದೆ. ಅವರ ಆಸೆ-ಆಕಾಂಕ್ಷೆಗಳಿಗೆ ಧಕ್ಕೆ ಉಂಟಾದಾಗ ಅವಳು ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಾಳೆ. ಈ ಹೋರಾಟವನ್ನು ಆಕೆ ನೇರವಾಗಿ, ಪ್ರತಿಭಟನಾತ್ಮಕವಾಗಿಯಾದರೂ ಮಾಡಬಹುದು ಅಥವಾ ಬೇರೆ ಬೇರೆ ಸಂಕೇತ, ಕ್ರಿಯೆಗಳ ರೂಪದಿಂದರೂ ಆಗಿರಬಹುದು. ಇಲ್ಲವೆ ಮಾತಿನ ರೂಪದಲ್ಲಿ ಅಭಿವ್ಯಕ್ತವಾಗಬಹುದು. ಸಮಾಜದ ಸಂಪ್ರದಾಯಗಳ ವಿರುದ್ಧ ನೇರವಾಗಿ ಬಂಡೆದ್ದು ಹೋರಾಟ ಮಾಡಲಾಗದವರು ತಮ್ಮ ಮಾತಿನಲ್ಲಿ ತೋಡಿಕೊಂಡ ಸಂಕಟ ನೋವುಗಳನ್ನು ಅಧ್ಯಯನಕ್ಕೆ ಒಳಪಡಿಸಿ, ವಾಸ್ತವ ಸ್ಥಿತಿಯನ್ನು ಅನಾವರಣ ಗೊಳಿಸುವ ಉದ್ದೇಶದಿಂದ ಈ ವಿಷಯವನ್ನು ಆಯ್ದುಕೊಳ್ಳಲಾಗಿದೆ. ಒಂದು ನಾಡಿನ ಶಕ್ತಿಯನ್ನು ಆ ನಾಡಿನ ಜಾನಪದ ಪ್ರತಿಬಿಂಬಿಸುತ್ತದೆ. ಜನಪದ ಸಾಹಿತ್ಯದ ಒಡಲಾಳದಲ್ಲಿಯೇ ಜನಪದ ಸಂಸ್ಕೃತಿಯು ಸಾಗಿ ಬಂದಿರುತ್ತದೆ. ಜನಪದ ಸಾಹಿತ್ಯದ ಆಂತಾರ್ಯದಲ್ಲಿ ಸೂಕ್ಷ್ಮವಾಗಿರುವ ಕ್ರೌರ್ಯಗಳನ್ನು ತಿಳಿಯಲು ವ್ಯವಸ್ಥೆಯ ಎಲ್ಲಾ ಮುಖಗಳನ್ನು ನಿಚ್ಚಳವಾಗಿ ಕಾಣಲು ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಕಥನಗೀತೆಗಳಲ್ಲಿ ಅಡಕವಾಗಿರುವ ಆಂತಾರ್ಯವನ್ನು ಬಿಚ್ಚಿ ನೋಡುವುದು ಪ್ರಮುಖವಾಗಿದೆ. ಈ ಹಿನ್ನೆಲೆಯಲ್ಲಿ 'ಜನಪದ ಕಥನ ಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ' ಅಧ್ಯಯನದ ಅರ್ಥಪೂರ್ಣವಾಗುತ್ತದೆ ಎನ್ನುವ ಆಶಯ.

ಜನಪದ ಕಥನಗೀತೆಗಳ ಸಾಹಿತ್ಯ, ತ್ಯಾಗ, ಬಲಿದಾನ, ಕೆಳಸಮುದಾಯ ಸ್ತ್ರೀಯರ ಶೋಷಣೆಗಳ ಸೃಷ್ಟಿಯಾಗಿರುವುದರಿಂದ ಅದರಲ್ಲಿ ನೇರವಾಗಿ ಬಂಡಾಯದ ನಿಲುವು ಗುರುತಿಸುವುದು ಅಸಾಧ್ಯ. ಏಕೆಂದರೆ ಆಳುವ ವರ್ಗವು ಪಾಪ-ಪುಣ್ಯ, ಧರ್ಮ-ಅಧರ್ಮ, ಒಳ್ಳೆಯದು-ಕೆಟ್ಟದ್ದು, ನ್ಯಾಯ-ನೀತಿ, ತ್ಯಾಗ-ಬಲಿದಾನ, ಶೋಷಣೆ ಮುಂತಾದವುಗಳನ್ನು ಹುಟ್ಟು ಹಾಕಿ ಹೆಣ್ಣನ್ನು ವಿಧಿ, ಮೂಢನಂಬಿಕೆ, ಹಣೆಬರಹಗಳಲ್ಲಿ ತೋಳಲಾಡುವಂತೆ ಮಾಡಿದೆ. ಮೇಲ್ವರ್ಗದವರ, ಪುರುಷರ ಅಧೀನಳಾಗಿ ಕೇವಲ ಅಡುಗೆಮನೆಯ ಯಂತ್ರ, ಮಕ್ಕಳನ್ನು ಹೆರುವ ಯಂತ್ರವಾಗಿದ್ದರಿಂದ ಅವರಲ್ಲಿ ನೇರವಾದ ಪ್ರತಿಭಟನೆ ಕಾಣಲು ಸಾಧ್ಯವಿಲ್ಲ. 'ಸಂಕೇತ' ಮತ್ತು 'ಪ್ರತಿಮೆ'ಗಳ ಮೂಲಕ ದೌರ್ಜನ್ಯವನ್ನು ಪ್ರತಿಭಟಿಸುವುದು ಕಂಡುಬರುತ್ತದೆ. ಹಾಗಂದ ಮಾತ್ರಕ್ಕೆ ನೇರವಾದ ಬಂಡಾಯ ಇಲ್ಲ ಎಂದರ್ಥವಲ್ಲ. ಜನಪದ ಕಥನಗೀತೆಗಳನ್ನು ಅಧ್ಯಯನ ಮಾಡಿದರೆ ಅನೇಕ ಸಂದರ್ಭದಲ್ಲಿ

ನೇರ ಪ್ರತಿಭಟನೆ ಕಂಡುಬರುತ್ತದೆ. ಈ ಪ್ರತಿರೋಧದ ನೆಲೆಯನ್ನು ಸ್ತ್ರೀಯ ಕಥನಗೀತೆಗಳಲ್ಲಿ ಯಾವ ರೀತಿ ಮಾಡಿದ್ದಾಳೆ ಎಂಬುದನ್ನು ಅಧ್ಯಯನ ಮಾಡುವುದು ಈ ಮಹಾಪ್ರಬಂಧದ ಉದ್ದೇಶಗಳಲ್ಲಿ ಒಂದಾಗಿದೆ.

'ಕೆರೆಗೆಹಾರ' ಹೆಣ್ಣೊಬ್ಬಳು ಹೊಸ ಕೆರೆಗೆಹಾರವಾದ ಕಥೆಯನ್ನು ಹೇಳುವ ಕನ್ನಡದ ಕಥನ ಕವನ ಈಗಾಗಲೇ ಕನ್ನಡದಲ್ಲಿ ಅದರ ಅನೇಕ ಪಾಠಗಳು ಸಂಗ್ರಹಗೊಂಡು ಪ್ರಕಟವಾಗಿವೆ. ಆದರೆ ಈ ಎಲ್ಲಾ ಬರಹಗಳು ಇಲ್ಲಿನ ಕಾವ್ಯಗುಣವನ್ನು ಹುಡುಕಾಡಿವೆ ಅಥವಾ ಹೆಣ್ಣನ್ನು ಭಾರತೀಯ ಸಾಂಸ್ಕೃತಿಕ ರಾಯಭಾರಿಯಾಗಿ ಗ್ರಹಿಸಿ ಆಕೆಯ ಸಾವನ್ನು ವೈಭವೀಕರಿಸಿವೆ. ವಿಮರ್ಶೆಗಳು ಮುಖ್ಯವಾಗಿ ಎರಡು ನೆಲೆಗಳಲ್ಲಿ ಕೆರೆಗೆಹಾರ ಕಥನಗೀತವನ್ನು ಅರ್ಥೈಸುವ ಪ್ರಯತ್ನ ಮಾಡಿವೆ. ಒಂದು ಕಥನಗೀತದ ಕಾವ್ಯಗುಣವನ್ನು ಸೊಗಸನ್ನು ಹುಡುಕಾಡಿವೆ. ಇನ್ನೊಂದು ನೆಲೆಯ ವಿಮರ್ಶೆ ಹೆಣ್ಣನ್ನು ಭಾರತೀಯ ಸಾಂಸ್ಕೃತಿಕ ರಾಯಭಾರಿಯಾಗಿ ಗ್ರಹಿಸಿ ಆಕೆಯ ಸಾವನ್ನು ವೈಭವೀಕರಿಸಲು ಹೊರಟಿದೆ. ಈ ನೆಲೆಗಳಿಂದ ಹೊರಟ ವಿಮರ್ಶೆಯ ಕೆಲವು ತುಣುಕುಗಳನ್ನು ಇಲ್ಲಿ ಕಾಣಬಹುದಾಗಿದೆ. 'ಕೆರೆಗೆಹಾರ' ಕನ್ನಡ ಕಾವ್ಯಶ್ರೀಯ 'ಕಂಠದಹಾರ' (ತೀನಂಶ್ರೀ, ೧೯೨೮). ಆ ಬಲಿಯ ಹಿಂದಿರುವ ಭಾವನೆಯನ್ನು ಕಡೆಗಣಿಸಲಾಗದು. ಸಮಷ್ಟಿ ಹಿತಕ್ಕಾಗಿ ವ್ಯಕ್ತಿ ಆತ್ಮಾರ್ಪಣೆಗೆ ಸಿದ್ಧವಾಗಿರಬೇಕೆಂಬುದೇ ಅದರ ಹಿಂದಿರುವ ತತ್ವ (ದೇ.ಜ.ಗೌ., ಉನ್ನತ ಹಕಾರಿ, ೧೯೮೫-೨೫೬).

ಸಮಷ್ಟಿ ಹಿತಕ್ಕಾಗಿ ವ್ಯಕ್ತಿಯ ಬಲಿ ಅದೊಂದು ಸ್ವೀಕೃತ ಮೌಲ್ಯ. ಅದೇ ಭಾಗೀರತಿಯ ಪಾಲಿನ ನಿರ್ಣಾಯಾತ್ಮಕ ಮೌಲ್ಯವೂ ಇಂಥ ಮೌಲ್ಯಗಳೇ ಅಂದು ವ್ಯಕ್ತಿಯ ಮತ್ತು ಸಮಾಜಗಳ ನಡುವಿನ ಬೆಸುಗೆಯಾಗಿದ್ದು ಅವುಗಳನ್ನು ವಿಶೇಷತಃ ಇಂಥ ಸಂದರ್ಭಗಳಲ್ಲಿ ಪ್ರಶ್ನಿಸುವುದು ಆ ಪ್ರಶ್ನೆಗೆ ಉತ್ತರವನ್ನು ಅರಿತು ಹುಡುಕುವುದು ಸುಸಂಗತತೆಯನ್ನು ಕಳೆದುಕೊಳ್ಳುತ್ತದೆ. ಭಾಗೀರತಿಯ ಪತಿಪರಾಯಣತೆ ಸೌಹಾರ್ದ ಪ್ರಿಯತೆ ಆತ್ಮಬಲಿದಾನದಲ್ಲಿ ಅವಳಿಗಿದ್ದ ನಿಷ್ಠೆ ಮನ ಸೆಳೆಯುತ್ತದೆ. ಈ ಬಲಿ ಒಂದು ಕ್ಷಣ ನಮ್ಮ ಅಂತಃಕರಣವನ್ನು ಕಲಕಬಹುದಾದರೂ ಅವಳ ಉನ್ನತ ತ್ಯಾಗದ ಉಜ್ವಲ ಆದರ್ಶ ಜನಪದ ಬದುಕಿನ ಒಂದು ಪರಮ ಮೌಲ್ಯದ ಜೀವಂತ ನಿದರ್ಶನವಾಗುವುದರಲ್ಲಿ ಸಂದೇಹವಿಲ್ಲ. ಇಂತಹ ಕಥನಗೀತೆಗಳು ಬಹುಮುಖ್ಯವಾಗಿವೆ. ಯಾಕೆಂದರೆ ಒಂದೇ ಅಂಶವನ್ನು ಹೊಂದಿರುವ ಹಲವಾರು ಕಥನಗೀತೆಗಳನ್ನು ಇಲ್ಲಿ ಸ್ಮರಿಸಬಹುದು.

೧. ಕೆರೆಗೆಹಾರ - ಸಂಪಾದಕರು ಬೆಟಗೇರಿ ಕೃಷ್ಣಶರ್ಮ

೨. ವಡ್ಡರಬೋಯಿ - ಸಂಪಾದಕರು ಕ.ರಾ.ಕೃ.

೩. ಹುಳಿಯಾರು ಕೆಂಚವ್ವ - ಸಂಪಾದಕರು ಜೀ.ಶಂ. ಪರಮಶಿವಯ್ಯ

೪. ಮದಗದ ಕೆಂಚಮ್ಮ - ಸಂ. ಬಳ್ಳೆಕೆರೆ ಹನುಮಂತಪ್ಪ

೫. ನಿಗಳ ಬಲಿ - ಸಂಪಾದಕರು, ಕು. ಸುಬ್ರಹ್ಮಣ್ಯ ಕೆದಿರಾಯ

೬. ಕೆರೆಗೆ ಹಾರವಾದ ಬಂದಮ್ಮನ ಇತಿಹಾಸ - ಸಂಪಾದಕರು, ಎಸ್.ಆರ್. ಗುರುನಾಥ

ಈ ಮೇಲಿನ ಪಠ್ಯಗಳಲ್ಲಿ ಸಮನಾಗಿರುವ ಒಂದು ಅಂಶವೆಂದರೆ ಕೆರೆಗೆಹಾರವಾದವಳು ಹೆಣ್ಣು ಎನ್ನುವುದು ಮತ್ತು ಆಕೆ ಆ ಕುಟುಂಬದ ಸೊಸೆಯಾಗಿರುವುದು ಇಲ್ಲಿ ಹೆಣ್ಣೆ. ಏಕೆ ಬಲಿಯಾಗಬೇಕು ಎನ್ನುವ ಪ್ರಶ್ನೆ ಕಥನ ಕವನ ಮುಚ್ಚಿಟ್ಟುಕೊಂಡಿರುವ ಅನೇಕ ಒಳಸುಳುಹುಗಳನ್ನು ಹೊರಗೆಡಹುತ್ತವೆ. ಈ ಇಡೀ ಕಥನ ಕವನವನ್ನು ಗೃಹ, ಪುರ, ಪ್ರಕೃತಿ-ಸಂಸ್ಕೃತಿಗಳ ದ್ವಂದ್ವ ವರ್ಗೀಕರಣ ರೂಪಕದ ಮೇಲೆ ಗ್ರಹಿಸಬೇಕಾದ ಸಂಗತಿ. ಪ್ರಕೃತಿಯ (ಹೆಣ್ಣು) ನಾಶದ ಮೇಲೆ ಸಂಸ್ಕೃತಿಯ (ಪುರುಷ) ಕಟ್ಟೋಣ ನಡೆದಿದೆ. ಗಂಡಿನಿಂದ ಮತ್ತು ಗಂಡಿಗಾಗಿ ರಚಿತವಾದ ಈ ಕಟ್ಟುವಿಕೆಯಲ್ಲಿ ಹೆಣ್ಣಿನ ಬದುಕು ಮತ್ತು ಸಾವನ್ನು ಗಂಡಿನ ಶ್ರೇಯಸ್ಸಿಗಾಗಿ ಬಳಸಿಕೊಳ್ಳಲಾಗಿದೆ. ಪ್ರಕೃತಿ ಮತ್ತು ಸಂಸ್ಕತಿಯಾಕರ್ಷಣ ಮತ್ತು ಗಂಡಿನ ಅಪ್ರಾಮಾಣಿಕತೆ, ವ್ಯವಹಾರ ಜಾಣ್ಮೆಗಳು ಹೆಣ್ಣನ್ನು ಶಾಶ್ವತವಾಗಿ ಕೆರೆಗೆ, ಕೋಟೆಗೆ, ಕಟ್ಟಡಕ್ಕೆ, ಸೇತುವೆಗೆ ಬಲಿಯಾಗಿಸಿದೆ. ಗಂಡಿನ ಅಪ್ರಾಮಾಣಿಕತೆ ಗಂಡಿನ ಸಾವಿಗೆ ಕಾರಣವಾಗುವುದಿಲ್ಲ. ಅದು ಹೆಣ್ಣಿನ ಸಾವಿನಲ್ಲಿಯೇ ಪರ್ಯಾವಸನವಾಗುತ್ತದೆ ಎನ್ನುವಲ್ಲಿನ ಪುರುಷ ದ್ವಂದ್ವವನ್ನು ಬಯಲಿಗೊಡ್ಡಬೇಕು.

ಜನಪದ ಸಮಾಜವು ಸಮಷ್ಟಿಪ್ರಜ್ಞೆಯ ಮೇಲೆ ನಂಬಿಕೆಯುಳ್ಳದ್ದು. ಇಲ್ಲಿ ವ್ಯಷ್ಟಿಪ್ರಜ್ಞೆ, ಸಮಷ್ಟಿ ಪ್ರಜ್ಞೆಗಿಂತ ಬೇರೆಯಾದುದಲ್ಲ. ಜನಪದ ಕವಿಯ ಈ ಮಾತಿನಿಂದ ಹೊರಗುಳಿಯುವುದಿಲ್ಲ ವಾದರೂ ಇಂತಹ ಸಮಷ್ಟಿಪ್ರಜ್ಞೆಯ ಮಾನವೀಯ ಸಂಬಂಧಕ್ಕೆ ಮುಖಾಮುಖಿಯಾಗಿ ಒಡ್ಡಿಕೊಂಡಾಗ ಸಮಷ್ಟಿಯ ಮೌಲ್ಯವನ್ನು ಮೀರಿ ಕವಿಯ ವ್ಯಷ್ಟಿಪ್ರಜ್ಞೆ ಪ್ರಕಟವಾಗುತ್ತದೆ. ಕೆರೆಗೆಹಾರದ ಎಲ್ಲಾ ಪಾತ್ರಗಳು ಸಮಷ್ಟಿಪ್ರಜ್ಞೆಗೆ ಮುಖ ಮಾಡಿ ಮುಂದುವರಿಯುವುದಾದರೆ ಹಾರವನ್ನು ವೈಭವೀಕರಿಸದೇ ಭಾಗೀರತಿಯ ಕುದಿತ-ತುಡಿತ ಹೊಯ್ದಾ ಜಗಳವನ್ನು ಕವಿಗೆ ಸೂಕ್ಷ್ಮವಾಗಿ ಗ್ರಹಿಸುವುದು ಸಾಧ್ಯವಾಗಿದೆ. ಭಾಗೀರತಿಯ ನೋವು ಮತ್ತು ಮಾನವ ಬಗೆಗೆ ಕವಿ ಆತ್ಮೀಯವಾಗಿ ಸಂಬಂಧಿಸಿದಂತೆ ಇನ್ನೊಂದು ಸಂದರ್ಭವನ್ನು ಅನುಭವಿಸಿಲ್ಲ.

ಅದೇ ರೀತಿಯಾಗಿ 'ಕೆರೆಗೆಹಾರವಾದ ಬಂದಮ್ಮನ ಇತಿಹಾಸ' ಕೃತಿಯಲ್ಲಿಯೂ ಸಹ ಬಂದಮ್ಮ ಎನ್ನುವಳು ದಲಿತ ಸಮುದಾಯದ ಸ್ತ್ರೀ. ಆದರೆ ಇಲ್ಲಿ ಮಾವನೆಂಬ ಪುರುಷನ ಮಾತಿಗೆ ಒಳಗಾಗಿ ತನ್ನ ಜೀವನವನ್ನೇ ಜನರ ಹಿತಕ್ಕಾಗಿ ಊರಿನ ಗೌಡನ ಮನೆಯ ಉಪ್ಪಿನ ಋಣಕ್ಕಾಗಿ ನೀತಿ-ನಿಜಾಯಿತಿಗೋಸ್ಕರ ತನ್ನ ಜೀವನವನ್ನೇ ಕೆರೆಗೆಹಾರವಾಗಿ ಮುಡುಪಿಡುತ್ತಾಳೆ. ಈ ಕಥನಗೀತೆಯಲ್ಲಿ ಆಸ್ತಿಯ ಆಸೆಗಾಗಿ ತನ್ನ ಸ್ವಂತ ಮಗನ ಹೆಂಡತಿ ಗರ್ಭಿಣಿಯನ್ನು ಏನೂ ತಿಳಿಯದ ಲೋಕವೇ ಕಾಣದ ಮಗುವಿನ ಅಂತರಾಳದಲ್ಲಿ ಹುದುಗಿದ ಜೀವವನ್ನು ಸಹ ಕೆರೆಗೆ ಆಹುತಿಯಾಗುವುದು ವಿಷಾದನೀಯದ ಸಂಗತಿಯಾಗಿದೆ. ಬಲಿಯಾದವಳು ಇಹಲೋಕ ತ್ಯಜಿಸಿದ ನಂತರ ಈ ನಮ್ಮ ಜನಪದರು ಇಂದಿಗೂ ಆಕೆಯ ಸಮಾಧಿಗೆ ಪೂಜೆ ಪುರಸ್ಕಾರಗಳು ನಡೆಯುತ್ತವೆಯಾದರೂ ಒಂದು ಸ್ತ್ರೀ ತನ್ನ ಆಸೆ-ಆಕಾಂಕ್ಷೆಗಳೆಲ್ಲವನ್ನು ಕೆರೆಯ ನೀರಿನೊಂದಿಗೆ ಬೆರೆತು ಜೀವವು ಸಾಕಷ್ಟು ನೋವು ಅನುಭವಿಸಿರಬಹುದು ಕೊನೆಯಲ್ಲಿ.

ಜನಪದ ಕಥನಗೀತೆಗಳಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದಂತಹ ಅಂಶವೆಂದರೆ ಹೆಣ್ಣು-ಹೆಣ್ಣಿನ ಎದುರಾಳಿಯಾಗಿ ಕಾಣಬಹುದು. 'ಉತ್ತರದೇವಿ' ಕಥನಗೀತೆಯಲ್ಲಿ ಈ ಅಂಶಗಳು ಎದ್ದು ಕಾಣುತ್ತವೆ. ತನ್ನ ಗಂಡನಾದವನು ಅಧಿಕಾರ ಚಲಾಯಿಸದೆ ತನ್ನ ತಾಯಿಯ ಮಮತೆಗೆ ಕಟ್ಟು ಬಿದ್ದು ತನ್ನನ್ನೇ ನಂಬಿ ಬಂದಂತಹ ಹೆಂಡತಿಯನ್ನು ತಾಯಿಯ ಇಲ್ಲಸಲ್ಲದ ಮಾತಿಗೆ ಬೆಲೆಕೊಟ್ಟು ಅವಳನ್ನು ತವರಿಗೆ ಕಳುಹಿಸುವಂತಹದ್ದು. ಇಲ್ಲಿ ಕವಿ ಮರಗಿಡಗಳಿಗೆ ಇದ್ದಂತಹ ನಿಯತ್ತು ಮನುಷ್ಯರಿಗೆ ಇಲ್ಲವಾಯಿತೆ? ಎಂಬ ಅಂಶವನ್ನು ತನ್ನ ಕಥನಗೀತೆಯಲ್ಲಿ ವ್ಯಕ್ತಪಡಿಸಿದ್ದಾರೆ. ತಾನು ತವರಿಗೆ ಹೋಗುವಂತಹ ಸಂದರ್ಭದಲ್ಲಿ ತಾನು ಬೆಳೆಸಿದ ಮರಗಿಡಗಳು ಅವಳನ್ನು ತಡೆದು ಇನ್ನು ಮುಂದೆ ನಮಗೆ ಉಟೋಪಚಾರ ನೋಡುವವರು ಯಾರು? ಎಂಬ ಪ್ರಶ್ನೆಗಳನ್ನು ಹಾಕಿಸುವಂತಹ ಪ್ರಯತ್ನವನ್ನು ಈ ನಮ್ಮ ಜನಪದರು ಬಹು ಸೊಗಸಾಗಿ ಅಭಿವ್ಯಕ್ತಿಸಿದ್ದಾರೆ. ನಾದಿನಿಯು ಸಹ ಅಣ್ಣ ಉಳುಮೆ ಮಾಡಿ ಬಂದಂತಹವನಿಗೆ ಮನಸ್ಸು ಕೆಡಸಿ ತನ್ನ ಹೆಂಡತಿಯನ್ನು ತವರಿಗೆ ಅಟ್ಟುವುದು ಒಂದು ಶೋಚನೀಯವಾದಂತಹ, ಮಾರ್ಮಿಕವಾದಂತಹ ಸಂಗತಿಯಾಗಿದೆ.

ಜನಪದ ಸಾರಸ್ವತ ಲೋಕದಲ್ಲಿ ಜನಪದ ಕಥನಗೀತೆಗಳು ಒಂದು ವಿಶಿಷ್ಟವಾದ ಸ್ಥಾನ, ಅವುಗಳು ಜನಪದ ಮೇಲೆ ಮಹತ್ತರ ಪ್ರಭಾವ ಬೀರಿವೆ. ಪೀಳಿಗೆಯಿಂದ ಪೀಳಿಗೆಗೆ ರವಾನಿಸಲ್ಪಡುವ ಜನಪದ ಸಾಹಿತ್ಯ ಅಪೂರ್ವವಾದ ಸಾಂಸ್ಕೃತಿಕ ನೆಲೆಯೇ ದಿಟ. ಕಥನಗೀತೆಗಳ ಪರಿಮಿತಿಯಲ್ಲಿ ಹೇಳಬೇಕಾದ ಸತ್ವವನ್ನು ಬಹುಸುಂದರವಾಗಿಯೇ ಚಿತ್ರಿಸುವ ನಮ್ಮ ಜನಪದರ ಜಾಣ್ಮೆಯನ್ನು ಯಾರೂ ಮೆಚ್ಚಬೇಕು. ಸ್ತ್ರೀಲೋಕದ ನೋವಿನ ನುಡಿಗಳನ್ನು ಬತ್ತಳಿಕೆಯಿಂದ ಹೊರತೆಗೆದು ಹೂಡುವ ಬಿರುಸು ಬಾಣದಂತೆ ಪರಿಗಣಿಸದೆ ತಮ್ಮನ್ನು ತಾವು ತಾನೆ ಉರಿಸಿಕೊಂಡು ಇತರರಿಗೆ ಬೆಳಕು ನೀಡುತ್ತಾ ಸಾರ್ಥಕ ಪಡೆದುಕೊಳ್ಳುವ ಹಣತೆಯಂತೆ ಬದುಕುವವರೇ ಅಪಾರ ಮಂದಿ. ತಮ್ಮ ಜೀವಿತ ಕಾಲವೆಲ್ಲಾ ಹಾಗೆಯೇ ಎಂದು ಒಪ್ಪಿಕೊಂಡವರು. ಹಾಗೊಂದು ವೇಳೆ ಅಪರೂಪ ಕ್ಕೊಂದು ಉತ್ತಮ ಉದಾಹರಣೆಯಾಗಿ ಸ್ತ್ರೀಯರಲ್ಲಿ ಸುಖಿಯಿದ್ದಲ್ಲಿ ಅದನ್ನು ಕೇಳಿ ಅಥವಾ ನೋಡಿ ಅಸೂಯೆ ಪಡೆದ. "ಯೋಗಿ ತಂದದ್ದು ಯೋಗಿಗೆ, ಜೋಗಿ ತಂದದ್ದು ಜೋಗಿ"ಗೆ ಎಂದು ನಂಬಿ ಸಮಾಧಾನದಿಂದ ಬದುಕಿದವರು. ತ್ಯಾಗಬಲಿದಾನಗಳಿಗೆ ಹೆಸರಾದ ಅಸಂಖ್ಯೆಯ ಜನಪದ ಕಥನಗೀತೆಗಳು ನಮ್ಮಲ್ಲಿ ಲಭ್ಯವಾಗುತ್ತವೆ.

ಜನಪದ ಸಾಹಿತ್ಯ ಕ್ಷೇತ್ರದಲ್ಲಿ ತ್ಯಾಗ ಬಲಿದಾನಗಳಿಗೆ ಕೊರತೆಯಿಲ್ಲ. ಅದರಲ್ಲೂ ಹೆಣ್ಣುಮಕ್ಕಳ ಪಾತ್ರ ಬಹು ಹಿರಿದಾದದ್ದು. ಅಂತಹ ಒಂದು ಸಾಲಿನಲ್ಲಿ ನಿಲ್ಲಬಲ್ಲ ವಿಶಿಷ್ಟವಾದ ಕಥಾ ಚೌಕಟ್ಟನ್ನು ಒಳಗೊಂಡ 'ಹೊನ್ನಮ್ಮ' ಕಥನಗೀತೆಯೂ ಒಂದು. ಅತ್ತೆ ನಾದಿನಿಯರ ಕಿರುಕುಳ ಹೊಸದೇನೂ ಅಲ್ಲದಿದ್ದರೂ ಮಾನವೀಯ ಗುಣಗಳಿಗೆ ಮುಳ್ಳಿನ ಪಂಜರವನ್ನು ಕಳಚುವ ಗುಣವುಳ್ಳವರೂ ಪ್ರಪಂಚದಲ್ಲಿ ಇರುವವರೆಗೂ ಹೊನ್ನಮ್ಮನಂತಹ ಸಹನಾಶೀಲೆಯರಿಗೆ ಕಷ್ಟತಪ್ಪಿದ್ದಲ್ಲ. ಹಾಗೆಯೇ ಹೊನ್ನಮ್ಮನಂಥವರ ಕೀರ್ತಿಯು ಇಮ್ಮಡಿಸುವುದರಲ್ಲಿ ಅನುಮಾನವಿಲ್ಲ. ಹೊನ್ನಮ್ಮ ತನ್ನ ಎರಡನೇ ಮಗುವಿಗೆ ಗರ್ಭಧರಿಸಿದಾಗ ಅಂತಹ ಸಮಯದಲ್ಲಿ ತನ್ನ ಪತಿ ದಂಡಿಗೆ ಹೋದಂತಹ ಸನ್ನಿವೇಶ. ಅಂತಹ ಸಮಯದಲ್ಲಿ ಬಸುರಿಗೆ ಮೀನು ತಿನ್ನುವ ಬಯಕೆಯಾಗುತ್ತದೆ.

ಆದ್ದರಿಂದ ತವರಿಗೆ ಹೋಗಿ ಬರುತ್ತೇನೆಂದು ಹೇಳಿದರೆ ಅವಳನ್ನ ಕಳುಹಿಸದೆ ತಾವೇ ಕೆರೆಗೆ ಹೋಗಿ ಮೀನಿನ ಬದಲಾಗಿ ಮಿಡಿನಾಗರ ಹಾವಿನ ಅಡುಗೆಯನ್ನು ಬಡಿಸುತ್ತಾರೆ. ಅದನ್ನು ತಿಂದ ಹೊನ್ನಮ್ಮ ಸಾವನ್ನ ಅಪ್ಪುತ್ತಾಳೆ. ಹೀಗೆ ಸಾವಪ್ಪಿದ ಸುದ್ದಿ ತಿಳಿದ ಪತಿ ಬಂದಾಗ ಅವಳ ದುರ್ಮರಣ ಕಂಡು ಅವನು ದಿಗ್ಭ್ರಾಂತನಾಗುತ್ತಾನೆ.

ಕೆಂಚಮ್ಮ ಕಥನಗೀತೆಯಲ್ಲಿ ಬಸುರಿಯ ಬಯಕೆಯ ಬಗೆಗೆ ಪೌಷ್ಠಿಕಾಂಶವುಳ್ಳ ಸೀಬೆ ಇತ್ಯಾದಿ ಫಲ ತರಕಾರಿಗಳ ವರ್ಣನೆಯಿಂದಲೇ ಪ್ರಾರಂಭವಾಗುವ ಈ ಕತೆಯಲ್ಲಿ ಬಸುರಿಯ ಆಹಾರದ ಬಗೆಗೆ ಸಾಕಷ್ಟು ಮಾಹಿತಿಯೂ ದೊರೆಯುತ್ತದೆ. ಅನಂತರ ಪ್ರಸವ ವೇದನೆಯನ್ನು ಅನುಭವಿಸುವ ಹೊತ್ತಿನಲ್ಲಿ,

ಹೊತ್ತು ಹೊತ್ತೀಗೂ ಕತ್ತೀಲಿ ಕಡಿದಂಗೆ
ತಾಳಲಾರೆ ಮಾವಯ್ಯ ತಡಿಲಾರೆ । ಮಾವಯ್ಯ
ಮುಳ್ಳೂರ ಸೂಲಗಿತ್ತಿ ಕರಸಯ್ಯ
ಏರಿಏರಿದ ಬ್ಯಾನೆ ಈಟೀಲಿ ಇರಿದಂಗೆ
ನಿಂತಲ್ಲಿ ನಿಲಲಾರೆ ಕುಂತಲ್ಲಿ ಕೂರ್‍ಲಾರೆ । ಮಾವಯ್ಯ
ಹೊನ್ನೂರ ಸೂಲಗಿತ್ತಿ ಕರೆಸಯ್ಯ ॥

ಇದಕ್ಕಿಂತಲೂ ಪ್ರಸವ ವೇದನೆಯನ್ನು ನೀಡುವ ಸಮರ್ಥವಾದ ಹೋಲಿಕೆ ಇನ್ನಾವುದೇ ಸಾಹಿತ್ಯದಲ್ಲಿ ಗೋಚರಿಸದು. ಅದಕ್ಕಾಗಿ ಸೂಲಗಿತ್ತಿಯರ ಭೇಟಿಯಲ್ಲಿ ಕ್ರಮತೆ, ಮಾವನ ಆತಂಕ, ಸುಖ ಪ್ರಸವವಾದರೆ ಸೂಲಗಿತ್ತಿಯರಿಗೆ ಕೊಡುವ ಸಂಭಾವನೆ ರೂಪದ ಕಾಣಿಕೆಗಳ ಪಟ್ಟಿ ಅದ್ಭುತವಾದ ವರ್ಣನೆಯಿಂದ ಕೂಡಿದೆ.

'ಕೇದಿಗೆ' ಇದೊಂದು ಸ್ವಾರಸ್ಯಕರ ಪ್ರಣಯ ಗೀತೆಯಾಗಿದೆ. ಬೆಂಕಿ ತರಲು ನೆರೆಮನೆಗೆ ಹೋದ ಕೇದಿಗೆ ಮನೆಯೊಡತಿ ಬೆರಣಿ ತಟ್ಟುತ್ತಿದ್ದರಿಂದ ನನ್ನ ಕೈ ಸಗಣಿಯಾಗಿದೆ. ನೀನೇ ಹೋಗಿ ತೆಗೆದಿಕೋ ಎನ್ನುವಂತದ್ದು. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಇದ ಸಹಜವಾದ ಕ್ರಿಯೆ. ಹಾಗೆಯ ನೆರೆಮನೆಯವರ ಸಂಬಂಧಗಳು ಸಹ ಒಂದು ಕುಟುಂಬದ ಸದಸ್ಯರ ರೀತಿಯಲ್ಲಿ ನಡೆದುಕೊಳ್ಳುತಿರುತ್ತಾರೆ. ಕೊಡುಕೊಳ್ಳುವ ವ್ಯವಹಾರ ಊಟೋಪಚಾರದಲ್ಲಿಯಾದರೂ ಸಹ ಸರ್ವೇಸಾಮಾನ್ಯ. ಹಾಗೆಯೇ ಕೇದಿಗೆ ಕೂಡ ಬೆಂಕಿ ತರಲು ಹೋದಾಗ ಸದೃಢ ಕಾಯ ರೂಪಸ್ಥ ಒಬ್ಬಾತ ಮಲಗಿರುವುದನ್ನು ನೋಡಿ ಅವನ ಮೇಲೆ ಮೋಹಗೊಂಡು ಪ್ರಣಯದಾಟಕ್ಕೆ ತಾನೇ ಸ್ವಾಗತಿಸಿ ತನ್ನ ಮನೆಗೆ ಕರೆಯುತ್ತಾಳೆ. ಆತ ಕೇದಿಗೆ ಅತ್ತೆ ಗಂಡ, ಮೈದುನರ ಬಗೆಗೆ ಅಂಜಿಕೆ ವ್ಯಕ್ತಪಡಿಸಿದಾಗ ಅದ್ಯಾವುದೂ ನಿನಗೆ ಬೇಡಾ ಬಾ ಎನ್ನುತ್ತಾಳೆ. ಅವನಿಗೋಸ್ಕರವೇ ಸೊಗಸಾಗಿ ಅಡುಗೆ ಮಾಡಿ ಊಟಕ್ಕೆ ಬಡಿಸಿದಾಗ, ಅದೇ ಸಮಯದಲ್ಲಿ ಅತ್ತೆ, ಗಂಡ, ಮೈದನರು ಬಂದು ಬಾಗಿಲ ಬಡಿದರು. ತೆಗೆಯದಿದ್ದಾಗ ಬಾಗಿಲು ಮುರಿದು ಒಳಗೆ ಹೋಗಿ ಅವರ ಪ್ರಣಯದಾಟವನ್ನು ನೋಡಿದಾಗ ತುಂಡುತುಂಡಾಗಿ ಇಬ್ಬರನ್ನು ಕತ್ತರಿಸಿ ಕೆರೆಗೆ ಚೆಲ್ಲುತ್ತಾರೆ.

ಹೀಗೆ ಪುರುಷ ಮಹಿಳೆಯ ಮೇಲೆ ದೌರ್ಜನ್ಯವನ್ನಾಗಿ ಎಸಗುತ್ತಾನೆ. ಅವನಿಂದ ಆ ಹೆಣ್ಣಿಗೆ ಸುಖ ನೆಮ್ಮದಿ ಸಿಕ್ಕಿದ್ದರೆ ಅವಳು ಪರಪುರುಷನನ್ನು ಅಹ್ವಾನ ಮಾಡುತ್ತಿರಲಿಲ್ಲವೇನೋ. ಆದರೆ ಅವಳ ಮನಸ್ಸಿನ ಹಿತವನ್ನು ಬಯಸದೇ ಅವಳನ್ನು ತುಂಡು ತುಂಡಾಗಿ ಕತ್ತರಿಸಿ ಕೆರೆಗೆ ಚೆಲ್ಲುವುದು ಬಹು ಶೋಚನೀಯ ಸಂಗತಿಯಾಗಿದೆ ಎಂತಲೂ ಸಹ ಹೇಳಬಹುದು.

ಜನಪದ ಕಥನಗೀತೆಗಳಲ್ಲಿ ಸ್ತ್ರೀಸಂವೇದನೆ ಆತ್ಮ ಬಲಿದಾನಕ್ಕಿಂತ ಬಲಿಯೇ ಪ್ರಮುಖವಾಗಿ ಪರಿಗಣಿತವಾಗಿರುವುದನ್ನು ಕಾಣಬಹುದು. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯನ್ನು ತಮ್ಮ ಸ್ವಾರ್ಥತೆಗಾಗಿ ಅಲ್ಲದೆ ಸಮಾಜದ ಹಿತದೃಷ್ಟಿಗೋಸ್ಕರ ತಮ್ಮ ಕುಟುಂಬದ ಸದಸ್ಯರಲ್ಲೊಬ್ಬರಾದ ಸೊಸೆಯೊಬ್ಬಳನ್ನು ಕೆರೆಗೆಹಾರ ಕಟ್ಟಡ, ಸೇತುವೆ, ಇತ್ಯಾದಿ ಕಾಮಗಾರಿಗಳಿಗೆ ನರಬಲಿಯನ್ನು ಕೊಟ್ಟಿರುವುದನ್ನು ಈ ಕಥನ ಕವನಗಳಲ್ಲಿ ಕಾಣಬಹುದಾಗಿದೆ. ಒಂದು ದೃಷ್ಟಿಯಿಂದ ಹೇಳುವುದಾದರೆ ಸ್ತ್ರೀ ಹುಟ್ಟುವಿನಿಂದ ಮನೆಯ ಆದಾಯ ವ್ಯಯವೆಂತಲೂ ಅಥವಾ ಇನ್ನಾವುದೋ ಕಾರಣದಿಂದಲೋ ಆಕೆಯನ್ನು ಈ ಎಲ್ಲಾ ಮೂಲಗಳಿಗೆ ಸ್ತ್ರೀಯನ್ನು ಬಲಿದಾನ ಮಾಡಿರುವುದು ಕಂಡುಬರುತ್ತದೆ.

**೧.೩. ಅಧ್ಯಯನದ ಮಹತ್ವ**

ಜನಪದ ಕಥನಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಹಲವಾರು ಅಧ್ಯಯನಗಳನ್ನು ಈ ವಿಷಯದ ಅಡಿಯಲ್ಲಿ ರಚನೆ ಮಾಡಿಕೊಳ್ಳಲಾಗಿದೆ. ಕಥನಗೀತೆಗಳ ವಸ್ತುವಿಗೆ ಅನುಗುಣವಾಗಿ ಶೀರ್ಷಿಕೆಗಳನ್ನು ಕೊಡಲಾಗಿದೆ. ಒಂದೊಂದು ಅಧ್ಯಾಯದಲ್ಲಿ 'ಜನಪದ ಮಹಿಳೆ'ಯ ವಿಭಿನ್ನ ಆಯಾಮಗಳಲ್ಲಿ ಅವಳ ಮನೋಧರ್ಮವನ್ನು ಅರಿಯುವುದು ಮಹತ್ವದಾಗಿದೆ. ಅಲ್ಲದೆ ಕಥನಗೀತೆಗಳಲ್ಲಿನ ಮಹಿಳೆ ಸಂಘರ್ಷದ ನೆಲೆಗಳನ್ನು ಗುರುತಿಸುವುದಲ್ಲದೆ. ಈ ಕಥನಗೀತೆಗಳಲ್ಲಿ ಮಹಿಳೆಯನ್ನು ಯಾವ ನಿಟ್ಟಿನಲ್ಲಿ ಪ್ರತಿನಿಧೀಸಿಕೊಂಡಿದ್ದಾರೆ. ಈ ಮಹಿಳೆ ಪ್ರತಿನಿಧೀಕರಣದ ಬಗ್ಗೆ ಹೆಚ್ಚಾಗಿ ಸಂಶೋಧನೆಗಳು ನಡೆದಿಲ್ಲವಾದ್ದರಿಂದ ಅವಳ ಸಂಘರ್ಷ, ನೋವು, ನಲಿವು, ಸಾಮಾಜಿಕ, ಧಾರ್ಮಿಕ, ಮಾನಸಿಕ ಸಾಂಸ್ಕೃತಿಕ ದೃಷ್ಟಿಕೋನದಿಂದ ಪಾತ್ರಗಳನ್ನು ವಿಶ್ಲೇಷಿಸುವ ಒಂದು ಮಹತ್ವದ ಸಂಶೋಧನೆ ಎಂದು ಭಾವಿಸಲಾಗಿದೆ.

**೧.೪. ಅಧ್ಯಯನ ವಿಧಾನ**

ಪ್ರಸ್ತುತ ಅಧ್ಯಯನವನ್ನು ಆಯ್ಕೆ ಕ್ರಮದಲ್ಲಿ (ರ್‍ಯಾಂಡಮ್) ಅಧ್ಯಯನ ಮಾಡಲಾಗಿದೆ. ಮುಖ್ಯವಾಗಿ ಈ ಅಧ್ಯಯನ ನಡೆಸಲು ಚಾರಿತ್ರಿಕ ವಿಧಾನ, ಸಂದರ್ಶನ ವಿಧಾನ, ಸಮೀಕ್ಷೆ ಹಾಗೂ ಸಹಭಾಗಿತ್ವ ವಿಧಾನಗಳನ್ನು ಹಾಗೂ ಪ್ರಶ್ನಾವಳಿಯ ವಿಧಾನಗಳನ್ನು ಅನುಸರಿಸಲಾಗಿದೆ. ಹಾಗೆ ಈ ಅಧ್ಯಯನದಲ್ಲಿ ಜನಪದ ಕಥನಗೀತೆಗಳು, ಆ ಕಥನಗೀತೆಗಳಲ್ಲಿ ಮಹಿಳೆಗೆ ಸಂಬಂಧಿಸಿದ ವಿಮರ್ಶೆ, ಇಲ್ಲಿಯವರೆಗೆ ಬಂದಿರುವ ಕೃತಿಗಳು, ಪತ್ರಿಕೆಗಳು, ಬಿಡಿ ಲೇಖನಗಳು ಹಾಗೂ ಇತರ ಮೂಲಗಳಿಂದ ಮಾಹಿತಿಗಳನ್ನು ಪಡೆಯಲಾಗಿದೆ.

**ಪ್ರಶ್ನಾವಳಿಯ ಮಾದರಿ**

ಅಧ್ಯಯನದಲ್ಲಿ ಜನಪದ ಕಥನಗೀತೆಗಳ ಕುರಿತು ಮಾಹಿತಿ ಪಡೆಯುವುದು ಹಾಗೂ ಅವುಗಳ ಪ್ರಾದೇಶಿಕ ಭಿನ್ನತೆ ಕುರಿತು ಅರಿಯುವ ಉದ್ದೇಶದಿಂದ ಪ್ರಶ್ನಾವಳಿ ಮಾದರಿಗಳನ್ನು ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ. ಈ ಪ್ರಶ್ನಾವಳಿಗಳಲ್ಲಿ ಕಥನಗೀತೆಗಳು ಯಾವ ಯಾವ ಭಾಗಗಳಲ್ಲಿ ಯಾವ ಜನಾಂಗದವರು ಹಾಡುತ್ತಾರೆ. ಅವುಗಳ ಪ್ರಾದೇಶಿಕ ಭಿನ್ನತೆ ಏನು ಎಂಬ ಸ್ಥೂಲ ವಿವರಗಳನ್ನು ಪಡೆಯುವುದಕ್ಕಾಗಿ ರೂಪಿಸಿದ ಸಾಮಾನ್ಯ ಪ್ರಶ್ನಾವಳಿಯೊಂದಿದ್ದರೆ ಮತ್ತೊಂದು ಗೀತೆಗಳಲ್ಲಿನ ಮಹಿಳೆ ಸಂಸ್ಕೃತಿ, ಜೀವನ ವಿಧಾನವನ್ನು ಆಳವಾಗಿ ಅರಿಯಲು ರೂಪಿಸಿದ ಮಾದರಿ ಪ್ರಶ್ನಾವಳಿಯಾಗಿರುತ್ತದೆ.

**ಸಂದರ್ಶನ ವಿಧಾನ**

ಕ್ಷೇತ್ರಕಾರ್ಯದಲ್ಲಿ ಕಥನಗೀತೆಗಳ ವಿಭಿನ್ನ ಪಠ್ಯಗಳು, ಭಾಷೆ, ತಂತ್ರಗಾರಿಕೆ, ಕಥನಗೀತೆಗಳನ್ನು ಹಾಡುವ ಅಥವಾ ಹೇಳುವ ವಯಸ್ಕರ ಮನಸ್ಥಿತಿಗಳನ್ನು ಅರಿಯುವ ಉದ್ದೇಶದಿಂದ ಈಗಾಗಲೆ ಕಥನಗೀತೆಗಳು ರೂಪಿತಗೊಂಡಿರುವ ಅಥವಾ ಪ್ರಚಲಿತದಲ್ಲಿರುವ ಭಾಗಗಳಲ್ಲಿ ಸಂದರ್ಶಿಸಿ ಮಾಹಿತಿ ಸಂಗ್ರಹಿಸಿ ಪ್ರಬಂಧಕ್ಕೆ ಬಳಸಿಕೊಳ್ಳಲಾಗಿದೆ. ಅಲ್ಲದೇ ಹಾಡು, ಸಂಪ್ರದಾಯ, ನಂಬಿಕೆ ಆಚಾರ-ವಿಚಾರಗಳನ್ನು, ವಿಧಿ-ನಿಷೇಧಗಳು ಇತ್ಯಾದಿಗಳನ್ನು ಅರಿಯುವ ಉದ್ದೇಶದಿಂದ ಬೇರೆ ಬೇರೆ ಸಮುದಾಯದವರನ್ನು ಸಮೀಕ್ಷೆಗೆ ಒಳಪಡಿಸಿ ಮಾಹಿತಿಯನ್ನು ಕ್ರೋಢೀಕರಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಚಾರಿತ್ರಿಕ ವಿಧಾನ**

ಜನಪದ ಕಥನಗೀತೆಗಳ ಮೂಲ ತಿಳಿಯುವ ಉದ್ದೇಶದಿಂದ ಅವರ ಚರಿತ್ರೆಯನ್ನು ಪ್ರತಿಬಿಂಬಿಸುವ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳು, ವಿವಿಧ ಪತ್ರಿಕೆಯಲ್ಲಿ ಪ್ರಕಟಗೊಂಡ ಲೇಖನಗಳು ಮುಂತಾದವುಗಳಿಂದ ಮಾಹಿತಿ ಸಂಗ್ರಹಿಸಲಾಗುವುದು. ಈ ರೀತಿ ಸಂಗ್ರಹಿಸಿದ ಮಾಹಿತಿಯನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**ತುಲನಾತ್ಮಕ ವಿಧಾನ**

ಜನಪದ ಕಥನಗೀತೆಗಳ ಹಿಂದೆ ಇದ್ದ ಆಚರಣೆಗಳಿಗೂ ಹಾಗೂ ಪ್ರಸ್ತುತ ಇರುವ ಆಚರಣೆಗಳು, ವೃತ್ತಿ, ಜೀವನ ವಿಧಾನ, ಅವರ ಹಿಂದಿನ ಮತ್ತು ಪ್ರಸ್ತುತ ದಿನದ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ, ಸ್ಥಿತಿಗತಿಗಳನ್ನು ತುಲನಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲು ತುಲನಾತ್ಮಕ ವಿಧಾನವನ್ನು ಅನುಸರಿಸಲಾಗಿದೆ.

**ಸಹಭಾಗಿತ್ವ ವಿಧಾನ**

ಜನಪದ ಕಥನಗೀತೆಗಳ ಜೀವನಾವರ್ತನ ಮತ್ತು ಧಾರ್ಮಿಕ ಆಚರಣೆಗಳು, ನಂಬಿಕೆಗಳು, ವಿಧಿ ನಿಷೇಧಗಳನ್ನು ಅರಿಯುವ ಉದ್ದೇಶದಿಂದ ಅವರ ಆಚರಣೆಗಳಲ್ಲಿ ನೇರವಾಗಿ ಪಾಲ್ಗೊಂಡು ಮಾಹಿತಿಗಳನ್ನು ಪಡೆಯಲಾಗುತ್ತದೆ. ಹಾಗೂ ಅವಶ್ಯವಿದ್ದಲ್ಲಿ ಛಾಯಾ ಚಿತ್ರಗಳನ್ನು ತೆಗೆಯುವುದು,

ವಿಡಿಯೋ ಆಡಿಯೋ ರೆಕಾರ್ಡಿಂಗ್ ಮಾಡುವುದು ಹೀಗೆ ಒಟ್ಟಾಗಿ ಎಲ್ಲಾ ವಿಧಾನಗಳಿಂದಲೂ ಮಾಹಿತಿ ಸಂಗ್ರಹಿಸಿ ಅವುಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

## ೧.೫. ಅಧ್ಯಯನದ ವ್ಯಾಪ್ತಿ

ಜನಪದ ಕಥನಗೀತೆಗಳು ಅಂದರೆ ಜನಪದರ ಗೀತೆಗಳು ಈ ಅಧ್ಯಯನದ ವ್ಯಾಪ್ತಿಯಾಗಿರುತ್ತದೆ. ಬಲಿದಾನ ಕುರಿತ ಕಥನಗೀತೆಗಳು, ಸತಿಪದ್ಧತಿ, ಬಹುಪತ್ನಿತ್ವ, ಸವತಿಮಾತ್ಸರ್ಯ, ಸೋದರಿಹಿಂಸೆ, ಅತ್ತೆ-ನಾದಿನಿಯರ ಕಾಟ, ಶೀಲದ ಶಂಕೆ, ವಿವಾಹೇತರ ಸಂಬಂಧ ಮತ್ತು ಶೀಲದ ಪ್ರಾಮುಖ್ಯತೆ ಎಂಬ ಅಂಶಗಳನ್ನು ಒಳಗೊಂಡಿರುತ್ತದೆ. ಮೌಖಿಕ ವಿಧಾನದಲ್ಲಿ ಬರುವ ಎಲ್ಲಾ ಅಂಶಗಳನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಒಂದನೆಯ ಅಧ್ಯಾಯದಲ್ಲಿ ಮಹಾಪ್ರಬಂಧದ ಅಧ್ಯಯನಕ್ಕೆ ತೊಡಗುವ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಅದರ ಅಗತ್ಯತೆ ಕುರಿತು ಚರ್ಚಿಸಲಾಗಿದೆ. ನಮ್ಮ ಸುತ್ತಮುತ್ತಲಿನ ಜನಪದ ಕಥನ ಗೀತೆಗಳನ್ನಾಧರಿಸಿ ಅದರಲ್ಲಿ ಸ್ತ್ರೀಪ್ರತಿನಿಧೀಕರಣಾಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕನ್ನಡ ಕಥನಗೀತೆಗಳ ಅಧ್ಯಯನ ವಿವರ ಅಂದರೆ ತ್ಯಾಗ, ಬಲಿದಾನ, ಶೀಲಶಂಕೆ, ಅತ್ತೆ-ನಾದಿನಿಯ ಕಾಟ, ಬಲಿದಾನ, ತ್ಯಾಗದ ಅಂಶಗಳನ್ನು ಕುರಿತಾದ ವಿಷಯವನ್ನು ಚರ್ಚಿಸಿದ್ದೇನೆ. ಹಾಗೆಯೇ ಜನಪದ ಕಥನಗೀತೆಗಳು ಬೆಳೆದು ಬಂದಂತಹ ಹಾದಿ ಹಾಗೂ ಅವುಗಳ ಒಂದು ಚಾರಿತ್ರಿಕ ಬೆಳವಣಿಗೆಯನ್ನು ಸಹ ಇದೇ ಅಧ್ಯಯನದಲ್ಲಿ ತೊಡಗಿಸಿಕೊಂಡಿದ್ದೇನೆ.

ಮೂರನೆಯ ಅಧ್ಯಾಯದಲ್ಲಿ ಜನಪದ ಮತ್ತು ಶಿಷ್ಟಗೀತೆಗಳ ಸಂಬಂಧವನ್ನು ಕುರಿತು ಚರ್ಚಿಸಿದ್ದೇನೆ ಹಾಗೂ ಜನಪದ ಕಥನಗೀತೆಗಳ ಒಂದು ದೇಸೀಯ ವಿನ್ಯಾಸ. ಅಂದರೆ ನಾಟಿ ಹಾಡು, ಬೀಸುವ ಹಾಡು, ಕೆರೆಗೆ, ಕಟ್ಟಡ, ಸೇತುವೆಗೆ ಬಲಿ ಕೊಡುವಂತಹ ಹಾಡುಗಳು, ತ್ಯಾಗ, ಶೀಲಶಂಕೆ ಇತ್ಯಾದಿ ಅಂಶಗಳನ್ನು ಹೊಂದಿರುವ ಕಥನಗೀತೆಗಳಾಂಶಗಳನ್ನು ಅಳವಡಿಸಿಕೊಂಡಿದ್ದೇನೆ.

ನಾಲ್ಕನೆಯ ಅಧ್ಯಾಯದಲ್ಲಿ ಮಹಿಳಾ ಸಂಕಥನ, ಮಹಿಳಾ ಪಾತ್ರಗಳ ಒಂದು ಸ್ವರೂಪ ಮಹಿಳಾ ಸಂಘರ್ಷದ ನೆಲೆಗಳು ಎಂಬ ಅಂಶಗಳನ್ನು ಇಟ್ಟುಕೊಂಡು ಕಥನಗೀತೆಗಳನ್ನು ಚರ್ಚಿಸಿದ್ದೇನೆ. ಹೀಗೆ ಇದರ ಜೊತೆಗೆ ಹಲವಾರು ಅಂಶಗಳನ್ನು ಸಹ ಆ ಅಧ್ಯಾಯದಲ್ಲಿ ಹೇಳಲು ಬಯಸಿದ್ದೇನೆ.

ಐದನೆಯ ಅಧ್ಯಾಯದಲ್ಲಿ ಜನಪದ ಕಥನಗೀತೆಗಳ ವರ್ಗೀಕರಣ ಮತ್ತು ಮಹಿಳಾ ಪ್ರತಿನಿಧೀಕರಣ ಹಾಗೂ ಮಹಿಳಾ ಪಾತ್ರದ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಬಳಸಿಕೊಂಡಿದ್ದೇನೆ.

ಆರನೇ ಅಧ್ಯಾಯದಲ್ಲಿ ಉಪಸಂಹಾರಕ್ಕಾಗಿ ಮೀಸಲಿರಿಸಲಾಗಿದೆ. ಮೊದಲ ಅಧ್ಯಾಯದಿಂದ ಐದು ಅಧ್ಯಾಯಗಳಲ್ಲಿ ವಿವರಿಸಿದ ವಿಷಯದ ಸಂಕ್ಷಿಪ್ತ ನೋಟವನ್ನು ಇದರಲ್ಲಿ ಕೊಡಲಾಗಿದೆ. ಆನಂತರ ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳನ್ನು ಪ್ರಕಟಿಸಿದ್ದೇನೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ

ಅನೇಕ ಮಹಿಳೆಯರು ತಮ್ಮ ಕೆಲಸ ಕಾರ್ಯಗಳನ್ನು ಬದಿಗೊತ್ತಿ ನನಗೆ ಬೇಕಾದ ವಿಷಯವನ್ನು ನೀಡಿ ಸಹಾಯ ಸಹಕಾರ ನೀಡಿ ತಮ್ಮ ಬದುಕಿನ ಪರದೆಯನ್ನು ಬಿಚ್ಚಿ ಹಲವಾರು ಮೌಲಿಕ ವಿಷಯಗಳನ್ನು ನನ್ನೊಂದಿಗೆ ಹಂಚಿಕೊಂಡ ಪ್ರಮುಖ ವಕ್ತೃಗಳ ಪರಿಚಯವನ್ನು ಹಾಗೂ ವಿಶ್ಲೇಷಣೆಯ ಜೊತೆಗೆ ಸೂಕ್ತ ರೇಖಾಚಿತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ ಮತ್ತೆ ಛಾಯಾಚಿತ್ರಗಳನ್ನು ಕೊನೆಯ ಅನುಬಂಧದಲ್ಲಿ ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ಜನಪದ ಗೀತೆ ಸಾಹಿತ್ಯದ ಸಮಗ್ರ ಮಾಹಿತಿಯನ್ನು ಒಳಗೊಂಡಿದೆ. "ಜನಪದ ಕಥನ ಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ" ಎಂಬ ಶೀರ್ಷಿಕೆಯಡಿಯಲ್ಲಿ ಕನ್ನಡ ಜನಪದ ಕಥನಗೀತೆಗಳ ಅಧ್ಯಯನ ವಿವರ ಚಾರಿತ್ರಿಕ ಬೆಳವಣಿಗೆ. ಜನಪದ ಮತ್ತು ಶಿಷ್ಟಗೀತೆಗಳ ಸಂಬಂಧ. ಜನಪದ ಕಥನಗೀತೆಗಳ ಒಂದು ದೇಸಿಯ ವಿನ್ಯಾಸ. ಅದರಲ್ಲಿ ತ್ಯಾಗ ಬಲಿದಾನ ಶಂಕೆ, ಶೋಷಣೆ, ಅಂಶಗಳು ಪ್ರಮುಖವಾಗಿ ಚರ್ಚಿಸಿದ್ದೇನೆ. ಹಾಗೆಯೇ ಮಹಿಳಾ ಸಂಕಥನ ಮಹಿಳಾ ಪಾತ್ರಗಳ ಸ್ವರೂಪ, ಮಹಿಳಾ ಸಂಘರ್ಷದ ನೆಲೆಗಳು, ಕಥನ ಗೀತೆಗಳಲ್ಲಿ ಮಹಿಳಾ ಪ್ರತಿನಿಧೀಕರಣ, ಮಹಿಳಾ ಪಾತ್ರದ ವಿಶ್ಲೇಷಣೆ ಹೊಂದಿರುವ ಈ ಕಥನ ಗೀತೆಗಳಲ್ಲಿ ಜನಪದರು ಎಲ್ಲವನ್ನು ಸಹಿಸಿಕೊಂಡು ಮೌನವಾಗಿ ಇರುವರಲ್ಲ.

ಒಟ್ಟಾರೆಯಾಗಿ ಜನಪದರ ಸಿಹಿ-ಕಹಿ ಅನುಭವಗಳನ್ನು ಈ ಕಥನಗೀತೆಗಳಲ್ಲಿ ಅಭಿವ್ಯಕ್ತಿಸದೇ ಇರಲಾರರು. ಅವರ ಅನುಭವ ಸ್ತ್ರೀಯರ ಪ್ರತಿನಿಧಿಗಳನ್ನು ಹೆಕ್ಕಿ ತೆಗೆಯುವ ಉದ್ದೇಶ ಈ ಅಧ್ಯಯನದ್ದಾಗಿದೆ. ಆಚರಣೆ ಸಂಪ್ರದಾಯಗಳನ್ನು ಕಟ್ಟಿಕೊಡುತ್ತಲೇ ತ್ಯಾಗ-ಬಲಿದಾನ ಕುರಿತ ಮಹಿಳೆಯರ ನೋವುಗಳನ್ನು ಗುರುತಿಸಲಾಗುವುದು.

ಪುರುಷ ಸ್ವಾರ್ಥ ಕಾರಣವಾಗಿಯೇ ಮತ್ತು ಧರ್ಮದ ಹೆಸರಿನಲ್ಲಿ ಹೆಣ್ಣು ಎಂಥೆಂತಹ ಅಮಾನುಷ ಹಿಂಸೆಗೆ ಒಳಪಟ್ಟಳು, ಬಲಿಯೂ ಆದಳು ಎಂಬುದನ್ನು ಇದರಿಂದ ತಿಳಿದುಕೊಳ್ಳ ಬಹುದಾಗಿದೆ. ಸತಿಪದ್ಧತಿಯಂತಹ ಕ್ರೂರ ಆಚರಣೆಯನ್ನು ಕಾನೂನಿ ಮೂಲಕ ನಿಯಂತ್ರಿಸಬಹುದೆಂಬ ನಂಬಿಕೆಯೂ ರೂಪನ್ವರ್‌ಗಳ ಘಟನೆಯಿಂದಾಗಿ ನುಚ್ಚುನೂರಾಗಿದೆ. ಪ್ರಚಲಿತ ಸಾಮಾಜಿಕ ವ್ಯವಸ್ಥೆಯಲ್ಲಿ ವರದಕ್ಷಿಣೆ, ಅತ್ಯಾಚಾರ, ಭ್ರೂಣಹತ್ಯೆ ಮುಂತಾದುವುಗಳ ಮೂಲಕ ಹೆಣ್ಣು ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತಲೇ ಇದ್ದಾಳೆ. ಸ್ತ್ರೀ ವಿಮೋಚನೆಗಾಗಿ ಸ್ತ್ರೀಶಕ್ತಿ ಸಂಘಟನೆಗಳ ಶತಮಾನದಿಂದ ದೇಶದಾದ್ಯಂತ ನಿರಂತರ ಹೋರಾಟ ನಡೆಸುತ್ತಿದ್ದರೂ ಮಹಿಳೆಯರ ಮೇಲೆ ನಡೆಯುತ್ತಿರುವ ದೈಹಿಕ ಮಾನಸಿಕ ದೌರ್ಜನ್ಯಗಳು ಹೆಚ್ಚುತ್ತಲೇ ಇರುವುದು ಆತಂಕಕಾರಿಯಾದುದಾಗಿದೆ. ವಾಸ್ತವದ ಅರಿವುಗಳು ಅವಳ ಶೋಷಿತ ಜೀವನವನ್ನು ಮಾರ್ಪಾಟುಗೊಳಿಸಿ, ಭವಿಷ್ಯವನ್ನು ಸುಂದರಗೊಳಿಸುವಲ್ಲಿ ನಿಜಕ್ಕೂ ಪ್ರಯೋಜನಕಾರಿಯಾಗಬಲ್ಲವು.

## ಅಧ್ಯಾಯ ಎರಡು

# ಜನಪದ ಕಥನಗೀತೆಗಳ ಚಾರಿತ್ರಿಕ ಬೆಳವಣಿಗೆ

೨.೧. ಜನಪದ ಕಥನಗೀತೆಗಳ ಈವರೆಗಿನ ಅಧ್ಯಯನದ ವಿವರ

೨.೨. ಜನಪದ ಕಥನಗೀತೆಗಳ ಚಾರಿತ್ರಿಕ ಬೆಳವಣಿಗೆ

ಅಧ್ಯಾಯ ಎರಡು

# ಜನಪದ ಕಥನಗೀತೆಗಳ ಚಾರಿತ್ರಿಕ ಹಿನ್ನೆಲೆ

ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಕಥನಕಾವ್ಯವೊಂದು ಪ್ರಮುಖ ಸುದೀರ್ಘ ಕಾವ್ಯ ಪ್ರಕಾರ. ಹೆಸರೇ ಸೂಚಿಸುವಂತೆ ಕಥೆಯೇ ಇಲ್ಲಿ ಪ್ರಧಾನ. ಭಾವಾಂಶಕ್ಕೆ ಇಲ್ಲಿ ಎಡೆಯಿರುವುದಾದರೂ ಅದು ಗೌಣ. ಭಾವಗೀತೆಯಲ್ಲಿ ಕತೆಯ ಅಂಶ ಇರಬಾರದೆಂದಿಲ್ಲ. ಆದರೆ ಅದು ಭಾವದ ಪೂರಕ ಬಂದಾಗ ಹಿಂದಾಗುತ್ತದೆ. ಕಥನಕಾವ್ಯದಲ್ಲಿ ಕವಿ ಕಾವ್ಯದ ಹೊರಗೆ ನಿಂತು ತಾನೇ ಮಾತಾಡದೇ ಬೇರೆಯವರ ಮೂಲಕ ಮಾತಾಡುತ್ತಾನೆ. ಪಾತ್ರರಚನೆ ಮತ್ತು ಕ್ರಿಯೆಗಳಿಗೆ ಇಲ್ಲಿ ಅಗ್ರಸ್ಥಾನವೇ ಹೊರತು ವರ್ಣನೆಗಳಿಗಲ್ಲ. ಘಟನೆಯಿಂದ ಘಟನೆಗೆ ಸನ್ನಿವೇಶದಿಂದ ಸನ್ನಿವೇಶಕ್ಕೆ ಕತೆ ಸುಲಭವಾಗಿ ಅಡೆತಡೆಗಳಿಲ್ಲದೆ ಹರಿಯಬೇಕು. ಅಲ್ಲಿ ಒಂದು ಪಾತ್ರ ಪ್ರಧಾನವಾಗಿದ್ದು, ಉಳಿದುವೆಲ್ಲ ಪಾತ್ರಕ್ಕೆ ಪೋಷಕವಾಗಿ ಬರುತ್ತವೆ. ಯಾವುದೋ ಒಂದು ಘಟನೆ ಒಂದು ಸನ್ನಿವೇಶ ಒಂದು ತತ್ವದೃಷ್ಟಿ ಕೇಂದ್ರವಾಗಿದ್ದು ಉದ್ದಿಷ್ಟಗುರಿ ಸ್ಪಷ್ಟವಾಗಿದ್ದು, ಪರಿಣಾಮವೊಂದೇ ಚರಮಗಾವ್ಯವಾಗಿರುತ್ತದೆ. ಪದ್ಯಮಾಧ್ಯಮದ ಕಥೆಯೇ ಕಥನಕಾವ್ಯವೆಂದು ಹೇಳುವುದೇನೋ ಸುಲಭ. ಪದ್ಯ ಅಥವಾ ಗದ್ಯ ಮಾಧ್ಯಮ ಮಾತ್ರ ಕಥೆ ಮತ್ತು ಕಥನಕಾವ್ಯಗಳಿಗಿರುವ ಪರಸ್ಪರ ವ್ಯತ್ಯಾಸವೆಂದು ಹೇಳಲಾಗದು. ವಯೋಮಾನದ ದೃಷ್ಟಿಯಿಂದ ಮೊದಲು ಕಥೆ. ಆ ಮೇಲೆ ಕಥನಕಾವ್ಯ ಹುಟ್ಟಿರಬೇಕೆಂದು ತೋರುತ್ತದೆ. ಭಾವಗೀತೆಯಂತು ಕತೆಗಿಂತ ಮೊದಲೇ ಇತ್ತು. ನಾಟಕವೂ ಪ್ರಾಯಶಃ ಕತೆಗಿಂತ ಮೊದಲೋ ಅಥವಾ ಅದರ ಜೊತೆಗೋ ಅವತರಿಸಿರಬೇಕೆಂದು ಊಹಿಸಬಹುದಾಗಿದೆ. ಈ ಮೂರು ಪ್ರಕಾರಗಳ ಕೆಲಕೆಲವು ಅಂಶಗಳನ್ನು ಮೈಗೂಡಿಸಿಕೊಂಡು ಕಥನಕಾವ್ಯ ಆವಿರ್ಭವಿಸಿರಬೇಕು. ಅಮೂರ್ತ ಸ್ವರೂಪದ ಭಾವಗೀತೆ ಗೌಪ್ಯವಾದುದು. ಸಾಮಾನ್ಯ

ಮತಿಗೆ ನಿಲುಕುವುದು ಕಷ್ಟ. ಕಥನಕಾವ್ಯದ ವಸ್ತು ಮುಷ್ಠಿಗ್ರಾಹ್ಯವಾದದ್ದರಿಂದ ಯಾರೂ ಬೇಕಾದರೂ ಅರ್ಥಮಾಡಿಕೊಳ್ಳಬಹುದು. ಒಂದು ಕ್ಷಣದ ಭಾವ ಅಥವಾ ಅನುಭವ ಭಾವಗೀತೆಯ ಸಾಮಾಗ್ರಿಯಾಗುತ್ತದೆ. ಅದು ಕಾಲ ದೇಶಾತೀತ ಅಂದರೆ ಕಾಲದ ಪ್ರಜ್ಞೆಯಿರುವುದಿಲ್ಲ. ಕ್ರಿಯಾತ್ಮಕವಾದ ಘಟನೆಗಳು ಕಥನಕಾವ್ಯದ ಗ್ರಾಸ. ಅದು ಕಾಲ ದೇಶನಿಬದ್ಧವಾದದ್ದು. ಅಂದರೆ ಅದರ ಕ್ರಿಯೆ ಯಾವುದೋ ದೇಶದಲ್ಲಿ ಎರಡು ಕಾಲಗಳ ಗಡಿಯೊಳಗೆ ನಡೆಯುವಂಥದ್ದು.

ಕಥನಕಾವ್ಯವೆಂದರೆ ಕೂಡಲೇ ಹರಿಹರ ಚಾಮರಸರ ನೆನಪಾಗುತ್ತದೆ. ಆದರೆ ಅವರು ಶಿಷ್ಟ ಸಾಹಿತ್ಯ ಕ್ಷೇತ್ರದಲ್ಲಿ ಆದ್ಯ ಪ್ರವರ್ತಕರೆನಿಸಿಕೊಂಡರು. ಆ ಪ್ರಕಾರ ಮೊದಲೇ ಜಾನಪದ ಕ್ಷೇತ್ರದಲ್ಲಿ ಸುದೀರ್ಘವಾಗಿದ್ದು ಜನಪ್ರಿಯತೆ ಪಡೆದಿತ್ತು.

ಮಾನವ ಜೀವನ ಸಂಕೀರ್ಣವಾದ್ದರಿಂದ, ಅವನ ಅನುಭವಗಳು ಆಶೋತ್ತರಗಳು ಆಲೋಚನೆಗಳು ಅನಂತವಾದ್ದರಿಂದ ಅವನ ಕಾರ್ಯಕ್ಷೇತ್ರ ವಿಸ್ತಾರವಾದ್ದರಿಂದ ಅವನ್ನೆಲ್ಲ ಯಾವುದೋ ಒಂದು ಅಥವಾ ಎರಡು ಕಲಾ ಪ್ರಕಾರಗಳು ಅಥವಾ ಸಾಹಿತ್ಯ ಪ್ರಕಾರಗಳು ಪ್ರತಿಬಿಂಬಿಸಬಲ್ಲವೆಂದು ಅವನ ಅಗತ್ಯಗಳನ್ನೆಲ್ಲ ಅವು ಪೂರೈಸಬಲ್ಲವೆಂದು ಹೇಳಲಾಗದು. ಅವನ ಅಗತ್ಯಗಳಿಗೆ ತಕ್ಕಂತೆ ಅಪ್ರಜ್ಞಾಪೂರ್ವಕವಾಗಿಯೇ ಅನೇಕ ಕಲಾಪ್ರಕಾರಗಳು ಅನೇಕ ಜ್ಞಾನಶಾಖೆಗಳು ಹುಟ್ಟಿಕೊಂಡಿದ್ದುಂಟು. ಕಥನಕಾವ್ಯ ಉದಿಸಿದ್ದೂ ಹಾಗೆಯೇ. ಮದುವೆ ಹಬ್ಬ-ಹರಿದಿನಗಳು, ನಾಟಿ, ಕಳೆ, ಒಕ್ಕಣಿ ಮೊದಲಾದ ಕೃಷಿಕರ್ಮಗಳು ಅಡಿಕೆ ಸಿಪ್ಪೆಸುಲಿಯೋಣ, ಹಗ್ಗಹೊಸೆಯೋಣ, ಮುಟ್ಟಿಹೆಣೆಯೋಣ, ನೂಲೋಣ, ಬೀಸೋಣ ಮೊದಲಾದ ಗೃಹಕೃತ್ಯಗಳ ನಡುವೆ ಜನಿಸಿದಂಥವುಗಳಾಗಿವೆ. ಭಾವಗೀತೆಯ ಹಾಡುಗಾರಿಕೆ ಕ್ಷಿಪ್ರದಲ್ಲಿ ಮುಗಿದು ಹೋಗುತ್ತದೆ. ಜತೆಗೆ ಕೆಲವು ವೇಳೆ ಕುಣಿತ ಹಾಡುಗಾರಿಕೆಯಿಲ್ಲದೆ ನಡೆಯುವಂತಿಲ್ಲ. ಹಾಡಿನಿಂದ ಆವೇಶ ಬರುತ್ತದೆ. ಅದಕ್ಕೆ ಶೋಭೆ ಕಟ್ಟುತ್ತದೆ. ಲಯ ಪ್ರಾಸಗಳಿಂದಾಗಿ ಪದ್ಯ ತೀವ್ರವಾಗಿ ಮನಸ್ಸನ್ನು ವಶಪಡಿಸಿಕೊಳ್ಳುತ್ತದೆ. ಅಲ್ಲಿ ಬಹುಕಾಲ ನಿಲ್ಲುತ್ತದೆ. ಅದನ್ನು ಮತ್ತೆ ಕುರುಕಿ ಕೊಳ್ಳುವಾಗ ಆನಂದವಾಗುತ್ತದೆ. ಒಂಟಿತನಕ್ಕೆ ಹಾಡು ಶ್ರೇಷ್ಠ ಸಂಗಾತಿಯಾಗುತ್ತದೆ.

ವಿರಾಮ ಕಾಲವನ್ನು ತುಂಬುವಂಥ ಮನೋಲ್ಲಾಸವನ್ನುಂಟು ಮಾಡುವಂತಹ ಸರ್ವಗ್ರಾಹ್ಯ ವಾಗುವಂತೆ ಚಿತ್ರ ದೃಶ್ಯಗಳ ಮೆರವಣಿಗೆಯನ್ನು ಸಾಧ್ಯವಾಗಿಸುವಂಥ ಪ್ರಕಾರ ಕಥನಕಾವ್ಯ. ಅದರಲ್ಲಿ ಗದ್ಯದ ಸೊಗಸು ಸೊಗಡು ಹರಿವುಗಳಿರುತ್ತವೆ. ಪದ್ಯದ ಕಾವ್ಯ ಜಿಗಿತ ಪೆಂಪುಗಳಿರುತ್ತವೆ. ಇತರ ಪ್ರಕಾರಗಳ ಗುಣಗಳೂ ಅದರಲ್ಲಿ ಅಡಕವಾಗಿರುವುದರಿಂದ ಅದರ ಉತ್ಕೃಷ್ಟತೆ ತಾನಾಗಿಯೇ ಸಂಸ್ಥಾಪಿತವಾಗಿರುವುದನ್ನು ಕಾಣಬಹುದು.

### ೨.೧. ಜನಪದ ಕಥನಗೀತೆಗಳ ಈವರೆಗಿನ ಅಧ್ಯಯನ ವಿವರ

ಕರ್ನಾಟಕದಲ್ಲಿ ವೀರಗೀತೆಗಳು ಅಪಾರವಾಗಿ ಸಿಗುತ್ತವೆ. ಅನೇಕ ತರಹದ ಪೌರಾಣಿಕ, ವಾಸ್ತವಿಕ, ಸಾಮಾಜಿಕ, ತ್ಯಾಗ ಬಲಿದಾನ, ಸಹಗಮನ, ಕೌಟುಂಬಿಕ ಹೀಗೆ ನಾನಾ ರೀತಿಯಲ್ಲಿ ವೀರಗೀತೆಗಳು ಕಂಡುಬರುತ್ತದೆ. ಅವುಗಳನ್ನು ನಮ್ಮ ಹಿರಿಯರು ಕೈಲಾದ ಮಟ್ಟಿಗೆ ಹೆಕ್ಕಿ

ತೆಗೆದಿದ್ದಾರೆ. ಅಂತವರಲ್ಲಿ ಡಾ. ಬೆಟಗೇರಿ ಕೃಷ್ಣಶರ್ಮ, ಜೀ.ಶಂ.ಪಂ. ಕ್ಯಾತನಹಳ್ಳಿ ರಾಮಣ್ಣ, ಕಾಳೇಗೌಡ ನಾಗವಾರ, ಕ.ರಾ.ಕೃ., ಹನೂರು ಕೃಷ್ಣಮೂರ್ತಿ ಇನ್ನು ಮುಂತಾದವರು ಸಂಗ್ರಹಕಾರ್ಯಕ್ಕೆ ಕೈಹಾಕಿ ದುಡಿದಂತವರು. ಕೇವಲ ಸಂಗ್ರಹಣೆ ಮಾಡದೆ ತಮ್ಮ ವಿದ್ವತ್ಪೂರ್ಣದಿಂದ ಅನೇಕ ಕಥನಗೀತೆಗಳನ್ನು ವಿಮರ್ಶಿಸಿ ಪರಿಷ್ಕರಣೆ ಅಂಶಗಳನ್ನು ಕೂಡ ಒದಗಿಸಿದ್ದಾರೆ.

ಹೀಗೆ ಅವರಿಂದ ಸಂಗ್ರಹಿತವಾದ ವಿಮರ್ಶಿಸಿದ ಕಥನಗೀತೆಗಳನ್ನು ನೋಡಬಹುದಾಗಿದೆ. ೧೮೦೩ರಲ್ಲಿ ಜಾಲಿ ಲೀಡನ್ ಎಂಬುವನು ಶ್ರೀರಂಗಪಟ್ಟಣದ ಕೆಡುಗಾಲ ಕುರಿತು ಕಥನಗೀತೆಯೊಂದನ್ನು ಇಂಗ್ಲೀಷ್‌ಗೆ ಭಾಷಾಂತರಿಸಿ ಕನ್ನಡ ಗೀತೆಯನ್ನು ಇತರರಿಗೆ ಪರಿಚಯಿಸಿ ಪ್ರಥಮ ಶ್ರೇಯಸ್ಸಿಗೆ ಪಾತ್ರನಾದ. ಅಲ್ಲದೆ ಕನ್ನಡ ಜನಪದ ಗೀತೆಗಳಿಗೆ ಈತನೇ ಪ್ರಥಮ ಸಂಗ್ರಹಕಾರನೆನ್ನಬಹುದು. ಇವರಾದ ನಂತರ ೧೮೮೫ರ ವರೆಗೆ ಯಾರೂ ಸಂಗ್ರಹ ಮಾಡಿದಂತೆ ಕಾಣುವುದಿಲ್ಲ. ೧೮೮೫ರಲ್ಲಿ ಜೆ.ಎಫ್. ಫ್ಲೀಟ್ ಅವರು ಸಂಗ್ರಹಿಸಿದ ಲಾವಣಿಗಳನ್ನು ಕ್ಯಾತನಹಳ್ಳಿ ರಾಮಣ್ಣನವರು ಸಂಪಾದಿಸಿದ್ದಾರೆ. ಅದರಲ್ಲಿ ಈ ಮೊದಲೇ ಅಂದರೆ ೧೮೭೦ರಲ್ಲಿ ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು ಫ್ಲೀಟರವೇ.

೧೯೫೬ರಲ್ಲಿ ಗದ್ದಿಗೆಮಠ ಬಿ.ಎಸ್. ರವರ 'ಜನತಾ ಗೀತೆಗಳು' ಇದರಲ್ಲಿ ಹಲವಾರು ಕಥನಗೀತೆಗಳನ್ನು ಹಾಗೂ ವೀರಕಂಪಲಿರಾಯ, ಕುಮಾರರಾಮ ಇತ್ಯಾದಿ ಹಾಡುಗಳು ವೀರರ ಜೀವನ ಚಿತ್ರಣ ಇದೆ. ಅಲ್ಲದೆ ೧೯೫೫ರಲ್ಲಿ 'ಕನ್ನಡ ಜನಪದ ಗೀತೆಗಳು' ಎಂಬ ವಿಷಯದ ಮೇಲೆ ಪಿ.ಎಚ್.ಡಿ. ಪ್ರಬಂಧ ಮಂಡಿಸಿದರು. ಅದರಲ್ಲಿಯೂ ಸಹ ಕಥನಗೀತೆಗಳಿಗೆ ಸಂಬಂಧಿಸಿದಂತೆ ವಿಚಾರವನ್ನು ಮಾಡಿದ್ದಾರೆ. ಅಲ್ಲದೆ ಕಿನ್ನರಿ ಬೊಮ್ಮಯ್ಯ ಮುಂತಾದ ಹನ್ನೆರಡನೆಯ ಶತಮಾನದ ಶಿವಶರಣರ ವೀರಗಾಥೆ ಇದೆ.

೧೯೨೫ರಲ್ಲಿ ಡಾ. ಬೆಟಗೇರಿ ಕೃಷ್ಣಶರ್ಮರವರು 'ಕೆರೆಗೆಹಾರ' ಕಥನಗೀತೆಯನ್ನು ಮೊಟ್ಟ ಮೊದಲಿಗೆ ಸಂಗ್ರಹಿಸಿದ ಆದ್ಯರೆಂದು, ಕರ್ನಾಟಕ ಜಾನಪದ ವಿಶ್ವವಿದ್ಯಾಲಯದಲ್ಲಿ ನಡೆದ ಕಾರ್ಯಕ್ರಮದಲ್ಲಿ 'ಬೇಟಗೇರಿ ಶರ್ಮರ ಚಿಂತನೆಗಳು' ವಿಚಾರ ಸಂಕೀರ್ಣದಲ್ಲಿ ಪ್ರೊ. ಚಂದ್ರಶೇಖರ್ ವಸ್ತ್ರದರವರು ಪ್ರಸ್ತಾಪಿಸಿದರು.

೧೯೫೨ರಲ್ಲಿ 'ಲಾವಣಿಗಳು' ಎಂಬ ಹೆಸರುಳ್ಳ ಪತ್ಯ ಪುಸ್ತಕ ಪ್ರಕಟವಾಯಿತು. ೧೯೫೯ರಲ್ಲಿ 'ಕಿತ್ತೂರಿನ ಕಾಳಗ' ಪ್ರಕಟವಾಗಿದೆ. ಇದರಲ್ಲಿ ಸಂಗೊಳ್ಳಿರಾಯಣ್ಣ ಹಾಗೂ ಇತರರ ಬಗ್ಗೆ ದಾಖಲೆ ಇದೆ. ೧೯೫೯ರಲ್ಲಿ ಕುಮಾರ ರಾಮನ ದುಂದುಮೆಯನ್ನು ಡಾ. ಬಿ.ಎಸ್. ಗದ್ದಿಗೆಮಠರವರು ಹೊರತಂದಿದ್ದಾರೆ.

೧೯೬೨ರಲ್ಲಿ 'ಹೊನ್ನ ಬಿತ್ತೇವು ಹೊಲಕೆಲ್ಲಾ' (ಗೊ.ರೂ.ಚ) ಎಂಬ ಹೊತ್ತಿಗೆಯನ್ನು ಅಖಿಲ ಕರ್ನಾಟಕ ಜಾನಪದ ಸಮ್ಮೇಳನ, ತರೀಕೇರಿಯವರು ಪ್ರಕಟಿಸಿದ್ದಾರೆ. ಇದರ ಸಂಪಾದಕರು ಸ.ಸ. ಮಾಳವಾಡರು. ಇದರಲ್ಲಿ ಒಂಭತ್ತು ಪ್ರಕಾರಗಳಿವೆ. ಇದರಲ್ಲಿ 'ಐತಿಹಾಸಿಕ ಜನಪದ ಕಥನ

ಗೀತೆಗಳ ಸಂಗ್ರಹಣೆ' 'ಜಾನಪದ ಗೀತೆಗಳಲ್ಲಿ ಕಿತ್ತೂರು' ಕನ್ನಡದಲ್ಲಿ ಕಥನ, ಕವನ, ಗೋವಿನ ಹಾಡು ಇತ್ಯಾದಿ ವೀರಗೀತೆಗಳಿಗೆ ಸಂಬಂಧಪಟ್ಟಂತೆ ಪ್ರಕಟವಾಗಿದೆ.

೧೯೬೦ರಲ್ಲಿ 'ಸ್ವಾತಂತ್ರ್ಯ ಯುದ್ಧ ೧೮೫೭' ಎಂಬ ಕೃತಿಯಲ್ಲಿ ಸಂಪೂರ್ಣವಾಗಿ ನಿಶ್ಯಸ್ತ್ರೀಕರಣ ವನ್ನಲ್ಲದೇ ಕೊನೆಗೆ ಈ ಕೃತಿಯಲ್ಲಿ ಜನಪದ ಲಾವಣಿಗಳನ್ನು ವೀರರ ಚರಿತ್ರೆಯನ್ನು ಚಿತ್ರಿಸಲಾಗಿದೆ. ೧೮೫೭ರ ಇತಿಹಾಸ ಕಿತ್ತೂರ ಚೆನ್ನಮ್ಮ ಸುರಪುರದ ವೆಂಕಟಪ್ಪ ನಾಯಕ, ನರಗುಂದ ಬಾಬಾಸಾಹೇಬ, ಮುಂಡರಗಿ ಭೀಮರಾಯ ಇತ್ಯಾದಿ ಕೃತಿಗಳಲ್ಲಿ ಕಥನಗೀತೆಗಳಿಗೆ ಸಂಬಂಧಿಸಿದ ಲೇಖನಗಳಿವೆ.

೧೯೭೦ರಲ್ಲಿ 'ಬೀದರ ಜಿಲ್ಲೆಯ ಜನಪದ ಗೀತೆಗಳು' ಸಂಗ್ರಹ ಹೊರಬಂದಿದೆ. ಪೌರಾಣಿಕ, ಕೌಟುಂಬಿಕ, ಊರ ಹಿತಕ್ಕಾಗಿ ಹೋರಾಡಿದ ವೀರಗೀತೆಗಳಿವೆ. 'ರಾಯಚೂರು ಜಿಲ್ಲೆಯ ಜನಪದ ಗೀತೆಗಳು' ಇದನ್ನು ಸಂಪಾದಿಸಿದವರು ಟಿ.ಎಸ್. ರಾಜಪ್ಪನವರು. ಇದು ಅನೇಕ ಕಥನಗೀತೆ ಹಾಗೂ ಲಾವಣಿಗಳನ್ನೊಳಗೊಂಡ ಕೃತಿಯಾಗಿದೆ.

೧೯೭೯ರಲ್ಲಿ ಡಾ. ಜಿ.ಶಂ. ಪರಮಶಿವಯ್ಯನವರ 'ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು' ಅವರ ಪಿಎಚ್.ಡಿ. ಮಹಾಪ್ರಬಂಧವು ಜನಪದ ವೃತ್ತಿ ಗಾಯಕರ ಹಾಗೂ ಅವರ ಸಾಹಿತ್ಯ ಮತ್ತು ಐತಿಹಾಸಿಕ ರಮ್ಯ ಇತ್ಯಾದಿ ಕಥನಗೀತೆಗಳ ಕುರಿತು ಇದೆ. ಅಲ್ಲದೇ ಇವರದೇ ಇನ್ನೊಂದು ಕೃತಿ 'ಪಿರಿಯಾ ಪಟ್ಟಣದ ಕಾಳಗ, ಪ್ರಕಟವಾಯಿತು.

೧೯೭೯ರಲ್ಲಿ 'ಜಾನಪದ ಕಿತ್ತೂರಿನ ಕಿಡಿಗಳು' ಇದನ್ನು ಡಾ. ಸೋಮಶೇಖರ ಇಮ್ರಾಪುರ ಅವರು ಬರೆದಿದ್ದಾರೆ. ಇದರಲ್ಲಿ ನಾಲ್ಕು ಭಾಗ ಮಾಡಿದ್ದಾರೆ.

೧. ಕಿತ್ತೂರ ಚೆನ್ನಮ್ಮ.

೨. ಸಂಗೊಳ್ಳಿರಾಯಣ್ಣ.

೩. ಕಿತ್ತೂರಿನ ಇತರ ವೀರರು ಹಾಗೂ

೪. ಕಿತ್ತೂರಿನ ಕುರಿತು ಲಾವಣಿಗಳು ಹಾಗೂ ಇತರ ಸಾಹಿತ್ಯದ ಬಗ್ಗೆ ಆಳವಾದ ಅಧ್ಯಯನ ಇದರಲ್ಲಿದೆ.

೧೯೮೪ರಲ್ಲಿ 'ಜಾನಪದ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ' ಡಾ. ದೇವೇಂದ್ರ ಕುಮಾರ ಹಕಾರಿಯವರ ಪಿಎಚ್.ಡಿ. ಪ್ರಬಂಧದಲ್ಲಿ ಹಲಗಲಿ ಬೇಡರು, ಗ್ಯಾಲಣ್ಣನ ವೀರಗಾಥಾ, ಸಿರಿಗಾವಲಿ, ಕೆರೆಗೆಹಾರ, ಈರೋಬಿ, ನೀಲಗಂಗನ ಹಾಡುಗಳು ಇವೆ.

೧. ಚಕ್ಕೆರೆ ಶಿವಶಂಕರ್, ೧೯೮೦ 'ಜಾನಪದ ಚಿಂತನ' ಕಲ್ಯಾಣಿ ಪ್ರಕಾಶನ, ಬೆಂಗಳೂರು.

[ಪರಿವಿಡಿ–೧. ಚಿಕ್ಕೋಳು ಹಿರಿದಿಮ್ಮವ್ವ – ಪುನರ್ ವಿಮರ್ಶೆ (ಒಂದು ಟಿಪ್ಪಣೆ) ಕೃತಿಯಲ್ಲಿ ಜನಪದ ಕಥನಗೀತೆಗಳ ಬಗ್ಗೆ ವಿವರ ಇದೆ.

೨. ಬರಗೂರು ವೀರಮ್ಮ - ದುರಂತ ಜನಪದ ಕಥನಗೀತೆ ಕೃತಿಯಲ್ಲಿ ದುರಂತವನ್ನು ಹೇಳುವ ಕಥನಗೀತೆಗಳ ಮಾಹಿತಿ ಇದೆ.

೩. ಚಕ್ಕರೆ ಚೌಡಮ್ಮ.

೨. ಡಾ. ಹಿ.ಶಿ. ರಾಮಚಂದ್ರೇಗೌಡ. ೧೯೮೭, 'ಜಾನಪದ ಅಂತರಂಗ', ಮಾನವಿ ಪ್ರಕಾಶನ, ೬೫. ಮಾನಸ ಗಂಗೋತ್ರಿ, ಮೈಸೂರು. [ಲೇಖನ: ೧. ಬಾಂಬು/ಹೆಣ್ಣು/ಜಾನಪದ–೧] ಈ ಕೃತಿಯಲ್ಲಿ ಹೆಣ್ಣಿನ ಬಗ್ಗೆ ಕುರಿತಾದ ಲೇಖನ ಇದೆ.

೩. ಹಿ.ಶಿ. ರಾಮಚಂದ್ರೇಗೌಡ. ೨೦೦೮, 'ಜನಪದ ಜೀವನನ್ಯಾಯ', ಸಾಹಿತ್ಯ ಚಂದನ ಪ್ರಕಾಶನ ಬೆಂಗಳೂರು. [ಪರಿವಿಡಿ ೨. ಹೆಣ್ಣಿನ ಅಧಿಕಾರ, ೮ ಜನಪದ ಸಾಹಿತ್ಯದಲ್ಲಿ ಲಿಂಗಾಧಾರಿತ ಸಂವೇದನೆಗಳು]

೪. ರಾಜೇಗೌಡ ಹೊಸಹಳ್ಳಿ. ೧೯೯೯, 'ಜಾನಪದ ಸಂಕಥನ, ಸ್ವಾತಿ ಪ್ರಕಾಶನ, ಬೆಂಗಳೂರು. [ಪರಿವಿಡಿ: ೨. ಸಾವು: ಮಾತೃಮೂಲದ ಜಾನಪದೀಯ ಚಿಂತನೆ / ೫೫.]

೫. ದಂಡಿನ ಮಾರಿ ಮತ್ತು ಕೌಲೇದುರ್ಗ: ಒಂದು ಕ್ಷೇತ್ರಿಯ ಅಧ್ಯಯನ / ೭೨

೬. ಜಾನಪದ ಹಿಂದೆ ಕೆಲವು ವಿಚಾರಗಳು / ೮೧.

೭. ಗ್ರಾಮೀಣ ಸಮಾಜದಲ್ಲಿ ಹೆಣ್ಣು : ಒಂದು ವಿಶ್ಲೇಷಣೆ] ಕೃತಿಯ ೮೨ನೇ ಪುಟದಲ್ಲಿ ಹೆಣ್ಣಿನ ಬಗ್ಗೆ ವಿಮರ್ಶೆಯಿದೆ.

೫. ಶಿಶೂರ ಬಿ.ವ್ಹಿ., ೨೦೦೦, 'ಸಂಶೋಧನ ಸ್ವರೂಪ' ಅನ್ನಪೂರ್ಣ ಪ್ರಕಾಶನ. ಹುಬ್ಬಳ್ಳಿ.

೬. ರಹಮತ್ ತರೀಕೆರೆ (ಸಂ), ಮಾಧವ ಪೆರಾಜೆ ಮತ್ತು ವೆಂಕಟೇಶ್ ಇಂದ್ವಾಡಿ (ಸಹ.ಸಂ) ೨೦೦೦, ಧರ್ಮ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ. ಹಂಪಿ.

೭. ಮಂಜುನಾಥ ಬೇವಿನಕಟ್ಟಿ ೧೯೯೪. ಜನಪದ ಸಂಸ್ಕೃತಿ, ತೇಜಸ್ವಿ ಪ್ರಕಾಶನ, ಹೂವಿನಹಡಗಲಿ. ಬಳ್ಳಾರಿ.

೮. ಗುರುಲಿಂಗ ಕಾಪಸೆ ೧೯೯೩ 'ಮಧುರ ಚೆನ್ನರ ಲೇಖನಗಳು, ಪ್ರಸಾರಾಂಗ ಕನ್ನಡ. [ಪರಿವಿಡಿ: ೩. ಜನಪದ ಸಾಹಿತ್ಯ. ೧. ಹಳ್ಳಿಯ ಹಾಡುಗಳು –೨೪೫, ೨. ಹೆಣ್ಮಕ್ಕಳ ಗಾದೆಗಳು.

೧೦. ಮುನ್ನುಡಿ ಹರಡೆ ಇತ್ಯಾದಿ. ೩. ಮಲ್ಲಿಗೆ ದಂಡೆ [ಜನಪದ ಹಾಡುಗಳ ಸಂಗ್ರಹ] ೫೨೯

೧೩. ಸ್ತ್ರೀ ನೀತಿ ಸುಧಾಕರ (ಪತ್ರ ಸಾಹಿತ್ಯ – ೫೨೮)

೯. ಗುರುಪ್ರಸಾದ್ ಸಿ.ಟಿ. (ಸಂಕಲನ) ೨೦೦೦, 'ಕನ್ನಡ ಜಾನಪದ ಗ್ರಂಥಸೂಚಿ', ಪ್ರಸಾರಾಂಗ, [ಪರಿವಿಡಿ: ಕಾವ್ಯ, ಕಥನಕಾವ್ಯ-ಮಹಾಕಾವ್ಯ - ೧, ಆಚರಣೆ, ಸಂಪ್ರದಾಯಗಳು - ೬೮]

ಒಳಗೆ-೨, ಆಯ್ದ ಜನಪದ ಕಥನ ಗೀತೆಗಳು, ಡಾ.ಬಿ.ಬಿ. ಹೆಂಡಿ, ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ. ೧೯೨೮. ಒಟ್ಟು ಮೂರು ಅಧ್ಯಾಯಗಳಿಂದ ಕೂಡಿದೆ. ಇದರಲ್ಲಿ ಮೂರು ಕಥನಗೀತೆಗಳು. ಸ್ತ್ರೀಜೀವನದ ಸತ್ವ ಪರೀಕ್ಷೆಯ ವಸ್ತುಗಳನ್ನಾಧರಿಸಿದಂತಹವುಗಳಾಗಿವೆ. ಉತ್ತರ ಕರ್ನಾಟಕದ ಜನ ಸಾಮಾನ್ಯರಲ್ಲಿ ಒಂದು ಕಾಲಕ್ಕೆ ಕಥೆಗಳು ಜನಪ್ರಿಯತೆ ಪಡೆದಿದ್ದವು.

೧೦. ಬಸವರಾಜ ಮಲಶೆಟ್ಟಿ, ಇಜಿಯಣ್ಣನ ಹಾಡು, ಯುವಕರ ಸಂಘ ರಾಮನಗರ, ಹಗರಿಬೊಮ್ಮನ ಹಳ್ಳಿ ೧೯೮೨. ಇದಕ್ಕೆ ಸಂಬಂಧಿಸಿದಂತೆ ಇಲ್ಲಿ ಜಾನಪದ ಕಲಾವಿದೆಯಿಂದ ಸಂಗ್ರಹಿಸಿದ ೮೯ ಜಾನಪದ ಕಥನಗೀತೆಗಳ ಸಂಗ್ರಹವಿದೆ.

೧೧. ಓರುಗಲ್ಲು ಸೂರೆ ಮ. ಮಲ್ಲಪ್ಪ, ಬೆಂ.ವಿ.ವಿ. ಪ್ರಸಾರಂಗ, ಬೆಂಗಳೂರು ೧೯೭೯ ೧೪೪ಪುಟ. ಜಾನಪದ ಕಥನ ಗೀತೆಯಾಗಿದ್ದು. ಇದರಲ್ಲಿ ಒಟ್ಟು ೮ ಅಧ್ಯಾಯಗಳಿಂದ ಕೂಡಿದೆ.

೧೨. ಕನ್ನಡ ಜಾನಪದ ಸಾಹಿತ್ಯ ಭಂಡಾರ ಗೀತೆಗಳು' ಸಾ. ೧. ಮತಿಘಟ್ಟ ಕೃಷ್ಣಮೂರ್ತಿ. ಗುರುಮೂರ್ತಿ ಪ್ರಕಾಶನ, ಬೆಂಗಳೂರು. ೧೯೨೫ (೧೦೫೬+೩೨ ಪುಟಗಳಿವೆ) ಇದರಲ್ಲಿ ಪ್ರಾರ್ಥನಗೀತೆ, ಚಾರಿತ್ರಿಕ ಗೀತೆಗಳು. ಕ್ಷಾಮಗೀತೆಗಳು. ಕಥನಗೀತೆಗಳು ಇತ್ಯಾದಿ ಒಳಗೊಂಡಿವೆ.

೧೩. ಕರ್ನಾಟಕದ ಕರಾವಳಿಯ ಜನಪದ ಗೀತೆಗಳು' ಡಾ. ಎಲ್.ಆರ್. ಹೆಗಡೆ, ಐ.ಬಿ.ಹೆಚ್. ಪ್ರಕಾಶನ. ಬೆಂಗಳೂರು. ೧೯೨೩, ಜನಪದ ಗೀತೆಗಳ ಪ್ರಾಚೀನತೆಯನ್ನು ಪರಿಚಯಿಸುವ ಕಿರುಹೊತ್ತಿಗೆ.

೧೪. ಕಟ್ಟಾಣೆ ಸತಿಯೆಂದು ಕರೆದೇನ (ಪದಗಳು) ಬಾಪುಗೌಡ ಪಾಟೀಲ, ಕವಿತಾ ಪ್ರಕಾಶನ, ತಾಳಿಕೋಟೆ. ೧೯೮೨. ಹಳ್ಳಿಯ ಬದುಕು ಪರಿಸರದ ಹಿನ್ನೆಲೆಯಲ್ಲಿ ರಚಿಸಿದ ಸಂಕಲನವಾಗಿದೆ.

೧೫. ಕರ್ನಾಟಕ ಜನಪದ ಕಾವ್ಯಗಳು. ಡಿ. ಲಿಂಗಯ್ಯ ದಿನಕರ ಪ್ರಕಾಶನ. ೧೯೨೬,-ಇದರಲ್ಲಿ ಒಟ್ಟು ೧೬

೧೬. ಕತ್ತಾಲ ದಾರಿ ದೂರು. ಕೃಷ್ಣಮೂರ್ತಿ ಹನೂರು, ೧೯೮೧ ಸುಮಾರು ೧೨ ಮಹಾಸತಿಯ ಮತ್ತು ಸ್ತ್ರೀ ಬಲಿದಾವನ್ನು ಕುರಿತ ಕಥನಗೀತೆಗಳಿವೆ. ಇದರಲ್ಲಿ ಸ್ತ್ರೀ ಪ್ರಧಾನ ಗೀತೆಗಳು ಬಹಳ ಇವೆ.

೧೭. ಗೊಂಡರ ಪದಗಳು. ಎಲ್.ಆರ್. ಹೆಗಡೆ ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು. ೧೯೭೭. ಇದರಲ್ಲಿ ಉತ್ತರ ಕನ್ನಡ ಜಿಲ್ಲೆಯ ಬಟ್ಕಳ ಜನರಲ್ಲಿ ಪ್ರಚಾರದಲ್ಲಿರುವ ಕೆಲವು ಕಥನ ಕವನಗಳ ಒಳಗೊಂಡಿದೆ.

೧೮. ಗ್ರಾಮೀಣ ಅನುಭವ ಗೀತೆಗಳು, ಬಿ.ಎಸ್. ಚಂದ್ರಕಲಾ, ಸ್ವರಲಿಪಿ ಪ್ರತಿಷ್ಠಾನ. ಬೆಂಗಳೂರು. ೧೯೯೮. ೫೬ ಗ್ರಾಮೀಣ ಅನುಭವದ ಗೀತೆಗಳನ್ನು ಒಳಗೊಂಡ ಕೃತಿ.

೧೯. ಚಿತ್ರಕಲ್ಲು ಮದಕರಿ [ಜನಪದ ಗೀತೆಗಳ ಸಂಗ್ರಹ] ಕ.ರಾ.ಕೃ. ಜನಪದ ಅಕಾಡೆಮಿ. ಬೆಂ.

೧೯೨೫ (೧೬೨ ಪುಟ) ಚಿತ್ರದುರ್ಗ ಸೀಮೆಯ ಅನೇಕ ಸ್ಥಳಗಳಲ್ಲಿ ಸಂಚರಿಸಿ ಅಲ್ಲಿನ ಪಾಳೆಗಾರನ ಕಾಲದ ಜನಪದ ಗೀತೆಗಳನ್ನು ಸಂಗ್ರಹಿಸಿದ್ದಾರೆ.

೨೦. 'ಚಿತ್ತಾರ ಬರೆದ ಬದುಕು', ಡಾ ಗಾಯಿತ್ರಿ ನಾವಡ, ಪ್ರಾದೇಶಿಕ ವ್ಯಾಸಂಗ. ಕುಂದಾಪುರ. ೧೯೯೧, ಜನಪದ ಸಂಪ್ರದಾಯ ಗೀತೆಗಳ ಹಿನ್ನೆಲೆಯಲ್ಲಿ ಹೆಣ್ಣಿನ ಒಂದು ಜೀವನಾವರ್ತನವನ್ನು ಗಮನದಲ್ಲಿರಿಸಿ ಸಂಕಲಿಸಿದ ಕೃತಿಯಾಗಿದೆ.

೨೧. ಚೆಲುವಯ್ಯ ವರನಂದಿ [ಕಥನ ಗೀತೆಯ ಗದ್ಯಾನುವಾದ] ಕ.ರಾ.ಕೃ. ಮತ್ತು ಎ.ಕೆ. ಜನಪದ ಅಕಾಡೆಮಿ. ಬೆಂಗಳೂರು. ೧೯೮೭, – ೧೨೨ ಜನಪದ ಕಥನಗೀತೆಗಳ ಗದ್ಯಾನುವಾದ ಕೃತಿ.

೨೨. ಚಂದುಳ್ಳಿ ಮಕ್ಕಳ ಒಂಭತ್ತು ಕೊಡುಸ್ವಾಮಿ. ಬಿ. ಸಿದ್ದಗಂಗಯ್ಯ ಕಂಬಾಳು. ಕನ್ನಡ ಸಾಹಿತ್ಯ ಪರಿಷತ್. ಬೆಂಗಳೂರು. ೧೯೮೨. ಇಲ್ಲಿರುವ ತುಮಕೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಸಂಗ್ರಹಿಸಲಾಗಿದೆ. ಈ ಗೀತೆಗಳು ಮದುವೆ ಸಂಪ್ರದಾಯದಲ್ಲಿ ಹಾಡುವ ಜನಪದ ಗೀತೆಗಳಾಗಿವೆ.

೨೩. 'ಜನಪದ ಕಾವ್ಯ ಪರಿಚಯ' ಬಸವರಾಜ ನೆಲ್ಲಿಸರ ಮೈಸೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ ಬಿ.ಆರ್. ಪ್ರಾಜೆಕ್ಟ್, ಶಿವಮೊಗ್ಗ ೧೯೮೪. ಕಥನಗೀತೆಗಳು. ಸಂಪ್ರದಾಯ ಹಾಡುಗಳೆಂದು ೨ ವಿಭಾಗಗಳನ್ನು ಮಾಡಿಕೊಂಡಿದ್ದಾರೆ.

೨೪. ಕಾಳೇಗೌಡ ನಾಗವಾರರವರ 'ಬಯಲು ಸೀಮೆಯ ಲಾವಣಿಗಳು' ಸಂಗ್ರಹದಲ್ಲಿ ಕರ್ನಾಟಕ ಜನಪದ ಸಾಹಿತ್ಯದ ವೈಶಿಷ್ಟ್ಯವನ್ನು ಎತ್ತಿ ಹಿಡಿಯುವ ೧೫ ಲಾವಣಿಗಳಿವೆ. ಅದರಲ್ಲಿ ಲವಕುಶರ ಕಥೆ, ಉತ್ತರರಾಮಾಯಣದ ಕಥೆ ಜನಪದದ ಜೀವಂತ ವಾಣಿಯಲ್ಲಿ ಹೇಳಲಾಗಿದೆ.

೨೫. ಗುಂಡ್ಮಿ ಚಂದ್ರಶೇಖರ ಐತಾಳರವರು ಸಂಪಾದಿಸಿರುವ 'ಕೈಲಿಯ ಕರೆದ ನೊರೆ ಹಾಲು' ಕೃತಿಯಲ್ಲಿ ಪೌರಾಣಿಕ ಕಥನಗೀತೆಗಳು ಎಂಬ ವಿಭಾಗದಲ್ಲಿ ಉತ್ತರ ರಾಮಾಯಣಕ್ಕೆ ಸಂಬಂಧಿಸಿದ ಸೀತಾದೇವಿಯ ವನ್ವಾಸ' ಜನಪದ ಗೀತೆಯಲ್ಲಿ ಸೀತೆಯನ್ನು ಕಾಡಿನಲ್ಲಿ ಕಡಿದು ಬರಲು ಲಕ್ಷ್ಮಣನಿಗೆ ರಾಮನ ಆದೇಶ.

೨೬. ಕ.ರಾ.ಕೃ. ಅವರ 'ಜಾನಪದ ಕಥನಗೀತೆಗಳು'. ಸಂಕಲನದಲ್ಲಿ ಅನೇಕ ಕಥನಗೀತೆಗಳಿವೆ. ಚೆನ್ನಿಗ ಜೋಗಯ್ಯ ಎಂಬ ಜೋಗಿಯ ಹಾಡಿನ ಮತ್ತೊಂದು ಪಾಠ ಸಂಕಲಿತವಾಗಿದೆ. ಮಹಾಭಾರತಕ್ಕೆ ಸಂಬಂಧಿಸಿದಂತೆ ಪ್ರಕಟವಾಗಿರುವ ಸಾಹಿತ್ಯದ ಪರಿಶೀಲನೆಯಿಂದ ಮಹಾಭಾರತದ ಸಮಗ್ರ ಕಥೆ ಅಖಂಡ ಕಾವ್ಯ ರೂಪದಲ್ಲಿ ಈವರೆಗೆ ಎಲ್ಲಿಯೂ ಪ್ರಕಟವಾಗಿಲ್ಲ.

೨೭. ಕೃಷ್ಣಮೂರ್ತಿ ಹಾನೂರು ಸಂಪಾದಕರು. 'ಬುಡಕಟ್ಟು ಗೀತೆಗಳು' ಸಂಕಲನದಲ್ಲಿನ 'ಕಥನ ಗೀತೆಗಳು' ವಿಭಾಗದಲ್ಲಿ 'ಕುಂತಿ ಕರ್ಣನನ್ನು ಪಡೆದ ಕಥೆಯಲ್ಲಿ ವಿವಾಹ ಪೂರ್ವದಲ್ಲೆ ಕುಂತಿ ಕರ್ಣನನ್ನು ಪಡೆದು ಗಂಗೆಗೆ ಹಾಕಿ. ಗಂಗಮ್ಮ ತಾಯಿ ಸಲಹಿಕೊ ಎನ್ನುವ ಕಥನ ಗೀತೆ. ಇಲ್ಲಿ ಕುಂತಿ ತನ್ನ ಅಂತರಂಗದಂತೆ ನಡೆಯುವ ಸ್ವತಂತ್ರ ಮನೋವೃತ್ತಿಯ ಸ್ತ್ರೀಯ ಪ್ರತಿನಿಧಿಯಾಗಿದ್ದಾಳೆ.

೨೮. ಎಸ್.ವಿ. ಕೃಷ್ಣಯ್ಯನವರ 'ಬಾಚಿಗೊಂಡನಹಳ್ಳಿ ಮತ್ತು ಏಣಗಿ ಬಸಾಪುರದ ಜನಪದ ಗೀತೆಗಳು' ಸಂಕಲನದ ಪೌರಾಣಿಕ ಗೀತೆಗಳು ವಿಭಾಗದಲ್ಲಿ ಅಭಿಮನ್ಯು ಹುಟ್ಟು, ಅಭಿಮನ್ಯು ಹೆಣ್ಣನ್ನು ವರಿಸಿದ ಮತ್ತು ಲೆಕ್ಕದಾಟ ದ್ರೌಪದಿಯ ಗೆಲುವು ಎಂಬ ಮೂರು ಅಂಶಗಳನ್ನು ಒಳಗೊಂಡಿದೆ.

೨೯. ಜಾನಪದ ಅಭಿಯಾನ. ಪ್ರೊ. ಅರವಿಂದ ಮಾಲಗತ್ತಿ ೨೦೦೪. ರಾಜ್ ಪ್ರಕಾಶನ ಮೈಸೂರು 'ಏಳು ಜನಪದ ದಲಿತ ಕಥಾನಕಗಳ ಜಿಜ್ಞಾಸೆ' ಲೇಖನದಲ್ಲಿ ಕಥನಗೀತೆ ಮತ್ತು ಲಾವಣಿಗಳನ್ನು ವಿಮರ್ಶಿಸಿದ್ದಾರೆ.

೩೦. ಎಲ್.ಆರ್. ಹೆಗಡೆರವರ ಸಂಪಾದಿಸಿದ 'ತಿಮ್ಮಕ್ಕನ ಪದಗಳು' ಕೃತಿಯಲ್ಲಿ ಉತ್ತರ ದೇವಿ ಕಥನಗೀತೆ. ದುಃಖವಾಗಿದ್ದು ಉತ್ತರದೇವಿಯ ಗಂಡನ ಹೆಸರು ಅರ್ಜುನ ಎಂದೇ ಪಾಠ ದಲ್ಲಿರುವುದರಿಂದ ದ್ರೌಪದಿ ಎಂಬ ಹೆಸರಿನ ಅವನ ಹೆಂಡತಿ. ಅತ್ತಿಗೆ ಉತ್ತರ ಕೊಟ್ಟಿದ್ದರಿಂದ ಉತ್ತರ ದೇವಿಯೆಂಬ ಹೆಸರನ್ನು ಪಡೆದಿರಬೇಕೆನ್ನುತ್ತಾರೆ.

೩೧. ಎಸ್.ಆರ್. ನಾಯಕರವರ 'ಕಾರವಾರ ಜಿಲ್ಲೆಯ ಜನಪದಗೀತೆಗಳು' ಎಂಬುದು ಮಹಾಪ್ರಬಂಧ ವಾಗಿದೆ. ಜನಪದ ನಂಬಿಕೆ, ಸಂಪ್ರದಾಯಗಳ ವಿಷಯದಲ್ಲಿ ಮಹತ್ವಪೂರ್ಣವಾದ ಸಂಶೋಧನ ಮಹಾಪ್ರಬಂಧವಿದು. ಕಥನ ಕವನಗಳು ವಿಭಾಗದಲ್ಲಿನ ಪುರಾಣ ಸ್ತ್ರೀಯರಾದ ಸುಭದ್ರೆ, ಕುಸುಮಾಲಿ ಸಾವಿತ್ರಿಯವರ ಹಾಡುಗಳಿವೆ.

೩೨. ಪ್ರೊ. ಸ.ಚಿ.ರಮೇಶ ಅವರು ಸ್ಯಾಸಿ ಚಿನ್ನಮ್ಮನ ಕಾವ್ಯವನ್ನು ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಹಳೇ ದರೋಜಿಯ ಬುಡ್ಗಜಂಗಮ್ ಜನವರ್ಗದ ಕಲಾವಿದರಾದ ಶ್ರೀಮತಿ ಬುರ್ರಾಕಥಾ ಈರಮ್ಮ ಮತ್ತು ಸಂಗಡಿಗರಿಂದ ಸಂಪಾದಿಸಿದ್ದಾರೆ. ಈ ಕೃತಿಯು ಜನಪದ ಕಾವ್ಯಗಳು ಮೌಖಿಕವಾಗಿ ಬೆಳೆದು ಬರುತ್ತಿರುವುದಕ್ಕೆ ನಿದರ್ಶನವೆಂದು ಹೇಳಿದರೆ ತಪ್ಪಾಗಲಾರದು.

೩೩. ಮತಿಘಟ್ಟ ಕೃಷ್ಣಮೂರ್ತಿಯವರ 'ಕನ್ನಡ ಜನಪದ ಸಾಹಿತ್ಯ ಭಂಡಾರ'ದಲ್ಲಿನ ರಾಮಾಯಣದ ಕಥೆಗಳು ಎಂಬ ಭಾಗದಲ್ಲಿ ೭ ಕಥನ ಕಾವ್ಯಗಳಿವೆ.

೩೪. ರಹಮತ್ ತರೀಕೆರೆ, ಮರದೊಳಗಣ ಕಿಚ್ಚು (೨೦೦೨ರ) ಕೃತಿಯಲ್ಲಿ ಹೆಣ್ಣಿನ ಸಾವು ನೋವಿನ ಬಗ್ಗೆ, ಹೆಣ್ಣಿನ ಶೀಲದ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಇವರ ಹೇಳಿಕೆ ಬಹುಶಃ ತ್ಯಾಗ ಬಲಿದಾನದ ಕಥನಗೀತೆಗಳಿಗೆ ಪೂರಕದಂತಿದೆ.

### ೨.೨. ಜನಪದ ಗೀತೆಗಳ ಚಾರಿತ್ರಿಕ ಬೆಳವಣಿಗೆ

ಜಾನಪದ ಕಥನಕಾವ್ಯ ಬಹು ಸಂಕೀರ್ಣವಾದ ವರ್ಗೀಕರಣಕ್ಕೆ ಸುಲಭವಾಗಿ ಸಗ್ಗದ, ವೈವಿಧ್ಯತೆಯ ವೈಭವದಿಂದ ಬೆರಗುಗೊಳಿಸುವ ಪ್ರಕಾರ. ಅರ್ಧಗಂಟೆಯಲ್ಲಿ ಹಾಡಬಹುದಾದ ಪದಗಳಿಂದ ಹಿಡಿದು ಇಡೀ ರಾತ್ರಿ ಅನೇಕ ರಾತ್ರಿಗಳ ತನಕ ಹಾಡುವಷ್ಟು ಪದಗಳು ಅದರ ಬಸಿರಲ್ಲಿ ಹುದುಗಿದೆ. ವಸ್ತು ವೈವಿಧ್ಯ ನೋಡಿದರೆ ಅದರದ್ದೇ ಒಂದು ವಿಶ್ವವಾಗುತ್ತದೆ. ಪುರಾಣ

ಇತಿಹಾಸ, ಯುದ್ಧ, ಸಾಹಸಕಾರ್ಯ, ದೇವಮಾನವ, ಸಂಸಾರ, ಸಾಮಾಜಿಕ ಜೀವನ, ಅಮಾನುಷ ಘಟನೆಗಳು, ಸಾಧು ಸಂತ ವೀರರ ಜೀವನ, ವಿನೋದ ಸಂಗತಿಗಳು, ಐತಿಹ್ಯ, ದಂತಕಥೆ, ತತ್ವವಿಚಾರ, ನೀತಿ ಸ್ವಾತಂತ್ರ್ಯ ಚಳುವಳಿ ದೇಶಾಭಿಮಾನಿಗಳ ತ್ಯಾಗ, ಹೀಗೆ ಹಲವಾರು ವಿದ್ವಾಂಸರು ಈ ವರ್ಗೀಕರಣವೇ ಕೊನೆಯೇನಲ್ಲ. ಈ ವರ್ಗಗಳಲ್ಲಿ ನಮ್ಮಲ್ಲಿರುವ ಎಲ್ಲ ಕಥನ ಕಾವ್ಯಗಳನ್ನು ಅಳವಡಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಗಾತ್ರವನ್ನು ದೃಷ್ಟಿಯಲ್ಲಿಟ್ಟುಕೊಂಡು ಕಥನಕಾವ್ಯವನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದೆಂದು ತೋರುತ್ತದೆ. ಲಾವಣಿ, ಕಥನಗೀತೆ ಅಥವಾ ನೀಳ್ಗವನ, ಖಂಡಕಾವ್ಯ ಮತ್ತು ಮಹಾಕಾವ್ಯಗಳ ಚೌಕಟ್ಟಿನಲ್ಲಿ ಎಲ್ಲ ಕಥನ ಕಾವ್ಯಗಳನ್ನು ಅಳವಡಿಸುವುದು ಸಾಧ್ಯವಾಗುತ್ತದೆ.

**ಬ್ಯಾಲೆಡ್:** ಜನಪದ ಸಾಹಿತ್ಯ ಸಂಶೋಧಕರಿಗೆ ಭಾರತದ ಹಾಗೆ ಕರ್ನಾಟಕವೂ ಒಂದು ದೊಡ್ಡ ಸಾಗರ. ಕಳೆದ ಶತಮಾನದ ಆದಿಭಾಗದಿಂದಲೂ ಅನೇಕ ಪಾಶ್ಚಾತ್ಯ ವಿದ್ವಾಂಸರು ಮಿಷನರಿಗಳು ಭಾರತಕ್ಕೆ ಬಂದು ಅನೇಕ ಉದ್ದೇಶಗಳಿಗಾಗಿ ಸಂಶೋಧನಾ ಕಾರ್ಯ ನಡೆಸಿದಂತೆ, ಜನಪದ ಸಾಹಿತ್ಯದ ಸಂಗ್ರಹ ಕಾರ್ಯಕ್ಕೂ ತೊಡಗಿದರು. ಇಂಗ್ಲೀಷಿನ Ballad ಎನ್ನುವ ಪದಕ್ಕೆ ಸಂವಾದಿಯಾಗಿ 'ಲಾವಣಿ' ಎಂಬ ಪದ ಈಗ ಬಳಕೆಯಲ್ಲಿದೆ. ೧೯೧೯ರಲ್ಲಿ ನಡೆದ ಐದನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀ ಹನುಮಂತಗೌಡರು 'ಲಾವಣಿಗಳು' ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಿದಾಗ Ballad ಎನ್ನುವ ಅರ್ಥದಲ್ಲಿಯೇ ಆ ಮಾತನ್ನು ಬಳಸಿರಬೇಕು. ೧೯೨೭ರಲ್ಲಿ 'ಕನ್ನಡ ನಾಡಿನ ಲಾವಣಿ ಸಾಂಗತ್ಯಗಳು' ಎಂಬ ಪ್ರಬಂಧವನ್ನು ಬರೆದು ಮಾಸ್ತಿಯವರು ಜಾನಪದ ಸಾಹಿತ್ಯದ ಪ್ರಾಶಸ್ತ್ಯವನ್ನು ಕೊಂಡಾಡುವಾಗ ಲಾವಣಿಗಳನ್ನೇ ಪ್ರಧಾನವಾಗಿ ತಮ್ಮ ಕಣ್ಮುಂದಿರಿಸಿಕೊಂಡಿದ್ದಾರೆ.

ಕೆಲವು ಗುಣಗಳಲ್ಲಿ ಬ್ಯಾಲೆಡ್ ಮತ್ತು ಲಾವಣಿಗಳು ಒಂದೆಯಾಗಿ ತೋರಿದರೂ ಆಳವಾಗಿ ಹೊಕ್ಕು ನೋಡಿದಾಗ ಅವು ಭಿನ್ನವಾಗಿ ಕಾಣುತ್ತದೆ. ಜತೆಗೆ ಲಾವಣಿ ಎನ್ನುವ ಪದಕ್ಕೂ ಅದು ಸೂಚಿಸುವ ಕಾವ್ಯ ಪ್ರಕಾರದ ಲಕ್ಷಣಗಳಿಗೂ ಏನೇನೂ ಸಂಬಂಧವಿಲ್ಲ. ಅಷ್ಟೇ ಅಲ್ಲ, ಉತ್ತರ ಕರ್ನಾಟದಲ್ಲಿ 'ಲಾವಣಿ' ಎಂಬ ಪದವನ್ನು ವಿಶಿಷ್ಟ ಜಾತಿಯ ಕಥನಕಾವ್ಯ ಪ್ರಕಾರಕ್ಕೆ ಅನ್ವಯಿಸುತ್ತಾರೆಂಬ ಮಾತಿನಲ್ಲಿ ಹುರುಳಿಲ್ಲದಿಲ್ಲ. ಡಾ. ಎಂ.ಎಂ. ಕಲಬುರ್ಗಿಯವರು, ಡಾ. ಜೀ.ಶಂ. ಪರಮಶಿವಯ್ಯನವರ 'ಜನಪದಕಾವ್ಯ ಕಥೆಗಳು' ಎಂಬ ಗ್ರಂಥದ ಪ್ರಸ್ತಾವನೆಯನ್ನು ಕುರಿತು ಪ್ರಸ್ತಾಪಿಸುತ್ತ ಜನಪದ ಸಾಹಿತ್ಯವನ್ನು ವೈಜ್ಞಾನಿಕವಾಗಿ ವರ್ಗೀಕರಿಸಬೇಕಾದ, ಹೆಸರಿಸಬೇಕಾದ ಈ ಕಾಲದಲ್ಲಿ ಶ್ರೀ ಜೀ.ಶಂ. ಪರಮಶಿವಯ್ಯನವರು ಈ ಹೊಸ ಪ್ರಯೋಗದಿಂದ ಮುಂದಿನ ಸಂಶೋಧಕರಿಗೆ ತಿಳಿದೂ ಹೊಸದೊಂದು ತೊಡಕನ್ನು ಹುಟ್ಟಿಸಿಕೊಟ್ಟಂತಾಗಿದೆ. ಏನೆಲ್ಲದಕ್ಕೂ ಇಂಗ್ಲೀಷ್ ಬೆನ್ನು ಹತ್ತಿ ಅಲ್ಲಿರುವ ಪ್ರಕಾರಗಳಿಗೆ ಹೆಸರುಗಳಿಗೆ ನಮ್ಮಲ್ಲಿಯ ಪ್ರಕಾರಗಳನ್ನು, ಹೆಸರುಗಳನ್ನು ಹೊಂದಿಸಿ ನೋಡುವ ಪ್ರಯತ್ನವನ್ನು ಬಿಟ್ಟುಕೊಟ್ಟ ನಮ್ಮ ಜನಪದ ಸಾಹಿತ್ಯವನ್ನು ನಮ್ಮ ಪರಂಪರೆಯಲ್ಲಿ ನೋಡುವುದು ಲೇಸು. ಒಂದು ವೇಳೆ ಇಂಗ್ಲೀಷ್ Balladಗಳಿಗೆ ಸಮನಾಗಿ

ನಮ್ಮಲ್ಲಿರುವ ಹಾಡುಗಳಿಗೆ ಕನ್ನಡ ಹೆಸರು ಕೊಡುವುದಿದ್ದರೆ ಜಾನಪದ ವಿಶಿಷ್ಟ ಪ್ರಕಾರಕ್ಕೆ ಸೀಮಿತ ವಾಗಿರುವ ಲಾವಣಿ ಎಂಬ ಪದವನ್ನು ಬಿಟ್ಟು ಅವರು ಬೇರೊಂದು ಪದವನ್ನು ಸೃಷ್ಟಿಸಲಿ ಇಲ್ಲವಾದರೆ Balladದ ಒಂದು ಪ್ರಭೇದವೆನಿಸುವ ಲಾವಣಿಯನ್ನೇ Balladಗೆ ಸಂವಾದಿಯಾಗಿ ಬಳಸಿದಂತಾಗುತ್ತದೆ ಎಂದು ಹೇಳಿರುವುದು ಯುಕ್ತವಾಗಿದೆ. ತಮ್ಮ ವಾದ ಸಮರ್ಥನೆಗೆ ಅವರು ಮಂಡಿಸಿರುವ ಕಾರಣಗಳೂ ಸಮ್ಮತಾರ್ಹವಾಗಿವೆ. ಅದನ್ನು ಹೀಗೆ ಸಂಗ್ರಹಿಸಬಹುದು. ಲಾವಣಿಗಳಲ್ಲಿ ಬಯಲು ಲಾವಣಿ, ಮೇಳ ಲಾವಣಿ ಎರಡು ಪ್ರಕಾರ. ಒಬ್ಬ ಹಾಡುವುದು ಬಯಲು ಲಾವಣಿಯಾದರೆ, ಇಬ್ಬರು ಹಾಡುವುದು ಮೇಳ ಲಾವಣಿಯಾಗುತ್ತದೆ.

ಉತ್ತರ ಕರ್ನಾಟಕದ ಮತ್ತೊಬ್ಬ ವಿದ್ವಾಂಸರು ಶ್ರೀ ಪ್ರಹ್ಲಾದಕುಮಾರ ಭಾಗೋಜಿಯವರು ಹೆಚ್ಚು ಕಡಿಮೆ ಇದೇ ಅಭಿಪ್ರಾಯವುಳ್ಳವರಾದರೂ ಲಾವಣಿ ಪದವನ್ನು ಸಂಪೂರ್ಣವಾಗಿ ತಿರಸ್ಕರಿಸಿದಂತಿಲ್ಲ. ಅದರ ಛಂದಸ್ಸು ಹಾಡಿನ ಗತಿ ಕಥಾ ನಿರೂಪಣೆಗಳಲ್ಲಿರುವ ವಿಶಿಷ್ಟತೆಯಿಂದಲೇ ಅದು ಗುರುತಿಸಲ್ಪಡುತ್ತದೆ. ಇದಕ್ಕೆ (Ballad) ಸಂವಾದಿಯಾಗಿ "ಗೀತಕಥನ"ವೆಂದೂ "ಜನಪದ ಕಥನಗೀತೆವೆಂದೂ ಪದಗಳನ್ನು ಬಳಸಬಹುದು. ಲಾವಣಿ ಎಂಬುದನ್ನು ವಿಶಿಷ್ಟ ಲಕ್ಷಣಗಳನ್ನೊಳ ಗೊಂಡ ಸಾಹಿತ್ಯ ರೂಪಕ್ಕೆ ಮಾತ್ರ ಬಳಸುವುದು ಉಚಿತ" ಎಂದು ಹೇಳಿದರೆ ಲಾವಣಿಗಳನ್ನು ಕಥಾಸಾರ ಲಾವಣಿ, ನೀತಿಸಾರ ಲಾವಣಿ, ತತ್ವಸಾರ ಲಾವಣಿ ಎಂದು ವಿಭಾಗ ಮಾಡಿದ್ದಾರೆ.[೨]

೨೦ನೇ ಶತಮಾನದ ಮೂರನೇ ದಶಕದವರೆಗೂ ಜನಪದ ಸಾಹಿತ್ಯ ವಿದ್ವಾಂಸರ ಗಮನವನ್ನು ಅಷ್ಟಾಗಿ ಸೆಳೆದಿಲ್ಲ. ೧೯೨೬ರಲ್ಲಿ ಮಾಸ್ತಿ ವೆಂಕಟೇಶ್ ಅಯ್ಯಾಂಗಾರ್ ಅವರು ಬರೆದ ಲೇಖನ "ಕನ್ನಡ ಲಾವಣಿ ಸಾಹಿತ್ಯ". ಒಂದು ವಿಶಿಷ್ಟ ಪ್ರಯತ್ನ, ಆ ಲೇಖನದಲ್ಲಿ ಮಾಸ್ತಿಯವರು ಜನಪದ ಸಾಹಿತ್ಯ ಲೋಕದ ವಿಸ್ಮಯಕಾರಿ ವ್ಯಕ್ತಿಗಳನ್ನು, ಕತೆಯ ತುಣುಕುಗಳನ್ನು ಓದುಗರಿಗೆ ಪರಿಚಯಿಸಿದರು. ಆ ಕಾಲದ ಜನಪ್ರಿಯ ಪತ್ರಿಕೆ 'ಜಯ ಕರ್ನಾಟಕ'ದಲ್ಲಿ ಚಿಕ್ಕ ಚಿಕ್ಕ ಹಾಡುಗಳನ್ನು ಪ್ರಕಟಿಸಲಾಗುತ್ತಿತ್ತು.

ಕನ್ನಡ ಜನಪದ ಹಾಡುಗಳ ಸಂಗ್ರಹದ ಮೇರು ಕೃತಿಯಾದ ಗರತಿಯಹಾಡು ೧೯೩೧ರಲ್ಲಿ ಪ್ರಕಟವಾಯಿತು. ಹಲಸಂಗಿ ಸೋದರರು ಸಂಪಾದಿಸಿಕೊಟ್ಟ ಈ ಜನಪದ ಹಾಡುಗಳ ಸಂಗ್ರಹವು ಇಂದಿಗೂ ಮೇರು ಕೃತಿಯಾಗಿ ಉಳಿದಿದೆ. ಈ ಸಂಗ್ರಹದ ಆ ನಂತರ ಜನಪದ ಸಾಹಿತ್ಯದ ಬಗ್ಗೆ ತಿರಸ್ಕಾರ, ನಿರ್ಲಕ್ಷ್ಯ ದೂರವಾಗಿ, ಜನರು ತ್ರಿಪದಿಗಳ ಸೊಬಗಿಗೆ ಮಾರು ಹೋಗುವಂತಾಯಿತು. ಇದಾದ ಮೇಲೆ ಮತ್ತೆ ೧೯೩೫ರಲ್ಲಿ ಗೆಳೆಯರ ಗುಂಪಿನ ರೇವಪ್ಪನವರು ಮಲ್ಲಿಗೆ ದಂಡೆ ಎಂಬ ಕೃತಿಯನ್ನು ಪ್ರತ್ಯೇಕವಾಗಿಯೇ ಪ್ರಕಟಿಸಿದರು. ಇದು ದೇವರ ಸ್ತುತಿ, ಪ್ರಣಯ, ಭಾವಗೀತೆ ಕಥನಗೀತೆ, ಮದುವೆಹಾಡು ಸೋಬಾನದ ಹಾಡು ಹೀಗೆ ವಿವಿಧ ಶೀರ್ಷಿಕೆಗಳ ಅಡಿಯಲ್ಲಿ ಅಪಾರ ಛಂದೋ ವೈವಿಧ್ಯದಿಂದ ಕೂಡಿದ ಅಪೂರ್ವ ಕೃತಿಯಾಗಿದೆ. ಕಥನಗೀತೆಗಳಲ್ಲಿ ಗೋವಿನ ಹಾಡನ್ನೇ ಹೋಲುವ ಆಕಳ ಹಾಡು ಇಲ್ಲಿ ಮೊದಲ ಬಾರಿಗೆ ಕಾಣಿಸಿಕೊಂಡಿತು. ೧೯೩೩ರಲ್ಲಿ ಶ್ರೀ ಸಿಂಪಿ ಲಿಂಗಣ್ಣ ಮತ್ತು ಧೂಲಾ ಅವರು ಒಟ್ಟು ಸೇರಿಕೊಂಡು ಜೀವನ ಸಂಗೀತ ಮತ್ತು ಕಲ್ಗ-ತುರಾ ಎಂಬ ಸಂಪ್ರದಾಯಿಕ ಲಾವಣಿಗಳ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅದೇ ವರ್ಷ

ಉತ್ತರ ಕನ್ನಡ ಜಿಲ್ಲೆಯಲ್ಲಿ ವಿಠೋಬ ವೆಂಕಟನಾಯಕ ತೋರ್ಕೆಯವರು 'ಹಳ್ಳಿಯ ಹಾಡುಗಳು' ಎಂಬ ಸುಂದರ ತ್ರಿಪದಿಗಳ ಸಂಕಲನವನ್ನು ಪ್ರಕಟಿಸಿದರು. ಕನ್ನಡ ಜನಪದ ಹಾಡುಗಳ ಸಂಗ್ರಹಣೆಯ ಆದ್ಯ ಪ್ರವರ್ತಕರಲ್ಲಿ ಒಬ್ಬರಾದ ಅರ್ಚಕ ರಂಗಸ್ವಾಮಿಯವರ ಹುಟ್ಟಿದ ಹಳ್ಳಿ ಹಳ್ಳಿಯ ಹಾಡು ಕೂಡಾ ೧೯೩೩ರಲ್ಲಿಯೇ ಪ್ರಕಟವಾಯಿತು. ವಿದ್ವಾಂಸರಿಂದ ತಿರಸ್ಕಾರಕ್ಕೆ ಒಳಗಾಗಿದ್ದ ಹಾಡುಗಳನ್ನೇ ಇವರು ಸಂಗ್ರಹಿಸಿಕೊಟ್ಟರು. ಮುಂದೆ ೧೯೩೮ರಲ್ಲಿ ಗೊರೂರು ರಾಮಸ್ವಾಮಿ ಅಯ್ಯಾಂಗಾರ್ ಅವರು ಚೊಕ್ಕಟವಾದ ಹಳ್ಳಿಯ ಹಾಡುಗಳು ಕೃತಿಯನ್ನು ಸಂಪಾದಿಸಿಕೊಟ್ಟರು. ೧೯೪೩ರಲ್ಲಿ ಮತಿಘಟ್ಟ ಕೃಷ್ಣಮೂರ್ತಿ ಮತ್ತು ಅವರ ಸೋದರರು ಸಂಪಾದಿಸಿದ 'ನಾಡಪದಗಳು' ಪ್ರಕಟವಾಯಿತು. ಎಲ್. ಗುಂಡಪ್ಪನವರ ಸಮರ್ಥ ಟಿಪ್ಪಣಿಯೊಂದಿಗೆ ಪ್ರಕಟವಾದ ಈ ಕೃತಿಯಲ್ಲಿ ಉತ್ತರದೇವಿಯ ಹಾಗೂ ತಿಂಗಳಮಾವನ ಪದಗಳೂ, ಬಾಂಧವ್ಯ ಪದ ಹಾಡುಗಳೂ, ಬ್ರಾಹ್ಮಣರ ಹಾಡುಗಳೂ ಸೇರಿಕೊಂಡಿವೆ.

ಈ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಪ್ರಕಟವಾದ ಇತರ ಕೆಲವು ಮುಖ್ಯ ಕೃತಿಗಳೆಂದರೆ ಆರ್.ಎಸ್. ಪಂಚಮುಖಿ ಅವರ ಕರ್ನಾಟಕ ಜನಪದ ಗೀತೆಗಳು (೧೯೫೭). ಈಶ್ವರ ಚಂದ್ರ ಚಿಂತಾಮಣಿಯವರ ಗರತಿಯರ ಮನೆಯಿಂದ (೧೯೫೫). ಎಂ. ಜೀವನ ಅವರ ಜನಪದ ಗೀತೆಗಳ (೧೯೫೫). ದೊಡ್ಡಭಾವೆಪ್ಪ ಮೂಗಿ ಅವರ ಕಿತ್ತಾರ ಕಾಳಗ ಮೊದಲಾದವುಗಳು ದಕ್ಷಿಣ ಕರ್ನಾಟಕದಲ್ಲಿ ಕರೀಂಖಾನರು ಜನಪದ ಪ್ರಕಾಶನವೆಂಬ ಪುಸ್ತಕ ಮಾಲೆಯನ್ನು ಆರಂಭಿಸಿ ಅನೇಕ ಕೃತಿಗಳನ್ನು ಹೊರತಂದರು. ಅವರ ಜನಪದ ಗೀತೆ (೧೯೫೫) ಮೂರು ಭಾರಿ ಪ್ರಕಟ ವಾಯಿತು. ಬಯಲುಸೀಮೆ ಮತ್ತು ಮಲೆಸೀಮೆಗಳ ಜನಪದ ಹಾಡುಗಳನ್ನು ಕರೀಂಖಾನರು ಸಂಗ್ರಹಿಸಿದ್ದಲ್ಲದೆ, ಸ್ವತಃ ಹಾಡಿ, ಇತರರಿಂದ ಹಾಡಿಸಿ ಜನಪ್ರಿಯಗೊಳಿಸಿದರು. ಗೊ.ರೂ. ಚೆನ್ನಬಸಪ್ಪನವರು ಬಾಗೂರು ನಾಗಮ್ಮ (೧೯೫೫) ಮೈದುನರಾಮಣ್ಣ(೧೯೫೩)ಗಳಲ್ಲಿ ಜಾನಪದದ ಸತ್ವವನ್ನು ಇಡಿಯಾಗಿ ಸೂರೆಗೊಂಡರು. ಅವರ ೩೯೪ ತ್ರಿಪದಿಗಳನ್ನೊಳಗೊಂಡ ಗ್ರಾಮಗೀತೆಗಳು ೧೯೬೨ರಲ್ಲಿ ಪ್ರಕಟವಾಗಿ ತುಂಬ ಜನಪ್ರಿಯತೆಯನ್ನು ಗಳಿಸಿದ್ದು. ಸ.ಚ. ಮಹಾದೇವ ನಾಯಕರು ೧೯೫೮ರಲ್ಲಿ ಹಳ್ಳಿಯ ಹಾಡುಗಳು ಪ್ರಕಟಿಸಿ ಅನಂತರ ಜನಪದ ರಸಗಂಗೆ, ಸಂಪಿಗೆ ಅರಳ್ಯಾವೆಗಳನ್ನು ಹೊರತಂದರು. ಕ.ರಾ. ಕೃಷ್ಣಸ್ವಾಮಿಯವರು ತುಂಬಾ ಪ್ರಮುಖವಾದ ೧೧ ಕೃತಿಗಳನ್ನು ಸಂಪಾದಿಸಿದ್ದಾರೆ. ಅವುಗಳೆಂದರೆ ಜನಪದ ಪ್ರೇಮಗೀತೆಗಳು ೧೯೫೭ ನಾಡ ಹಾಡಗಳು (೧೯೫೮) ಜನಪದ ಕಥನ ಗೀತೆಗಳು (೧೯೫೯) ಅಂಬಿಗರಗಂಗ ಪಾಳೆಯಗಾರರ ಪದಗಳು ಮಲೆಯಮಾದೇಶ್ವರ, ಸೂಸಿ ಹರಿದಾಳೆ ಶಿವಗಂಗೆ ಮತ್ತು ಹಾಡಿನಲ್ಲಿ ನಾಡಕತೆಗಳು ಎಲ್ಲವೂ (೧೯೬೨) ಗುಡ್ಡಾಗಡಿನ ಹಾಡ್ಗತೆಗಳು. ಹಚ್ಚ ಹೊಂಬಾಳೆ ಹರಿದಾವೆ ೧೯೬೩. ಜೇನಹನಿಗಳು ೧೯೬೫ ಕೋಲು ಮಲ್ಲಿಗೆ ಕೋಲೆ ಹೆಣ್ಣುಕೊಟ್ಟೇವು, ಸಂಪಿಗೆ ಅರಳ್ಯಾವೆ, ನಾಡಮಲೆಲ್ಲ ಹರಿದಾವೆ ಅವರ ಈಚೀನ ಸಂಗ್ರಹಗಳು. ಸಂಖ್ಯಾದೃಷ್ಟಿಯಿಂದ ಬಹುಶಃ ಕ.ರಾ. ಕೃಷ್ಣಸ್ವಾಮಿಯವರಿಗೆ ಪ್ರಥಮ ಸ್ಥಾನ ಸಲ್ಲಬೇಕು. ಈ ಪಟ್ಟಿಯು ಸಮಗ್ರವಲ್ಲ. ಮೇಲಿನ ಸಂಕಲನಗಳಿಗೆ ಚಾರಿತ್ರಿಕ ಮಹತ್ವ ಇದೆಯೆಂದೇ ಅರ್ಥ

ಸಂಖ್ಯಾದೃಷ್ಟಿಯಿಂದ ಜನಪದ ಹಾಡುಗಳ ಸಂಗ್ರಹದಲ್ಲಿ ಕರ್ನಾಟಕವು ಇಡೀ ಭಾರತದಲ್ಲಿಯೇ ಮುಂದಿದೆ. ತೀರ ಈಚಿನ ಸಂಗ್ರಹಕರಲ್ಲಿ ಕ್ಯಾತನಹಳ್ಳಿ ರಾಮಣ್ಣ, ಕಾಳೇಗೌಡ ನಾಗವಾರ, ಸುಧಾಕರ, ಚಂದ್ರಶೇಖರ ಕೆದಿಲಾಯ, ಅಂಬಳಿಕೆ ಹಿರಿಯಣ್ಣ, ರಂಗಾರೆಡ್ಡಿ ಕೋಡಿರಾಂಪುರ, ಹಿ.ಚಿ. ಬೋರಲಿಂಗಯ್ಯ, ಡಿ.ಕೆ. ರಾಜೇಂದ್ರ, ಬಸವರಾಜ ನಲ್ಲೀಸರ, ಶ್ರೀಕಂಠ ಕೂಡಿಗೆ ಚಿದಾನಂದಮೂರ್ತಿ, ಎಂ.ಜಿ. ಬಿರಾದಾರ, ಹಂಪನ, ಜ್ಯೋತಿ ಹೊಸೂರ, ತ.ಚಿ. ಚಲುವೆಗೌಡ, ನಗುವನಹಳ್ಳಿ ರತ್ನ, ದೇವೇಂದ್ರ ಕುಮಾರ ಹಕಾರಿ, ತೀ.ನಂ. ಶಂಕರನಾರಾಯಣ, ನಿಂಗಣ್ಣ ಸಣ್ಣಕ್ಕಿ, ಹಾ.ಮಾ. ನಾಯಕ, ಶಾಂತಿನಾಯಕ, ಅಮೃತಸೋಮೇಶ್ವರ, ಶ್ರೀ ಕೃಷ್ಣಭಟ್ ಅರ್ತಿಕಜೆ, ಹಿ.ಚಿ. ರಾಮಚಂದ್ರಗೌಡ, ಎನ್.ಆರ್. ನಾಯಕ, ವಿವೇಕ ರೈ, ಅರವಿಂದ ಮಾಲಗತ್ತಿ, ಪುರುಷೋತ್ತಮ ಬಿಳಿಮಲೆ, ಮೈಲಹಳ್ಳಿ ರೇವಣ್ಣ, ತಿಪ್ಪೇಸ್ವಾಮಿ, ಚಂದ್ರುಕಾಳೇನಹಳ್ಳಿ, ವೀರಣ್ಣದಂಡೆ, ಚಕ್ಕರೆ ಶಿವಶಂಕರ, ತಪಸ್ವಿಕುಮಾರ, ರಾಗೌ. ಹ.ಕ. ರಾಜೇಗೌಡ ಮೊದಲಾದವರನ್ನು ನೆನಪಿಸಿಕೊಳ್ಳಬಹುದು. ಇವರೆಲ್ಲರೂ ಹಾಡುಗಳ ಕಥನಗೀತೆಗಳ ಸಂಗ್ರಹ ಮತ್ತು ವಿಶ್ಲೇಷಣೆಯನ್ನು ಜೊತೆ ಜೊತೆಯಲ್ಲಿಯೇ ಮಾಡುತ್ತಾ ಬರುತ್ತಿದ್ದಾರೆ.

ಕರ್ನಾಟಕದ ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ ಮತ್ತು ಗುಲಬರ್ಗದ ವಿಶ್ವವಿದ್ಯಾನಿಲಯದ ಕೇಂದ್ರಗಳಲ್ಲಿ ಹಾಡುಗಳ ಸಂಗ್ರಹ ಕಾರ್ಯ ವ್ಯವಸ್ಥಿತವಾಗಿ ನಡೆಯುತ್ತಿದೆ. ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಕರ್ನಾಟಕ ಜಾನಪದ ಪರಿಷತ್ತು ಮೈಸೂರು, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ಜನಪದ ಕಲಾಕೂಟ ಮೈಸೂರು. ಜನಪದ ಕಲೆಗಳ ಪ್ರಾದೇಶಿಕ ಅಧ್ಯಯನ ಕೇಂದ್ರ, ಉಡುಪಿ, ಕರ್ನಾಟಕ ಜನಪದ ಟ್ರಸ್ಟ್, ಬೆಂಗಳೂರು, ಮೂಡಲಪಾಯ ಯಕ್ಷಗಾನ ಟ್ರಸ್ಟ್ ಕೊನೆಹಳ್ಳಿ, ಉತ್ತರ ಕನ್ನಡ ಜಿಲ್ಲಾ ಸಾಂಸ್ಕೃತಿಕ ಬಳಗ, ಮೈಸೂರು, ಜನಪದ ಕಲಾಕೂಟ ಶಿವಮೊಗ್ಗ. ಇಂಥ ಕಡೆಗಳಲ್ಲಿಯೂ ಸಂಗ್ರಹಕಾರ್ಯ ನಡೆಯುತ್ತದೆ. ಕರ್ನಾಟಕ ಜನಪದ ಪರಿಷತ್ತಿನ ಜಾನಪದ ಪತ್ರಿಕೆ.

ಕರ್ನಾಟಕ ಜಾನಪದ ಟ್ರಸ್ಟಿನ ಜಾನಪದ ಜಗತ್ತು ಪತ್ರಿಕೆ ಉಡುಪಿಯ ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರದ ಪ್ರಸಂಗ ಪತ್ರಿಕೆ, ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿಯ ಹೊರತರುವ ಜಾನಪದ ಗಂಗೋತ್ರಿ. ಈ ಎಲ್ಲಾ ಪತ್ರಿಕೆಗಳಲ್ಲಿ ಜನಪದ ಹಾಡುಗಳೂ, ಅವುಗಳ ವಿಶ್ಲೇಷಣೆಯೂ ಆಗಾಗ ಪ್ರಕಟವಾಗುತ್ತದೆ.

ಇವೆಲ್ಲವುಗಳನ್ನು ಗಮನಿಸಿದರೆ ಕನ್ನಡನಾಡಿನ ಜನಪದ ಗೀತೆಗಳ ಸಂಗ್ರಹ ಕಾರ್ಯ ಮತ್ತು ವಿಶ್ಲೇಷಣೆಯ ಕಾರ್ಯ ತಕ್ಕಮಟ್ಟಿಗೆ ತೃಪ್ತಿಕರವಾಗಿಯೇ ನಡೆದಿದೆ, ನಡೆಯುತ್ತಿದೆ.

ಕನ್ನಡ ಜನಪದ ಸಾಹಿತ್ಯದಲ್ಲಿ ಜನಪದ ಗದ್ಯ ಕಥೆಗಳಷ್ಟೇ ಮಹತ್ವದ ಪ್ರಕಾರವೆಂದರೆ ಜನಪದ ಕಥನಗೀತೆಗಳು ಅಭಿವ್ಯಕ್ತಿ ಮಾಧ್ಯಮದ ಪ್ರಥಮ ಹಂತದಲ್ಲಿಯೋ ಇವು ಗದ್ಯ ಕಥೆಗಳಿಗಿಂತ ತುಂಬಾ ಭಿನ್ನವಾಗಿವೆ. ಗದ್ಯ ಕಥೆಯನ್ನು ಹಗಲೆಂದರೆ ಹಗಲು, ರಾತ್ರಿಯೆಂದರೆ ರಾತ್ರಿ ಯಾವಾಗ

ಬೇಕಾದರೂ, ಎಲ್ಲಿ ಬೇಕಾದರೂ ಯಾರು ಬೇಕಾದರೂ ಹೇಳಲು 'ಶುರು' ಮಾಡಬಹುದು. ಒಂದು ಕಟ್ಟು, ಮರದ ಬುಡ, ಅಂಗಳ, ಬಂಕ, ಹೊರಸು, ಚಾಪೆ, ಯಾವುದೇ ಇರಲಿ ಅಲ್ಲಿ ನೆರೆದ ಹಿರಿಕಿರಿಯರ ಮಧ್ಯದಲ್ಲಿಯೇ ಇವುಗಳ ಹೊಸೆತ ಹಂದರ. ಕಥನಗೀತೆಗಳ ನಿರೂಪಣೆಗೆ ಇರುವ ಸಾಂಗತ್ಯಗಳೇ ಬೇರೆ, ದಪ್ಪು, ತಾಳ, ತುಂತುಣಿ, ಚೌಡಕೆ, ಚಂದು, ಹಲಗೆ, ಗಮಟ, ಡೊಳ್ಳುಗಣಿ ದಮ್ಮಡಿ, ಏಕತಾರಿ ಮೊದಲಾದ ವಾದ್ಯಗಳು ಒಳ್ಳೆಯ ಕಂಠವಿರುವ ವಸ್ತುಪಾತ್ರಗಳ ಭಣಿ ಭಾವಗಳಿಗೆ ಅನುಗುಣವಾದ ವಿವಿಧ ಲಯ ಗತ್ತುಗಳನ್ನು ರೂಪಿಸಿಕೊಂಡು ಹಾಡಬಲ್ಲ ಗಾಯಕ ಅವನೇ ಕವಿಯೂ ಆಗಿರಬಹುದು. ಆ ಬಳಿಕ ಒಂದು ವಿಶೇಷ ಸಂದರ್ಭ ಬಗೆ ಬಗೆಯ ಶ್ರೋತೃವೃಂದ - ಶ್ರೋತೃವೃಂದದ ಗೊಂದಲವನ್ನೂ ಕರಗಿಸಿ ಅವರ ಹೃದಯವನ್ನು ಮಿಡಿದು ಸೆರೆಹಿಡಿಯುವ ದಾಟಿ ಜ್ಯಾಲ ಏರು ಇಳುವು - ಹೀಗೆ ಕಥನ ಗೀತೆಗಳದು ಒಂದು ಗರ್ದಿ ಮೇಳ. ಅಲ್ಲದೆ ಕಥನಗೀತೆಗಳ ವಸ್ತುವಿನಲ್ಲೂ ಅಪಾರ ವ್ಯಾಪ್ತಿ-ಪುರಾಣ ಚರಿತ್ರೆ, ಸಾಮಾಜಿಕ ಘಟನೆಗಳು ಕಥನಗೀತೆಗಳಲ್ಲಿ ವಿವಿಧ ಬಗೆಯ ಛಂದಸ್ಸನ್ನು ಸಹಜ ಲಯದ ಸೊಗಡನ್ನು ಬಳಸಿಕೊಂಡು ನಿರೂಪಣೆಗೆ ಒಂದು ಕಲಾತ್ಮಕ ಆವರಣವನ್ನೇ ನಿರ್ಮಿಸುತ್ತದೆ. ಆದುದರಿಂದ ಜನಪದ ಕಥನಗೀತೆಗಳು ವಸ್ತುಶೈಲಿ ನಿರೂಪಣೆ, ಧಾಟಿ ಲಯ ಗತ್ತು ಗೇಯತೆ ಅದ್ಭುತ ಪವಾಡ ವೀರಾವೇಶ ಮುಂತಾದ ದೇಸಿಯ ರೂಪಗಳಿಂದ ಒಡಗೂಡಿದ ರೋಮಾಂಚಕ ಉನ್ನತ ರಮ್ಯಕಲ್ಪನೆಗಳ ಒಂದು ಪ್ರತಿಭಾ ಸಂಯೋಜಿತ ಕಲಾಸೃಷ್ಟಿ. ಕಥನಗೀತೆಗಳಿಗೆ ಒಂದು ಹಂತದಲ್ಲಿ ಅಭಿನಯಾದಿಗಳು ಸೇರಿ ಕೃತ್ಯ ಬಯಲಾಟಗಳಿಗೆ ಪ್ರೇರಕವಾಗಿರುವ ಸಾಧ್ಯತೆಯನ್ನು ಅಲ್ಲಗಳೆ ಯುವಂತಿಲ್ಲ. ಕಥನಗೀತೆಗಳ ಸ್ವರೂಪ ರಚನೆ ಶೈಲಿಗಳ ಹಿನ್ನೆಲೆಯಲ್ಲಿ ಇಂದು ಅನೇಕ ಬಗೆಯ ಚರ್ಚೆಗಳು ನಡೆದಿದೆ. ಈ ಎಲ್ಲಾ ಚರ್ಚೆಗಳಲ್ಲಿ ಬಹಳ ಗೊಂದಲಕ್ಕೀಡಾಗಿರುವುದು ಲಾವಣಿ, ಬ್ಯಾಲೆಡ್ ಮತ್ತು ಕಥನಗೀತೆ. ಬ್ಯಾಲೆಡ್ ಮತ್ತು ಲಾವಣಿಗಳ ವಿಷಯ ಚರ್ಚಿಸುತ್ತ ಪ್ರೊ. ಗೆರಾಲ್ಡರ್ ಬ್ಯಾಲೆಡ್ ಬಗೆಗಿನ ..... ಸದಾ ಕಥನಾತ್ಮಕವಾದದ್ದು. ವಿಶಿಷ್ಟ ಮಟ್ಟಿನಲ್ಲಿ ಹಾಡಬಹುದಾದುದು. ಗ್ರಂಥಸ್ಥ ಮೂಲಕ್ಕಿಂತ ಕಂಠಸ್ಥ ಮೂಲದಿಂದ ಕಲಿತದ್ದು ಅಭಿಪ್ರಾಯವನ್ನು ಗಮನಿಸಿ ಈ ಅಭಿಪ್ರಾಯವನ್ನು ಎಲ್ಲಾ ಪ್ರಕಾರದ ಲಾವಣಿಗಳಿಗೂ ಅನ್ವಯಿಸಿಕೊಳ್ಳುವುದು ಉಚಿತವೆಂದು ತೋರುತ್ತದೆ ಎನ್ನುವ ತೀರ್ಮಾನಕ್ಕೆ ಬಂದಿದ್ದಾರೆ.

ಲಾವಣಿಯ ಉಗಮ ಆಗಮಗಳ ವಿಷಯ ಇನ್ನೂ ಅನಿಶ್ಚಿತದಲ್ಲಿ ನಿಂತಿದೆ. ಲಾವಣಿ ರಗಳೆ ಯಂತೆ ಛಂದೋ ಪ್ರಕಾರವೂ ಹೌದು. ಸಾಹಿತ್ಯ ಪ್ರಕಾರವೂ ಹೌದು. ಈವರೆಗೆ ವಿದ್ವಾಂಸರು ಲಾವಣಿಯ ಲಕ್ಷಣವನ್ನು ಅದರ ನಾಮ ಮತ್ತು ಶಿಲ್ಪಗಳನ್ನು ಗುರಿ ಇಟ್ಟು ಹೇಳುತ್ತಾ ಬಂದಿದ್ದಾರೆ. ಲಾವಳಿ>ಲಾವಣಿ=ಸಮೂಹ ಗುಂಪು ಈ ಅರ್ಥ ಪರಂಪರೆಯಲ್ಲಿ ಈ ಹೆಸರು ಹುಟ್ಟಿರಬೇಕೆನಿಸುತ್ತದೆ. ಶಿಲ್ಪ ದೃಷ್ಟಿಯಿಂದ ಲಾವಣಿಯನ್ನು ಛಂದೋಶಿಲ್ಪ ಸಂಗೀತಶಿಲ್ಪ ಎಂಬ ಎರಡು ಮಗ್ಗಲುಗಳಿಂದ ಲಕ್ಷಿಸಬಹುದಾಗಿದೆ. ಲಾವಣಿ ಎನ್ನುವುದು ಛಂದಸ್ಸು ಮತ್ತು ಸಂಗೀತ ವಿಶಿಷ್ಟ ಪ್ರಕಾರವೇ ಹೊರತು ವಸ್ತು ವಿಶಿಷ್ಟ ಪ್ರಕಾರವಲ್ಲ. ಡಾ. ಕಲಬುರ್ಗಿಯವರು ಈ ಅಭಿಪ್ರಾಯಗಳು ಲಾವಣಿಯನ್ನು ಕುರಿತು ತೀರ್ಮಾನ ಕೈಕೊಳ್ಳುವಾಗ ಆತುರ ಸಲ್ಲದು ಎನ್ನುವುದನ್ನು ಸೂಚಿಸುತ್ತದೆ.

ಬ್ಯಾಲೆಡ್ ಪದವನ್ನು ಲಾವಣಿಗೆ ಸಂವಾದಿಯಾಗಿ ಬಳಸುವಲ್ಲಿ ಅಥವಾ ಈ ಎರಡೂ ಪದಗಳನ್ನು ಸಮೀಕರಿಸುವಲ್ಲಿ ಇರುವ ತೊಂದರೆಯೆಂದರೆ ಬ್ಯಾಲೆಡ್ ಹುಟ್ಟಿದ ಪರಿಸರ ಮತ್ತು ಅದರ ಸೀಮಿತ ರೂಪ ವಿಲಿಯಮ್ ಹಡ್ಸನ್ ಹೇಳುವ ಮಾತು ಹೀಗಿವೆ. ಹಾಡಿನ ರೂಪದಲ್ಲಿರುವ ಜನಪ್ರಿಯ ಬ್ಯಾಲೆಡ್ ಅಥವಾ ಸಣ್ಣಕಥೆ ಏಕಕಾಲಕ್ಕೆ ಎಲ್ಲಾ ಸಾಹಿತ್ಯಗಳಲ್ಲಿಯೂ ಮೂಡಿ ತೋರುತ್ತದೆ ಮತ್ತು ಇದು ಕಾವ್ಯಕಲೆಯ ವಿಕಾಸದ ಅತಿ ಪ್ರಾಚೀನ ಹಂತವನ್ನು ಪ್ರತಿನಿಧೀಕರಿಸುತ್ತದೆ. ಬ್ಯಾಲೆಡ್ ಕಥಾ ರೂಪದ ಹಾಡು ನಿಜ. ಆದರೆ ಹಡ್ಸನ್ ಹೇಳುವ ಸಣ್ಣಕತೆ ಎನ್ನುವ ಮಾತು ಬ್ಯಾಲೆಡ್ ಸೀಮಿತ ರೂಪವನ್ನು ತೋರಿಸುತ್ತದೆ.

ಕಥನಗೀತೆಗಳನ್ನು ಸಾಮಾನ್ಯವಾಗಿ ಹೆಣ್ಣುಮಕ್ಕಳು ಹಾಡುತ್ತಾರೆಂದು ಹೇಳಿದ ಡಾ. ಜೀ.ಶಂ. ಪರಮಶಿವಯ್ಯ ಇವುಗಳನ್ನು ಗಂಡುಮಕ್ಕಳೂ ಹಾಡುವುದನ್ನು ಗುರುತಿಸಿದ್ದಾರೆ. ಲಾವಣಿಯ ವಾದ್ಯಮೇಳದ ವೀರೋತ್ಸಾಹ ತುಂಬಿದ, ವಿಶೇಷ ಅಬ್ಬರವಿಲ್ಲದ ಆಡಂಬರವಿಲ್ಲದ ಜನಪದ ಕಥನಗೀತೆಗಳು ಬದುಕಿಗೆ ಗಾಂಭೀರ್ಯವನ್ನು ತುಂಬಿದ ಮುತ್ತೈದೆ ಮೂಗುತಿಗಳಾಗಿವೆ.

ಜೀ.ಶಂ. ಪರಮಶಿವಯ್ಯ ಅವರು ಹೇಳುವ ಧಾರ್ಮಿಕ ಕಥೆ ಲೌಖಿಕ ಕಥೆಗಳ ಪ್ರಮುಖ ವರ್ಗದಲ್ಲಿ ಪೌರಾಣಿಕ ಐತಿಹಾಸಿಕ ಅಮಾನುಷ.... ಈ ವರ್ಷಗಳಿಗೆಲ್ಲ ಅಳವಡುವ ಲಾವಣಿಗಳು ಸಾಕಷ್ಟು ಸಂಖ್ಯೆಯಲ್ಲಿ ಪ್ರಚಲಿತವಾಗಿದೆ. ಒಂದೊಂದು ಖಂಡಕಾವ್ಯದ ವ್ಯಾಪ್ತಿಯ ಸವಿಸ್ತಾರ ಲಾವಣಿಗಳು ಸಾಹಿತ್ಯ ದೃಷ್ಟಿಯೊಂದರಿಂದಲೇ ಅಭ್ಯಾಸ ಮಾಡಿದರೆ ಆಸ್ವಾದಿಸಿದರೆ, ಕನ್ನಡ ಸಾಹಿತ್ಯ ಭಂಡಾರದ ಉತ್ಕೃಷ್ಟ ಭಾಗವಾಗಿ ನಿಲ್ಲುವಂತಿವೆ ಎನ್ನುವ ಮಾತು ಕಥನಗೀತೆಗಳ ರಸಾತ್ಮಕ ಗುಣ ಸಂವೇದನಶೀಲತೆಗಳನ್ನು ಎತ್ತಿತೋರಿಸುತ್ತವೆ. ಕಥನಗೀತೆಗಳಲ್ಲಿ ಭಾವಾವೇಶಕ್ಕಿಂತ ಭಾವಪರವಶತೆ, ಭಾವೋನ್ಮಾದಕ್ಕಿಂತ ಭಾವೋತ್ಕಂಠತೆ ಎದ್ದು ಕಾಣುತ್ತದೆ. 'ದೇವರಗುಡ್ಡರು', 'ನೀಲಗಾರರು', ಜುಂಜಪ್ಪನವರು ಕರೆಪಾಲದವರು. ಕಥನಗೀತೆಗಳನ್ನು ಹಾಡುವಾಗ ಕಂಸಾಳೆ, ಗಣೆ ತಂಬೂರಿ ಮೊದಲಾದವುಗಳನ್ನು ಬಳಸುವುದು ನಿಜ. ವಿಶೇಷತಃ ಗದ್ಯಪದ್ಯ ಮಿಶ್ರಿತ ಕರಪಾಲದ ಕತೆಗಳು ಶುದ್ಧ ಜನಪದ ಮೂಲದ ಕತೆಗಳು. ಕಥನಗೀತೆಗಳ ಈ ಅಂಶಗಳನ್ನು ಲಾವಣಿಗಳಲ್ಲಿ ಕಂಡರೂ 'ಕೆರೆಗೆಹಾರ'ದಂಥ ಆಶಯದ ಕಥನಗೀತೆಗಳು ಲಾವಣಿಗಿಂತ ಭಿನ್ನವಾಗಿಯೇ ನಿಲ್ಲುತ್ತವೆ.

ಜಾನಪದ ಕಥನಕಾವ್ಯವು ಬಹು ಸಂಕೀರ್ಣವಾದ ವರ್ಗೀಕರಣಕ್ಕೆ ಸುಲಭವಾಗಿ ಸಗ್ಗದ ವೈವಿಧ್ಯತೆಯ ವೈಭವದಿಂದ ಬೆರಗುಗೊಳಿಸುವ ಪ್ರಕಾರ ನಿಜ. ಜನಪದ ಜೀವನದ ವಿವಿಧ ಹಂತದ ಪವಾಡ ವಿಸ್ಮಯ ಐತಿಹಾಸಿಕ ಶೌರ್ಯ ಸಾಮಾಜಿಕ ಸಂವೇದನೆ ಸಂತಾಪಗಳನ್ನು ಸಂಘರ್ಷ ಒಪ್ಪಂದಗಳನ್ನು ಕಾಲಕಾಲಕ್ಕೆ ಕಥಾನಕಗಳ ಮೂಲಕ ಅಭಿವ್ಯಕ್ತಿಗೊಳಿಸುತ್ತ ಬಂದ ಜನಪದ ಕಥನ ಕಾವ್ಯದ್ದೇ ಒಂದು ವಿಶ್ವ ಇದು ಮಾಯಾರೂಪಿ ಕೃಷ್ಣನನ್ನು ಬಂಧಿಸುವ ಸಾಹಸ. ಅಲ್ಲದೆ ಈ ಸಂಗ್ರಹಿತವಾಗಿರುವ ಕಥನಗೀತೆ ಸಂಗ್ರಹವಾಗಿದೆ. ಉಳಿದಿರುವ ಕಥನಗೀತೆಗಳು

ಅಪಾರ ಜನಸಮುದ್ರದಲ್ಲಿ ಹುದುಗಿರುವ ಹವಳ ದ್ವೀಪಗಳನ್ನು ಜಾತಿ ಮುತ್ತುಗಳನ್ನು ಶೋಧಿಸಲು 'ಸುಸಜ್ಜಿತ ಕೊಂಗರ' ಒಂದು ಪಡೆಯಬೇಕಾದೀತು. ಇಂಥ ಅಪಾರ ವ್ಯಾಪ್ತಿಯ ಜನಪದ ಕಾವ್ಯ ಪ್ರಪಂಚವನ್ನು ಸದ್ಯ ಲಭ್ಯವಿರುವ ಕಥನ ಕಾವ್ಯದ ಗಾತ್ರವನ್ನು ಗಮನಿಸಿ ನಾಲ್ಕು ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಲಾವಣಿ ಕಥನಗೀತೆ ಅಥವಾ ನೀಳ್ಗವನ. ಖಂಡಕಾವ್ಯ ಮತ್ತು ಮಹಾಕಾವ್ಯ ಈ ವಿಂಗಡಣೆಯಲ್ಲಿ ಲಾವಣಿ ಎನ್ನುವಲ್ಲಿ 'ಕಥನ ಲಾವಣಿ' ಎಂದು ಸೇರಿಸಿದರೆ ಅದಕ್ಕೊಂದು ನಿರ್ದಿಷ್ಟತೆ ಬಂದೀತು ಅನಿಸುತ್ತದೆ. ಆಗ ಈ ಪ್ರಧಾನ ಗುಂಪುಗಳನ್ನು ಹೀಗೆ ತೋರಿಸಬಹುದು.

**ಜನಪದ ಕಥನ ಕಾವ್ಯ**

೧. ಜನಪದ ಕಥನಗೀತೆ

೨. ಜನಪದ ಕಥನ ಲಾವಣಿ

೩. ಜನಪದ ಖಂಡಕಾವ್ಯ

೪. ಜನಪದ ಮಹಾಕಾವ್ಯ

ಈ ಒಂದು ಚೌಕಟ್ಟಿನಲ್ಲಿ ಎಲ್ಲಾ ಕಥನಕಾವ್ಯಗಳನ್ನು ಅಳವಡಿಸುವುದು ಸಾಧ್ಯವಾಗುತ್ತದೆ.

ಇನ್ನು ಒಂದೊಂದು ಗುಂಪಿನಲ್ಲೂ ಉಪವಿಭಾಗಗಳನ್ನು ಮಾಡಿಕೊಳ್ಳಬಹುದು. ದೇಜಗೌ. ಸೂಚಿಸಿದ ಲಾವಣಿಗಳ ವಿಭಜನೆ ಕ್ರಮ ಈ ದಿಶೆಯಲ್ಲಿ ಹೆಚ್ಚು ಸಹಾಯಕವಾಗಬಹುದು. ಅವರು ಅಧ್ಯಯನದ ದೃಷ್ಟಿಯಿಂದ ಮಾಡಿದ ವಿಂಗಡಣೆ ಏಳು ಉಪವಿಭಾಗಗಳಲ್ಲಿದೆ.

ಅಧ್ಯಯನದ ದೃಷ್ಟಿಯಿಂದ ಮಾಡಿದ ವಿಂಗಡಣೆ ಏಳು ಉಪ ವಿಭಾಗಗಳಲ್ಲಿದೆ.

೧. ಪೌರಾಣಿಕ ೨. ಧಾರ್ಮಿಕ

೩. ಐತಿಹಾಸಿಕ ೪. ಸಾಮಾಜಿಕ

೫. ಕೌಟುಂಬಿಕ ೬. ಕಾಲ್ಪನಿಕ

೭. ರಾಜಕೀಯ

ಇವುಗಳಲ್ಲಿ 'ರಾಜಕೀಯ' ಎನ್ನುವ ಅಂಶ ನಾಡಿನ ಚರಿತ್ರೆ ಮತ್ತು ಘಟನೆಗಳ ಅನಿವಾರ್ಯ ಮತ್ತು ಅವಿಭಾಜ್ಯ ಘಟಕವಾಗಿ ಸೇರಿ ಹೋಗುವುದರಿಂದ ಅದು ಸ್ವಾಭಾವಿಕವಾಗಿ ಐತಿಹಾಸಿಕದಲ್ಲಿ ಸೇರ್ಪಡೆಯಾಗುತ್ತದೆ. ಕಥನಗೀತೆಗಳ ವಿಷಯದಲ್ಲಂತೂ ಈ ಮಾತು ಖಾತ್ರಿ ಇನ್ನು ಕಾಲ್ಪನಿಕ ಎನ್ನುವುದು ಕವಿ ಪರಿಸರದಲ್ಲಿ ಉದ್ವೇಗಗೊಂಡಾಗ ಸಹಜ ಉನ್ಮತ್ತನಾಗುವ ಸ್ವಭಾವದ ವ್ಯಕ್ತಿ. ಇದು ಜನಪದರ ಪ್ರಾಕೃತಿಕ ಗುಣವೂ ನಿಜ. ಜೊತೆಗೆ ಅವರದು ದಟ್ಟವಾದ ಕಲ್ಪನೆಗಳ ಸೃಷ್ಟಿಗೆ ತಕ್ಷಣ ಸ್ಪಂದಿಸುವ ತೆರದಿಟ್ಟ ಮನಸ್ಸು. ಈ ಕಾರಣದಿಂದ ಅವರ ಎಲ್ಲಾ ರಚನೆಗಳಲ್ಲಿ ಕಲ್ಪನಾತ್ಮಕ ಅಂಶ ಅದ್ಭುತ ರಮ್ಯತೆ ಮೈಗೂಡಿಸಿಕೊಂಡೇ ಬರುತ್ತದೆ. ಈ ಕಾರಣದಿಂದ ಕಥನಗೀತೆಗಳ

ವಿಂಗಡಣೆಯಲ್ಲಿ. ಕೆಲವು ವಿಶಿಷ್ಟ ಆಶಯಗಳ ಗುಂಪು ಸಾಕಷ್ಟು ಪ್ರಮಾಣದಲ್ಲಿ ದೊರಕುವವರೆಗೂ -ಕಿನ್ನರ ಅತಿಮಾನುಷ ಮುಂತಾದುವು ಕಾಲ್ಪನಿಕ ಎನ್ನುವ ಉಪವಿಭಾಗ ಅಗತ್ಯವೆನಿಸಲಾರದು. ಆದ್ದರಿಂದ ಜನಪದ ಕಥನಕಾವ್ಯದ ಈ ಪ್ರಮುಖ ಗುಂಪುಗಳಲ್ಲಿ ಮೊದಲು ಕಥನಗೀತೆಗಳನ್ನು ಜನಪದ ಕಥನಗೀತೆ.

೧. ಪೌರಾಣಿಕ ಕಥನಗೀತೆ ೨. ಐತಿಹಾಸಿಕ ಕಥನಗೀತೆ

೩. ಧಾರ್ಮಿಕ ಕಥನಗೀತೆ ೪. ಸಾಮಾಜಿಕ ಕಥನಗೀತೆ

೫. ಕೌಟುಂಬಿಕ ಕಥನಗೀತೆ

ಹೀಗೆ ಐದು ಉಪವಿಭಾಗಗಳಲ್ಲಿ ವಿಂಗಡಿಸಬಹುದು. ಇದೇ ಕ್ರಮವನ್ನು ಜನಪದ ಕಥನ ಲಾವಣಿ, ಜನಪದ ಖಂಡಕಾವ್ಯಗಳಿಗೂ ಅನ್ವಯಿಸಬಹುದು.

ಈ ಕ್ರಮದಲ್ಲೂ ಕೆಲವು ಆತಂಕಗಳಿವೆ. ಪೌರಾಣಿಕದಲ್ಲಿ ಕೆಲವಾದರೂ ಧರ್ಮಕ್ಕೆ ಸಂಬಂಧಿಸಿದ ಅಂಶಗಳುಂಟು. ಅದರಂತೆ ಧಾರ್ಮಿಕದಲ್ಲಿ ಕೆಲವು ಸಮಾಜಕ್ಕೆ, ಇತಿಹಾಸಕ್ಕೆ ಸಂಬಂಧಿಸಿದಂತೆ ಕೆಲವು ಸನ್ನಿವೇಶಗಳು ಬರಬಹುದು. ಹಾಗೆಯೇ ಸಮಾಜಿಕದಲ್ಲಿ ಕೆಲವು ಕೌಟುಂಬಿಕ ಸಂದರ್ಭಗಳು ಮೂಡಿ ಬರುತ್ತವೆ. ಹೀಗೆ ಒಂದಕ್ಕೊಂದು ತಳಕಿ ಹಾಕಿ ನಿಂತ ಸರಬಳ್ಳಿಯಿದು. ಆಗ ಸಂಕೀರ್ಣ ಎನ್ನುವ ಇನ್ನೊಂದು ಉಪವಿಭಾಗವನ್ನು ಮಾಡಿಕೊಳ್ಳಬೇಕಾದೀತು. ಆದರೂ ಇವು ಸದ್ಯ ಅಧ್ಯಯನದ ದೃಷ್ಟಿಯಿಂದ ಮಾತ್ರ ರೂಪಿಸಿಕೊಳ್ಳಬಹುದಾದ ನೆರವಾಗಬಹುದುದಾದ ಸ್ಥೂಲವಾದ ಗಡಿರೇಖೆಗಳು ಎನ್ನುವುದನ್ನು ಮರೆಯುವಂತಿಲ್ಲ. ಈಗ ಒಂದು ಮಲೆಯಮಾದೇಶ್ವರನನ್ನು ಕುರಿತು ಮಹಾಕಾವ್ಯ ಇನ್ನೊಂದು ಮಹಾಭಾರತವನ್ನು ಕುರಿತು ಜನಪದ ಮಹಾಕಾವ್ಯದ ಎರಡು ಪರ್ವಗಳು ಮಾತ್ರ ಕೃತಿಗಳು ಪ್ರಕಟವಾಗಿವೆ. ಇವುಗಳ ವರ್ಗೀಕರಣ ಸ್ಪಷ್ಟ.

ಒಂದು ಧಾರ್ಮಿಕ ಇನ್ನೊಂದು ಪೌರಾಣಿಕ. ಇದರಂತೆ ಕೃತಿಗಳು ಪ್ರಕಟವಾದಂತೆಲ್ಲ, ವಸ್ತು ಪ್ರಕಾರಗಳನ್ನು ದೃಷ್ಟಿಯಲ್ಲಿಟ್ಟು, ಉಪವಿಭಾಗದಲ್ಲಿ ಸೇರಿಸುತ್ತಾ ಹೋಗಬಹುದು. ಶಿಷ್ಟಪದ ಕವಿಗಳಾದ ವಾಲ್ಮೀಕಿ ವ್ಯಾಸರ ಹೆಸರು ಜನಪದ ಕವಿಗಳಿಗೆ ತಿಳಿದಿರುವುದು ವಿರಳ. ಆದರೆ 'ರಾಮಾಯಣ' ಮಹಾಭಾರತಗಳ ಕಥೆ ಅವರಿಗೆ ಗೊತ್ತು. ಹೀಗಾಗಿ ಇಂಥ ವಸ್ತುಗಳನ್ನು ಜನಪದರ ತಮ್ಮ ಕಾವ್ಯಸೃಷ್ಟಿಗೆ ಬಳಸಿಕೊಳ್ಳುತ್ತಲೇ ಬಂದಿದ್ದಾರೆ. ಈ ಅಂಶ 'ಜನಪದ', 'ಶಿಷ್ಟಪದ'ಗಳ ಪರಸ್ಪರ ಪ್ರೇರಣೆ ಮತ್ತು ಆಧಾನ ಪ್ರಧಾನಗಳಿಗೆ ಉಪಷ್ಟಭಕವೂ ಆದೀತು.

ಈ ಮೇಲಿನ ಎಲ್ಲಾ ಅಂಶಗಳು ಜನಪದ ಕನ್ನಡ ಕಥನಗೀತೆಗಳ ಒಂದು ಅಧ್ಯಯನ ವಿವರ ಹಾಗೂ ಜನಪದ ಕಥನಗೀತೆಗಳು ಬೆಳೆದು ಬಂದಂತಹ ಬೆಳವಣಿಗೆಯನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಕಥನಗೀತೆಗಳು ಜೀವನದ ಮೌಲ್ಯಗಳನ್ನು ಸಾರುತ್ತಾ ಜನಪದರ ಮನದಲ್ಲಿ ನೆಲೆಸಿವೆ.

ಮೂವತ್ತು ಜನಪದ ಕಥನಗೀತೆ. ಲಾವಣಿ ಸಂಕಲನಗಳನ್ನು ಸಮೀಕ್ಷಿಸಿದಾಗ ಕಂಡುಬಂದ ದುಃಖಾಂತ ಕಥನಗೀತೆಗಳ ಸಂಖ್ಯೆ ನೂರೈವತ್ತಕ್ಕೂ ಮಿಕ್ಕಿದೆ. ಅವುಗಳಲ್ಲಿ ಸುಮಾರು ಇಪ್ಪತ್ತು ಪೌರಾಣಿಕ ದುಃಖಾಂತ ಕಥನಗೀತೆಗಳು ಜವರಾಯ, ಗಿರಿಜಾಮಲ್ಲಯ್ಯ, ಮಹಾಭಾರತ ರಾಮಾಯಣ, ಸೀತಾದೇವಿಯ ವನವಾಸ, ಕುಂತಿಯ ವನವಾಸ, ವೀರಅಭಿಮನ್ಯು, ಕೊಂತಿ ಭಿಕ್ಷೆ ಬೇಡಿದ್ದು ದ್ರೌಪದಿಯನ್ನು ಕಣ್ಣಿಗೆ ಕಟ್ಟಿ ಕಾಡಿಗೆ ಬಿಟ್ಟಿದ್ದು ಜೋಕುಮಾರ ಮುಂತಾದವು ಮುಖ್ಯ. ಶಿವಪುರಾಣ, ವಿಷ್ಣುಪುರಾಣ, ರಾಮಾಯಣ, ಮಹಾಭಾರತಗಳಲ್ಲಿ ಬರುವ ಪಾತ್ರ ಸನ್ನಿವೇಶ ಸಂಗತಿಗಳನ್ನು ಜನಪದರು ತಮ್ಮ ಸುಖ–ದುಃಖಗಳಿಗೆ ಅನ್ವಯಿಸಿ ಕಲ್ಪನಾಶಕ್ತಿಯಿಂದ ಸ್ಥಳೀಕರಿಸಿ ಕಥನಗೀತೆ ಕಟ್ಟಿ ಹಾಡುತ್ತಾ ಬಂದಿರುವ ಇವುಗಳಲ್ಲಿ ಅನೇಕ ಬಿಡಿ ಬಿಡಿಯಾದ ಕತೆಯ ಹಾಡುಗಳಿವೆ. ಐತಿಹಾಸಿಕ ವಸ್ತುವನ್ನು ಬಳಸಿಕೊಂಡ ದುಃಖಾಂತ ಕಥನಗೀತೆಗಳು ಸುಮಾರು ನಲವತ್ತಕ್ಕೂ ಅಧಿಕ ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಹಲಗಲಿಬೇಡರು, ನರಗುಂದದ ಬಂಡಾಯ, ಪಿರಾಯಪಟ್ಟಣದ ಕಾಳಗ, ಸರ್ಜಪ್ಪನಾಯ್ಕ ಲಕ್ಷ್ಮಣ, ಈರಣ್ಣ ಮೊದಲಾದವು ಹೆಸರಿಸಬಹುದಾದುವು. ತಮ್ಮ ನಾಡಿಗಾಗಿ, ಅರಸೊತ್ತಿಗಾಗಿ ಪರಸ್ಪರ ದ್ವೇಷ, ಮಾತ್ಸರ್ಯ ವಂಚನೆಗಳಿಂದಾಗಿ ಹೀಗೆ ತಮ್ಮ ಪ್ರಾಣತೆತ್ತ ತ್ಯಾಗದಿಂದ ಹೋರಾಡಿದ ವೀರ ಮಹಿಳೆಯರ ಧೀರರ, ಪರಾಕ್ರಮ ಇಂಥ ಕಥನಗೀತೆಗಳ ದುಃಖಾಂತರಕ್ಕೆ ಪ್ರೇರಕ.

ಸಾಮಾಜಿಕ ದುಃಖಾಂತ ಕಥನಗೀತೆಗಳು ನೂರಕ್ಕೂ ಮಿಕ್ಕಿವೆ. ಇವುಗಳಲ್ಲಿ ಕೆಲವು ಭಾವಗೀತಾತ್ಮಕ ಲಘು ಕಥನಗೀತೆಗಳೂ ಸೇರಿವೆ.

ಜನಪದ ಕವಿ ನೇರವಾಗಿ ತೆಕ್ಕೆಗೆ ಒಳಗಾಗುತ್ತಾನೆ. ಕನಸು ಕಟ್ಟುವ ವಿರಳ ಕ್ಷಣಗಳಲ್ಲಿ ಸುಳಿ ದಾಡಿದರೂ ವಾಸ್ತವತೆಯ ಗಾಢ ಪರಿಸರದಲ್ಲಿಯೇ ಹೆಜ್ಜೆಯಿಡುತ್ತಾನೆ, ಉಸಿರಾಡುತ್ತಾನೆ. ಕೆಲವೊಮ್ಮೆ ಚೆಲುವಿಗಾಗಿ ಹಸಿದರೂ ಒಲವಿನದೇ ಹಪಾಹಪಿ ಹಸಿಹಸಿಯಾಗಿ ಸಂತಾಪ ದುಃಖಗಳನ್ನು ಮೊಗೆದರೂ ಕಾಣದ ದೈವದ ಹಂಬಲು ಹಿಡಿತ ಶರಣಾಗತಿ. ಹೀಗಾಗಿ ತನ್ನ ಸುತ್ತಣ ಬದುಕಿನ ಜೀವಂತ ಅನುಭವವೇ ಅವನ ಸಂವೇದನೆಗೆ ಸಾಮಗ್ರಿ ಅಭಿವ್ಯಕ್ತಿಗೆ ಪ್ರೇರಕ ಅವನಿಗೆ ಅಷ್ಟಾದಶ ವರ್ಣನೆಗಳ ಕಟ್ಟಿಲ್ಲ. ಪ್ರಾಸವಿನ್ಯಾಸ ಛಂದೋವಿಲಾಸ ರೂಪಲಂಕಾರಗಳ ಹಂಗಿಲ್ಲ. ಸ್ವಭಾವೋಕ್ತಿಗಳ ಹೆಡಸು ಸಹಜತೆಯ ಬೆಡಗಿನಿಂದ ಕೂಡಿದ ಅವನ ಕಥನಗೀತೆಗಳಿಗೆ ಯಾವುದೇ ರಾಜಮಹಾರಾಜರ ಮನ್ನಣೆ ಪಡೆಯಬೇಕಾದ ಜರೂರೂ ಇರಲಿಲ್ಲ.

ಜನಪದದಿಂದ ಪ್ರೇರಣೆ ಪಡೆದು ಹುಟ್ಟಿಕೊಂಡ ಶಿಷ್ಟಪದ ಕಾವ್ಯ, ಚಕ್ರವರ್ತಿಗಳ ವಜ್ರ ವೈಢೂರ್ಯಗಳ ಹೊಳಪಿಗೆ ಮನಸೋತು ಅವರ ಆಸ್ಥಾನದಲ್ಲಿ ಬಂದಿಯಾದರೆ ಜನಪದ ಕಾವ್ಯ ಜನಸಾಮಾನ್ಯರ ಆಸೆ ಆಕಾಂಕ್ಷೆ ಶೌರ್ಯ ಪರಾಕ್ರಮಗಳನ್ನು ತನ್ನ ಕಥನಗೀತೆಗಳಲ್ಲಿ ಮೂರ್ತೀಕರಿಸುತ್ತ ಜನ ಜನರ ಕೇರಿಗಳನ್ನು ಜನಾಂಗದ ಬೀದಿಗಳನ್ನು ಜನಸ್ತೋಮಗಳ ಅಂತರಂಗವನ್ನು ಜ್ವಲಂತವಾಗಿ ಬೆಳೆಸುತ್ತಾ ಬಂದಿತು.

### ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತಗಳು

ಧಾರ್ಮಿಕ ಹಿನ್ನೆಲೆಯಲ್ಲಿ ಪರಂಪರಾನುಗತವಾಗಿ ಬಂದ ಕೆಲ ಗಾಢವಾದ ನಂಬುಗೆಗಳು ಸ್ವರ್ಗ-ನರಕ ದೈವ-ದೆವ್ವ, ಮಂತ್ರ-ಮಾಟ, ಆತ್ಮಬಲಿ, ಬಲಿ ಹೀಗೆ ಸಮಾಜದ ವಿಭಿನ್ನ ಸ್ತರಗಳಲ್ಲಿ ಎಲ್ಲ ಬಗೆಯ ವೃಂದಗಳಲ್ಲಿ ಆಳವಾಗಿ ಬೇರೂರಿ ಬರುತ್ತವೆ. ಪ್ರತಿಯೊಂದು ಬದುಕನ್ನು ನಿಯಂತ್ರಿಸುವ, ತಿದ್ದುವ ಶಿಕ್ಷಿಸುವ ಪ್ರಬಲ ಶಕ್ತಿಗಳಾಗಿ ಮೈದೋರುತ್ತವೆ. ಗಂಡ ಸಾಯುತ್ತಾನೆ. 'ಈರೋಬಿ' ಕೊಂಡ ಹಾರುತ್ತಾಳೆ. ಸ್ವರ್ಗ ಸಿಗುತ್ತದೆ. ತಂಗಿಯ ಶೀಲದ ಬಗ್ಗೆ ಸಂಶಯ ಅವಳಣ್ಣ ಕೆಂಡದರಾಯ ತಂಗಿಯ ಕೈಕಾಲು ಕತ್ತರಿಸುತ್ತಾನೆ. ಗಂಡ ಯುದ್ಧದಲ್ಲಿ ಸಾಯುತ್ತಾನೆ. ಬಾಲ ವಿಧವೆಯಾದರೂ ವಡ್ಡರಗೆರೆ ನಾಗಮ್ಮ ಚಿತೆಯೇರುತ್ತಾಳೆ. ಕಲ್ಲನಕೇರಿಯ ಕರೆಗೆ ನೀರಿಲ್ಲ. ಅದಕ್ಕೆ ಕಿರಿಸೊಸೆ ಭಾಗೀರಥಿಯ ಬಲಿ ಕೊಡಬೇಕು. ಭಾಗೀರಥಿ ನೀರು ಪಾಲಾಗುತ್ತಾಳೆ. ಗಂಡ ಶಂಕರಾಯ ಸತ್ತ. ಕಂಡವರ ಮನೆ ಕಸವಾಗುವುದು ಯಾಕೆ? ಕೊಂಡವೇರುವುದೇ ಲೇಸು. ಈರೋಬಿ ಬೆಂಕಿ ಪಾಲಾಗುತ್ತಾಳೆ. ಲಗ್ನಕ್ಕೆ ಮುಂಚೆಯೆ ಗೊತ್ತು ಮಾಡಿದ ಗಂಡು ಚಿಂದಯ್ಯನನ್ನು ಬೇಡರು ಕೊಲ್ಲುತ್ತಾರೆ. ಕೊಂಡಕ್ಕೇ ಧಾರೆಯೆರಸಿಕೊಂಡು ಉರಿಯಲ್ಲಿ ಸುಟ್ಟುಕೊಳ್ಳುವ ಕಾಡುಗೊಲ್ಲರ ನಾಗಮ್ಮ ಕೆರೆಯ ಕಟ್ಟಡ ನಿಲ್ಲಿಸಲು ಕೆಂಚವ್ವ ಮತ್ತು ಅವಳ ಮಗುವಿನ ಬಲಿ. ತನ್ನ ಗಂಡನನ್ನು ಕೊಂದು ತನ್ನನ್ನು ಕಾಮಿಸ ಬಂದವನನ್ನು ಕೊಂದು ತಾನೂ ಕೊಂಡಕೊಂಡವಾಗುವ ಬೆಕ್ಕೋಳು ಹಿರಿದಿಮ್ಮವ್ವ ಹೀಗೆ ಈ ವ್ಯಕ್ತಿಗಳ ಪಟ್ಟಿ ಬೆಳೆಯುತ್ತದೆ. ಇವರಲ್ಲಿ ಕೆಲವರು ಮನಸ್ಸಿನಲ್ಲಿ ತಳಮಳಸಿದರೂ ಸಮಾಜ ವ್ಯವಸ್ಥೆಯನ್ನು ಧಿಕ್ಕರಿಸುವ ಶಕ್ತಿಯಿಲ್ಲದೆ ಮೂಕ ಪಶುಗಳಂತೆ ಸಾವಿನ ಪಾಶಸುತ್ತಿಕೊಂಡವರು.

ಧಾರ್ಮಿಕ ಪರಂಪರೆಯ ಅನೇಕ ಆವರಣಗಳಲ್ಲಿ ಹಾವುಗಳಂತೆ ತಳಕಿ ಹಾಕಿಕೊಂಡು ಹೆಡೆಯತ್ತಿದ್ದ ವಿಧಿ-ನಿಷೇಧಗಳು ಆಯಾಕಾಲದ ಸಮಾಜ ಒಪ್ಪಿಕೊಂಡ ಮೌಲ್ಯಗಳಾಗಿ ಕಚ್ಚಿದುದು ಆಯಾ ಪೀಳಿಗೆಯ ದುರಂತವಲ್ಲದೆ ಇನ್ನೇನು?

**ಅಡಿಟಿಪ್ಪಣಿಗಳು**

೧. ದೇ. ಜವರೇಗೌಡ, ಜಾನಪದ ಅಧ್ಯಯನ, ಪು. ೧೪೩-೧೪೪

೨. ಹಿರೇಮಠ ಆರ್.ಸಿ., ಜಾನಪದ ಸಾಹಿತ್ಯ ದರ್ಶನ, ಪು. ೨೧೯

ಅಧ್ಯಾಯ ಮೂರು

# ಜನಪದ ಮತ್ತು ಶಿಷ್ಟಗೀತೆಗಳ ಅಂತರ್‌ಸಂಬಂಧ

ಜನಪದ ಮತ್ತು ಶಿಷ್ಟಗೀತೆಗಳ ಅಂತರ್‌ಸಂಬಂಧವನ್ನು ಹೇಳುವುದಕ್ಕಿಂತ ಮುಂಚಿತವಾಗಿ ಇವೆರಡರ ಮಧ್ಯೆ ಇರುವಂತಹ ಭಿನ್ನತೆಗಳನ್ನು ತಿಳಿಯುವುದು ಸೂಕ್ತವೆನಿಸುತ್ತದೆ. ಇಂದು ನಾವೆಲ್ಲರೂ ಸರಳವಾಗಿ ಬಳಸುತ್ತಿರುವ ಜನಪದ ಶಿಷ್ಟಪದಗಳಿಗೆ ಸಂವಾದಿಯಾಗಿ ನಮ್ಮ ಪ್ರಾಚೀನ ಕವಿಗಳು 'ದೇಶಿ' ಮತ್ತು 'ಮಾರ್ಗ' ಪದಗಳನ್ನು ಬಳಸುತ್ತಿದ್ದರು. ವಾಸ್ತವವಾಗಿ ಮಾರ್ಗ-ದೇಶಿಗಳೆರಡೂ ಸಂಗೀತಶಾಸ್ತ್ರದ ಪಾರಿಭಾಷಿಕ ಪದಗಳು. ಭರತ ಹಾಗೂ ಮತಂಗಮುನಿಯು ರಚಿಸಿದ ಸಂಗೀತಶಾಸ್ತ್ರದ ಗ್ರಂಥಗಳಲ್ಲಿ ರೂಢಿಗೆ ಬಂದ ಪದಗಳು. ಮತಂಗ ಮುನಿಯು ಗ್ರಂಥದ ಹೆಸರೇ 'ಬೃಹದ್ದೇಶಿ' ಎಂಬುದಾಗಿತ್ತು. ಸಂಗೀತಶಾಸ್ತ್ರಜ್ಞರಿಗೆ ಮಾರ್ಗ-ದೇಸಿ ಇವೆರಡೂ ರಂಗಗಳ ಜ್ಞಾನ ಕಡ್ಡಾಯವಾಗಿತ್ತು. ಹಿಂದೆ ರಾಮಾಯಣ-ಮಹಾಭಾರತ-ಪುರಾಣಗಳನ್ನೆಲ್ಲ ಸಂಗೀತಶಾಸ್ತ್ರಾನುಸಾರ ರಾಗಬದ್ಧವಾಗಿ ಹಾಡುತ್ತಿದ್ದ ಪರಂಪರೆ ಇತ್ತು. ಯಕ್ಷಗಾನ ಭಾಗವತರ ಹಾಡುಗಾರಿಕೆಯಲ್ಲಿ ಮಾರ್ಗ ಮತ್ತು ದೇಶಿ ರಾಗಗಳ ಸಂಮಿಶ್ರಣವನ್ನು ಗುರುತಿಸಬಹುದು.

ಸಾಹಿತ್ಯದ ಸಂದರ್ಭದಲ್ಲಿ ಕವಿರಾಜಮಾರ್ಗಕಾರ ಮೊದಲ ಬಾರಿಗೆ ಈ ಎರಡೂ ಪದಗಳನ್ನು ಚಲಾವಣೆಗೆ ತಂದನು. ಅನಂತರದಲ್ಲಿ ಪಂಪನಲ್ಲಿ ಪದೇ ಪದೇ ಈ ಪದಗಳ ಉಲ್ಲೇಖ ಕಂಡು ಬಂದಿತು. ಪ್ರಾಚೀನ ಕವಿಗಳ ಅಭಿಪ್ರಾಯದಲ್ಲಿ 'ಮಾರ್ಗ' ಎಂದರೆ ಪಥ ಲಕ್ಷಣಯುಕ್ತವಾದ ರಚನೆ ಎಂದರ್ಥ. ಇಲ್ಲಿ ಪಥ ಎಂಬುದು ವಾಚ್ಯಾರ್ಥವಾದರೆ ಲಕ್ಷಣಯುಕ್ತವಾದ ರಚನೆ ಎಂಬುದು ವಿಶೇಷಾರ್ಥ. ಅದೇ ರೀತಿಯಲ್ಲಿ 'ದೇಶಿ'ಗೆ ದೇಶ ಸಂಬಂಧಿ ಎಂಬುದು ವಾಚ್ಯಾರ್ಥವಾದರೆ

ರಚನೆ ಎಂಬುದು ವಿಶೇಷಾರ್ಥ. ಮಾರ್ಗ ಎಂಬುದು ಪ್ರೌಢ ಸಂಪ್ರದಾಯಕ್ಕೆ ಸೇರಿದ ಸಂಸ್ಕೃತ ಲಕ್ಷಣ ಸಮನ್ವಿತವಾದುದು. ಲಕ್ಷಣಯುಕ್ತ ರಚನೆಯಿಂದ ಕೂಡಿದ್ದು. ದೇಶಿ ಎಂಬುದು ದೇಶ ಸಂಬಂಧಿಯಾದುದು, ಜನಸಾಮಾನ್ಯರು ದಿನನಿತ್ಯ ಮಾತನಾಡುವ ಭಾಷೆಯ ಲಕ್ಷಣಯುಕ್ತವಾದ ರಚನೆ ಎನಿಸಿಕೊಂಡಿತು.

ಕಾವ್ಯಮೀಮಾಂಸೆಯ ಪಾರಿಭಾಷಿಕ ಶಬ್ದಗಳಾಗಿ ಹೊರಹೊಮ್ಮಿದ ಮಾರ್ಗ-ದೇಶಿಗಳ ಅಭಿವ್ಯಕ್ತಿ ವಿಧಾನಕ್ಕೆ ಸಂಬಂಧಿಸಿದಂತೆ ಇರುವ ವ್ಯತ್ಯಾಸಗಳನ್ನು ತಿಳಿಸಿಕೊಡುತ್ತವೆ. ಆದ್ದರಿಂದ ಇವು ಮುಖ್ಯವಾಗಿ ಶೈಲಿಗೆ ಅಥವಾ ರೀತಿಗೆ ಸಂಬಂಧಿಸಿದವುಗಳು. ದೇಶಿ ಎನ್ನುವುದು ಕನ್ನಡದ ಅಂಗ ವಿದ್ದಂತೆಯೇ ಭೌಗೋಳಿಕ ವೈಶಿಷ್ಟ್ಯವೂ ಆಗಿದೆ. ರೀತಿಯ ವಿಚಾರದಲ್ಲಿ ಸಂಸ್ಕೃತ ಕಾವ್ಯವನ್ನು ಕನ್ನಡದ ಪ್ರಾಚೀನ ಕವಿಗಳು ಅವಲಂಬಿಸಿದ ಕಾರಣದಿಂದಾಗಿ ಕನ್ನಡಕ್ಕೆ ಮಾರ್ಗ ಶೈಲಿ ಸಿಕ್ಕಿತು. ಇದರೊಂದಿಗೆ ಈಗಾಗಲೇ ರೂಢಿಯಲ್ಲಿದ್ದ 'ದೇಶಿ' ಎಂದು ಕರೆಯಲಾಗುತ್ತಿದ್ದ ಜನಸಾಮಾನ್ಯರ ಅಲಿಖಿತ ಸಾಹಿತ್ಯ ಪರಂಪರೆಯೂ ಇದ್ದಿತು.

ಪಂಪ, ಮಾರ್ಗ-ದೇಶಿಗಳೆರಡರ ಸಮನ್ವಯವನ್ನು ಸಾಧಿಸಿದ ಆದಿಕವಿ. "ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು" ಎಂಬ ಪಂಪನ ಪ್ರಜ್ಞೆ ಸರ್ವಕಾಲಿಕ ಸತ್ಯ. ಮಾರ್ಗದಲ್ಲಿ ದೇಸಿಯತೆ ಎಂದರೆ, ಪಂಪನ ನಿಜಾರ್ಥದಲ್ಲಿ ಕೇವಲ ಆಡುನುಡಿಗಳನ್ನಷ್ಟೇ ಬಳಸಿ ಕೊಳ್ಳುವಂಥದಲ್ಲ; ದೇಸಿಯ ಭಾಷೆ, ಛಂದಸ್ಸು, ಲಯ, ಸಂವೇದನೆ, ಜೀವನ ವಿಧಾನ ಇತ್ಯಾದಿ ಬಹುಮುಖಗಳಿಂದ ದೇಶೀಯ ಮಾರ್ಗದಲ್ಲಿ ಅಂದರೆ, ಪಂಡಿತ ಕಾವ್ಯವನ್ನು ಕೂಡ ಜನಸಾಮಾನ್ಯರ ಸಂವೇದನೆಗಳ ಹತ್ತಿರಕ್ಕೆ ಕೊಂಡೊಯ್ಯುವುದು ಎಂದರ್ಥ. "ದೇಶಿ ಮಾರ್ಗ ಯಾವುದೇ ಕಾಲದ ಅನಿವಾರ್ಯ ವಿರೋಧ ಪೂರಕಗಳು. ಇವು ಕಾಲ, ದೇಶ ಪರಿಸರಗಳಿಗೆ ತಕ್ಕಂತೆ ಆಕಾರ ಪಡೆಯುತ್ತಿದ್ದು ಹಲವು ದೇಶೀಯಗಳೇ ಪರಿಷ್ಕರಣೆಗೊಂಡು ಒಂದು ಮಾರ್ಗಮಟ್ಟ ಏರ್ಪಡುತ್ತದೆ. ಮತ್ತೆ ಆ ಮಾರ್ಗಮಟ್ಟ ಹಳತಾಗಿ ಒಂದು ದೇಶಿ ಘಟ್ಟವಾಗಿ ನಿಲ್ಲುತ್ತದೆ"(ಕಲಬುರ್ಗಿ: ೧೯೫೫).

ಸಮಾಜಶಾಸ್ತ್ರಜ್ಞರು ಮಾರ್ಗ-ದೇಶಿಯನ್ನು ದೊಡ್ಡ ಪರಂಪರೆ ಮತ್ತು ಸಣ್ಣ ಪರಂಪರೆಗಳೆಂದು ಗುರುತಿಸಿದ್ದಾರೆ. ಮಾರ್ಗ ಪ್ರಾಂತೀಯವಾದುದಾದರೆ, ದೇಶಿ ಉಪ ಪ್ರಾಂತೀಯವಾದುದು. ಕಲಬುರ್ಗಿ ಯವರು "ನಿಸರ್ಗದ ಮಡಿಲಿನಿಂದ ನಗರದ ನೆರಳಿನತ್ತ ನಡೆದು ಬರುವ ವ್ಯಕ್ತಿಗಳಲ್ಲಿ ನೈಸರ್ಗಿಕ ಅಂಶಗಳು ಕಡಿಮೆಯಾಗುತ್ತಾ ಹೋಗಿ, ನಾಗರಿಕ ಅಂಶಗಳು ಬೆಳೆಯುತ್ತ ಬರುತ್ತವೆ. ವ್ಯಕ್ತಿಗತವಾಗಿ ಆರಂಭಗೊಂಡು ಸಮಾಜಗತವಾಗಿ ಮುನ್ನೆಡವ ಈ ಕ್ರಿಯೆಯಿಂದಾಗಿ ಸಮಾಜದಲ್ಲಿ ನೈಸರ್ಗಿಕ ಮತ್ತು ನಾಗರಿಕ ಸ್ತರಗಳು ನಿರ್ಮಾಣವಾಗುತ್ತವೆ. ಅವುಗಳ ಮೈಮನದಲ್ಲಿ ಕ್ರಮವಾಗಿ ಒಂದು ವಿಧದ ಪ್ರಾಕೃತ ಮತ್ತು ಪರಿಷ್ಕೃತ ಬದುಕುಗಳು ಏರ್ಪಡುತ್ತವೆ. ಇವುಗಳನ್ನು ದೇಶಿಮಾರ್ಗ ಎಂದು ಕರೆಯುವುದು" ಎಂದು ಸ್ಪಷ್ಟವಾಗಿ ಗುರುತಿಸಿದ್ದಾರೆ. ಈ ನೆಲೆಯಲ್ಲಿ ಪ್ರಾಕೃತವಾದ ಜನಪದ, ಪರಿಷ್ಕೃತ ಶಿಷ್ಟಪದ ಎರಡರ ಪರಿಕಲ್ಪನೆಯನ್ನು ಪರಿಭಾವಿಸಬೇಕಾಗಿದೆ.

### ೩.೧. ಜನಪದ ಕಥನಗೀತೆಗಳು

ಬದುಕಿನ ಸಮಸ್ತ ಮುಖಗಳ ಸಮಷ್ಠಿ ಸೃಷ್ಠಿಯಾದ ಜಾನಪದವು ಪರಂಪರಾನುಗತ ಜ್ಞಾನವನ್ನು ಗರ್ಭದೊಳಗಿರಿಸಿಕೊಂಡಿರುವುದು ಈ ಅಲಿಖಿತ ಸಾಹಿತ್ಯ. ತಲೆಮಾರಿನಿಂದ ತಲೆಮಾರಿಗೆ ಬಾಯಿಂದ ಬಾಯಿಗೆ ಹರಿದು ಬಂದದ್ದು. ಆದರೆ ಶಿಷ್ಟ ಸಾಹಿತ್ಯವು ಲಿಖಿತ ಪರಂಪರೆಯನ್ನುಳ್ಳದ್ದು. ಗ್ರಾಂಥಿಕ ಮೂಲದಿಂದ ಲಿಪಿಯೊಡನೆ ಬೆಳೆದು ಬಂದದ್ದು. ಅಂದರೆ ಬರವಣಿಗೆಯುಳ್ಳ ಭಾಷೆಯಲ್ಲಿ ಮೊದಲಿಗೆ ಜನಪದ ಹುಟ್ಟಿದರೆ ತದನಂತರ ಶಿಷ್ಟಪದ ಜನಿಸುತ್ತದೆ. ಭಾಷೆಯೊಂದರ ಉಗಮದ ಘಟ್ಟದಿಂದ ಜನಪದ ಸಾಹಿತ್ಯವು, ಭಾಷೆಯೊಂದರ ಬರವಣಿಗೆಯ ಘಟ್ಟದಿಂದ ಶಿಷ್ಟ ಸಾಹಿತ್ಯವು ಹುಟ್ಟುತ್ತದೆ ಎಂದರ್ಥ. ಜನಪದ ಸಾಹಿತ್ಯವು ಭಾಷೆಯಷ್ಟೇ ಪ್ರಾಚೀನವಾದುದಾದರೆ, ಶಿಷ್ಟ ಸಾಹಿತ್ಯವು ಆ ಭಾಷೆಯಲ್ಲಿನ ಬರವಣಿಗೆಯಷ್ಟು ಪ್ರಾಚೀನವಾದುದು. ಅಂದರೆ ಯಾವುದೇ ಗ್ರಂಥಸ್ಥ ಭಾಷೆಯಲ್ಲಿ ಜನಪದ ಸಾಹಿತ್ಯ ಹುಟ್ಟಿದ ಎಷ್ಟೋ ಶತಮಾನಗಳ ನಂತರ ಗ್ರಂಥಸ್ಥ ಸಾಹಿತ್ಯ ಸಂಭವಿಸುತ್ತದೆ.

ಶಿಷ್ಟ ಸಾಹಿತ್ಯ ಬಿಡುವಿನ ವೇಳೆಯಲ್ಲಿ ಹುಟ್ಟಿದರೆ ಜಾನಪದ ಸಾಹಿತ್ಯ ದುಡಿಮೆಯೊಂದಿಗೆ ಹುಟ್ಟುತ್ತದೆ. ಇಲ್ಲಿ ಸಾಹಿತ್ಯ ಎನ್ನುವುದು ಬದುಕಾಗಿರುತ್ತದೆ. ಬದುಕಿನ ಪಾಡೇ ಹಾಡಾಗಿ ಪರಿಣಿಸುತ್ತದೆ. ಬದುಕಿಗೆ ಈ ಸಾಹಿತ್ಯ ನಿರ್ಮಾಣ ಕ್ರಿಯೆಯಲ್ಲಿ ಒಟ್ಟು ಸಮುದಾಯವೇ ಮುಕ್ತವಾಗಿ ಪಾಲ್ಗೊಳ್ಳುತ್ತದೆ. ಮುಖ್ಯವಾಗಿ ಇವರಿಗೆ ಬದುಕು ಪರಮ ಪ್ರಧಾನವೇ ಹೊರತು ಸಾಹಿತ್ಯ ಸೃಷ್ಠಿಯಲ್ಲಿ ಎನ್ನುವಂತಹದ್ದು ಜನಪದರಿಗೆ by product, ಸಮಷ್ಟಿಯ ಸ್ವತ್ತಾಗಿ ಸಮುದಾಯವನ್ನು ಸೇರಿದ ಜನಪದ ಕೃತಿಯೊಂದು ವ್ಯಕ್ತಿಯಿಂದ ವ್ಯಕ್ತಿಗೆ ವಾಚಿಕ ಪರಂಪರೆಯಲ್ಲಿ ಹರಿದು ಬರುವಾಗ ಸಹಜವಾಗಿಯೇ ಸಂಕಲನ, ವ್ಯವಕಲನಗಳಿಗೆ ಒಳಗಾಗಿ ರೂಪಾಂತರಗಳಿಗೆ ಗುರಿಯಾಗುತ್ತದೆ. ಹಾಗಾಗಿ ಜನಪದವು ಕಾಲದಿಂದ ಕಾಲಕ್ಕೆ ತನ್ನ ಕನ್ನಡದ ಶಿಷ್ಟಪದ ಸಾಹಿತ್ಯದಲ್ಲಂತೂ 'ಮಹಾಸತಿ'ಯನ್ನು ವೈಭವದ ವಿಪರೀತ, ನಾಳೆ ಗಂಡ ಯುದ್ಧಕ್ಕೆ ಹೋಗುತ್ತಾನೆ. ಅವನು ಅಲ್ಲಿ ಮಡಿದು ವೀರಸ್ವರ್ಗವನು ಸೇರುವವ. ಆಗ ಅವನನ್ನು ಅಪ್ಸರಾಂಗನೆಯರು ಸ್ವಾಗತಿಸುವ ಪೂರ್ವದಲ್ಲಿಯೇ ತಾನು ಕೊಂಡವೇರಿ, ಸ್ವರ್ಗ ಸೇರಿ, ಅಲ್ಲಿ ಗಂಡನ ಸ್ವಾಗತಕ್ಕೆ ಸಿದ್ದಳು. ಈ ಸಂಗತಿಯನ್ನು ತಮ್ಮ ತಮ್ಮಲ್ಲಿ ಮಾತಾಡಿಕೊಳ್ಳುವ ದಂಪತಿಗಳ ಚಿತ್ರವನ್ನು ಪಂಪ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ವಿವರಿಸುತ್ತಾನೆ.

> ನಿಜಪ್ರಾಣೇಶ್ವರನ ಪರಿಚ್ಛೇದಮನವೆದು ತನ್ನ ಸಾವಂ ಪರಿಚ್ಛೇದಿಸಿಃ
> ತಾಂ ಗಡನಾಳೆ ಪೋಗಿ ದಿವಿಜಾಂಗನೆಯಾಳ್‌ತೊಡರ್ದಿರ್ಪನಿಲ್ಲಿಮಾ
> ಣ್ದಾಂಗಡಮಿರ್ಪೆನಂತಿನಿತು ಬೆಳ್ಪನೆ ಮುನ್ನಮೆಪೋಗಿ ನಲ್ಮೆಗೆ
> ಲ್ಲಂಗೊಳೆ ದೇವಲೋಕದೊಳದೀಶನನಾದಿರ್ಗೊಳ್ವೆನೋವೊ ಸ
> ಗ್ಗಂಗಳೊಳಿರ್ಪೆ ದೇವಡತಿ ತ್ತೊರೊಳ್ತಯನಾಗಲೀವನೇ
> ಎಂದು ಕೈದವಮಿಲ್ಲದ ನಲ್ಮೆಯಿಂ ನಾಲಗೆಯ ತುದಿಗೆ ತಂದು ನುಡಿದಳ್

ಆತನಂತು ದೇವಲೋಕದ ಸ್ತ್ರೀಯರನ್ನು ಸೇರುತ್ತಾನೆ. ಆದರೆ ಅವನನ್ನು ಬಿಟ್ಟು ಇಲ್ಲಿಯೇ ಇರುವಷ್ಟು ದಡ್ಡಳೇ ನಾನು? ಪ್ರೇಮಕ್ಕೆ ವಿಜಯ ದೊರೆಯುವ ಹಾಗೆ ನನ್ನ ನಲ್ಲನಿಗಿಂತ

ಮೊದಲೇ ದೇವಲೋಕ ಸೇರಿ ಅವನನ್ನು ಎದುರುಗೊಳ್ಳುತ್ತೇನೆ. ದೇವಾಂಗನೆಯರ, ದಾಸಿಯರ ಪ್ರೇಮಕ್ಕೆ ವಶವಾಗಲು ಈತನಿಗೆ ನಾನು ಅವಕಾಶ ಕೊಡುತ್ತೇನೆಯೇ?

ರನ್ನನ ಅಜಿತ ಪುರಾಣದ ಒಂದು ಪದ್ಯ ಹೀಗಿದೆ.

ಎರಡೆವಲಂ ಕುಲವಧುಗಾ
ಚರಿಸಲ್, ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ
ಚರಣಂ ಮೇಣ್ ಶುಭ ಚರಿತದೆ
ಮರಣಂ ಮೇಣಳಿಪಿನಿಂದೆ ಬಾಳ್ವಿದು ದೊರೆಯೇ.[೨]

ಸಹಗಮನ 'ಶುಭಚರಿತದ ಮರಣ' ಎನ್ನುವ ಅಭಿಪ್ರಾಯ ಕೆಲವುಮಟ್ಟಿಗಾದರೂ ಒಂದು ಮನ್ನಣೆ ಪಡೆದ ಶ್ರದ್ಧೆ-ಆಚರಣೆಯಾಗಿತ್ತೆಂದು ತೋರುತ್ತದೆ. ಹೆಂಡತಿ ಕೊಂಡವೇರಿ ತನ್ನನ್ನು ತಾನು ಸುಟ್ಟುಕೊಂಡು ಪ್ರಾಣತ್ಯಾಗ ಮಾಡುವುದು ಸಾಮಾಜಿಕದ ದೃಷ್ಟಿಯಲ್ಲಿ ಪರಮ ಪಾತಿವ್ರತ್ಯದ ಅಭಿಮಾನದ ವಸ್ತುಸಂಗತಿಯಾಗಿತ್ತು.

ಬಸವಣ್ಣನವರ ಒಂದು ವಚನದಲ್ಲಿ ಅನುಭಾವದ ನಿಲುವನ್ನು ಕುರಿತು ಹೇಳುವಾಗ ಸತಿಪದ್ಧತಿಯ ವಿಷಯವನ್ನು ಉದಾಹರಿಸಲಾಗಿದೆ. 'ಮುನ್ನಿನ ಪುರುಷ ವ್ರತಿಯರು ಒಲಿಸಿದ ಆಯತವ ಪರಿಪರಿಯಲು ಬಣ್ಣಿಸಲು ಬಹುದಲ್ಲದೆ ಪುರುಷ ನಿರ್ವಾಣಕ್ಕುರಿವಗ್ನಿಯ ಬಂದು ಹೊಕ್ಕು ತೋರಲು ಬಾರದು'.

ಮಾದರ ಧೂಳಯ್ಯಗಳ ವಚನದಲ್ಲಿಯೂ ಇದರ ವರ್ಣನೆಯಿದೆ :

ಧೀರೆಯಾದ ಮಾಸ್ತಿಗೆ ವೀರತ್ವವಲ್ಲದೆ
ಧಾರುಣಿಯ ಜನರೆಲ್ಲರೂ ಹೇಡಿ ಮಾಸ್ತಿ ಎಂದ ಬಳಿಕ
ವೀರತ್ವಯೆಲ್ಲಿಯದೊ?
...................................[೩]

ಅನಂತನಾಥ ಪುರಾಣದಲ್ಲಂತೂ ಸತಿಪದ್ಧತಿಯ ಸಮೂಹ ದೃಶ್ಯ ಕಾಣಿಸುತ್ತದೆ. ಅರಸು ಸಿಂಹ ಚೂಡ ಸತ್ತಾಗ ಸಹಗಮನ ಸಮುತ್ಸುಕತೆಯುಂ ಕೈವಿಡಿಸಿಕೈ ಗುಡುವ ಕೈದುಬರ್ಪ ಕೈವಿಡಿದ ಪೆಂಡಿರ ತಂಡ.[೪] ಹೀಗೆ ಹೆಂಡಿರ ತಂಡವೇ 'ಸತಿ'ಯರಾಗಲು ಉತ್ಸುಕರಾಗಿರುವುದನ್ನು ವರ್ಣಿಸಲಾಗಿದೆ.

ಕುಮಾರರಾಮನು ತನ್ನ ಹೆಂಡರಿಗೆ, ತನ್ನ ವೀರಮರಣ ನಿಶ್ಚಯ ಎಂದು ನುಡಿ ನುಡಿಯುತ್ತಿರುವಂತೆಯೇ ಆತನ ಸತಿಯರು ಉರಿವ ಕೊಂಡದಲ್ಲಿ ಆನಂದದಿಂದ ಬಿದ್ದ ವರ್ಣನೆ ಬರುತ್ತದೆ.

'ನುಡಿಯಲಾ ಮಾತು ಹಿಂಚಿತು' ಕುವರನನೊಡ
ನೊಡನಮರ್ದಮರ್ದಪ್ಪಿಕೊಂಡು

ಮಡದಿಯರಾನಂದ ಕೈಮಿಗೆ ಬೇಳ್ದರಂ
ದಡಿಗಡಿಗಗ್ನಿ ಕುಂಡದೊಳು.[೫]

ಅಂದರೆ ಯಾರು ಬೇಕಾದರೂ ತಮ್ಮ ಮನಸ್ಸಿಗೆ ಬಂದಂತೆ ಕೊಂಡ ಹಾರುವುದು ನಿಷಿದ್ಧವಾಯಿತು. ಸಿದ್ಧೇಶ್ವರ ಮಹಾಪುರಾಣದಲ್ಲಿಯೇ ಸೂಚಿತವಾಗಿರುವಂತೆ ಸತಿ ಹೋಗುವ ಹೆಣ್ಣುಮಗಳು ಅರಸನ ಸಮ್ಮತಿ ಪಡೆಯಬೇಕಾಗುತ್ತಿತ್ತು. ಇದಕ್ಕೆ ಕೆಲವು ವಿಧವೆಯರು ಉರಿಯಲ್ಲಿ ಬೀಳುವಾಗ ಅಂಜಿ ಓಡಿ ಹೋಗುತ್ತಿದ್ದುದು ಅಥವಾ ಜನ ಸಮುದಾಯ ಅವಳನ್ನು ಬಲತ್ಕಾರದಿಂದ ಕೊಂಡಕ್ಕೆ ನೂಕುತ್ತಿದ್ದುದು ಕಾರಣವಾಗಿರಬಹುದು. ಒಂದು ವಚನದಲ್ಲಿ ಇಂಥ ಒಂದು ಸೂಚನೆಯಿದೆ.

'ಗಂಡಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು ಪುಂಡವೀರಸ್ತ್ರೀ ತಾನು
ದಂಡೆಯ ಕಟ್ಟಿಕೊಂಡು ಖಂಡೆಯುವ ಪಿಡಿದು ತಂಡ ತಂಡದೆ ಜನರ ಮುಂದೆ
ಮೆರೆದುಕೊಂಡು ಬಂದ ಕಿಚ್ಚಿನ ಹೊಂಡವ ಕಂಡು ಹೆದರಿ ಹಿಮ್ಮೆಟ್ಟಿದರೆ
ಅವಳಿಗದೆ ಭಂಗವಲ್ಲದೆ ಶೃಂಗಾರ ಮೆರೆವುದೆ ಅಯ್ಯಪತಿಲಿಂಗ ಶರಣಸತಿ
ತನ್ನ ಪತಿವ್ರತಾ ಭಾಷೆಯ ನುಡಿದು ನಡೆಯಲ್ಲಿ ತಪ್ಪಿದಡೆ ಅವನ ಭಂಗಕ್ಕೆ
ತುದಿ ಮೊದಲಿಲ್ಲ ನೋಡಾ ಅಖಂಡೇಶ್ವರಾ'[೬]

ಈಗ ಸಂಗ್ರಹಿತವಾಗಿರುವ ಅಳಿದುಳಿದ 'ಮಾಸ್ತಿ' ಕಥನಗೀತೆಗಳೇ ಸುಮಾರು ಆಗಬಹುದು. ನಾಗವ್ವ, ಚಿಕ್ಕೊಳು ಹಿರಿದಿಮ್ಮವ್ವ ಈರೋಬಿ, ಹರಿಯಾಲದ್ಯಾವಮ್ಮ ವಡ್ಡಗೆರೆ ನಾಗಮ್ಮ, ಮಹಾಸತಿ ವೀರದಿಮ್ಮವ್ವ, ಕೊಂಡದ ಕಾಟವ್ವ, ಕುಂಡದ ಚಿತ್ತವ್ವ, ನಾರಾಯಣಸ್ವಾಮಿಯ ರೂಪಾಣಿ, ಎತ್ತಿದೆ ನಾಗವ್ವನ ಸ್ಮರಣೀಯ, ಕೊಂಡದ ಚೆನ್ನಮ್ಮ, ತೋಳಗೈ ಚೆನ್ನಮ್ಮ[೭] ಮೊದಲಾದ ಕಥನಗೀತೆಗಳು ಮತ್ತು ಕಥೆ, ಈ ಮಾದರಿಗೆ ಸೇರುತ್ತವೆ. ಇವುಗಳಲ್ಲಿ ಕೆಲವು ಸಹಗಮನಗಳಿವೆ. ಕೆಲವು ಅನುಗಮನಗಳಿವೆ. ಆಚ್ಚರಿಯೆಂದರೆ ಮದುವೆಯಾಗುವ ಪೂರ್ವವೇ ತನಗೆ ಗೊತ್ತು ಮಾಡಿದ ಗಂಡು ಮಡಿದಾಗ ಚಿತೆಯೇರುವ ಕನ್ಯೆಯರೂ ಇದ್ದಾರೆ. ಇಂಥವರನ್ನು ಕನ್ಯಾಸತಿಯರೆಂದು ಕರೆಯಬಹುದು. ಸತಿಪದ್ಧತಿಯ ಜನಪದ ಕಥನ ಗೀತೆಗಳನ್ನೇ ಒಟ್ಟುಗೂಡಿಸಿ ಸಹಗಮನ ಸತಿ. ಅನುಗಮನ ಕನ್ಯಾಸತಿ ಎಂದು ವಿಂಗಡಿಸಿ ಅವುಗಳದ್ದೇ ಒಂದು ಪ್ರಾದೇಶಿಕ ಹಿನ್ನೆಲೆ ಕಥಾನಕದ ಸ್ವರೂಪ ಸಂದರ್ಭ ವೈಶಿಷ್ಟ್ಯಗಳನ್ನು ಗಮನಿಸಿ ಪ್ರತ್ಯೇಕವಾಗಿಯೇ ಅಧ್ಯಯನ ಮಾಡುವ ಅವಶ್ಯಕತೆಯಿದೆ. ಸ್ವರೂಪವನ್ನು ಬದಲಿಸಿಕೊಂಡು ಅಪೂರ್ಣವಾದುದನ್ನು ಪೂರ್ಣಗೊಳಿಸುತ್ತಾ, ಅಸ್ಪಷ್ಟವಾಗಿರುವುದನ್ನು ಸ್ಪಷ್ಟಗೊಳಿಸುತ್ತ, ಸರಳತೆಯಿಂದ ಸಂಕೀರ್ಣತೆಯಡೆಗೆ, ಸಂಕೀರ್ಣತೆಯಿಂದ ಸರಳತೆಯ ಕಡೆಗೆ ಸಾಗುತ್ತದೆ. ಈ ಕಾರಣದಿಂದಾಗಿ ಜನಪದ ಸಾಹಿತ್ಯದಲ್ಲಿ ಕೇಳಿ ಬರುವುದು ಏಕವ್ಯಕ್ತಿಯ ದನಿಯಲ್ಲ; ಸಮುದಾಯ ದನಿ. ಒಬ್ಬ ವ್ಯಕ್ತಿಯ, ಬುದ್ಧಿಯ, ಹೃದಯದ ಹಾಡು, ಸಮುದಾಯದ ಬದುಕಿನ ಪಾಡಿನ ಹಾಡು.[೮]

ಶಿಷ್ಟ ಮತ್ತು ಜನಪದಗಳ ನಡುವೆ ಇಷ್ಟೆಲ್ಲಾ ವೈಷಮ್ಯ ಅಥವಾ ಭಿನ್ನತೆಗಳು ಇದ್ದರೂ ಕೂಡ ದೇಶಿ ಮಾರ್ಗದ ಬಗ್ಗೆ ಸದಾ ಮಾತೃಮೂಲ ಭಾವನೆಯನ್ನು ಉಳಿಸಿಕೊಂಡು ಬಂದಿದೆ. ಶಿಷ್ಟ ಸಾಹಿತ್ಯವು ನಿಂತ ನೀರಾದಾಗ, ಜಡ್ಡುಗಟ್ಟಿದಾಗ, ಸ್ಥಗಿತ ನೆಲೆಗೆ ಬಂದಾಗ ದೇಶಿಯು ಜೀವದಾಯಿನಿಯಾಗಿ ಜೀವಸೆಲೆಯನ್ನುಣಿಸಿ ಮಾರ್ಗದ ಬರವನ್ನು ಪರಿಹರಿಸಿದೆ.

"ಶಿಷ್ಟದ ವಿಷಯವಾಗಿ ದೇಶಿ ಎರಡು ತೆರನಾಗಿ ವರ್ತಿಸುತ್ತದೆ. ಮಾರ್ಗಕ್ಕೆ ದೇಶಿಯ ಕಸಿ ಕಟ್ಟುವುದು. ಉದಾಹರಣೆಗೆ ಪಂಪ ಭಾರತ, ದೇಶಿಯೇ ಮಾರ್ಗವಾಗಿ ಉದ್ದೀಪನಗೊಳ್ಳುವುದು. ಭರತೇಶ ವೈಭವ, ಸಾಂಗತ್ಯ ಪ್ರಕಾರ. ತನ್ನ ಸಂಪರ್ಕದಿಂದ ದೇಶಿಯು ಮಾರ್ಗಕ್ಕೆ ಮಾಡುವ ಬಹುದೊಡ್ಡ ಉಪಕಾರವೆಂದರೆ ಮಾರ್ಗಕ್ಕೆ ಅಂಟಿಕೊಳ್ಳಲಿರುವ ಸ್ಥಗಿತ ಸ್ಥಿತಿಯನ್ನು ತಡೆಗಟ್ಟುವುದು. ಇದರಿಂದ ಪಾಚಿಗಟ್ಟಲಿರುವ ಮಾರ್ಗವನ್ನು ನಿರ್ಮೂಲನೆ ಮಾಡುವಲ್ಲಿ ಏಕಕಾಲಕ್ಕೆ ಆ ಸಾಹಿತ್ಯವನ್ನು ಬದುಕಿಸುತ್ತದೆ. ಅದನ್ನು ಸಹೃದಯನಿಗೆ ಯೋಗ್ಯ ಆಹಾರವಾಗಿಸಿ ಅವನನ್ನು ಬದುಕಿಸುತ್ತದೆ. ಈ ಸಂದರ್ಭದಲ್ಲಿ "ಮಾರ್ಗ ಸಾಹಿತ್ಯ ಮೃತ ಪಾಯವಾದಾಗ ಜನಪದ ಸಾಹಿತ್ಯ ಅದಕ್ಕೆ ಹೊಸ ಶೈಲಿ, ಹೊಸ ಶಕ್ತಿ ನೀಡಿ ಮತ್ತೆ ಹೊಸದಾಗಿಸುತ್ತದೆ ಎಂಬ ಹರ್ಡರ್ ಅವರ ಮಾತನ್ನು ನೆನೆಯಬೇಕು(ಕಲಬುರ್ಗಿ: ೧೯೯೫). ಜನಪದ ಆಡುನುಡಿ, ಆಡುಮಾತಿನ ಓಟ, ಪರಿಣಾಮಗಳೆಲ್ಲವೂ ಮಾರ್ಗ ಛಂದಸ್ಸಿನೊಂದಿಗೆ ಸೇರಿ ಮಾರ್ಗಕ್ಕೆ ಸ್ಪಂದನಶೀಲತೆಯನ್ನು ತಂದುಕೊಟ್ಟಿವೆ. ಆದರೆ ದೇಶಿ ಮಾರ್ಗದಿಂದ ಬಳುವಳಿಯಾಗಿ ಪಡೆದದ್ದೇನಲ್ಲ. ಹೆಚ್ಚೆಂದರೆ ವಸ್ತುವನ್ನು ಆಧರಿಸಿರಬಹುದೇ ಹೊರತು ಉಳಿದಂತೆ ಮಾರ್ಗದ ಭಾಷೆ-ಛಂದಸ್ಸು ತಂತ್ರಗಳೇನಾದರೂ ಎರವಲು ಪಡೆದಲ್ಲಿ ಅದು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ.

ಪಂಡಿತ ಕವಿಗಳು ದೇಶಿಯತೆಯನ್ನು ತಿರಸ್ಕರಿಸಿದರೂ ಪಂಪನಂಥ ಅಭಿಜಾತ ಕವಿಗಳು ದೇಶಿಯ ನೆರವಿಲ್ಲದೆ ಮಾರ್ಗಕ್ಕೆ ಪುಷ್ಠಿ ಸಿಗಲಾರದೆಂಬ ಸತ್ಯವನ್ನು ಅರ್ಥಮಾಡಿಕೊಂಡಿದ್ದರು. ಮಾರ್ಗದಲ್ಲಿ ದೇಶಿಯನ್ನು ದುಡಿಸಿಕೊಂಡು ಮಾರ್ಗ-ದೇಶಿಗಳೆರಡನ್ನು ಸಮನ್ವಯಗೊಳಿಸಿದರು. ಶಿವಕೋಟ್ಯಾಚಾರ್ಯ, ನಯಸೇನ, ಆಂಡಯ್ಯ ಮೊದಲಾದ ಕವಿಗಳು ದೇಶಿಯನ್ನು ಮಾರ್ಗದಲ್ಲಿ ಸಮ್ಮಿಲನಗೊಳಿಸುವುದರೊಂದಿಗೆ ಹಲವು ಉತ್ತಮ ಪ್ರಯತ್ನಗಳನ್ನು ಮಾಡಿದ್ದಾರೆ. ಮೂಲತಃ ದೇಶಿ ಪ್ರಕಾರಗಳಾದ ಚತ್ತಾಣ, ಬೆದಂಡೆ ಶಬ್ದಗಳನ್ನು 'ದೊಂಬಿಯ ತವಟಿಗಳ ಪಾಡುವ ತಿವದಿ' ಎಂದು ಉಪೇಕ್ಷೆಗೆ ಗುರಿಯಾಗಿದ್ದ ತ್ರಿಪದಿಯನ್ನು ಸರ್ವಜ್ಞ; 'ಸೂಳೆವಾಡು' ಎಂದು ತಿರಸ್ಕೃತವಾಗಿದ್ದ ಸಾಂಗತ್ಯವನ್ನು ರತ್ನಾಕರವರ್ಣಿ ವೈಭವೀಕರಿಸಿ ಮಾರ್ಗ ಮಟ್ಟಕ್ಕೇರಿಸಿದರು. ಆದರೂ ಸಹ ದೇಶಿಯ ಪೋಷಣೆ ನೀಡಿಯು ಮಾರ್ಗವನ್ನು ಉಪೇಕ್ಷಿಸಿರುವುದು ಮತ್ತು ಮಾರ್ಗವು ದೇಶಿಯಿಂದ ಪೋಷಣೆ ಪಡೆದು ಅದನ್ನು ತಿರಸ್ಕರಿಸುತ್ತಾ ಬಂದಿರುವುದು ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ನಡೆದುಕೊಂಡು ಬಂದಿದೆ.

ಯಾವುದೇ ನಾಗರಿಕ ಸಂಸ್ಕೃತಿಯಲ್ಲಿ ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯ ಎಂಬ ಎರಡು ಸಂಪ್ರದಾಯಗಳನ್ನು ಗುರುತಿಸಬಹುದು. ಈ ಎರಡು ಸಂಪ್ರದಾಯಗಳ ನಡುವೆ

ಜನಸಂಪ್ರದಾಯ ಜನಪ್ರಿಯ ಸಾಹಿತ್ಯವೆಂಬುದೊಂದು ಸಂಪ್ರದಾಯವೊಂದನ್ನು ವಿದ್ವಾಂಸರು ಗುರುತಿಸಿದ್ದಾರೆ. ಈ ಮೂರು ಸಂಪ್ರದಾಯಗಳ ಸ್ವರೂಪ ಹಾಗೂ ಪರಸ್ಪರ ಸಂಬಂಧಗಳಲ್ಲಿ ಗಮನಿಸಬಹುದು.

ಜನಪದ ಸಾಹಿತ್ಯ ಜನತೆಯ ಸಾಹಿತ್ಯ. ಇದು ಉದ್ದೇಶಪೂರ್ವಕವಾಗಿ ಸೃಷ್ಠಿಯಾದುದಲ್ಲ. ಅಂದಂದಿನ ದಂದುಗಕ್ಕೆ ಮೈಸೋತು ಮನಸೋತು ತಾನೇ ತಾನಾಗಿ ಸೃಷ್ಠಿಯಾದದ್ದು. ಬದುಕಿನೊಡನೆಯೇ ಬೆಸೆದುಕೊಂಡು ಬಂದದ್ದು. ಜನಪದರ ಪಾಲಿಗೆ ಸಾಹಿತ್ಯ ಸೃಷ್ಟಿ ಎನ್ನುವುದು ಅಧ್ಯಾಯ Byproduct ಅಷ್ಟೆ. ಬದುಕು ಅವರಿಗೆ ಪರಮ ಪ್ರಧಾನವಾಗಿತ್ತು. ಜನಪದ ಸಾಹಿತ್ಯವು ಪರಂಪರಾನುಗತವಾಗಿ ಬಾಯಿಂದ-ಬಾಯಿಗೆ, ಕಿವಿಯಿಂದ ಕಿವಿಗೆ ಹರಿದು ಬಂದ ಶಾಬ್ಧಿಕ ಅಭಿವ್ಯಕ್ತಿ. ಸರಳ, ಸುಂದರ, ಸ್ಪಷ್ಟ ಅಜ್ಞಾತ ಕರ್ತೃತ್ವ, ವ್ಯಷ್ಠಿಕೃತ ಸೃಷ್ಠಿಯಾದರೂ ಸಮಷ್ಠಿಯ ಸ್ವತ್ತಾಗಿ ಸಾಮೂಹಿಕ ಪುನರ್‌ಸೃಷ್ಠಿಗೆ ಒಳಗಾದದ್ದು. ವಾಹಕತ್ವ ಇದರ ಲಕ್ಷಣವಾಗಿದ್ದು ನಿರಂತರವಾಗಿ ಉಳಿದು ಬಂದು ವಾಕ್ ಸಂಪ್ರದಾಯವಾಗಿ ಪರಿಣಮಿಸಿದೆ.

ಜನಪದ ಸಾಹಿತ್ಯವು ಮುಖ್ಯವಾಗಿ ಮೌಖಿಕ ಪರಂಪರೆಯಲ್ಲಿ ಹರಿದು ಬಂದದ್ದು. ಇದಕ್ಕೆ ಕಾಲ ಹಾಗೂ ಕರ್ತೃವಿನ ನಿರ್ದಿಷ್ಟತೆ ಇರುವುದಿಲ್ಲ. ಬರವಣಿಗೆಗೆ ಕಟ್ಟುಬಿದ್ದದ್ದಲ್ಲ. ನಿರಂತರ ಬದಲಾವಣೆಯೇ ಇದರ ಪ್ರಮುಖ ಲಕ್ಷಣ. ಈ ಸಾಹಿತ್ಯ ಒಬ್ಬ ವ್ಯಕ್ತಿಯಿಂದ ಸೃಷ್ಟಿಯಾದ ಸಾಹಿತ್ಯವಾದರೂ ಒಬ್ಬ ವ್ಯಕ್ತಿಯ ಸ್ವಂತದ್ದಲ್ಲ. ಅದು ಒಂದು ಸಾಮೂಹಿಕ ಸಮುದಾಯದ ಸ್ವತ್ತಾಗುತ್ತದೆ. ಅದಕ್ಕೆ ಅನಾಮಧೇಯ ಸೃಷ್ಟಿ ಸಾಹಿತ್ಯ ಎಂದು ಕರೆಯುವುದು ಇದೇ ಅರ್ಥದಲ್ಲಿಯೇ. ಜನಪದ ಸಾಹಿತ್ಯದಲ್ಲಿ ವ್ಯಕ್ತಿನಿಷ್ಠತೆ ಹಾಗೂ ಸ್ವಂತಿಕೆಗೆ ಬೆಲೆಯಿಲ್ಲ. ಅಂದರೆ, ಅಲ್ಲಿ ಕವಿಯ ವೈಯಕ್ತಿಕ ನಿಲುವುಗಳಾಗಲಿ, ವ್ಯಕ್ತಿನಿಷ್ಠ ಮೌಲ್ಯಗಳಾಗಲಿ ಪ್ರಕಟವಾಗುವುದಿಲ್ಲ. ಅದಕ್ಕೆ ಬದಲಾಗಿ ಇಡೀ ಸಮಾಜದ ಮತ್ತು ಸಮುದಾಯದ ನಿಲುವು, ಮೌಲ್ಯಗಳು ಪ್ರತಿಬಿಂಬಿತವಾಗುತ್ತವೆ.

ಜನಪದ ಸಾಹಿತ್ಯದ ಸೃಷ್ಟಿಯಲ್ಲಿ ಎಲ್ಲರೂ ಅಂದರೆ ಗಂಡಸರು, ಹೆಂಗಸರು ಮಕ್ಕಳು ಹೀಗೆ ಎಲ್ಲರೂ ಭಾಗಿಯಾಗಬಹುದು. ಆಯಾ ವ್ಯಕ್ತಿಯ ವಯೋಮಾನ ಮತ್ತು ಹಿನ್ನೆಲೆಗೆ ಅನುಗುಣವಾಗಿ ಒಂದೇ ಪ್ರಕಾರವೂ ಬೇರೆ ಬೇರೆ ಬದಲಾವಣೆಗಳನ್ನು ಪಡೆದುಕೊಂಡು ಪ್ರತಿಯೊಂದು ನಿರೂಪಣೆಯು ಭಿನ್ನ ಎಂಬಂತೆ ಕಾಣುತ್ತದೆ. ಜನಪದ ಸಾಹಿತ್ಯ ಇಂಥ ಒಂದು ಜೀವಂತ ಪ್ರಕ್ರಿಯೆಯಾಗಿದೆ. ಅದು ಪ್ರತಿಭಾರಿಯು ಒಂದು ಹೊಸ ಹುಟ್ಟನ್ನು ಪಡೆಯುತ್ತದೆ. ಪರಂಪರಾನುಗತವಾಗಿ ನಿರ್ಮಿತವಾದ ಒಂದು ಸಿದ್ಧ ಚೌಕಟ್ಟು ಹಾಗೆಯೇ ಉಳಿಯುತ್ತದೆ. ಅದರೊಳಗೆ ಸಿಗುವ ವಿವರಗಳು ಮಾತ್ರ ಬದಲಾವಣೆಯಾಗುತ್ತವೆ. ಹೀಗಾಗಿ ಜನಪದ ಸಾಹಿತ್ಯ ಎಲ್ಲರದೂ ಹೌದು. ಹಾಗೆಯೇ ಯಾರದ್ದೂ ಅಲ್ಲ. ಇದು ನಮ್ಮದೇ ಎಂದು ಒಂದು ಕಥೆ ಅಥವಾ ಹಾಡಿನ ಮೂಲಕ ಹಕ್ಕು ಸ್ಥಾಪಿಸುವ ಅಂಶಕ್ಕೆ ಇಲ್ಲಿ ಅರ್ಥವೇ ಇಲ್ಲ. ಪರಂಪರೆಯ ಮುದ್ರೆ ಬಿದ್ದಷ್ಟೂ ಅದು ಜಾನಪದವೆನಿಸಿಕೊಳ್ಳಲು ಹೆಚ್ಚು ಅರ್ಹವಾಗುತ್ತದೆ. ಪರಂಪರೆಯೇ ಅದರ ಸ್ವರೂಪವನ್ನು ನಿರ್ಧರಿಸುತ್ತದೆ ಮತ್ತು ನಿಯಂತ್ರಿಸುತ್ತದೆ.

ಒಟ್ಟಿನಲ್ಲಿ ಜನಪದ ಸಾಹಿತ್ಯದ ಸ್ವರೂಪವನ್ನು ನಿರ್ಧರಿಸುವಲ್ಲಿ ಅದರ ಮೌಖಿಕತೆ, ಪಾರಂಪರಿಕತೆ ಮತ್ತು ಅನಾಮಧೇಯತೆಗಳು ಮುಖ್ಯ ಪಾತ್ರ ವಹಿಸುತ್ತವೆ. ಇದಕ್ಕೆ ಪ್ರತಿಯಾಗಿ ಶಿಷ್ಟ ಸಾಹಿತ್ಯ ಎನ್ನುವಂಥದ್ದು ಉದ್ದೇಶಪೂರ್ವಕವಾಗಿ ವ್ಯಕ್ತಿಯೊಬ್ಬನಿಂದ ರಚಿತವಾಗಿ ಬರವಣಿಗೆಯ ಮೂಲಕ ಉಳಿದು ಬರುವಂಥದ್ದು. ಕಾಲದ ಯಾವುದೇ ವ್ಯತ್ಯಾಸಕ್ಕೆ ಗುರಿಯಾಗುವುದಿಲ್ಲ. ಆಯಾಕಾಲದ ಸಾಮಾಜಿಕ ಪ್ರವೃತ್ತಿಗಳಿಗೆ ಮತ್ತು ಪರಿವರ್ತನೆಗಳಿಗೆ ಶಿಷ್ಟ ಸಾಹಿತ್ಯ ನಾಲಿಗೆ. ಇಲ್ಲಿ ಕರ್ತವ್ಯದ ಅಧಿಕಾರವಿದೆ. ಇತಿಹಾಸವನ್ನು ಕಲಾಪ ರೂಪಿಸಲು ಸಾಧ್ಯವಿದೆ. ಆದರೆ ಜನಪದ ಸಾಹಿತ್ಯವು ಅನಾಮಧೇಯ ಸೃಷ್ಟಿಯಾಗಿದ್ದು ವಾಚಿಕ ಸಂಪ್ರದಾಯದಲ್ಲಿ ಅನೇಕ ರೂಪಾಂತರಗಳಿಗೆ ಗುರಿಯಾಗುವುದರಿಂದ ಸಾಮಾಜಿಕ ಸ್ಥಿತ್ಯಂತರಗಳು ಪ್ರತಿಫಲಿಸುವುದರಿಂದ ಇತಿಹಾಸವನ್ನು ಹೇಳುವುದು ಕಷ್ಟವಾಗುತ್ತದೆ. ಶಿಷ್ಟ ಸಾಹಿತ್ಯದಲ್ಲಿ ವ್ಯಷ್ಟಿ ಅನಿಸಿಕೆಗಳೇ ಹೆಚ್ಚು ಪ್ರಾಧಾನ್ಯತೆಯನ್ನು ಪಡೆದುಕೊಂಡಿರುತ್ತದೆ.

**೩.೨. ಶಿಷ್ಟ ಕಥನಗೀತೆಗಳು**

ಜನಪದ ಮತ್ತು ಶಿಷ್ಟ ಸಾಹಿತ್ಯಗಳಿಗೆ ವ್ಯತ್ಯಾಸವಿರುವಂತೆ ಸಂಬಂಧವೂ ಕೂಡ ಇದೆ. ಶಿಷ್ಟ ಸಾಹಿತ್ಯಕ್ಕೆ ಮೂಲತಃ ಜನಪದ ಸಾಹಿತ್ಯವೇ ಅಡಿಪಾಯವಿದ್ದಂತೆ. ಅಂದರೆ ಶಿಷ್ಟ ಸಾಹಿತ್ಯಕ್ಕೆ ಜನಪದ ಸಾಹಿತ್ಯವೇ ಮೂಲ, ಪ್ರೇರಕ ಶಕ್ತಿ, ಜನವಾಣಿ ಬೇರು, ಕವಿವಾಣಿ ಹೂವು ಎಂದು ಬಿ.ಎಂ.ಶ್ರೀ ಹೇಳಿದ್ದು ಇದೇ ಅರ್ಥದಲ್ಲಿಯೇ. ಜನಪದ ಮತ್ತು ಶಿಷ್ಟ ಸಾಹಿತ್ಯಗಳೆರಡೂ ಪರಸ್ಪರ ಪೂರಕವಾದವುಗಳು.

ಶಿಷ್ಟ ಸಾಹಿತ್ಯವೆಂಬುದು ಲಿಖಿತ ರೂಪಕ್ಕೆ ಬದ್ಧವಾದಂತಹ ಒಂದು ಸಾಹಿತ್ಯ ಮತ್ತು ವ್ಯಕ್ತಿನಿಷ್ಠವಾದುದು. ಬರವಣಿಗೆಗೆ ಒಳಪಟ್ಟ ಕಾರಣದಿಂದ ಮತ್ತು ವ್ಯಕ್ತಿಯ ಸ್ವಂತದ್ದಾಗುವುದರಿಂದ ಅದರಲ್ಲಿ ಯಾವ ಬದಲಾವಣೆಯು ಸಾಧ್ಯವಿಲ್ಲ. ಶಿಷ್ಟ ಸಾಹಿತ್ಯದಲ್ಲಿ ಪ್ರತಿಯೊಂದು ಕೃತಿಯೂ ಆಯಾ ಕೃರ್ತವಿನ ಹೆಸರಿನಿಂದಲೇ ಗುರುತಿಸಲ್ಪಡುತ್ತದೆ. ಉದಾ:- ಪಂಪ ಭಾರತ, ಶ್ರೀರಾಮಾಯಣ ದರ್ಶನಂ, ಮಲೆಗಳಲ್ಲಿ ಮದುಮಗಳು. ಹೀಗೆ ಶಿಷ್ಟ ಸಾಹಿತ್ಯದ ರಚನೆ ಎಲ್ಲರಿಂದಲೂ ಸಾಧ್ಯವಾಗುವಂಥದಲ್ಲ. ಅದಕ್ಕೆ ಕೆಲವೊಂದು ತಾಲೀಮುಗಳು ಬೇಕಾಗುತ್ತದೆ. ಈ ತಾಲೀಮುಗಳನ್ನು ನಡೆಸಿದವರು ಮಾತ್ರ ಅದರ ರಚನೆಗೆ ಕೈ ಹಾಕಬಹುದು. ಶಿಷ್ಟ ಸಾಹಿತ್ಯ ಹಲವಾರು ಕಟ್ಟುಪಾಡುಗಳಿಗೆ ಬದ್ಧವಾಗಿರುತ್ತದೆ. ಇಲ್ಲಿ ಕವಿಯೇ ಬೇರೆ, ಸಹೃದಯನೇ ಬೇರೆ. ಕವಿಯ ರಚನೆಯ ಬಗ್ಗೆ ಸಹೃದಯ ಟೀಕಿಸಬಹುದು. ಆದರೆ ಅವನ ರಚನೆಯಲ್ಲಿ ಹಸ್ತಕ್ಷೇಪ ಮಾಡುವಂತಿಲ್ಲ.

ಶಿಷ್ಟ ಸಾಹಿತ್ಯವು ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ಜನಪದ ಸಾಹಿತ್ಯದಿಂದ ಸ್ಫೂರ್ತಿ ಮತ್ತು ಸತ್ವಗಳನ್ನು ಪಡೆಯುತ್ತಾ ಬಂದಿರುತ್ತದೆ. ಶಿಷ್ಟ ಲೇಖಕನು ಹಲವು ಬಾರಿ ಜಾನಪದೀಯ ವಸ್ತುವನ್ನು ಆಯ್ದುಕೊಂಡು ಶಿಷ್ಟ ಸಾಹಿತ್ಯದ ಕಟ್ಟುಪಾಡುಗಳಿಗೆ ಅನುಗುಣವಾಗಿ ಪುನರ್‌ರಚಿಸುವುದುಂಟು. ಇದನ್ನೇ ಪಂಪನು 'ದೇಸಿಯೊಳ್ ಪುಗುವುದು' ಎಂದು ಹೇಳಿದ್ದು. ಇಡೀ ಜನಪದ ಕಥೆಯೇ ಶಿಷ್ಟ ಕೃತಿಯಾಗಿ ಮೈದಾಳಿರುವುದಾಗಿ ಉಂಟು. ಉದಾಹರಣೆಗೆ ಸಾರಂಗಧರನ ಕಥೆಯು ನಂಜುಂಡ ಕುಮಾರರಾಮ ಸಾಂಗತ್ಯವಾಗಿ ಪರಿಣಮಿಸಿದೆ. ಇಲ್ಲಿ ವಸ್ತು ಸಂಪೂರ್ಣ ಜಾನಪದೀಯವೇ

ಆದರೂ ಈ ಕೃತಿಗಳನ್ನು ಆಯಾ ಕವಿಯ ಹೆಸರಿನಿಂದ ಗುರುತಿಸುತ್ತೇವೆಯೋ ಹೊರತು ಜಾನಪದ ಎಂದಲ್ಲ.

ಹಳೆಗನ್ನಡ ಸಾಹಿತ್ಯದಲ್ಲಿ ದೇಸಿ-ಮಾರ್ಗಗಳೆರಡನ್ನು ಸಮನ್ವಯಗೊಳಿಸಿರುವವರಲ್ಲಿ ಮುಖ್ಯರಾದವರು ವಡ್ಡಾರಾಧನೆಕಾರ, ಭ್ರಾಜಿಷ್ಣು, ನಯಸೇನ, ರತ್ನಾಕರ ವರ್ಣಿಯವರಂತಹ ಬೆರಳೆಣಿಕೆಯ ಕವಿಗಳನ್ನು ಬಿಟ್ಟರೆ ಉಳಿದ ಕವಿಗಳೆಲ್ಲರೂ ಮಾರ್ಗ ಮುಖಿಗಳಾದವರೆ. ಪಂಪನೂ ಸಹ ಮಾರ್ಗ-ದೇಸಿಗಳೆರಡರ ಸಮನ್ವಯವನ್ನು ಸಾಧಿಸಿದ ಆದಿಕವಿ ಎಂದು ಹೆಸರಾದರೂ 'ದೇಸಿಯೊಳ್ಪುಗುವುದು ಪೊಕ್ಕು ಮಾರ್ಗದೊಳೆ ತಳ್ಪುದು' ಎಂದು ಅಭಿಪ್ರಾಯಪಟ್ಟವನು.

ಸಾಂಗತ್ಯ ಕವಿ ಎಂದೇ ಹೆಸರಾದ ನಂಜುಂಡ ಕವಿಯ ಕುಮಾರರಾಮ ಸಾಂಗತ್ಯವೂ ಸಹ ಜಾನಪದೀಯ ದೃಷ್ಟಿಯಿಂದ ತಪ್ಪದೇ ಪರಿಶೀಲಿಸಬೇಕಾದ ಕಾವ್ಯ. ಕನ್ನಡ ನಾಡಿನ ಸಾಂಸ್ಕೃತಿಕ ವೀರನೆಸಿಸಿಕೊಂಡಿರುವ ಕುಮಾರರಾಮನ ಪೌರುಷ ಕನ್ನಡ ನಾಡಿನ ಜನಪದರ ಮನೆ ಮಾತಾಗಿವೆ. ಕುಮಾರರಾಮನನ್ನು ಕುರಿತಾದ ಗೀತೆ, ಕತೆ, ಲಾವಣಿಗಳು ಪ್ರಚುರದಲ್ಲಿವೆ. ನಾಡ ಮೇಲಲ್ಲ ಚದುರಿ ಹೋಗಿದ್ದ ಕುಮಾರರಾಮನ ಕಥಾನಕಗಳನ್ನು ಒಗ್ಗೂಡಿಸಿ ಸಮಗ್ರ ಶಿಷ್ಟ ಕಾವ್ಯವೊಂದನ್ನು ರಚಿಸಿದ ಶ್ರೇಯಸ್ಸು ನಂಜುಂಡ ಕವಿಯದು. ಈ ಕೃತಿಯಲ್ಲಿ ಕಂಡು ಬರುವ ಐತಿಹ್ಯಗಳನ್ನು ಕಂದುಕ ಕ್ರೀಡೆ ಶೂಲದ ಹಬ್ಬ ಇತ್ಯಾದಿಗಳು ಜನಪದ ಸಂಸ್ಕೃತಿಯನ್ನು ನೆನಪಿಗೆ ತರುತ್ತವೆ. ಹೀಗೆ ಹಳಗನ್ನಡ ಕವಿಗಳಲ್ಲಿ ನಂಜುಂಡ ಕವಿಯಂಥವರ ಮನೋಧರ್ಮವು ಜನಸಮ್ಮುಖವಾದುದಾಗಿದ್ದು ಜನಪದ ಸಾಹಿತ್ಯದ ಸಾರವನ್ನು ಹೀರಿ ಬೆಳೆದವರಾಗಿದ್ದರು. ಜಾನಪದೀಯ ಆಶಯಗಳನ್ನು ತಮ್ಮ ಕೃತಿಗಳಲ್ಲಿ ಸುಂದರವಾಗಿ ಸಮನ್ವಯಗೊಳಿಸಿದ ಕೀರ್ತಿ ಇವರದು.

ನಡುಗನ್ನಡ ಕಾಲವು ಪಂಡಿತ ಪ್ರಿಯವು. ಸಂಸ್ಕೃತಿ ಭೂಯಿಷ್ಟವೂ ಆದ ಚಂಪೂ ರೂಪವನ್ನು ಬದಗಿರಿಸಿ ದೇಶೀ ಮಟ್ಟುಗಳಾದ ವಚನ, ರಗಳೆ, ಷಟ್ಪದಿ ಸಾಂಗತ್ಯ ಮೊದಲಾದವುಗಳನ್ನು ಮುಡಿಗೇರಿಸಿಕೊಂಡ ಕಾಲ. ಚಂಪೂವಿನ ಚಕ್ರಬಂಧನದಲ್ಲಿ ಸಿಲುಕಿದ್ದ ಕನ್ನಡ ಕಾವ್ಯತ್ವವನ್ನು ಬಿಡಿಸಿ ಅದು ಜನಸಾಮಾನ್ಯರಿಗೂ ಎಟುಕುವಂತೆ ಮಾಡಿದವರು ಮಧ್ಯಕಾಲೀನ ಕನ್ನಡ ಕವಿಗಳು. ಹನ್ನೆರಡನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ವಚನ ರೂಪವನ್ನು ಕೊಡುಗೆಯಾಗಿ ನೀಡಿದ ಶಿವಶರಣರು ಜಾನಪದ ಸಂಸ್ಕೃತಿಯಿಂದಲೇ ಉದಿಸಿ ಬಂದವರು. ಕೆಳವರ್ಗಕ್ಕೆ ಸೇರಿದ ಕಂಬಾರ, ಕುಂಬಾರ, ನೇಕಾರ, ಬೇಡ, ಬಡಿಗ, ಪತ್ತಾರ, ಮಡಿವಾಳ, ಮೇದಾರ, ಡೋಹರ, ಚಂಪಿಗೆ ಮೊದಲಾದ ವೃತ್ತಿ ಸಮುದಾಯಗಳಿಂದ ಬಂದ ವಚನಕಾರರು ತಮ್ಮ ಸಂಸ್ಕೃತಿ ಪರಂಪರೆಗಳನ್ನು ತಮ್ಮ ಅಭಿವ್ಯಕ್ತಿಯಾದ ವಚನಗಳಲ್ಲಿ ಕಂಡರಿಸಿದ್ದಾರೆ. ವಚನಕಾರರು ಗ್ರಾಮೀಣ ಬದುಕಿನಿಂದ ಹೊರಹೊಮ್ಮಿದವರಾದುದರಿಂದ ಅವರ ಆಚಾರ-ವಿಚಾರ, ರೀತಿ-ರಿವಾಜು, ಹಬ್ಬ-ಹರಿದಿನ, ಕುಣಿತ-ಮೆರೆತ, ಹಾಡುಪಾಡು, ಆಟೋಟ, ಧರ್ಮ-ನಂಬಿಕೆ, ದೇವರು-ದಿಂಡರು, ಗಾದೆ-ಒಗಟು, ಒಡಪು ಮೊದಲಾದವುಗಳೆಲ್ಲವೂ ವಚನಕ್ಕೆ ವಸ್ತುವಾದವು. ಬಹುರೂಪಿ ಚೌಡಯ್ಯ, ನಗೆಯ ಮಾರಿ ತಂದೆ, ಢಕ್ಕೆಯ ಬೊಮ್ಮಣ್ಣ, ಕಲಕೇತ ಬೊಮ್ಮಯ್ಯ ಮೊದಲಾದವರು ತಮ್ಮ ಜನಪದ ಕಲೆಗಳನ್ನೇ

ಬದುಕಿ ವಚನಗಳಲ್ಲಿ ಪಡಿಮೂಡಿಸಿದರು. ವಚನಕಾರರ ಅನುಭವ ಮತ್ತು ಅಭಿವ್ಯಕ್ತಿಗಳೆರಡೂ ಒಂದೇ ಆಗಿದ್ದು, ಜಾನಪದದ ದಟ್ಟ ಪ್ರಭಾವವು ವಚನಕಾರರ ಮೇಲಾಗಿದೆ.

ವಚನ ಸಾಹಿತ್ಯವು ತನ್ನ ಕಾಲದ ಎಲ್ಲಾ ಜಾನಪದೀಯ ಅಂಶಗಳನ್ನೂ ಅಭಿವ್ಯಕ್ತಿಸಿದೆ. ಬಸವಣ್ಣನವರಿಂದ ಮೊದಲುಗೊಂಡು ಡೋಹರ ಕಕ್ಕಯ್ಯನವರೆಗೆ, ಅಕ್ಕಮಹಾದೇವಿಯಿಂದ ಆರಂಭಿಸಿ ಸೂಳೆ ಸುಂಕವ್ವೆಯವರೆಗೆ ಆಗಿ ಹೋದ ವಚನಕಾರರು, ವಚನಕಾರ್ತಿಯರೆಲ್ಲರೂ ತಮ್ಮ ಕಾಲದಲ್ಲಿ ಪ್ರಚಲಿತದಲ್ಲಿದ್ದ ಹಲವಾರು ಜಾನಪದೀಯ ಅಂಶಗಳನ್ನು ತಮ್ಮ ವಚನಗಳಲ್ಲಿ ಹೆಸರಿಸಿದ್ದಾರೆ, ಉಲ್ಲೇಖಿಸಿದ್ದಾರೆ. ನಂಬಿಕೆ-ಸಂಪ್ರದಾಯ- ಆಚರಣೆ, ಕನಸು-ಶಕುನ-ತಂತ್ರ-ಮಂತ್ರ ಜನಪದ ವೈದ್ಯ ಗ್ರಾಮೀಣ ಕಸುಬು ಉಡುಗೆ-ತೊಡುಗೆ ಊಟೋಪಚಾರಗಳಂತಹ ಸಾಮಾಜಿಕ ಅಂಶಗಳು. ದೈವದ ಜೊತೆಗೆ ಬಾದುಬ್ಬೆ ಪೂಜೆ, ಬೆನಕನ ಪೂಜೆ, ಪ್ರಕೃತಿ ಪೂಜೆ ಪ್ರಾಣಿ ಪೂಜೆಗಳಂತಹವು. ಜಾತ್ರೆ, ಉತ್ಸವ, ಹಬ್ಬ-ಹರಿದಿನಗಳಂತಹ ಧಾರ್ಮಿಕ ಅಂಶಗಳು. ಜನಪದ ಕಲೆಗಳನ್ನೇ ಆಧರಿಸಿ ಬದುಕಿದ ಶಿವಶರಣರು, ಜನಪದ ವಾದ್ಯಗಳು, ಜನಪದ ವಿವಿಧ ವಿನೋದಾವಳಿಗಳು, ಕೋತಿ ಕುಣಿತ, ಕರಡಿ ಕುಣಿತ, ಕೋಲೆ ಬಸವನಾಟ, ದೊಂಬರಾಟ, ವೇಷಗಾರಿಕೆ, ಗೊಂಬೆಯಾಟ, ಸಿಡಿಯಾಟ, ಪಗರಣ, ಹಾವಾಡಿಗರಾಟ, ಕುಸ್ತಿ ಇವೆಲ್ಲವುಗಳ ಬಗ್ಗೆ ವಚನಗಳು ಮಾತನಾಡುತ್ತವೆ. ಭಾಷಿಕಕ್ಕೆ ಸಂಬಂಧಿಸಿದಂತೆ ಬೈಗುಳ ಪದಗಳು, ಜೋಡುನುಡಿಗಳು, ಪಡೆನುಡಿಗಳು, ನಾಣ್ಣುಡಿಗಳು, ಗಾದೆಗಳು ಸಮೃದ್ಧವಾಗಿ ಬಳಕೆಯಾಗಿವೆ.

ಶಿವಶರಣರು ಅಕ್ಕನಂಥ ಒಬ್ಬ ವಚನಕಾರ್ತಿಯನ್ನು ಸೃಷ್ಟಿಸಿದ್ದಕ್ಕಿಂತ ನೀಲವ್ವ ಗೊಗ್ಗವ್ವೆ ಸೂಳೆಸುಂಕವ್ವರಂಥ ಕೆಳವರ್ಗದ ಹೆಣ್ಣುಮಕ್ಕಳ ಬಾಯಿಬೀಗ ತೆರೆದದ್ದು ಮಹತ್ವದ್ದಾಗಿ ತೋರುತ್ತದೆ. ಅಕ್ಕನ ಭಕ್ತಿಭಾವ ತೀವ್ರತೆ ಹಾಗೂ ಅದನ್ನು ವ್ಯಕ್ತಪಡಿಸಿರುವ ಅನನ್ಯ ವಿಧಾನ ಇಂದಿಗೂ ಅದ್ವಿತೀಯವಾಗಿಯೇ ಉಳಿದಿದೆ. ಅಕ್ಕನನ್ನು ಮೀರಿಸುವಂಥ ಕವಯತ್ರಿ ಕನ್ನಡದಲ್ಲಿ ಇನ್ನೂ ಬರಬೇಕಾಗಿದೆ. ಆದರೆ ಅಕ್ಕನ ಭಾವ ತೀವ್ರತೆ ಹದಿಬದೆಯ ಧರ್ಮದ ಭಾವ ತೀವ್ರತೆಗಿಂತ ಹೆಚ್ಚು ಭಿನ್ನವಾದುದಲ್ಲ. ಲೌಕಿಕ ಗಂಡನೊಂದಿಗೆ ದೈವತ್ವವನ್ನು ಕಾಣಲಾಗದ ಅಕ್ಕ ಅದನ್ನು ಅಲೌಕಿಕ ಗಂಡನಲ್ಲಿ ಕಾಣಲು ಹವಣಿಸುತ್ತಾಳೆ. ಹೊನ್ನಮ್ಮ ಅದನ್ನು ಇಲ್ಲಿಯೇ ಆಚರಿಸಲು ಸೂಚಿಸುತ್ತಾಳೆ. ಲೌಕಿಕ ಗಂಡನನ್ನು ನಿರಾಕರಿಸುವ ಅಕ್ಕ ಚನ್ನಮಲ್ಲಿಕಾರ್ಜುನನ್ನು ಕುರಿತು

'ಅಯ್ಯ, ನೀ ಕೇಳಿದರೆ ಕೇಳು, ಕೆಳದಿದ್ದರೆ ಮಾಣು
ನಾನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ!
ಅಯ್ಯ, ನೀನೊಲಿದರೆ ಒಲಿ, ಒಲಿಯದಿದ್ದರೆ ಮಾಣು
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರನೆಯ್ಯ!
ಅಯ್ಯ ನೀ ಮೆಚ್ಚಿದರೆ ಮೆಚ್ಚು ಮೆಚ್ಚದಿದ್ದರೆ ಮಾಣು
ನಾ ನಿನ್ನ ನೋಡಿ, ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ

ಚನ್ನಮಲ್ಲಿಕಾರ್ಜುನಯ್ಯ ನಾ ನಿಮ್ಮ ಪೂಜಿಸಿ
ಹರುಷದಲೋಲಾಡುವೆನಯ್ಯ

ಈ ವಚನದಲ್ಲಿಯೂ ಸಹ ಅಲೌಕಿಕ ಪತಿಯನ್ನು ಪಡೆಯಲು ಜನಪದೀಯ ಅಂಶಗಳಾದ ಆರಾಧನೆ, ಪೂಜೆ, ಪುರಾಸ್ಕರದ ಮೂಲಕ ಪಡೆಯಲು ಅವಣಿಸುವಂತಹ ಅಂಶಗಳನ್ನು ಕಾಣಬಹುದಾಗಿದೆ. ಅಕ್ಕಮ್ಮ ಗಂಡ ಹೇಗಿದ್ದರೂ, ಎಂತಿದ್ದರೂ ದೇವರೆ ಎಂಬಂಥ ನಂಬಿಕೆಗೂ ಭಾವ ಸ್ವರೂಪದಲ್ಲಿ ವ್ಯತ್ಯಾಸವಾಗುವುದಿಲ್ಲ. ಹಾಗೆಯೇ ಈ ಶಿಷ್ಟ ಸಾಹಿತ್ಯದಲ್ಲಿ ಜಾನಪದೀಯ ಅಂಶಗಳನ್ನು ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ರಚಿಸಿದಂತಹ ವಚನಗಳಲ್ಲಿ ಹೆಚ್ಚಿನದಾಗಿ ನೋಡಬಹುದಾಗಿದೆ.

ಅಕ್ಕಮಹಾದೇವಿ ಕೈಹಿಡಿದ ಗಂಡನನ್ನು ನಿವಾರಿಸಿಕೊಳ್ಳುವ ದಿಟ್ಟತನಕ್ಕೆ ಕೈ ಹಚ್ಚಿದ್ದು ಕೌಶಿಕ ಜೈನನಾದದ್ದರಿಂದ ಇರಬೇಕು. ಸ್ವಭಾವತಃ ಭಾವುಕಳಾಗಿದ್ದ ಅಕ್ಕನಿಗೆ ಗಂಡಸಂಗೆ ಹೇಸಿಗೆ ತಂದದ್ದು ಆತನ ನಡವಳಿಕೆಯ ಸಣ್ಣತನ ಎನ್ನುವುದಕ್ಕಿಂತ ಜಾತಿಯ ಕಟ್ಟುಪಾಡೇ ಹೆಚ್ಚು ಕಾರಣವಾಗಿರಬೇಕು. ಕ್ಷಣಕ್ಷಣಕ್ಕೂ ಚುಚ್ಚುತ್ತಿದ್ದ 'ಭವಿ' ಎಂಬ ಭಾವ ವ್ರತಹೀನ ಭವಿಯೊಡಿನೆ ಬದುಕಲು ಅವಳ ಮನಸ್ಸು ನಿರಂತರವಾಗಿ ಪ್ರತಿಭಟಿಸಿರಬೇಕು. ಅಕ್ಕನನ್ನು ಕುರಿತ ಮೊದಲ ಕೃತಿ ಹರಿಹರನ ಉಡುತಡಿಯ ಅಕ್ಕಮಹಾದೇವಿಯ ರಗಳೆಯಲ್ಲಿ ಕೌಶಿಕ ಅಕ್ಕನನ್ನು ಉದಾರವಾಗಿ ನಡೆಸಿಕೊಂಡಂತೆ ಚಿತ್ರಿಸಲಾಗಿದೆ. ಕೌಶಿಕ ವೀರಶೈವನಾಗಿದ್ದರೆ ಅಥವಾ ವೀರಶೈವನಾಗಲು ಒಪ್ಪಿದ್ದರೆ ಈಗಿನ ಅಕ್ಕಮಹಾದೇವಿ ನಮಗೆ ದೊರಕುತ್ತಿದ್ದಳೋ ಇಲ್ಲವೋ ಹೇಳಲಾಗುವುದಿಲ್ಲ. ಈ ಅರ್ಥದಲ್ಲಿ ಕೌಶಿಕನೇ ಅಕ್ಕನ ಪಾತ್ರ ರಚನೆಯ ರೂವಾರಿ ಎಂದು ಹೇಳಲು ಅನುಮಾನ ಪಡಬೇಕಾಗಿಲ್ಲ.

ಅಕ್ಕನ ಅಲೌಕಿಕ ಜೀವನ ಪ್ರೀತಿ ಉತ್ಕಟವಾದುದು. ಕೌಶಿಕನಿಂದ ಹೊರಬಂದ ನಂತರವೇ ಅಕ್ಕ ಈ ಲೋಕದ ಸಾವ ಕೆಡುವ ಗಂಡರನ್ನು ನಿರಾಕರಿಸುತ್ತ ಲೌಕಿಕ ಜೀವನದ ಪ್ರೀತಿಯನ್ನು ಅಲೌಕಿಕ ಜೀವನ ಪ್ರೀತಿಯಾಗಿ ಪರಿವರ್ತಿಸಿಕೊಂಡಳು. ಅಕ್ಕನ ಛಲ, ಗಟ್ಟಿತನ, ನಿಷ್ಠೆ ಅದ್ಭುತವಾದವು. ಪತಿಯನ್ನು ನಿರಾಕರಿಸಿ ಬಂದ ಅಕ್ಕ ಅಲೌಕಿಕ ಬದುಕಿಗೆ ಅರ್ಪಿಸಿಕೊಳ್ಳದೇ ಸ್ತ್ರೀಯರ ಸಮಸ್ಯೆಗಳಿಗೆ ಸ್ಪಂದಿಸಿದ್ದ ಪಕ್ಷದಲ್ಲಿ ಕನ್ನಡ ನಾಡಿಗಿರಲಿ ಜಗತ್ತಿಗೇ ಮೊದಲ ಸ್ತ್ರೀವಾದಿಯಾಗಿರುತ್ತಿದ್ದಳು. ಕನ್ನಡ ನಾಡಿನ ಮಹಿಳೆಯರ ಬದುಕು ಈಗಿನದಕ್ಕಿಂತ ಭಿನ್ನವಾಗಿರುತ್ತಿತ್ತು ಎಂಬುದರಲ್ಲಿ ಅನುಮಾನವಿಲ್ಲ. ವಚನ ಚಳುವಳಿಯ ಐತಿಹಾಸಿಕ ಸಂದರ್ಭವೂ ಅವಳಿಗೆ ಪ್ರೋತ್ಸಾಹದಾಯಕ ವಾತಾವರಣವನ್ನು ಒದಗಿಸುತ್ತಿತ್ತೇನೋ. ಆದರೆ ಅಕ್ಕ ಕಣ್ಣು ಕಟ್ಟಿದ ಕುದುರೆಯಂತೆ ಏಕಮುಖವಾದ ಸಾಧನೆಯಲ್ಲಿ ತೊಡಗಿ ವಾಸ್ತವ ಬದುಕಿನಿಂದ ಪಲಾಯನವಾದಿಯಾದಳು. ಹೀಗೆ ಹೇಳುವಾಗ ಅಕ್ಕನ ಸಾಧನೆಯನ್ನು ನಾನು ನಿರ್ಲಕ್ಷಿಸುತ್ತಿಲ್ಲ. ಬದಲಿಗೆ ಆಕೆಗಿದ್ದ ಅಪಾರ ಶಕ್ತಿಯ ಸಾಧ್ಯತೆಯ ಇನ್ನೊಂದು ಮುಖವನ್ನು ಪ್ರಸ್ತಾಪಿಸುತ್ತಿದ್ದೇವೆ ಅಷ್ಟೆ. ಹೀಗೆ ಅಕ್ಕಮಹಾದೇವಿಯು ೧೨ನೇ ಶತಮಾನದಲ್ಲಿ ರಚಿಸಿದ ವಚನಗಳಲ್ಲಿಯೂ ಸಹ ಜಾನಪದೀಯ ಅಂಶಗಳು ಸಾಕಷ್ಟಾಗಿ ಕಣ್ಣಿಗೆ ಕಟ್ಟುವ ನಿಟ್ಟಿನಲ್ಲಿ ಅವರ ವಚನಗಳಲ್ಲಿ ಪ್ರತಿಬಿಂಬಿತವಾಗಿದ್ದಾವೆ.

ವಚನಕಾರರ ನಂತರ ಬಂದ ಕೀರ್ತನಕಾರರೂ ಸಹ ಜನಸಾಮಾನ್ಯರ ನುಡಿಗಟ್ಟುಗಳನ್ನು, ಭಾಷಿಕ ಲಯವನ್ನು, ಸಾಮಾಜಿಕ ಆಚರಣೆಗಳನ್ನು, ನಂಬಿಕೆ ನಡವಳಿಕೆಗಳನ್ನು ತಮ್ಮ ಕೀರ್ತನೆಗಳ ಒಳಕ್ಕೆ ತೆಗೆದುಕೊಂಡರು. ಜನಸಾಮಾನ್ಯರ ಸಂಗೀತ ಲಯಗಳನ್ನು ಬಳಸಿಕೊಂಡರು. ಕನಕದಾಸರ ಕೀರ್ತನೆಗಳು ಉದಾಹರಣೆಗೆ 'ಎಲ್ಲರೂ ಮಾಡುವುದು ಹೊಟ್ಟೆಗಾಗಿ' ಕೀರ್ತನೆಯು ಗ್ರಾಮೀಣ ಪ್ರದೇಶದಲ್ಲಿ ರೂಢಿಯಿದ್ದ ಜನಪದ ಆಯಗಾರರ ವೃತ್ತಿಗಳನ್ನು ಚಿತ್ರಿಸಿದರೆ, 'ದಶಾವತಾರ'ದ ಅವಸ್ಥೆಗಳನ್ನು ಚಿತ್ರಿಸುವ ಕೀರ್ತನೆಯಂತೂ ಡೊಳ್ಳಿನ ಪದದ ಲಯವನ್ನೇ ಹೊಂದಿದೆ. ಕನಕದಾಸರ 'ಮೋಹನ ತರಂಗಿಣಿ', ಹರಿ-ಹರರಲ್ಲಿ ಭೇದ ಮಾಡದೆ ಇಬ್ಬರೂ ಒಂದೇ ಎಂಬುದನ್ನು ಒತ್ತಿ ಹೇಳುವ ಗ್ರಂಥ ಜನಪದ ಛಂದಸ್ಸಾದ ಸಾಂಗತ್ಯದಲ್ಲಿ ಅತಿ ದೀರ್ಘವಾಗಿ ಕೃಷ್ಣನ ಮಹಿಮೆ ಪರಾಕ್ರಮಗಳನ್ನು ಹೇಳುತ್ತಲೇ ಜನಪದ ಕಥೆಯ ಲಕ್ಷಣಗಳನ್ನು ಕವಿ ಅಲ್ಲಲ್ಲೇ ಅಳವಡಿಸಿಕೊಂಡಿದ್ದಾನೆ. ಒಟ್ಟು ಕಾವ್ಯವೇ ಜನಪದ ಕತೆಗಳ ತಂತ್ರಗಾರಿಕೆಯಲ್ಲಿ ರಚನೆಯಾಗಿದೆ. ಕಾವ್ಯದ ವಸ್ತು ಅದ್ಭುತ, ರಮ್ಯ ಜನಪದ ಕತೆಗಳ ರೂಪದಲ್ಲಿದೆ. ಲಯ ಜನಪದ ಸಾಂಗತ್ಯದ್ದು ಆಶಯ ಜನಪದ ಕತೆಗಳದ್ದು. ಇಡೀ ಕಾವ್ಯದ ಬಂಧವೇ ಇಂಥದ್ದಾಗಿದ್ದರೆ ಕಾವ್ಯದ ಒಳಗಡೆ ಬಿಡಿ ಬಿಡಿಯಾದ ವಿವರಗಳಲ್ಲಿ ಜನಪದ ಸಂಪ್ರದಾಯಗಳನ್ನು ಸ್ವೀಕರಿಸಿರುವುದನ್ನು ಕಾಣುತ್ತೇವೆ. ರತಿ ಕಾಮರ ಮದುವೆ ಸಂದರ್ಭ, ಮನೆ ತುಂಬಿಸಿಕೊಳ್ಳುವುದು, ಆರತಿ ಬೆಳಗುವುದು, ರನ್ನದ ಬಾಸಿಂಗವನ್ನು ಸೂಡುವುದು, ಸೋಬಾನೆ ಹಾಡುವುದು, ಕಲ್ಯಾಣಮಂಟಪಕ್ಕೆ ಕರೆದೊಯ್ಯುವುದು, ಅನಿರುದ್ಧ ಹುಟ್ಟಿದಾಗ ಮದಗಂಧಿಯರು ಗೋಮಯದಿಂದ ಮಗುವಿನ ದೇಹವನ್ನು ತೊಳೆಯುವುದು, ಬೆಳ್ಳಿಯ ಹಿಡಿಕೆಯ ಕತ್ತಿಯನ್ನು ತಂದು ಹೊಕ್ಕಳ ಹುರಿ ಕೊಯ್ಯುವುದು, ತಾಯಿಗೆ ಬೇವಿನ ರಸವನ್ನು ಕುಡಿಸುವುದು ಮುಂತಾದ ಸಾಮಾನ್ಯ ಜನಜೀವನದ ಸಾಂಸ್ಕೃತಿಕ ವಿವರಗಳನ್ನು ಕೊಡುವುದರ ಮೂಲಕ ಕನಕದಾಸರು ಸಮೂಹ ಪ್ರಜ್ಞೆಯ ಆಶಯಗಳನ್ನು ತಮ್ಮ ಕಾವ್ಯದಲ್ಲಿ ಬಳಸಿಕೊಂಡಿದ್ದಾರೆ. 'ಮೋಹನ ತರಂಗಿಣಿ' ಯುದ್ಧ ವಿಷಯಕ್ಕೆ ಜನಪದ ಸಾಹಿತ್ಯ ಸಂಸ್ಕೃತಿ ವಿಷಯಗಳಿಗೆ ಒಂದು ಪ್ರಮುಖವಾದ ಕೋಶವಾಗಿದೆ(ರಂಗಾರೆಡ್ಡಿ).

ವಸಾಹತುಶಾಹಿಗೆ ಒಳಪಟ್ಟಿದ್ದ ಭಾರತವು ಬಿಡುಗಡೆಯ ಹಾದಿಯಲ್ಲಿತ್ತು. ಸ್ವಾತಂತ್ರ್ಯಪ್ರೇಮ, ರಾಷ್ಟ್ರೀಯ ಪ್ರಜ್ಞೆಗಳು ತಲೆದೋರಿದ್ದವು. ಸ್ವಾತಂತ್ರ್ಯ ಚಳುವಳಿ ಬಿರುಸು ಪಡೆದುಕೊಳ್ಳುತ್ತಿತ್ತು. ರಾಜಕೀಯ ಪ್ರಜ್ಞೆ ಸ್ವಾತಂತ್ರ್ಯಪ್ರೇಮ, ಕನ್ನಡದ ನೆಲ, ಕನ್ನಡ ಮಾತು, ನಾಡ ಪ್ರೇಮ ಎಲ್ಲವೂ ಭಾವೋದ್ರೇಕದ ಹಂತವನ್ನು ತಲುಪಿದ್ದವು. ಇಂತಹ ಸಂದರ್ಭದಲ್ಲಿ ಕನ್ನಡ ಬರಹಗಾರರು ವಿದೇಶಿ ಪ್ರಭುತ್ವದ ವಿರುದ್ಧ ನೆಲದ ಸಂಸ್ಕೃತಿಯನ್ನು ಗಟ್ಟಿಗೊಳಿಸುವ ಸಲುವಾಗಿ ಶೋಧನೆ ನಡೆಸಲಾರಂಭಿಸಿದರು. ತಮ್ಮ ಬರವಣಿಗೆಯು ಸತ್ವಯುತವಾಗಬೇಕಾದರೆ ಜನಪದ ಸಾಹಿತ್ಯ ಸಂಸ್ಕೃತಿಗಳನ್ನು ಮೈಗೂಡಿಸಿಕೊಳ್ಳುವುದರಿಂದ ಮಾತ್ರ ಎಂಬುದನ್ನು ಅರಿತರು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನವೋದಯ ಸಾಹಿತ್ಯವು ಆರಂಭವಾದಾಗ ಅದರ ಗುರಿ ರಾಷ್ಟ್ರೀಯ ಆಂದೋಲನವಾಗಿದ್ದಿತೆಂಬುದು ನಿಜವಾದರೂ, ನೆಲದ ಸಂಸ್ಕೃತಿಯ ತಿಳಿವಳಿಕೆ ಇಲ್ಲದೆ

ಇದು ಸಾಧ್ಯವಿಲ್ಲವೆಂಬ ಪ್ರಜ್ಞೆಯು ಅವರಿಗಿದ್ದಿತು. ಅದೇ ಕಾಲಕ್ಕೆ ಕನ್ನಡ ಜನಪದ ಸಾಹಿತ್ಯ ಸಂಗ್ರಹ, ಸಂಪಾದನೆಯ ಕೆಲಸವು ಆರಂಭವಾಗಿತ್ತು. ೧೯೩೧ರಲ್ಲಿ ಹಲಸಂಗಿ ಗೆಳೆಯರು ಸಂಗ್ರಹಿಸಿದ 'ಗರತಿಯ ಹಾಡು' ಗೀತ ಸಂಕಲನವು ಹೊರಬಂದಿತು. ಈ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಬಿ.ಎಂ.ಶ್ರೀಯವರು 'ಜನವಾಣಿ ಬೇರು; ಕವಿವಾಣಿ ಹೂವು' ಎಂದು ಸಾರಿದರು. ಜನಪದ ಸಾಹಿತ್ಯದ ಸೊಗಡು, ಸೊಬಗು, ಸತ್ವಗಳನ್ನು ಬೇಂದ್ರೆ, ಮಾಸ್ತಿ, ಬೆಟಗೇರಿ ಕೃಷ್ಣಶರ್ಮ, ದೇವುಡು, ತೀ.ನಂ.ಶ್ರೀ., ಶಿವರಾಮ ಕಾರಂತ ಮೊದಲಾದ ಪ್ರಮುಖ ಲೇಖಕರು ಪ್ರತಿಪಾದಿಸಲಾರಂಭಿಸಿದರು. ಆಗ ಬರಹಗಾರರು ಸಹಜವಾಗಿ ನೆಲದ ಬದುಕು, ಭಾಷೆ ಸಂಸ್ಕೃತಿಯೆಡೆಗೆ ಆಕರ್ಷಿತರಾದರು.

ನವೋದಯ ಸಾಹಿತ್ಯದ ಬರಹಗಾರರರು ಬಾಹ್ಯ ರೂಪಕ್ಕೆ ಸಂಬಂಧಿಸಿದ ಜಾನಪದೀಯ ಛಂದಸ್ಸಿಗಿಂತ ಹೆಚ್ಚಾಗಿ ತಮ್ಮ ಬರವಣಿಗೆಯ ಅಂತರ್ಯದಲ್ಲಿ ಜಾನಪದ ಮನೋಧರ್ಮವನ್ನು ಅಳವಡಿಸಿಕೊಂಡರು. ಭಾಷೆ, ಲಯ, ಛಂದಸ್ಸು, ಮನೋಧರ್ಮ ಇವುಗಳು ನೆಲದ ಸಂಸ್ಕೃತಿಯ ನಿಜಾರ್ಥಗಳನ್ನು ಪ್ರಕಟಿಸುವುದರೊಂದಿಗೆ ವಸಾಹತುಶಾಹಿ ಸಂಸ್ಕೃತಿಗೆ ಪ್ರತಿಕ್ರಿಯೆಯಾಗಿ ರೂಪುಗೊಂಡವು. ಈ ಕಾಲದ ವಿಶೇಷವೆಂದರೆ, ಒಂದೆಡೆ ಸೃಜನಶೀಲ ಬರವಣಿಗೆಯು ಹೊರಬರುತ್ತಿರುವಂತೆ, ಜನಪದ ಸಾಹಿತ್ಯ ಸಂಗ್ರಹ ಕೆಲಸವೂ ಮತ್ತೊಂದೆಡೆ ನಡೆಯುತ್ತಾ ಬಂದಿತು. ಬೇಂದ್ರೆ ಮಧುರಚನ್ನರಂತಹ ಕವಿಗಳು ನೇರವಾಗಿ ಜನಪದ ಸಾಹಿತ್ಯ ಮತ್ತು ಸಂಸ್ಕೃತಿಯಿಂದ ಪ್ರೇರಣೆ ಪಡೆದು ಕಾವ್ಯ ರಚಿಸಲು ಆರಂಭಿಸಿದರು. ಗ್ರಾಮೀಣ ಬದುಕಿನ ಆಶಯಗಳನ್ನು ಸೃಜನಶೀಲ ಸಾಹಿತ್ಯದಲ್ಲಿ ಬಳಸಿಕೊಳ್ಳುವ ಪ್ರಯತ್ನಗಳು ನಡೆದವು. ಬೇಂದ್ರೆಯವರ ಕಾವ್ಯಭಾಷೆಯು ಜಾನಪದದಿಂದ ಸ್ಫೂರ್ತಿಗೊಂಡಿತು. ಅವರ 'ಇನ್ನು ಯಾಕ ಬರಲಿಲ್ಲ ಹುಬ್ಬಳ್ಳಿಯಾಂವ', 'ಪಾತರಗಿತ್ತಿಪಕ್ಕ', ಕುಣಿಯೋಣ ಬಾರ', 'ರಾಗರತಿ' ಮೊದಲಾದ ಕವಿತೆಗಳು ಗ್ರಾಮೀಣರ ಎದೆ ತಟ್ಟಿದವು. ಬೇಂದ್ರೆ 'ಜನಪದ ಕವಿ' ಎಂದೇ ಹೆಸರಾದರು. ಇನ್ನು ಮಧುರಚನ್ನರ ಕಾವ್ಯವಂತೂ ಕೀರ್ತಿನಾಥ ಕುರ್ತುಕೋಟಿಯವರು ಹೇಳುವಂತೆ, "ಜಾನಪದದ ಅನುಭವ ಗೀತೆಗಳ ಶೈಲಿಯಲ್ಲಿ ಸ್ವಂತ ಆಧ್ಯಾತ್ಮಿಕ ಅನುಭಾವ ಕವಿತೆಗಳನ್ನು ಬರೆದರು. ಕೇವಲ ಭಾಷೆಯೊಂದೇ ಅಲ್ಲದೆ, ಮಧುರಚನ್ನರ ಪ್ರತಿಮೆ ರೂಪಕಗಳು ಕೂಡ ಜನಪದ ಕಾವ್ಯಕ್ಕೆ ಸೇರಿದವುಗಳಾಗಿವೆ. ಅವರ ಎಲ್ಲಾ ಕೃತಿಗಳೂ ಈ ಪ್ರಯೋಗದಲ್ಲಿ ಯಶಸ್ಸು ಪಡೆಯಲಿಲ್ಲ. ಆದರೆ 'ದ್ಯಾವಾ ಪೃಥಿವಿ', 'ನನ್ನನಲ್ಲ'ದಂಥ ಕವಿತೆಗಳು ಈ ತಲೆಮಾರಿನ ಶ್ರೇಷ್ಠ ಕೃತಿಗಳಾದುದರ ಕಾರಣ ಮಧುರಚನ್ನರು ಜಾನಪದ ಸತ್ವವನ್ನು ಸೂರೆಗೈದರೆಂಬುದೇ ಆಗಿದೆ."

ಬೇಂದ್ರೆಯವರು ದೇಶೀಲಯಗಳನ್ನು ಆಧುನಿಕ ಕಾವ್ಯ ಸಂದರ್ಭದಲ್ಲಿ ವರ್ತಮಾನಕ್ಕೆ ಅನುಗುಣವಾಗಿ ಮಣಿಸಿ ಕುಣಿಯುವಂತೆ ಮಾಡಿದವರಲ್ಲಿ ಮೊದಲಿಗರು. ಶಿಷ್ಟ ಪರಂಪರೆಯಿಂದ, ಇಂಗ್ಲಿಷ್ ವಿದ್ಯಾಭ್ಯಾಸದಿಂದ ತಾವು ಪಡೆದುಕೊಂಡ ಜ್ಞಾನವನ್ನು ಜನಪದ ಭಾಷೆಗೆ ವರ್ಗಾವಣೆ ಮಾಡುವ ಯತ್ನದಲ್ಲಿ ಯಶಸ್ವಿಯಾದರು. ಮಧುರಚನ್ನರು ಜನಪದ ಸಂಸ್ಕೃತಿಯ ಭದ್ರಬುನಾದಿಯ ಮೇಲೆ ನಿಂತವರು. ಅನುಭಾವವನ್ನು ಆಧುನಿಕ ಕಾವ್ಯವನ್ನಾಗಿಸಿದವರು. ಮುಂದೆ ಬೆಟಗೇರಿಶರ್ಮರು

ಬೇಂದ್ರೆಯವರ ಜಾಡಿನಲ್ಲಿ ಮುನ್ನಡೆದರು. ಇವರ 'ನಲ್ವಾಡುಗಳು' ನಿಸರ್ಗ ಮತ್ತು ಜೀವನ ಸೌಂದರ್ಯಗಳು ಹಾಸುಹೊಕ್ಕಾಗಿರುವ ಜಾನಪದ ಸಂದರ್ಭಗಳಾಗಿ ಪರಿಣಮಿಸಿವೆ. ಬದುಕಿಗೆ ಕಾರಣವಾದ 'ಮಾಗಿ'ಯನ್ನು ಕುರಿತು ಹಾಡುತ್ತಾ ಸುಗ್ಗಿಯ ಹಿಗ್ಗನ್ನು ಸ್ಮರಿಸುತ್ತಾರೆ. ಬೆಟಗೇರಿಯವರು ತಮ್ಮ ಕಥೆಗಳಲ್ಲಿ ಗ್ರಾಮೀಣ ಬದುಕಿನ ಗಾಢ ಅನುಭವಗಳನ್ನು ಕಂಡಿರಿಸಿದ್ದಾರೆ. ಇವರ 'ಮಾತನಾಡುವ ಕಲ್ಲು' ಕಥೆಯು ಸಹ ಜನಪದರ ನಂಬಿಕೆ, ಜೀವನ ಮೌಲ್ಯಗಳನ್ನು ಕುರಿತು ತಿಳಿಸುತ್ತದೆ. ಗ್ರಾಮೀಣ ಬದುಕಿನ ವಿಸ್ತಾರ ಲೋಕದ ಚಿತ್ತಾರವನ್ನು ಬೆಟಗೇರಿಯವರು ಸುಂದರವಾಗಿ ಭಾವನಾತ್ಮಕ ವಾಗಿ ಚಿತ್ರಿಸಿರುತ್ತಾರೆ. 'ಬಂದಳಿಕೆ', ಸೋಜಿಗದ ಹೊಳಲು', ಮದಲಿಂಗನ ಕಣಿವೆ' ಕಥನ ಕವನ ಗಳು ಸ್ಥಳ ಪುರಾಣಗಳನ್ನು ಐತಿಹ್ಯಗಳನ್ನು ಪರಿಚಯಿಸುತ್ತವೆ.

ರಂ.ಶ್ರೀ ಮುಗಳಿಯವರ 'ಜಕ್ಕವ್ವ ಜಾಣೆ' ಕಥನವು ಒಳಗೊಂಡಿರುವ ಜಾನಪದ ಲಯ, ಛಂದಸ್ಸು, ಗತ್ತುಗಳನ್ನು ಗಮನಿಸಿದಾಗ ಕವಿಯ ಹೆಸರನ್ನು ಹೊರತುಪಡಿಸಿದರೆ, ಅಪ್ಪಟ ಜನಪದ ಕಥನಗೀತೆಯಾಗಿ ಕಂಡು ಬರುತ್ತದೆ. ಹಲಸಂಗಿ ಕೋಟೆಗೆ ಆತ್ಮಾರ್ಪಣೆ ಮಾಡಿಕೊಂಡ ಗರ್ಭಿಣಿ ಹೆಣ್ಣಿನ ಧಾರುಣ ಕಥೆಯನ್ನು ಶಿಷ್ಟಕವಿ ಜಾನಪದ ನೆಲೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಕೆ.ಎಸ್. ನರಸಿಂಹಸ್ವಾಮಿಯವರ ಕಾವ್ಯವಂತೂ ಸಾರ್ವತ್ರಿಕ ಜನಪದ ಕಾವ್ಯ ನಗರದಲ್ಲಿ ಬದುಕುತ್ತಿರುವ ಗ್ರಾಮೀಣ ಮನುಷ್ಯನ ಅಭಿವ್ಯಕ್ತಿ, ಶುದ್ಧ ಜಾನಪದ ಸಂಪ್ರದಾಯಕ್ಕೆ ಸೇರಿದ ಕಾವ್ಯ 'ಮೈಸೂರು ಮಲ್ಲಿಗೆ' ಕವನ ಸಂಕಲನದಲ್ಲಿಯ ಒಂದೊಂದು ಭಾವಗೀತೆಯು ಸುಂದರ ಜನಪದ ಗೀತೆಯೇ ಸರಿ. ನರಸಿಂಹಸ್ವಾಮಿಯವರ ಕಾವ್ಯದಲ್ಲಿ ಕಂಡುಬರುವ ಬಳೆ ಮಾರುವ ಚನ್ನಯ್ಯ, ಶ್ಯಾನಭೋಗರ ಮಗಳು, ಬಾವಿಯಲ್ಲಿ ನೀರು ಸೇದುವ, ಬಳೆ ತೊಡಿಸಿಕೊಳ್ಳುವ, ತುಳಸಿಪೂಜೆ ಮಾಡುವ, ಸಂತೆಗೆ ಹೋಗಿ ಬರುವ, ಹೂವು ಮಾರಲು ಬರುವ ಹೆಣ್ಣು ಮಕ್ಕಳೆಲ್ಲರೂ ಜಾನಪದ ಬದುಕಿ ನೊಂದಿಗೆ ಅವಿನಾಭಾವ ಸಂಬಂಧವುಳ್ಳವರು.

"ಕೆ.ಎಸ್. ನರಸಿಂಹಸ್ವಾಮಿಯವರಂತೆಯೇ, ಗ್ರಾಮ್ಯಭಾಷೆಯನ್ನು ಒಳಗೊಂಡ ರಾಜರತ್ನಂ ಅವರ ಕಾವ್ಯದಲ್ಲಿ ನಾಗರಿಕ ಪ್ರಜ್ಞೆಯಿರುವ ಜಾಗೃತ ಮನಸ್ಸಿನ ಕುಡುಕನ ಅನುಭವಗಳು ಕೇಂದ್ರೀಕೃತವಾಗಿರುವಂತೆಯೇ ನಾಗ-ಮಲ್ಲಿಯರ ಪ್ರೇಮವೂ ಭಾವವೇಶವಿಲ್ಲದೆ ನಿರೂಪಣೆಗೊಂಡಿವೆ. ಇವರ 'ಮುತ್ತೈದಿ ಸಾವು' ಕಥನ ಕವನವು ಸಮಾಜವೊಂದರ ಪರಂಪರಾಗತ ನಂಬಿಕೆಗಳನ್ನು ಅದರ ವಾಸ್ತವತೆಗಳಲ್ಲಿ ದಾಖಲಿಸುತ್ತದೆ. ಅವುಗಳನ್ನು ವೈಭವೀಕರಿಸುವುದಾಗಲೀ, ತಾತ್ಸಾರದಿಂದ ನೋಡುವುದಾಗಲೀ ಇಲ್ಲಿ ಮುಖ್ಯವಾಗದೆ ಜೀವನವೊಂದು ಈ ರೀತಿಯ ನಂಬಿಕೆಯನ್ನೊಳಗೊಂಡಿದೆ ಎಂಬುದನ್ನು ಮಾತ್ರ ಚಿತ್ರಿಸುತ್ತಾರೆ(ಜಿ.ಆರ್. ತಿಪ್ಪೇಸ್ವಾಮಿ, ೧೯೯೩). ಪಂಜೆ ಮಂಗೇಶರಾಯರ 'ದೊಂಬರ ಚನ್ನಿ', 'ಹುತ್ತರಿ ಹಾಡು' ಕೊಡವರ ಜಾನಪದ ಪರಂಪರೆಯನ್ನು ಚಿತ್ರಿಸುತ್ತದೆ.

ಬಹುತೇಕ ನವೋದಯ ಕವಿಗಳು ಜನಪದ ಭಾಷೆ, ಛಂದಸ್ಸು, ಲಯಗಳಿಂದ ಪ್ರೇರಣೆ ಪಡೆದರೆ ನವೋದಯದ ಮಹತ್ವದ ಲೇಖಕರಾದ ಕುವೆಂಪು ಮತ್ತು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಜಾನಪದ ಮನೋಧರ್ಮದಿಂದಲೇ ಪ್ರೇರಿತರಾದವರು. ಕುವೆಂಪು

ಜಾನಪದವನ್ನು ಸೃಷ್ಟಿಕ್ರಿಯೆ ಎಂದು ಗ್ರಹಿಸಿದವರು. ಅದರ ಅನಂತತೆ, ಅನನ್ಯತೆ ಮತ್ತು ಅವಿನಾಶಿ ಗುಣವನ್ನು ಬಲ್ಲವರಾಗಿದ್ದರು. ಇವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಮಲೆನಾಡಿನ ಜನ ಬದುಕಿನ ವಿಶ್ವಕೋಶಗಳು ಗೊರೂರರ 'ಮೆರವಣಿಗೆ', 'ಹೇಮಾವತಿ ತೀರದಲ್ಲಿ' 'ಗರುಡಗಂಬದ ದಾಸಯ್ಯ', 'ಬೆಸ್ತರ ಕರಿಯ' ಮೊದಲಾದ ಕೃತಿಗಳು ಗ್ರಾಮೀಣ ಪರಿಸರದ ಸಾಮಾಜಿಕ, ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಡುತ್ತವೆ.

ನವ್ಯಸಾಹಿತ್ಯದಲ್ಲಿ ಕಾವ್ಯವನ್ನು ಗದ್ಯಗಂಧಿಯನ್ನಾಗಿಸಿದ್ದು, ಆಡುಮಾತಿನ ಬಳಕೆಯಿಂದಾಗಿ ಕಾವ್ಯಕ್ಕೆ ಹೊಸ ಛಂದ ನಾವೀನ್ಯತೆಯನ್ನು ತಂದಿದ್ದು, ದೇಸಿ ಭಾಷೆಯ ಭಂಡಾರಕ್ಕೆ ಕನ್ನ ಹೊಡೆದದ್ದು, ಜನಪದ ಸಾಹಿತ್ಯದ ಆಶಯಗಳನ್ನು ವಿವಿಧ ಛಂದೋ ಪ್ರಕಾರಗಳನ್ನು ತನ್ನ ಅಭಿವ್ಯಕ್ತಿಯ ತೆಕ್ಕೆಗೆ ಒಗ್ಗಿಸಿಕೊಳ್ಳಲು ಯತ್ನಿಸಿದ್ದು. ವಸ್ತುವಿನ ಆಯ್ಕೆಯನ್ನು ವಿಸ್ತರಿಸಿದ್ದು, ಅಲ್ಲಿಯವರೆಗೂ ಅಸ್ಪೃಶ್ಯವೆನಿಸಿದ್ದ ಎಷ್ಟೋ ವಸ್ತುಗಳು ಸಾಹಿತ್ಯವನ್ನು ಪ್ರವೇಶಿಸಲು ಕಾರಣವಾಗಿದ್ದು, ಬದುಕಿನ ಅಸಂಗತ ಮುಖಗಳಿಗೆ ದನಿ ಸಿಕ್ಕಿದ್ದು, ಭಾಷೆ ತಂತ್ರಕ್ಕೆ ಹೊಸ ಆಯಾಮವನ್ನು ತಂದುಕೊಟ್ಟಿದ್ದು ಕಡಿಮೆ ಸಾಧನೆಯೇನಲ್ಲ.

ಗೋಕಾಕರು ಕೆಲವು ತಾತ್ವಿಕ ಸೂತ್ರಗಳನ್ನು ಒಳಗೊಂಡ ಚೌಕಟ್ಟನ್ನು ರೂಪಿಸುವುದರ ಮೂಲಕ ನವ್ಯ ಸಾಹಿತ್ಯದ ಪ್ರೇರಕರೆನಿಸಿಕೊಂಡರು. ಪ್ರಯೋಗಶೀಲತೆ, ನವ್ಯತೆ, ಗೇಯತೆಗಳಿಂದ ಕೂಡಿದ ಅವರ ಕವನಗಳು ಜಾನಪದ ಛಂದಸ್ಸನ್ನು ಅನುಕರಿಸಲಾರಂಭಿಸಿದವು. ಅವರ 'ಸಿಮ್ಲಾಸಿಂ ಪೋನಿ' ಕವನ ಸಂಕಲನದ 'ಸಿಮ್ಲಾದಸಿರಿ' ಕವಿತೆಯು ಸಿಮ್ಲಾದ ಸೌಂದರ್ಯ ವೈಶಿಷ್ಟ್ಯಗಳನ್ನು ಸುಗ್ಗಿ ಹಾಡಿನ ದಾಟಿಯಲ್ಲಿ ಬಣ್ಣಿಸುತ್ತಾ ಸಿದ್ಧ ಜಾನಪದೀಯ ಶೈಲಿಯಲ್ಲಿ ಓದುಗರ ಮುಂದೆ ಬಿಚ್ಚಿರಿಸುತ್ತದೆ. ಗೋಕಾಕರು ಜನಪದ ಆಶಯಗಳನ್ನಾಗಲೀ, ತಂತ್ರಗಳನ್ನಾಗಲೀ ಹೆಚ್ಚಾಗಿ ಬಳಸಲಿಲ್ಲ. ಬದಲಾಗಿ ವೈಯಕ್ತಿಕ ಅನುಭವಗಳನ್ನು ಜನಪದ ಭಾಷೆಯಲ್ಲಿ ಕಂಡಿರಿಸಿದರು.

ಗೋಪಾಲಕೃಷ್ಣ ಅಡಿಗರು ಜನಪದ ಭಾಷೆ ಮತ್ತು ತಂತ್ರಗಳಿಗೆ ಸಂಬಂಧಿಸಿದಂತೆ ಎಲ್ಲಾ ಸಾಧ್ಯತೆಗಳನ್ನು ಸೂರೆ ಹೊಡೆದರು. ಜನಪದ ರಂಗಭೂಮಿಯ ತಂತ್ರಗಳನ್ನು ಸಹ ಸಂಕೇತ ಚಿತ್ರ, ಪ್ರತಿಮೆ, ಪ್ರತೀಕಗಳಲ್ಲಿ ಕಂಡಿರಿಸಿದರು. ಆಡುಮಾತಿನ ಅಂದಚಂದಗಳನ್ನು, ಭಾವ-ಬಂಧಗಳನ್ನು, ಒಯ್ಯಾರ ಒಡುಪುಗಳನ್ನು ಪರಿಣಾಮಕಾರಿಯಾಗಿ ಕಾವ್ಯದಲ್ಲಿ ಬಳಸುವುದರ ಮೂಲಕ ಕನ್ನಡ ಭಾಷೆಗೆ ಹೊಸ ನಡಿಗೆ ಕಲಿಸಿದರು. ಇವರ 'ಭೂಮಿಗೀತ' ಕವಿತೆಯು ಜನಪದ ಕಾವ್ಯದ ಸೇಂದ್ರಿಯತೆಗೆ ಸಾಕ್ಷಿಯಾಗಿದೆ. ಸಮಕಾಲೀನ ಜೀವನಾನುಭವಗಳನ್ನು ಪುರಾಣಗಳ ಕಥಾನಕಗಳೊಂದಿಗೆ ಸಾಂಕೇತಿಸಿರುತ್ತಾರೆ. ಇವರ 'ಚಂಡಮದ್ದಳೆ' ಸಂಕಲನದ ಹೆಸರೇ ಸಾರ್ಥಕವಾದ ಜನಪದ ಪ್ರತಿಮೆಯಾಗಿದೆ. ಗೊಂದಲಪುರದಲ್ಲಿ ಬರುವ ಗೊಂದಲಪುರದರಸು; ಗೊಂದಲಾರಸುರನ ಪ್ರತಿಮಾ ಕಲ್ಪನೆಯಲ್ಲಿ ಮತ್ತು ನಾಟಕೀಯವಾದ ಭಾಗವತ ಸಂಭಾಷಣೆಯಲ್ಲಿ ಕನ್ನಡ ಜಾನಪದ ರಂಗಭೂಮಿಯ ತಂತ್ರವನ್ನು ಬಳಸಿಕೊಂಡು ಭಾಷೆಯ ಭಾವಾಭಿನಯಕ್ಕೆ ಅವಕಾಶ ಕಲ್ಪಿಸಿದ್ದಾರೆ. ಜನಪದ

ಭಾಷೆಯನ್ನು ಬಳಸುವುದರಿಂದ ಲಭ್ಯವಾಗುವ ಶಬ್ಧಭಂಡಾರ ಪದಸಂಪತ್ತನ್ನು ಅಡಿಗರು ತಮ್ಮ ಕಾವ್ಯದಲ್ಲಿ ಸಮರ್ಥವಾಗಿ ದುಡಿಸಿಕೊಂಡಿದ್ದಾರೆ.

ರಾಮಚಂದ್ರಶರ್ಮರ 'ಏಳು ಸುತ್ತಿನ ಕೋಟೆ' ಸಂಕಲನದ ಅದೇ ಹೆಸರಿನ ಕವಿತೆಯು ಜನಪದ ಕಥೆಯೊಂದರ ಮಾದರಿಯಲ್ಲಿ ಆರಂಭವಾಗಿ, ವ್ಯಕ್ತಿಯ ಬದುಕಿನಲ್ಲಿ ಬೆಳೆದು ಬರುವ ಲೈಂಗಿಕ ಚಟುವಟಿಕೆಗಳ ವಿವರಗಳನ್ನು ಚಿತ್ರಿಸಿದರೆ, 'ಭುವಿ ನೀಡಿದ ಸ್ಫೂರ್ತಿ' ಕವಿತೆಯು ತಾಯಿಯನ್ನು ಕಾಮಿಸಿ ಬರುವ ಮಗನ ಕಥೆಯನ್ನು ನೆನಪಿಗೆ ತರುತ್ತದೆ. ಸಂಕೀರ್ಣ ಜನಪದ ಕಥೆಯೊಂದರ ಮಾದರಿಯಲ್ಲಿ ಯು.ಆರ್. ಅನಂತಮೂರ್ತಿಯವರ 'ಮೋಹಿನಿ' ಕವಿತೆಯ ವಸ್ತುವೂ ಸಹ ಕಾಮವನ್ನು ಕುರಿತಾದದ್ದೇ ಆಗಿದೆ. ಸುಮತೀಂದ್ರ ನಾಡಿಗರ 'ಕಪ್ಪುದೇವತೆ' ಸಂಕಲನದ ಅದೇ ಹೆಸರಿನ ಕವಿತೆಯು ಜನಪದ ಆಚರಣೆಗಳ ಬಳಕೆಯ ದಾಖಲೆಯಾಗಿ ಗೋಚರಿಸಿದರೆ, ತಿರುಮಲೇಶ್ ಅವರ 'ಮಹಾಪ್ರಸ್ಥಾನ' ಕವಿತೆಯು ಯಕ್ಷಗಾನದ ವೇಷಭೂಷಣಗಳನ್ನು ಕಣ್ಣಿಗೆ ಕಟ್ಟಿಕೊಡುತ್ತದೆ. 'ನನ್ನವ್ವ ಫಲವತ್ತಾದ ಕಪ್ಪುನೆಲ' ಎಂದು ಆರಂಭವಾಗುವ ಲಂಕೇಶರ 'ಅವ್ವ' ಕವನವು ವೀರ್ಯವತ್ತಾದ ಭಾಷೆಯ ಮೂಲಕ ನಿಸರ್ಗದ ಶಕ್ತಿಯನ್ನು, ಭೂಮಿತಾಯಿಯ ಚಿತ್ರಣವನ್ನು ಅಭಿವ್ಯಕ್ತಿಸುತ್ತದೆ. ಅಪ್ಪಟ ದೇಶೀ ಭಾಷೆಯಲ್ಲಿ ನೆಲ ಮತ್ತು ಮನುಷ್ಯನ ಸಂಬಂಧ ಎಷ್ಟು ಗಾಢವಾದುದೆಂಬುದನ್ನು ಈ ಕವನ ಅರ್ಥೈಸುತ್ತದೆ. ಜನಪದ ಕಾವ್ಯದ ತೀವ್ರತೆ, ತನ್ಮಯತೆ ಹಾಡಿ ಹರಸುವಿಕೆಗಳು ಇಲ್ಲಿ ಸ್ಥಾಯಿಯಾಗಿ ಬೆಳೆಯುತ್ತವೆ.

ಶಿಷ್ಟ ಕವಿಯೊಬ್ಬನನ್ನು ಜನಪದ ಸಾಹಿತ್ಯವು ಇಡಿಯಾಗಿ ತನ್ನ ತೆಕ್ಕೆಗೆ ತೆಗೆದುಕೊಂಡಿರುವುದು ಬಹುಶಃ ಕಂಬಾರರನ್ನು ಮಾತ್ರವೇ ಎನಿಸುತ್ತದೆ. ಭಾವನಾತ್ಮಕ ನೆಲೆಯಲ್ಲಿ ಜಾನಪದವನ್ನು ಬಳಸಿಕೊಳ್ಳುವ ಕಂಬಾರರ ಬರವಣಿಗೆಯ ಬೇರು ಜಾನಪದದಲ್ಲಿದೆ. ಜನಪದ ಪುರಾಣಗಳು, ಐತಿಹ್ಯಗಳನ್ನು ತಮ್ಮ ಕಾವ್ಯದ ಪ್ರಭಾವಿ ಭಿತ್ತಿಯನ್ನಾಗಿಸಿಕೊಂಡು ಜನಪದ ಕಾವ್ಯ ಪರಂಪರೆಯನ್ನು ಛಂದಸ್ಸಿನ ಲಯಗಳನ್ನು ಆಧುನಿಕ ಸಂದರ್ಭದಲ್ಲಿ ಚೆನ್ನಾಗಿ ದುಡಿಸಿಕೊಂಡಿರುವ ಕಂಬಾರರು ಕಾವ್ಯಭಾಷೆಯ ಬನಿ, ಬಿಗಿ, ಗತ್ತುಗಳನ್ನು ಆಡುಮಾತಿನ ಬಲದಿಂದ ವೃದ್ಧಿಗೊಳಿಸಿದರು.

ಕಂಬಾರರ ಕಾವ್ಯದ ಯಾವುದೇ ಪುಟ ತೆರೆದರೂ ಜಾನಪದವೂ ಸಂಭ್ರಮ, ಸಮೃದ್ಧತೆಯಿಂದ ತುಂಬಿ ತೇಲಾಡುತ್ತದೆ. 'ಹೇಳತೇನಕೇಳ' 'ತಕರಾರಿನವರು' 'ಬೆಳ್ಳಿಮೀನು' ಸಂಕಲನಗಳ ಕವಿತೆಗಳು ಈ ಸ್ಥಿತಿಯನ್ನು ದಟ್ಟವಾಗಿ ಪರಿಚಯಿಸುತ್ತವೆ. ಜನಪದ ಕಾವ್ಯದ ಲಕ್ಷಣಗಳಾದ ತನ್ಮಯತೆ, ವೈಭವೀಕರಣ, ಅಲಂಕರಣ ವಿವರಗಳಿಂದ ಕೂಡಿದ ಬಣ್ಣಗಾರಿಕೆಯು ಕಂಬಾರರ ಕಾವ್ಯದಲ್ಲಿ ಒಡೆದು ಮೂಡಿದೆ. ಕಂಬಾರರಂತೆ ಉತ್ತರ ಕರ್ನಾಟಕದ ದೇಸಿಯನ್ನು ವೈವಿಧ್ಯಗೊಳಿಸುವಲ್ಲಿ ಕಣವಿ, ಪುಣೇಕರ, ಚಂದ್ರಶೇಖರ ಪಾಟೀಲ, ಸೋಮಶೇಖರ ಇಮ್ರಾಪುರ ಇನ್ನೂ ಮುಂತಾದ ಶಿಷ್ಟ ಸಾಹಿತ್ಯದ ಕವಿಗಳು ತಮ್ಮ ಗೀತೆಗಳಲ್ಲಿ ಜಾನಪದೀಯ ಅಂಶಗಳನ್ನಿರಿಸಿಕೊಂಡು ಕಾವ್ಯಗಳುದ್ದಕ್ಕೆ ಅದನ್ನು ವೈಭವೀಕರಿಸಿಕೊಂಡು ರಚಿಸಿದ್ದಾರೆಂದು ಹೇಳಬಹುದು.

ಕಳೆದ ಶತಮಾನದ ಏಳು ಮತ್ತು ಎಂಟನೆಯ ದಶಕದಲ್ಲಿ, ಅಸಮಾನತೆಯ ವ್ಯವಸ್ಥೆ ವಿರುದ್ಧ ಬಂಡೆದ್ದ ಬಂಡಾಯ ಚಳುವಳಿ ಮತ್ತು ಆ ಮೂಲಕ ಹುಟ್ಟಿಕೊಂಡ ಬಂಡಾಯ ಸಾಹಿತ್ಯವು, ಇದುವರೆಗೂ ಕನ್ನಡ ಸಾಹಿತ್ಯದಲ್ಲಿ ಅಪರಿಚಿತವಾಗಿಯೇ ಉಳಿದಿದ್ದ ದಲಿತ ಸಂವೇದನೆ, ಮುಸ್ಲಿಂ ಸಂವೇದನೆ, ಮಹಿಳಾ ಸಂವೇದನೆ, ಗ್ರಾಮೀಣ ಸಂವೇದನೆಗಳಿಗೆ ಬಾಗಿಲು ತೆರೆಯಿತು. ಹೊಸ ಅನುಭವ ಲೋಕವೇ ಹುಟ್ಟಿಕೊಂಡಿತು. ದಲಿತರ - ದುಡಿಯುವವರ - ಶ್ರಮಿಕರ ದನಿಯಾದ ಬಂಡಾಯ ಸಾಹಿತ್ಯವು ಜನಪದ ಬದುಕನ್ನು, ಜನಪದ ಸಂಸ್ಕೃತಿಯನ್ನು ಮತ್ತು ಆ ಸಂಸ್ಕೃತಿಯ ವಿವರಗಳನ್ನು ತನ್ನೊಂದಿಗೆ ಕಟ್ಟಿಕೊಂಡೇ ಬೆಳೆಯಿತು. ಸಿದ್ಧಲಿಂಗಯ್ಯ ದೇವನೂರು ಮಹಾದೇವ, ಚನ್ನಣ್ಣ ವಾಲೀಕಾರ, ಕಾಳೇಗೌಡ ನಾಗವಾರ, ಬಸವರಾಜ ಸಬರದ ಇನ್ನೂ ಹಲವಾರು ಗಟ್ಟಿ ದನಿಗಳು ಈ ಸಾಹಿತ್ಯ ಪರಂಪರೆಯಲ್ಲಿ ಕೇಳಿ ಬಂದವು. ಬಂಡಾಯ ಕವಿಗಳು ಜನಪದ ಹಾಡುಗಬ್ಬಗಳನ್ನು ಮುರಿದು ಕಟ್ಟಿ ತಮ್ಮ ಅನುಭವದ ಅಭಿವ್ಯಕ್ತಿಗೆ ಬಳಸಿಕೊಂಡರು. ಸಿದ್ಧಲಿಂಗಯ್ಯರವರ 'ಹೊಲೆ ಮಾದಿಗರ ಹಾಡು', 'ಸಾವಿರಾರು ನದಿಗಳು' ಇಂತಹ ಉದಾಹರಣೆ ಗಳಾಗಿವೆ. ಈ ಅವಧಿಯಲ್ಲಿ ಹುಟ್ಟಿ ಬಂದ ಬಹುತೇಕ ಕವನ ಸಂಕಲನಗಳು ಒಂದರ್ಥದಲ್ಲಿ ಅಪ್ಪಟ ಜಾನಪದ ಪ್ರೇರಣೆಯಿಂದ ಹುಟ್ಟಿದ ಹಾಡುಗಬ್ಬಗಳಾಗಿವೆ. ಚಂದ್ರಶೇಖರ ಪಾಟೀಲರ 'ಗುಂಡಮ್ಮನ ಹಾಡು' ಬರಗೂರು ರಾಮಚಂದ್ರಪ್ಪನವರ 'ಗುಲಾಮ ಗೀತೆ' ಬಸವರಾಜ ಸಬರದರ 'ದನಿಯೆತ್ತಿ ಹಾಡೇನ' ಅರವಿಂದ ಮಾಲಗತ್ತಿಯವರ 'ಮೂಕನಿಗೆ ಬಾಯಿ ಬಂದಾಗ' ಇನ್ನೂ ಕೆಲವು ಉದಾಹರಣೆಗಳು. ಜನಪದ ಛಂದಸ್ಸನ್ನು ಪರಿಣಾಮಕಾರಿಯಾಗಿ ದುಡಿಸಿಕೊಂಡಿರುವ ಬಂಡಾಯ ಕವಿಗಳು, ಕೋಲುಪದ, ಸುಗ್ಗಿಪದ, ಚೌಡಿಕೆಪದ, ಗೊಂದಲಿಗರ ಪದಗಳ ಶೈಲಿಗಳನ್ನು ಅನುಕರಿಸಿ ಕಾವ್ಯರಚನೆ ಮಾಡಿರುತ್ತಾಳೆ.

ಜಾನಪದ ಎಲ್ಲಾ ಬಗೆಯ ಲಯ, ಛಂದಸ್ಸು, ಶೈಲಿ, ಅಲಂಕಾರ, ಸಂವೇದನೆಗಳನ್ನು ಬಳಸಿ ಕೊಂಡಿದ್ದಾರೆ. ತಮ್ಮ ವಿಚಾರ - ಉದ್ದೇಶಗಳನ್ನು ಜನಪದರಿಗೆ ಮುಟ್ಟಿಸುವ ಸಲುವಾಗಿ ಜಾನಪದವನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ.



**೩.೩. ಜನಪದ ಕಥನ ಗೀತೆಗಳ ದೇಸಿಯ ವಿನ್ಯಾಸ**

ಜನಪದ ಕಥನಗೀತೆಗಳ ದೇಸಿಯ ವಿನ್ಯಾಸವನ್ನು ನಾವು ಮುಖ್ಯವಾಗಿ, ಐತಿಹಾಸಿಕವಾಗಿ, ಪೌರಾಣಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಹಾಗೂ ಕೌಟುಂಬಿಕವಾಗಿ ವಿನ್ಯಾಸವನ್ನು ಗಮನಿಸಬಹುದಾಗಿದೆ. ಅದೇ ರೀತಿಯಾಗಿ ಖಂಡಕಾವ್ಯದಲ್ಲಿಯೂ ಸಹ ಜನಪದ ಕಥನಗೀತೆ, ಜನಪದ ಕಥನ ಲಾವಣಿ, ಜನಪದ ಖಂಡಕಾವ್ಯ ಹಾಗೂ ಜನಪದ ಮಹಾಕಾವ್ಯ ಎಂಬುದಾಗಿ ವರ್ಗೀಕರಿಸಬಹುದಾಗಿದೆ. ಹೀಗೆ ಸಾಮಾಜಿಕ ಜೀವನದ ವ್ಯಕ್ತಿ, ಕುಟುಂಬ, ಜನಪದ ಗುಂಪು ಸಮುದಾಯದ ಕಲ್ಯಾಣ, ಅಸಹಾಯಕತೆ, ನಿರಾಶ್ರಯ, ಪಾತಿವ್ರತ್ಯ ಸತಿ ಮುಂತಾದ ಸ್ವೀಕೃತ ಮೌಲ್ಯಗಳ ಹಿನ್ನೆಲೆಯಲ್ಲಿ ವಿವೇಚನೆಗೆ ಆಯ್ದುಕೊಂಡ ಕಥೆಗಳು ಹನ್ನೊಂದು ಈರೋಬಿ, ಕೆರೆಗೆಹಾರ, ಉತ್ತರದೇವಿ, ಕೆರೆಗೆಹಾರವಾದ ಬಂದಮ್ಮನ ಕಾವ್ಯ, ಒಡ್ಡರಬೋಯಿ, ಸ್ಯಾಸಿ ಚೆನ್ನಮ್ಮನಕಾವ್ಯ, ಸಿರಿಕವಲಿ, ಹಲಗಲಿ ಬೇಡರು, ಗ್ವಾಲಣ್ಣನ ಮೀರಾಗಾಥಾ, ಬರದ ಹಾಡು, ಬೆಕ್ಕಿ ಉಂಗುರಕ್ಕೆನಾರಿ

ಈ ಕಥನಗೀತೆಗಳ ವಿವಿಧ ಸ್ತರಗಳಲ್ಲಿ ಹುದುಗಿದೆ. ಸೂಕ್ಷ್ಮಾಂಶಗಳನ್ನು ಕಣ್ಣಿಟ್ಟು ಹುಡುಕಿದಾಗ ಜನಪದದ ಕೆಲವಾದರೂ ಚಿನ್ನದರೇಕುಗಳು ಗೋಚರಿಸಬಹುದಾಗಿದೆ. ಈ ಮೇಲಿನ ಕಥನಗೀತೆಗಳ ಆಕರ ಗ್ರಂಥಗಳು.

೧. ಈರೋಬಿ, ಜಾನಪದ ಖಂಡಕಾವ್ಯಗಳು, ಡಾ. ಜೀ.ಶಂ.ಪ.

೨. ಉತ್ತರದೇವಿ, ಕೆರೆ ಹೊನ್ನಮ್ಮ ಮತ್ತು ಇತರ ಲಾವಣಿಗಳು, ಟಿ.ಎಸ್. ರಾಜಪ್ಪ.

೩. ಕೆರೆಗೆಹಾರ, ಕನ್ನಡ ಭಾವುಟ,

೪. ಸಿರಿಕವಲಿ, ಪರಮೇಶ್ವರಿಯ ಪದಗಳು, ಡಾ. ಎಲ್.ಆರ್. ಹೆಗಡೆ.

೫. ಹಲಗಲಿ ಬೇಡರು, ಐದು ಐತಿಹಾಸಿಕ ಲಾವಣಿಗಳು, ಕ್ಯಾತನಹಳ್ಳಿ ರಾಮಣ್ಣ.

೬. ಗ್ವಾಲಣ್ಣನ ವೀರಗಥಾ, ಕರ್ನಾಟಕ ಭಾರತಿ, ಬಿ.ಆರ್. ಸುರಪುರ.

೭. ನೀಲಗಂಗನಾ ಹಾಡು, ಮಲ್ಲಿಗೆದಂಡೆ, ಕಾಪಸೆ ರೇವಪ್ಪ.

೮. ಬರದ ಹಾಡು, ಮಲ್ಲಿಗೆದಂಡೆ, ಕಾಪಸೆ ರೇವಪ್ಪ.

೯. ನಿನ ಮಕವ ಸಿಗಲಿಲ್ಲ, ಕರ್ನಾಟಕ ಭಾರತಿ, ಲೀಲಾವತಿ ತೋರಣಗಟ್ಟಿ

### ಈರೋಬಿ

ತನ್ನ ಗಂಡ ಸತ್ತ ಬಳಿಕ ಅಗ್ನಿಪ್ರವೇಶ ಮಾಡಿದ ಅನುಗಮನದ ಘಟನೆಯೇ ಈರೋಬಿ ದುಃಖಾಂತ ಖಂಡಕಾವ್ಯದ ವಸ್ತು. ಸತಿಯ ಸಹಗಮನ ಅಥವಾ ಅನುಗಮನ ಪದ್ಧತಿ ಅನಾದಿ ಕಾಲದಿಂದ ಪ್ರಪಂಚದ ಎಲ್ಲ ಜನಪದ ಗುಂಪುಗಳಲ್ಲೂ ಆಚರಣೆಯಲ್ಲಿದ್ದುದು ಕಂಡುಬರುತ್ತದೆ. ಆದಿವಾಸಿ ಸಮಾಜಗಳ ಸಂಕೀರ್ಣ ಕ್ರಿಯಾಚರಣೆಗಳು ಕಾಲಾನುಕ್ರಮದಲ್ಲಿ ಸಂಪ್ರದಾಯ ರೂಢಿಗಳಾಗಿ ಸಾಗಿಬಂದವು. ಅವು ದಿನನಿತ್ಯದ ಕಟ್ಟುನಿಟ್ಟಾದ ಪಾಲನೆಯಿಂದಾಗಿ ಜನಪದ ವೃಂದಗಳ ಮನೋಧರ್ಮದಲ್ಲಿ ಆಳವಾಗಿ ಬೇರೂರೀ ಪ್ರಾಕೃತಿಕವೋ ಎನ್ನುವಷ್ಟು ಜನಪದರ ಜೀವನದಲ್ಲಿ ಬೆರೆತು ಬಿಡುತ್ತದೆ. ನಂಬಿಕೆಗಳು ಜನಪದ ಸಮುದಾಯದ ಸಾಮೂಹಿಕ ನಡುವಳಿಕೆಯ ವಿಶಿಷ್ಟ ರೂಪವಾದರೆ ಈ ನಂಬಿಕೆಗಳನ್ನು ಆಧರಿಸಿದ ನೀತಿ ಸೂತ್ರಗಳು ವಿಧಿನಿಷೇಧಗಳು ಸಮಾಜವನ್ನು ನಿಯಂತ್ರಿಸುವ ಮುನ್ನೆಡೆಸುವ ಧಾರ್ಮಿಕ ಅಂಶಗಳು ಜನಪದರ ಒಂದು ಅನಿಸಿಕೆ. ಒಂದು ಭಾವನೆ ಮತ್ತು ಅದರ ಬೌದ್ಧಿಕ ಸ್ವೀಕರಣ ಇವೆರಡೂ ಒಡವೆರದು ರೂಢಿಗತವಾದಾಗ ಆ ಪ್ರಜ್ಞಾಪೂರ್ವಕವಾಗಿ ಇತಿಹಾಸ ಪೂರ್ವದ ಮಂಜು ಮುಸುಕಿದ ಬದುಕಿನ ಅಜ್ಞಾತ ಕಾಲವೊಂದರಲ್ಲಿ ತಮ್ಮ ಸುತ್ತಲೂ ವಿಸ್ಮಯ ಭಯಗಳ ಮೈ ನಡುಗಿಸುವ ನುಂಗಲು ಬಾಯ್ದೆರೆದ ಪ್ರಕೃತಿಯು ರುದ್ರ ಭೀಕರ ಶಕ್ತಿಗಳನ್ನು ರಹಸ್ಯಗಳನ್ನು ಅರ್ಥಯಿಸಲಾಗದ ಜನಪದ ಸಮುದಾಯಗಳು ಬೆಂಕಿ, ನೀರು, ಮರ, ಗಾಳಿ, ಕಲ್ಲು ಒಂದೊಂದನ್ನೇ ತಮ್ಮ ಆರಾಧನೆಗೆ ಅಳವಡಿಸಿಕೊಳ್ಳುತ್ತಾ ಬಂದರು. ಪ್ರಾಚೀನ ಗ್ರೀಕರಿಗೆ ಮೊಸಳೆ ದೇವತೆಯಾದರೆ ಭಾರತೀಯರಿಗೆ ಮರ ದೈವ, ಕೆರೆ ದೈವವಾದುವು.

ಪ್ರತಿಯೊಂದು ಜನಪದ ಕುಲ ನಿಯಂತ್ರಿಸಿದ ಧರ್ಮ ಸೂತ್ರಗಳ ಜೊತೆಗೆ ಇಡೀ ಸಮುದಾಯದ ಪಾಲನೆ ಪೋಷಣೆ, ಶಿಕ್ಷೆ ರಕ್ಷೆಗಳಲ್ಲಿ ಮುಖ್ಯಪಾತ್ರ ವಹಿಸುತ್ತಿದ್ದ ಕುಟುಂಬದ ಯಜಮಾನ ವೃಂದದ ಮುಖ್ಯಸ್ಥರಿಗೆ ಬೇಕಾದುದೆಲ್ಲವನ್ನೂ ಅರ್ಪಿಸುವ ರೂಢಿಯಲ್ಲಿ ಯಜಮಾನ ಪೂಜೆ ಮಾಡಿ ಬಂದಿತು. ನಮ್ಮ ಜನಾಂಗದಲ್ಲಿ ಇಂದಿಗೂ ಆಚರಣೆಯಲ್ಲಿರುವ ಹಿರೇರ ಹಬ್ಬದಲ್ಲಿ ಅವರ ಛಾಯೆಯನ್ನು ನಾವು ಕಾಣಬಹುದು. ಈ ಯಜಮಾನ ಪೂಜೆಯೇ ಧರ್ಮದ ಹುಟ್ಟಿಗೆ ಮೂಲ ಎಂದು ಭಾವಿಸಲಾಗಿದೆ.

ಕುಲದೇವತೆ ಆರಾಧನೆ ಕ್ರಮ ಶಕ್ತಿಪೂಜೆ ಅಥವಾ ಮಾತೃಪೂಜೆ. ಹೀಗೆ ಪ್ರಾಚೀನ ಜನಾಂಗಗಳ ವಂಶವಾಹಿ ತಳಿ ಅಭಿವೃದ್ಧಿಯ ಹಿನ್ನೆಲೆಯ ನಂಬಿಕೆಗಳು ರೂಢಿಯಲ್ಲಿ ಬಂದವು. ಪೋಲಿನೇಶಿಯನ್ ಜನ ತಮ್ಮ ದ್ವೀಪಗಳಲ್ಲಿ ಆಗಾಗ ಸಿಡಿಯುತ್ತಿದ್ದ ಜ್ವಾಲಾಮುಖಿಗಳ ಬಾಯಲ್ಲಿ ತಮ್ಮ ಜನರನ್ನು ಬಲಿ ಕೊಡುತ್ತಾ ಅದು ಮತ್ತೆ ಸಿಡಿಯದಂತೆ ಪ್ರಾರ್ಥಿಸಿದುದು ತಿಳಿದುಬರುತ್ತದೆ.

ತಮ್ಮ ಮುಖ್ಯಸ್ಥ ಸತ್ತರೆ ಅವನನ್ನು ಪೂಜಿಸಬೇಕು. ಅವನಿಗೆ ಇಷ್ಟವಾದ ಅವನಿಗೆ ಸಂಬಂಧಿಸಿದ ವಸ್ತುಗಳು ಏನೇ ಇರಲಿ ಅವನಿಗೆ ಸಲ್ಲಬೇಕು ಅವನು ದೈಹಿಕವಾಗಿ ಕಣ್ಮರೆಯಾದರೂ ಇನ್ನೊಂದು ಜಗತ್ತು ಪರಲೋಕದಲ್ಲಿ ಆತನ ಜೀವನ ಮುಂದುವರೆಯುತ್ತದೆ. ಅದಕ್ಕಾಗಿ ಅವನು ಯಾವುದೇ ಕಾರಣದಿಂದ ಇಲ್ಲಿ ಸತ್ತರೆ ಅವನನ್ನು ಹೂಳುವಾಗ ಅವನ ಜೊತೆಗೆ ಅವನಿಗೆ ಸಂಬಂಧಿಸಿದ ಅವನ ಪ್ರಿಯ ವಸ್ತುಗಳನ್ನು ಹೂಳಬೇಕು. ಸುಡುವುದಾದರೆ ಸುಡಬೇಕು. ಹೀಗೆ ಆದಿವಾಸಿಗಳ ತಮ್ಮ ಕುಟುಂಬದ ಯಜಮಾನನಿಗಾಗಿ ಅವನ ಹೆಂಡತಿ ಅಥವಾ ಹೆಂಡಂದಿರು ಕುದುರೆ ಶಸ್ತ್ರಾಸ್ತ್ರ ಗುಲಾಮರು ಎಲ್ಲವನ್ನೂ ಶವದ ಜೊತೆಗೆ ಹೂಳುವ ಅಥವಾ ಸುಡುವ ಪರಂಪರೆ ಸಾಮಾಜಿಕ ನಡುವಳಿಕೆಗಾಗಿ ಧಾರ್ಮಿಕ ಶ್ರದ್ಧೆಯಾಗಿ ರೂಪುಗೊಂಡಿತು. ಆರಂಭದಲ್ಲಿ ಯಜಮಾನನಿಗಾಗಿ ಇದ್ದದ್ದು ಬರುಬರುತ್ತ ಕುಟುಂಬದ ಯಾವುದೇ ಗಂಡಸು ಸತ್ತರು ಅವನಿಗಾಗಿಯೂ ಇಂಥದ್ದೇ ರೂಢಿ ಆಚರಣೆಯಲ್ಲಿ ಬಂದಿತು. ಹೆಣ್ಣಿಗೆ ವಿಶೇಷ ಸ್ಥಾನಮಾನವಾಗಲಿ, ವ್ಯಕ್ತಿತ್ವವಾಗಲಿ ಇದೆಯೆನ್ನುವ ಕಲ್ಪನೆಯೂ ಇಲ್ಲದಿದ್ದ ಆದಿವಾಸಿ ಸಮುದಾಯಗಳಲ್ಲಿ ಹೆಣ್ಣು-ಗಂಡಿಗೆ ಸೇರಿದ ಸೇರಬೇಕಾದ ಇತರ ವಸ್ತುಗಳಂತೆ ಒಂದು ಅಧೀನ ವಸ್ತು ಎನ್ನುವ ದೃಷ್ಟಿ ಪ್ರಬಲವಾಗಿತ್ತು. ಅಲೆಮಾರಿಗಳ ಗುಂಪುಗಳ ಅಧ್ಯಯನ ಮಾಡಿದ ವಿದ್ವಾಂಸರು ಮಾತುಗಳಿಂದ ಈ ಅಂಶಕ್ಕೆ ಪುಷ್ಟಿ ದೊರೆಯುತ್ತದೆ. ೧೯೭೩-೭೫ರ ಅವಧಿಯಲ್ಲಿ ಸೋದೂಲಿಯ ಭೀಕರ ಬರಗಾಲ ಎದುರಿಸಬೇಕಾಯಿತು. ಆಗ ಅಲ್ಲಿಯ ೬.೦೦೦ ಅಲೆಮಾರಿಗಳನ್ನು ಇನ್ನೊಂದಡೆಗೆ ಸ್ಥಳಾಂತರಿಸಲಾಯಿತು.

ಈರೋಬಿ ಮೇಲ್ನೋಟಕ್ಕೆ ಕನ್ನಡಕ್ಕೆ ಹೊರತಾದ ಶಬ್ದರೂಪವಾಗಿ ತೋರಬಹುದು. ಆದರೆ ಅದು ಕನ್ನಡ ನಾಮಪದವೇ. ಜನಪದರು ಪದಗಳ ಬಳಕೆಯಲ್ಲಿ ಸಹಜವಾಗಿ ರೂಪಿಸಿಕೊಳ್ಳುವ ಭಾಷಾ ಸ್ಥಿತಿ ಸ್ಥಾಪಕ ಗುಣ ಈರೋಬಿ ಪದದಲ್ಲಿ ಒಡ ಮೂಡಿರುವ ಸಾಧ್ಯತೆಯಿದೆ.

ಈರೋಬಿ ಈಡಿಗರ ಜನಸಮುದಾಯದಲ್ಲಿ ಹುಟ್ಟಿದವಳು. ಇವಳ ಮೂಲ ಹೆಸರು ಓಬವ್ವ ಎಂದಿರಬೇಕು. ಈರೋಬಿ ಶಬ್ದದಲ್ಲಿ ವೀರ ಮತ್ತು ಓಬಿ ಎರಡು ಪದಗಳು ಸೇರಿರುವ

ಸಾಧ್ಯತೆಯನ್ನು ವಿಚಾರಿಸೋಣ. ಓಬಿ ಎನ್ನುವ ಹೆಣ್ಣುಮಗಳು ಅಂದು ಸಮಾಜ ಒಪ್ಪಿಕೊಂಡ ಒಂದು ಪರಂಪರೆಗೆ ಅನಿವಾರ್ಯವಾಗಿಯೋ ಅಸಾಹಾಯಕಳಾಗಿಯೇ ತನ್ನನ್ನು ತಾನು ಬಲಿ ಕೊಡುತ್ತಾಳೆ ಅಥವಾ ಅರ್ಪಿಸಿಕೊಳ್ಳುತ್ತಾಳೆ. ತನ್ನ ತ್ಯಾಗದಿಂದ ವೀರತನವನ್ನು ಮೆರೆದ ಈ ಸತಿ ವೀರ ಓಬಿ ಈರೋಬಿಯಾಗಿರಬಹುದು. ಆದರೆ ಈ ಕಥನಗೀತೆಯ ಯಾವುದೇ ಒಂದು ಪ್ರಸಂಗದಲ್ಲಿ ಆರಂಭದಲ್ಲಿ ಕೂಡ ಜಾನಪದ ಕವಿ ವೀರ ಅಥವಾ ಈರಾ ವಿಶೇಷ ಪದವನ್ನು ಬಿಟ್ಟು ಅಥವಾ ಓಬವ್ವ ಎಂದು ಎಲ್ಲೂ ಕರೆಯುವುದಿಲ್ಲ. ಮೊದಲಿಂದ ಕೊನೆಯವರೆಗೂ 'ಈರೋಬಿ' ಪದವನ್ನು ಸಮಗ್ರ ಪದವಾಗಿ ಬಳಸುತ್ತಾನೆ. ಆದ್ದರಿಂದ ಬೇರೊಂದು ಸಿದ್ಧ ಹೆಸರಿನ ಪರಿವರ್ತಿತ ರೂಪವಾಗಿದ್ದೀತೆ ಎನ್ನುವ ಆತಂಕ ಮೂಡುತ್ತದೆ. ಈರಬ್ಬೆ ಈರವ್ವೆ ಪದಗಳು ಈರಬ್ಬಿ ಈರಪ್ಪಿಯಾಗಿ ರೂಪಗೊಳ್ಳಬಹುದು. ಇದೇ ಕ್ರಮದಲ್ಲಿ ಈರೆಬ್ಬೆ ಸಿದ್ಧ ಪದವೇ ಈರೋಬಿಯಾಗಿರ ಬಹುದೇ? ಪಾರ್ವತಿ ಶಬ್ದ ಬಳಕೆಯಲ್ಲಿ ಪಾರೋತಿಯಾಗುವಾಗ 'ರ' ಅಕ್ಷರದಲ್ಲಿರುವ 'ವ' ಮತ್ತು 'ರ'ದಲ್ಲಿ ಸೇರಿಕೊಂಡು ಪಾರ್ವತಿ ಪಾರೋತಿಯಾಗುವುದು ಸರಿ. ಅದರಂತೆ, ಈರಬ್ಬೆ ಪದದಲ್ಲಿ 'ಬೆ' ಅಕ್ಷರದ ಒತ್ತು ಅದರ ಹಿಂದಿನ ಅಕ್ಷರ 'ರ'ಕ್ಕೆ ಸರಿ ಹೊಂದಿ 'ಈರೋಬಿ'ಯಾಗಿರುವ ಸಾಧ್ಯತೆಯನ್ನು ಒಪ್ಪಿಕೊಳ್ಳಬಹುದೇ? ಒಟ್ಟು ಈರಬ್ಬೆ-ಈರೋಬಿಯಾಗಿರುವುದು ಹೆಚ್ಚು ಸಂಭವ. ಈರೋಬಿ ಕಥನಗೀತೆ ಸುಮಾರು ೨೦೦ ವರ್ಷಗಳ ಹಿಂದಿನದು ಎಂದು ಭಾವಿಸಬಹುದು. ೧೮೨೯-೩೦ರ ಅವಧಿಯಲ್ಲಿ 'ಸಹಗಮನ' ವಿರೋಧಿ ಮಸೂದೆ ಪಾಸಾಗಿರುವುದಕ್ಕಿಂತ ಮೊದಲೆ ನಡೆದಿರುವ ಸಾಧ್ಯತೆಯಿದೆ.

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ತೀರ ಪ್ರದೇಶದಲ್ಲಿ ನಡೆದ ಒಂದು ವಾಸ್ತವ ಘಟನೆಯೇ ಈರೋಬಿ ಕಥನ ಕವನದ ಪ್ರೇರಣೆ. ಈರೋಬಿಯ ಬದುಕಿನ ಸುತ್ತ ಹೆಣೆದುಕೊಂಡು ಈ ಕಥಾನಕಕ್ಕೆ ಅಳಸಂದ್ರ, ನಾಗ್ತಿಹಳ್ಳಿ, ತಿಪ್ಪೂರು, ಬೆಳ್ಳೂರು ಗ್ರಾಮಗಳೇ ಕೇಂದ್ರ ಸ್ಥಳಗಳು ಈರೋಬಿ ಹುಟ್ಟಿದ್ದು ಅಳಿಸಂದ್ರ - ಬೆಳೆದದ್ದು ನಾಗ್ತಿಹಳ್ಳಿ ಹುಟ್ಟು ಬಾಳಿದ್ದು, ಬಾಳಿ ಕೆಟ್ಟಿದ್ದು ಬೆಳ್ಳೂರು. ಈರೋಬಿಯ ಗಂಡ ಶಂಕರಲಿಂಗರಾಯ ಹೆಂಡತಿಯ ಮೇಲೆ ತುಂಬಾ ಪ್ರೀತಿ ಅಭಿಮಾನ ಹೆಚ್ಚು ಹಣಗಳಿಸಿ ಶ್ರೀಮಂತನಾಗಬೇಕೆಂಬ ಹಂಬಲದಿಂದ ಹಣಗಳಿಸಲು ಬೇರೆ ರಾಜ್ಯಕ್ಕೆ ಹೋಗುವಾಗ ಹೆಂಡತಿಯು ಬಸುರಿಯಾಗಿರುತ್ತಾಳೆ. ದಿನಕಳೆದಂತೆ ಒಂದು ಗಂಡು ಮಗುವಿಗೆ ಜನ್ಮನೀಡಿ ಕಂಪರಾಸು ಎಂದು ನಾಮಕರಣ ಮಾಡುತ್ತಾಳೆ. ಆದರೂ ಗಂಡನ ಬರುವಿಕೆಗೆ ಒಂದು ವರ್ಷವೇ ಕಳೆಯಿತು. ಇತ್ತ ಒಂದು ದಿನ ಈರೋಬಿ ಬೆಳಗಿನ ಜಾವ ಎದ್ದೇಳುವುದು ತಡವಾಯಿತು. ಇದನ್ನು ಗಮನಿಸಿದ ಅತ್ತೆ ಮುಂಗೋಳಿ ಕೂಗ್ಯಾವಾ ಮೂಡಲ ಕೆಂಪೇರಿ ಬೆಳಗಾಯಿತು. ಕರುಹರಿದುಕೊಂಡು ಹಾಲುಂಡಾವು ಎಂದು ಹೇಳುತ್ತಾಳೆ. ಎಂದಿನಂತೆ ಈರೋಬಿ ದನಗಳನ್ನು ಮೇಯಿಸಲು ಅರಣ್ಯಕ್ಕೆ ಹೋಗಿ ಬಂದಂತಹ ಸಂದರ್ಭದಲ್ಲಿ ಅವಳಿಗೆ ತನ್ನ ಗಂಡನ ಸಾವಿನ ಸುದ್ದಿಯನ್ನು ಮುಟ್ಟಿಸುತ್ತಾರೆ. ಈ ವಾರ್ತೆಯನ್ನು ತಿಳಿದ ಈರೋಬಿ ಜರ್ಜರಿತವಾಗುತ್ತಾಳೆ. ಸಂಕಟ, ದುಃಖ ಪಡುತ್ತಾಳೆ. ಹೀಗೆ ಇವಳ ಕಡೆಯವರ ನೆಂಟರು ಬಂಧು-ಬಳಗದವರು ಬಂದು ಸಂಸ್ಕಾರವನ್ನು ಮಾಡುತ್ತಾರೆ.

ಗಂಡನ ಮರಣ ಖಚಿತವಾದ ಮೇಲೆ ಈರೋಬಿ ಕೊಂಡ ಏರಲು ನಿರ್ಣಯಿಸುತ್ತಾಳೆ. 'ಗಂಡ ಸತ್ತೋರಿಲ್ಲ'ವೇ ಮುಂಡೆರಾದೋರಿಲ್ಲವೆ, ಮುಂಡೇರಿಲ್ಲವೇನೆ 'ಧರೆ ಮೇಲೆ' ಎಂದು ಇವಳ ನಿರ್ಧಾರವನ್ನು ಬದಲಿಸುವ ಪ್ರಯತ್ನ ಮಾಡುತ್ತಾಳೆ. ಅದಕ್ಕೆ ಈರೋಬಿ ಒಂದು ಕ್ಷಣ ಕುಲ ಗೌರವ ಕಾಡಿದಂತೆ ತೋರುತ್ತದೆ.

ಗಂಡ ಸತ್ತೋರವರೆ ಮುಂಡೇರಾದೆರವರೆ
ಹೀನ ಬತ್ತಲ್ಲೆ ಕುಲಕ್ಕಲ್ಲ

ಇವಳು ಕೊಂಡದ ಸಿದ್ಧತೆಗೆ ಮುಂದುವರಿಯುತ್ತಾಳೆ. ಇವಳ ಗೆಳತಿಯರು ನೆಂಟರು. ಅಪ್ಪ, ಅಮ್ಮ ಕೊಂಡ ತರಲು ಹೋಗಿದ್ದಾರೆ. ಬೇಡವೆಂದು ಹೇಳು ಎಂದು ಅಂಗಲಾಚುತ್ತಾರೆ.

ಈರೋಬಿ ಕೊಂಡವೇರಲು ಸಿದ್ಧಳಾದಾಗ ತನ್ನ ಮಾವ ಒಂದು ಚಿನ್ನದ ಉಂಗುರು ಕಳುಹಿಸಿ ಅವಳು ಬೆಂಕಿಗೆ ಆಹುತಿಯಾಗಬಾರದು ಅದನ್ನಾ ತಡೆಯಿರಿ ಎಂಬ ಮಾತನ್ನಾ ಕೇಳಿದ ಈರೋಬಿ ಮತ್ತಷ್ಟು ಕೊಪಿಷ್ಟಳಾಗಿ ಕೊಂಡವೇರುವುದು ಇನ್ನಷ್ಟು ಖಚಿತ ನಿರ್ಧಾರ ಕೈಗೊಳ್ಳುತ್ತಾಳೆ. ನಂತರ ಈರೋಬಿ ಕೊಂಡವೇರುವ ಸಿದ್ಧತೆ ಸನ್ನದ್ದಳಾಗಿ ಹೋರಾಟಾಗ,

ಕೊಂಡ ಕ್ಹೋಗುವಾಗ ಇನ್ನೇನು ಸುಂಗಾರ
...........................................
ನೀಲ ಪತ್ತಲುಟ್ಟಿಕೊಂಡು ನಿಲುಗರಡಿ ಹಿಡಿಕೊಂಡು
ಅವಳು ಕೊಂಡಾಕ್ಹೋಗಾದೆ ಸಡಗರ

ಹೀಗೆ ಈರೋಬಿ ಕೊಂಡದ ಹತ್ತಿರ ಬಂದು ಅವಳ ಶೃಂಗಾರ ಅವಳ ದುಃಖಾಂತ ವೈಖರಿಯನ್ನು ಕವಿ ಬಹು ಸೊಗಸಾಗಿ ವರ್ಣಿಸಿದ್ದಾರೆ. ಇಲ್ಲಿಗೆ ಈರೋಬಿಯ ಬದುಕು ಮಣ್ಣುಗೂಡಿದ್ದ ಈರೋಬಿ ಬೆಂಕಿಯಲ್ಲಿ ಉರಿದದ್ದು ಈ ಸಂಗತಿಗಳನ್ನು ಜನಪದ ಕವಿ ನಿರೂಪಿಸಿದ ಕ್ರಮ ಹಂತ ಹಂತವಾಗಿ ನಮ್ಮ ಹೃದಯವನ್ನು ಮಿಡಿಯುತ್ತದೆ. ಘಟನೆಗಳು ಪದರು ಪದರಾಗಿ ಹರಡಿದಂತೆ ಬಾಳಿನ ದುರಂತ ಬಿಚ್ಚುಕೊಳ್ಳುತ್ತ ಹೋಗುತ್ತದೆ. ಈರೋಬಿ ಕಥನಗೀತೆಯ ಆಶಯ.

ಪತ್ನಿಯಾದವಳು ಸಹಗಮನ ಅಥವಾ ಅನುಗಮನ ಆಚರಿಸಿದರೆ ಆಕೆ ಸ್ವರ್ಗದಲ್ಲಿರುವ ಗಂಡನನ್ನು ಸೇರುತ್ತಾಳೆ. ಸತಿಗೆ ಸ್ವರ್ಗ ಪ್ರಾಪ್ತಿ ನಿಶ್ಚಿತ. ಆಕೆ ಮಹಾಪತಿವ್ರತೆ. ಇದು ಅಂದಿನ ಬದುಕಿನಲ್ಲಿ ಬೇರೂರಿದ್ದ ಒಂದು ನಿಷ್ಠೆ ಅದೇ ಈ ಕಥಾನಕದ ಪ್ರಮುಖ ಆಶಯ.

**ಜನಪದ ನಂಬಿಕೆಗಳು**

೧. ಕೆಟ್ಟ ಸ್ವಪ್ನಗಳು

ಅ. ಮಲಗುವ ಮಂಚದ ಸುತ್ತಾ ಕತ್ತಿ ಕವಿಯುವುದು.

ಆ. ಹುತ್ತದ ಮೇಲಿರುವ ಕಾಗೆ ನೆತ್ತರ ಕಾರುವುದು

೨. ಮೂಗುತಿ ಮುರಿಯುವುದು. ಮುಂಬಲ್ಲು ಸಿಡಿಯುವುದು, ಗಿಂಡಿ ತಂಪಾಗುವುದು, ಮುಂಬರುವ ಕೇಡಿಗೆ ಸಂಕೇತ.

೨. ಸತಿ ಏರುವ ಕೊಂಡಕ್ಕೆ ಸೌಧೆ ಕಡಿದು ತಂದರೆ ಕಿಚ್ಚು ಅಣಿಗೊಳಿಸಿದರೆ ಪುತ್ರ ಸಂತಾನ ಭಾಗ್ಯ.

೩. ಹೆಣ್ಣು ಕರ್ಮಿ : ವಿಧವೆ ಪಾಪಿ ತೋಪು ಸೇರಿದರೂ ಆ ತೋಪೋ ಉರಿಯುತ್ತದೆ.

೪. ಗಂಡ ಸತ್ತವಳು ಕೊಂಡವೇರದಿದ್ದರೆ ಅವಳ ಕುಲಕ್ಕೆ ಕಂದು.

ಹೆಂಡತಿಯಾದವಳು ಮುತ್ತೈದೆತನ ಕಳೆದುಕೊಂಡ ಬಳಿಕ ಅಂದಿನ ಸಮಾಜ ವ್ಯವಸ್ಥೆಯಲ್ಲಿದ್ದ ಅವಳ ಪಾಲಿನ ಆರ್ಥಿಕ ಅಭದ್ರತೆ ಅಸಹಾಯಕ ಪರಿಸ್ಥಿತಿ ಹತ್ತಾರು ಜನರ ಮರುಕದ ಪದರಿನ ವಸ್ತುವಾಗಿ ಕೀಳಾಗಿ ಕಸವಾಗಿ ಬಾಳಬೇಕಾದಂಥ ಒಂದು ಅನಿವಾರ್ಯ ಪರಿಸರ. ಹೀಗೆ ಯಾವುದೋ ಒಂದು ಕಾರಣದಿಂದ ಇದರ ನಿಷ್ಕರ್ಷೆಯನ್ನು ಸಮಾಜಶಾಸ್ತ್ರ, ಮಾನವಶಾಸ್ತ್ರ, ಧರ್ಮಶಾಸ್ತ್ರ ಮತ್ತು ಸಂಸ್ಕೃತಿಶಾಸ್ತ್ರಗಳ ಹಿನ್ನೆಲೆಯಲ್ಲಿ ಭಿನ್ನ ಭಿನ್ನ ಕಾಲದಲ್ಲಿ ವಿವಿಧ ಹಂತಗಳಲ್ಲಿ ಶೋಷಣೆಗೆ ಒಳಗಾದ ಹೆಣ್ಣಿನ ಸಾಮಾಜಿಕ ಸ್ಥಾನಮಾನಗಳ ವಿಶ್ಲೇಷಣೆ ಮಾಡುವುದು. ಒಂದು ಪ್ರತ್ಯೇಕ ವಿಷಯ ವಿಧವೆಯಾದವಳು ಚಿತೆಯನ್ನೇರುತ್ತ ಬಂದಳು. ಅವಳನ್ನು ಅದಕ್ಕಾಗಿ ಪ್ರೇರೇಪಿಸಿ, ಅವಳ ಆಚರಣೆ ಆದರ್ಶವೆಂದು ಸ್ತುತಿಸಿ ಕೊಂಡವೇರುವುದು ಅದು ಅತ್ಯಂತ ಸಹಜವಾದದ್ದು. ಅದನ್ನು ಬಿಟ್ಟರೆ ಅವಳು ಪತಿತೆ ಎನ್ನುವ ಭಾವನೆ ಜನರಲ್ಲಿ ಆಳವಾಗಿ ಬೇರೂರಿತ್ತು. ಭಾರತದಲ್ಲಿ ಸಹಗಮನ ಪದ್ಧತಿ ರಾಜರಾಮ ಮೋಹನ್‌ರಾಯ್‌ನಂಥ ಒಬ್ಬ ಮಾನವತಾವಾದಿ ಹುಟ್ಟದೇ ಇದ್ದಿದ್ದರೆ ಅಥವಾ ೧೮೩೩ ಲಾರ್ಡ್‌ಬೆಂಟಿಕ್ ನಿಷೇಧಿಸಿದರು.

ಹಾಗೆಯೇ 'ಮಹಾಸತಿ' ವೀರದಿಮ್ಮವ್ವನ ಕಥನಗೀತೆಯ ಒಂದೆರಡು ನುಡಿ;

ಅಣ್ಣಗಳ ವರಿದಾಗ ಸಣ್ಣಾ ಮಲ್ಲಿಗೆ ಸಾವುರ
ಇನ್ನಾರೆ ಮಗಳೇ ಮುಡಿವೋರು । ಅಂದಿನ್ನಾ
ಅವರವ್ವ ಆಡಾಡಿ ಅಳುತಾಳೆ
.............................................. ||ಪ||
ಎಣಮಗಳ ಯಾಕಡದೆ ನನ್ನಮ್ಮ
ಎಣ್ಣ್ಯಾಗ ಬತ್ತಿ ಉರುದಂಗ । ಮಾನವರ
ಕಣ್ಣಾಗ ನಾವು ಉರುದೇವು
..............................................
ಅಡೆದೋಳು ನೀ ಅಣೆ ಬರಿಯಾ ಬರಿಲಲ್ಲ
ಅರುಗೀಲಿ ಒಬ್ಬಾಳು ಇರಿದಂತೆ । ಕುತುಕಂಡು
ಸರಿ ಬಂದಾ ಬರಿಯಾ ಬರೆದಾಳು
..............................................

ಕಿಚ್ಚು ಮಾಡೋರು ಹೆಚ್ಚಾಗಿ ಮಾಡೀರಿ
ಒಡಲಾ ಕಿಚ್ಚಿಗೀ ಕಿಚ್ಚು ಕಿರಿದಂದು ತಿಮ್ಮವ್ವ
ಆಲಾದ ಮರನೊಂದ ಕಡಿಸ್ಯಾಳೆ

..........................................

ಹರ್ತಿಯ ದಿಮ್ಮವ್ವ ಕೊಂಡವೇರಿ ಮಹಾಸತಿಯಾದ ಸ್ಥಳವನ್ನಾ ಗ್ರಾಮಸ್ಥರು ಇಂದಿಗೂ ತೋರಿಸುತ್ತಾರಂತೆ.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಗುಡ್ಡದಹಳ್ಳಿ ಗ್ರಾಮದ ನಾಗಮ್ಮ ಎಂಬುವರನ್ನಾ ಸಂದರ್ಶಸಿದಾಗ 'ಕೆಂಚಮ್ಮ' ಕಥನಗೀತೆಯ ಹಾಡನ್ನಾ ಧ್ವನಿ ಮುದ್ರಣದ ಮೂಲಕ ಸೆರೆ ಹಿಡಿಯಲಾದ ಕಥನಗೀತೆಯನ್ನು ಆ ಬರವಣಿಗೆಗೆ ಅಳವಡಿಸಿಕೊಂಡ ರೀತಿ ಕೆಳಗಿನಂತಿದೆ.

ಕಟ್ಟಿನಕಲ್ಲು ಕಳಕಳ ಮೆಟ್ಟಿನಕಲ್ಲು ಮಿಳಿಮಿಳಿ
ಇಟ್ಟಾಡಿದ ಕಲ್ಲು ಪದಮಾಲೆ । ಕಲ್ಲಿನ ಮ್ಯಾಲೆ
ಕೂತು ಮಿಂದಾಳೆ ಕೆಂಚಮ್ಮ

ಕೂತು ಮಿಂದಾಳೆ ಪದಮಾಲೆ ಕಲ್ಲಿನ ಮ್ಯಾಲೆ
ಸಿಡಿದು ಎಣೆಗಂಟು ಜಡುದಾಳೆ । ಕೆಂಚಮ್ಮ
ಪಚ್ಚೆಯ ಹೊಲಕೆ ನಡುದಾಳೆ

ಸೆರಗಿನ ತುಂಬ ಪಚ್ಚೆಯ ಕುಯ್ದಾಳೆ
ಜೋಡಿಯಾಲೆ ಮಾಲೆ ಮುಡಿದಾಳೆ । ಕೆಂಚಮ್ಮ
ಮಳಿಗೆ ಒಳಗೆ ನಡಿದಾಳೆ

ತಿಂಗಳ ತುಂಬೀದ ಮ್ಯಾಲೆ ಅಂದಲೇರಿದಂಗೆ
ಏರವೇ ಕೆಂಚಮ್ಮನ ಮೊಕ ಬಣ್ಣ । ಮೈಬಣ್ಣ
ಹಂಗೆಂದು ಜಗುರಾಯ ನಡುದಾನೆ

ಅಂಗೈವಾಲೆಯ ಮಾಡಿ ಮುಂಗೈ ಕಂಟ ಮಾಡಿ
ಬಿರಬಿನೊಂದ್ವಾಲೆ ಬರುದಾನೆ । ಜಗರಾಯ
ವಾಲೆ ಕೈಯ್ಯಾಲಿ ಹಿಡುದಾನೆ

ವಾಲೆ ಕೈಯಾಗೆ ಹಿಡುಕಂಡು ಕೆಂಚವ್ನ
ಬಯ್ಕೆ ಬಸ್ತ್ರ ನೆನಸ್ಯಾನು ತಿಂಗ ತಿಂಗಳಾ । ಬಯ್ಕೆಯ
ಮುದದಿಂದ ಮೈ ಮರೆತು ನೆನೆದಾನು

ಒಂದು ತಿಂಗಳಂದೊ ಕಂಚವ್ವೆ ಆಗಲೆ
ಒಂದೆಲೆ ಬಿಲದ ಎಳದಾದು । ಒಳಗಿರುವ
ಯಾಲಕ್ಕಿ ಗೊನೆಯ ಬಿಗುಸ್ಯಾಳು

ಈಗಲೀಗ ಕೆಂಚವ್ವೆ ಎರಡು ತಿಂಗಳಾದೂ
ಎರಡಲೆ ಬಲಿದ ಎಳೆದಾಮ । ಒಳಗಿರುವ
ಯಾಲಕ್ಕಿ ಪಂಚೊಳ್ಳಲೆಯ ಬವಸಾಳು

ನೀ ನಿಂಬೆ ಅಣ್ಣ ಬಯಸಿದರೆ ಕೆಂಚಮ್ಮ
ಮಾರಾಳ ಬುಟ್ಟು ತರಸ್ಯಾರು । ದೊಡ್ಡಗೌಡ್ರು
ಕೆಂಚಮ್ಮ ನಿನ ಬಯಕೆಯ ಬುಡುಸ್ಟೇಳು

ಕಟ್ಟಿಕಲ್ಲು ಕಳಿಕಳಿ ಮೆಟ್ಟಿನ ಕಲ್ಲು ಮಿಳಿಮಿಳಿ
ಆಗಲೆ ಕೆಂಚವ್ವೊ ಒಂಬತ್ತು ತಿಂಗಳಾದೋ
ಒಂಬತ್ತೆಲೆ ಬಲಿದ ಎಳೆದಾಟು । ಒಳಗಿರುವ
ತೌರೂರಿನ ಬುತ್ತಿ ಬಯಸಾಳು

ತೌರೂರಿನ ಬಯಕೆ ಬವಸಿದರೆ ಕೆಂಚಮ್ಮ
ಅದಕಾಗಿ ವಾಲೆಯ ಬರೆದ । ದೊಡ್ಡಗೌಡ್ರು
ಕನನ್ನಿಂದ ಎಚ್ಚೆತ್ತು ಆಳ ಕರದಾರು

ಗಳಿಗೇಲಿ ಬರೆದ ವಾಲಿ ಹಿಡ್ಕಂಡು
ಕೆಂಚವನ್ನ ಬಯಕೆ ಇಷ್ಟೊತ್ತು ನೆನೆದು
ನಿಂತ ಮನ ನಂದಿಪಾಲು ಈಗಲೀಗ

ಊರ ಮುಂದ್ಲ ಕಟ್ಟೀಗೆ ನಡೆದಾರು ಗೌಡಾರು
ನಿಂದು ಮೂರು ಸೊಲ್ಲ ಕರುದಂತ । ಹೊತ್ನಲ್ಲಿ
ಊಳಿಗ ಓಡೋಡಿ ಬರುತಾನೆ

ಒಂದೇ ಬರದಿಂದೋಡಿದ ಊಳಿಗ
ಜಿಗಮಲ್ಲರ ಮನೆಗೆ ಹೋಗಂತ । ಹೊತ್ನಲ್ಲಿ
ಬೆರಕೂರ ಕಡೆಯಿಂದ ಬೋರಯ್ಯ ಬರುತ್ತಾನೆ

ಬಾಯಲಿದ್ದ ಮಾತು ಬಾಯಲಿದ್ದಂಗೆ
ಹೋಗಿ ರಾಜಂಗ್ಳ ಇಳುದಾನು । ಊಳಿಗ
ಬಗ್ಗಿ ಸಲಾಮು ಒಡದಾನು

ಹುಟ್ಟಿನಿಂದ ಸಾಯುವ ತನಕ ಪುರುಷರ ಅಧೀನದಲ್ಲೇ ಬದುಕುವ ಮಹಿಳೆಯರೊಂದಿಗೆ ತಮ್ಮ ಬದುಕಿನ ಯಾವುದೇ ನಿರ್ಣಯಗಳನ್ನು ತಾನೇ ತೆಗೆದುಕೊಳ್ಳಲು ಅವಕಾಶವೇ ಇಲ್ಲದಿರುವುದರಿಂದ ಅಂಥವರಿಗೆ ಪ್ರತಿಭಟನೆ ಕಷ್ಟವಾಗುತ್ತದೆ. ಹೀಗಿರುವಾಗ ಅವರ ನೋವು ಅನುಕಂಪವಾಗಿ ಹೊರಹೊಮ್ಮುವುದೇ ಹೆಚ್ಚು ಆದಾಗ್ಯೂ ಕೆರೆಗೆ ಬಲಿಯಾಗುವ ಇಲ್ಲಿನ ಹೆಂಗಸರು ತಮ್ಮದೇ ಆದ ರೀತಿಯಲ್ಲಿ ಮೌನ ಪ್ರತಿಪ್ರಭಟನೆಯನ್ನು ವ್ಯಕ್ತಪಡಿಸಿದ್ದಾರೆ. ಕೆರೆಗೆಹಾರದ ಭಾಗೀರಥಿ ಹೊಲಮನೆ ಒಯ್ದು ಹೊಳೆದಂಡಿಗ್ಹಾಕಪ್ಪ ಎಂದು ತಂದೆಗೆ ಹೇಳಿದ್ದಾಗಿರಬಹುದು. ವಾಲಿಯ ಜೋಡೊಯ್ದು ಒಲಿಯಾಗ ಹಾಕವ್ವ ಎಂದು ತಾಯಿಗೆ ಹೇಳಿದ್ದಾಗಿರಬಹುದು ಅಥವಾ ಹೊನ್ನಮ್ಮನ ಕಥೆಯಂತೆ ನೋವಿನಿಂದ ತನ್ನಷ್ಟಕ್ಕೆ ಮಾವ ಮಲ್ಲೇಗೌಡ ಕಂಬಳಿ ಹುಳಾಗು, ಅತ್ತೆ ಮಲ್ಲಮ್ಮ ತಾಯಿ ಗೊಣ್ಣೆಯ ಹುಳಾಗು ಎಂದು ಶಪಿಸಿದ್ದಿರಬಹುದು. ಹೀಗೆಯೇ ಸ್ತ್ರೀಯರನ್ನು ಪ್ರತಿನಿಧಿಸುವಂತಹ ಕಥನಗೀತೆಗಳು ನಮಗೆ ಸಾಕಷ್ಟಾಗಿ ದೊರೆಯುತ್ತವೆ.

**ಅಡಿಟಿಪ್ಪಣಿಗಳು**

೧. ಕಲ್ಬುರ್ಗಿ ಎಂ.ಎಂ., ಮರಣ ಸ್ಮಾರಕಗಳು(ಅಪ್ರಕಟಿತ ಉಪನ್ಯಾಸದಲ್ಲಿ ಇದರ ಒಂದು ಸವಿಸ್ತಾರವಾದ ವಿವೇಚನೆಯನ್ನು ಕಾಣಬಹುದು).

೨. ದೇವೇಂದ್ರಕುಮಾರ ಸಿ. ಹಕಾರಿ, ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು. ೨೧೧

೩. ಅದೇ ಪು. ೨೧೨

೪. ಅನಂತನಾಥ ಪುರಾಣ, ಪು. ೧೧, ೭೩

೫. ಅದೇ ಪು. ೨೧೩

೬. ದೇವೇಂದ್ರಕುಮಾರ ಸಿ. ಹಕಾರಿ, ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು.೨೧೫

೭. ಜೀ.ಶಂ. ಪರಮಶಿವಯ್ಯ, ಆಯ್ದ ಜನಪದ ಕಥೆಗಳು, ಪು. ೧೫೮

೮. ದೇವೇಂದ್ರಕುಮಾರ ಸಿ. ಹಕಾರಿ, ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು. ೨೧೬

೯. ವಕ್ತೃಮಾಹಿತಿ: ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲೂಕು ಗುಡ್ಡದಹಳ್ಳಿ ಗ್ರಾಮದ ನಾಗಮ್ಮ ಎಂಬುವರಿಂದ 'ಕೆಂಚಮ್ಮ' ಕಥನಗೀತೆಯ ಹಾಡನ್ನು ಸಂಗ್ರಹಿಸಲಾಗಿದೆ.

## ಅಧ್ಯಾಯ ನಾಲ್ಕು

# ಜನಪದ ಕಥನಗೀತೆಗಳಲ್ಲಿ ಮಹಿಳೆ

೪.೧. ಕಥನಗೀತೆಗಳಲ್ಲಿ ಮಹಿಳಾ ಸಂಕಥನ

೪.೨. ಕಥನಗೀತೆಗಳಲ್ಲಿ ಮಹಿಳಾ ಪಾತ್ರಗಳ ಸ್ವರೂಪ

೪.೩. ಮಹಿಳಾ ಪಾತ್ರಗಳ ವಿಶ್ಲೇಷಣೆ

೪.೪. ಮಹಿಳಾ ಸಂಘರ್ಷದ ನೆಲೆಗಳು

ಅಧ್ಯಾಯ ನಾಲ್ಕು

# ಜನಪದ ಕಥನಗೀತೆಗಳಲ್ಲಿ ಮಹಿಳೆ

## ೪.೧. ಜನಪದ ಕಥನಗೀತೆಗಳಲ್ಲಿ ಮಹಿಳಾ ಸಂಕಥನ

ಮಹಿಳಾ ಲೋಕವನ್ನು ಗ್ರಹಿಸುವ ಬಗೆ ಇಂದು ಬದಲಾಗುತ್ತಿದೆ. ಹೆಣ್ಣಿನ ಬದುಕನ್ನು ಕುರಿತು ಚಿಂತಿಸುವ, ಶೋಧಿಸುವ ಮತ್ತು ಕಟ್ಟುವ ಪ್ರಯತ್ನ ನಡೆಯುತ್ತಿದೆ. ಲಿಂಗಸಮಾನತೆ ಸ್ಥಾಪಿಸುವ ಕಾಳಜಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಅಷ್ಟೇ ಅಲ್ಲ ವೈಯಕ್ತಿಕ ನೆಲೆಯಲ್ಲೂ ಪ್ರಕಟವಾಗುತ್ತಿದೆ. ಈ ಎಲ್ಲ ಪ್ರಯೋಗ, ಪ್ರಕ್ರಿಯೆಗಳು ಮಹಿಳಾ ಸ್ಪಂದನದ ಪರಿಸರ ನಿರ್ಮಾಣ ಮಾಡುವಲ್ಲಿ ಒಂದಷ್ಟು ಯಶಸ್ವಿಯಾಗಿದೆ. ಇದು ಎಲ್ಲ ಸ್ತ್ರೀಪರ ಮನಸ್ಸುಗಳಿಗೆ ಸಮಾಧಾನ ತಂದಿಟ್ಟ ಸಂಗತಿ.

ಈ ಸಮಾಧಾನ ಕಾಣುವ ಸಂದರ್ಭದಲ್ಲೇ ಹೊಸ ಆತಂಕದ ಭಯ ಕಾಡತೊಡಗಿದೆ. ಇದು ಲಿಂಗನೆಲೆಯಲ್ಲಿ ಮಹಿಳೆಯರನ್ನು ಸಾಮೂಹಿಕ ಶಕ್ತಿಯಾಗಿ ಕಟ್ಟುವ ಮತ್ತು ಲಿಂಗವ್ಯವಸ್ಥೆಯ ನಿರಚನದ ಆಶಯಕ್ಕೆ ಸವಾಲು ಒಡ್ಡುತ್ತಿದೆ. ಮಹಿಳಾ ಸಂಘ ಶಕ್ತಿಯನ್ನು ಮುರಿಯುವ ಹಂತದಲ್ಲಿ ಕೋಮುವಾದಿತನ, ಜಾತಿವಾದಿತನಗಳು ಅಪಾಯಕಾರಿಯಾಗಿ ಬೆಳೆಯುತ್ತಿವೆ. ಮಹಿಳೆ ಪಡೆದುಕೊಂಡ ಉದ್ಯೋಗ, ಅಧಿಕಾರಗಳು ನಿರೀಕ್ಷಣೆ ಬದಲಾಗಿ ಮಹಿಳೆಯರಲ್ಲಿ ಸೀಳುಗಳನ್ನು ಸೃಷ್ಟಿಸಲು ಕಾರಣವಾದುದು ದೊಡ್ಡ ದುರಂತ.

ಜನಪದ ಸಾಹಿತ್ಯದ ಬಹುಮುಖ್ಯ ಹಾಗೂ ಜನಪ್ರಿಯ ಪ್ರಕಾರ 'ಜನಪದಗೀತೆ' ಜನಪದ ಗೀತೆಯನ್ನು ಸ್ತ್ರೀ-ಪುರುಷರ ಪ್ರಕಾರ ಎಂದು ನಿಖರವಾಗಿ ಹೇಳುವುದು ಅಸಾಧ್ಯವಾದರೂ ಅದು

ಬಹುತೇಕ ಮಹಿಳಾ ಅಭಿವ್ಯಕ್ತಿಯೇ ಆಗಿದೆ. ಜನಪದಗೀತೆ ಹಾಡದ ಜನಪದ ಹೆಣ್ಣುಗಳಿಲ್ಲ. ಅವರೆಲ್ಲ ಹಾಡಿನ ಗೂಡುಗಳು. ಹೀಗೆ 'ಒಂದು ಪ್ರಕಾರದ ಪ್ರಸರಣ ಹಾಗೂ ಪ್ರದರ್ಶನ'ವನ್ನು ನೀಡುವ ವ್ಯಕ್ತಿಗಳು ಹೆಣ್ಣಾಗಿರುವುದು ಕರ್ತೃವಿನ ಪ್ರಶ್ನೆಯಲ್ಲಿ ಮುಖ್ಯವಾಗುತ್ತದೆ. ಹೀಗಾಗಿ ಜನಪದ ಪ್ರಕಾರವೊಂದರ ಸೃಷ್ಟಿಕರ್ತರ ಅಥವಾ ಕರ್ತೃಯಾರೆಂಬ ಪ್ರಶ್ನೆಗಿಂತ ಆ ಪ್ರಕಾರದ ಪ್ರದರ್ಶನಕಾರರು ಯಾರು ಎನ್ನುವುದು ಸಂವೇದನೆಯನ್ನು ತಿಳಿಯುವಲ್ಲಿ ಮಹತ್ವದ್ದಾಗುತ್ತದೆ. ಜನಪದ ಪಠ್ಯ ಅಥವಾ ಸಂಗೀತ ಒಂದು ಚಲನ ಪ್ರಕ್ರಿಯೆಯಾಗಿರುವಲ್ಲಿ ಹಾಡುಗಾರ ಅಥವಾ ಪ್ರದರ್ಶನಕಾರರಿಗೆ ಅದರ ಮರುಸೃಷ್ಟಿಗೆ ಬಹಳಷ್ಟು ಅವಕಾಶವಿದೆ. ಇಲ್ಲಿ ಪ್ರದರ್ಶನಕಾರರೇ ಕರ್ತೃವಾಗಿರುತ್ತಾರೆ ಎನ್ನುವುದು ನಮಗೆ ತಿಳದಿರಬೇಕು. ಈ ಹಿನ್ನೆಲೆಯಲ್ಲಿ ಜನಪದ ಗೀತೆಗಳ ಪ್ರದರ್ಶನಕಾರರು ಮಹಿಳೆಯಾಗಿರುವುದರಿಂದ ಗೀತೆಗಳನ್ನು ಮಹಿಳಾ ಪ್ರಕಾರವೆಂದು ನಿರ್ವಹಿಸಬೇಕಾಗಿದ್ದು, ಅದನ್ನು ಮಹಿಳಾ ಸಂವೇದನೆಯ ಅಭಿವ್ಯಕ್ತಿ ಮಾಧ್ಯಮವಾಗಿ ಕಂಡುಕೊಳ್ಳಬೇಕಾಗಿದೆ.

ಭಾರತದ ಬಹುರೂಪಿ ಸಂಸ್ಕೃತಿ ಮಾತೃರೂಪಿಯಾದುದು. ಸಾಮಾಜಿಕ ಸಾಂಸ್ಕೃತಿಕ ಸ್ತರದಲ್ಲಿ ಅದು ಇಂದೂ ಜೀವಂತವಾಗಿದೆ. ಕನ್ನಡ ಜಾನಪದದಲ್ಲಿ ಅದರ ಗಾಢವಾದ ಚಹರೆಯನ್ನು ಗುರುತಿಸಬಹುದು. ಸತೀ ಕೇಂದ್ರಿತವಾದ ಮಾತೃಪ್ರಧಾನ ಸಮಾಜದ ಹೆಣ್ಣಿನ ಸ್ಥಾನಮಾನ ಪುರುಷ ಕೇಂದ್ರಿತ ಸಮಾಜಕ್ಕಿಂತ ತೀರಾ ಭಿನ್ನವಾಗಿದೆ. ಇಲ್ಲಿ ಹೆಣ್ಣಿನ ಹುಟ್ಟು ಮತ್ತು ಬದುಕು ಅತ್ಯಂತ ಅಗತ್ಯದ ಹಾಗೂ ಗೌರವದ ಸಂದರ್ಭವಾಗಿದ್ದು ನಿರ್ಬಂಧವಿಲ್ಲದ ಸಹಜಮುಕ್ತ ಸ್ಥಿತಿಯದಾಗಿರುತ್ತದೆ. ಹೆಣ್ಣಿಗೆ ಒದಗಿರುವ ಆಸ್ತಿ. ಪರಂಪರೆ ಹಾಗೂ ಕುಟುಂಬದ ಉತ್ತರಾಧಿಕರತ್ವದ ಜೊತೆಗೆ ಸಮಾಜದಲ್ಲಿ ಲಭ್ಯವಾಗುವ ಸಮಷ್ಟಿ ಪ್ರಜ್ಞೆ ಹಾಗೂ ಸಾಮಾಜೀಕರಣಗಳು ಹೆಣ್ಣು ಶಕ್ತಿಯ ಮೂಲದ್ರವ್ಯವಾಗಿದೆ.

ಮಾತೃರೂಪಿ ಕುಟುಂಬದಲ್ಲಿ ಗಂಡು ಮಕ್ಕಳು ಎಷ್ಟಿದ್ದರೂ ಕುಟುಂಬಕ್ಕೆ, ಮನೆತನಕ್ಕೆ ಫಲವಿಲ್ಲ, ಶೋಭೆಯಿಲ್ಲ. 'ಕುಲದೀಪ'ವಾಗಿ ಬೆಳಗುವವಳು, ಕುಟುಂಬಕ್ಕೆ ಕಲಶಪ್ರಾಯವಾಗುವವಳು ಹೆಣ್ಣುಮಗಳು.

ಗಂಡು ಸಂತಾನ ಒಂಭತ್ತು ಕೊಡಿಸ್ವಾಮಿ
ಒಂಬತ್ತೇಳಿಗೂ ಕಳಸವು-ಕೈ ಮುಗುವಲ್
ರಂಬಿ ಒಬ್ಬಳನು ಕೊಡಿಸ್ವಾಮಿ

ಎನ್ನುವ ಬೇಡಿಕೆ ಮಾತೃಪ್ರಧಾನ ಬಂಧುತ್ವ ವ್ಯವಸ್ಥೆಯ ತಾಯಿಯದು.

ಕುಟುಂಬದ ಪ್ರೀತಿ, ಗೌರವ ಪಡೆದ ಹೆಣ್ಣು ಆತ್ಮವಿಶ್ವಾಸವ ತುಂಬಿಕೊಂಡೇ ಬೆಳೆಯುತ್ತಾಳೆ. ಈಕೆ ಯಾರಿಗೂ ಅಂಜುವ, ಅಳುಕುವ ಮಗಳಲ್ಲ. ಪಿತೃಪ್ರಧಾನ ಸಮಾಜದ ಹೆಣ್ಣೊಬ್ಬಳ ಸಾಮಾಜಿಕ, ಸಾಂಸ್ಕೃತಿಕ ಪಲ್ಲಟ, ಸಂಘರ್ಷ ಈಕೆಯದಲ್ಲ. ಮದುವೆಯಾದರೂ ಹೆಣ್ಣುಕುಲಕ್ಕೆ ಹೊರಗಲ್ಲ. ಗಂಡನ ಮನೆಯ ಬಾಳುವೆ ಈಕೆಗೆ ಅನಿವಾರ್ಯವಲ್ಲ. 'ಪತಿಯೇ ಪರದೈವ', 'ಗಂಡನ ಮನೆಯೇ ಹೆಣ್ಣಿಗೆ ಮೋಕ್ಷ' ಎನ್ನುವ ದೃಷ್ಟಿ ಇಲ್ಲಿನದಲ್ಲ. ಆ ಸಂಬಂಧ ಆಕೆಯ ಆಯ್ಕೆಯ ಪ್ರಶ್ನೆಯದು.

ಹೀಗಾಗಿ ಮದುವೆಯಾಗಿ ಗಂಡನ ಮನೆಗೆ ಮಗಳನ್ನು ಕಳುಹಿಸುವಾಗ ಹಿತನುಡಿ ಸಾಂಪ್ರದಾಯಿಕ ಹದಿಬದೆಯ ಕಿವಿಮಾತಿನ ಧಾಟಿಯದಲ್ಲ. 'ಗಂಡನ ದೂರು ತವರಲ್ಲಿ ಆಡಿದರೆ ಹೆಣ್ಣೇ ನಿನ್ ಬಾಳು ಹಾಳಕ್ಕು' ಎನ್ನುವ ಕನ್ಯೋಪದೇಶಕ್ಕೆ ಬದಲಾಗಿ

ಅಂದ ಗಂಡನ ಮಾತ ಬಂದ್ಹೇಳು ನನ್ಮಗ್ಳೆ
...... ಆಡ್ದಾ್ಮತ ಬಂದ್ಹೇಳು ನಿನ್ನ ತವರಿಗೆ

ಎನ್ನುವ ಬೆಂಬಲ ತವರಿನಿಂದ ಈ ಹೆಣ್ಣಿಗೆ ಗಂಡನಾದವನು ದೇವರೂ ಅಲ್ಲ. ಮದುವೆ ಸ್ವರ್ಗದಲ್ಲಿ ನಡೆದದ್ದೂ ಅಲ್ಲ. ಈ ಸಂಬಂಧ ಜನ್ಮ ಜನ್ಮಾಂತರದ್ದೂ ಅಲ್ಲ. ಗಂಡ ಹೆಣ್ಣೊಬ್ಬಳಿಗೆ ತನ್ನ ವಂಶಾಭಿವೃದ್ಧಿಯ ಅಗತ್ಯ ಅಷ್ಟೇ. ಹೀಗಾಗಿ ಗಂಡ ಆಕೆಗೆ ಯಾವತ್ತೂ ಹಿತವಾದವನಲ್ಲ.

ಪ್ರಧಾನ ಸಂಸ್ಕೃತಿ ಕೆಲವು ಮೌಲ್ಯ, ಮಾದರಿಗಳನ್ನು ಸ್ಥಾಪಿಸುವ ಪ್ರಯತ್ನ ಮಾಡುತ್ತಿರುವಾಗಲೆ ಪರ್ಯಾಯ ಸಂಸ್ಕೃತಿ ಚಿಂತನೆಗಳು ಈ ಪ್ರಯತ್ನವನ್ನು ಒಡೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತದೆ. ಈ ಪ್ರಕ್ರಿಯೆಯಾಗಿಯೇ ಮೌಖಿಕ ಪರಂಪರೆಯ ಜನಪದ ಕಥನ ಕವನ(ಗೀತೆ), ಕಾವ್ಯ ಪುರಾಣಗಳನ್ನು ಕಾಣಬೇಕಾಗಿದೆ. ಈ ನೆಲೆಯ ಜನಪದ ಮಹಾಭಾರತ, ಜನಪದ ರಾಮಾಯಣಗಳ ಅಧ್ಯಯನ ನಡೆಸಬೇಕಾಗಿದೆ. ಪರ್ಯಾಯ ಸಂಸ್ಕೃತಿ ದರ್ಶನ ಶೋಧನೆಗೆ ನಾನಿಲ್ಲಿ 'ಕೆರೆಗೆಹಾರ, ಉತ್ತದೇವಿ, ಹೊನ್ನಮ್ಮ, ಈರೋಬಿ, ಹಿರಿದಮ್ಮ, ನಾಗವ್ವ, ಮಾಸ್ತಮ್ಮ ಮಹಾಸತಿ ಕಾಟವ್ವ ಇನ್ನೂ ಮುಂತಾದ ಕಥನಗೀತೆಗಳನ್ನು ಆಯ್ದುಕೊಂಡಿದ್ದೇನೆ.

'ಕೆರೆಗೆಹಾರ' ಹೆಣ್ಣೊಬ್ಬಳು ಹೊಸ ಕೆರೆಗೆ ಹಾರವಾದ ಕಥೆಯನ್ನು ಹೇಳುವ ಕನ್ನಡದ ಕಥನಕಾವ್ಯ. ಈಗಾಗಲೆ ಕನ್ನಡದಲ್ಲಿ ಇದರ ಅನೇಕ ಪಾಠಗಳು ಸಂಗ್ರಹಗೊಂಡು ಪ್ರಕಟವಾಗಿದೆ. ಆದರೆ ಈ ಎಲ್ಲ ಬರಹಗಳು ಇಲ್ಲಿನ ಕಾವ್ಯಗುಣವನ್ನು ಹುಡುಕಾಡಿವೆ. ಅಥವಾ ಹೆಣ್ಣನ್ನು ಭಾರತೀಯ ಸಾಂಸ್ಕೃತಿಕ ರಾಯಭಾರಿಯಾಗಿ ಗ್ರಹಿಸಿ ಆಕೆಯ ಸಾವನ್ನು ವೈಭವೀಕರಿಸಿವೆ. ಜನಪದ ಸಂಗತಿಯೊಂದರ ಅರ್ಥ ಮತ್ತು ರಚನೆಗಳ ಶೋಧಕ್ಕೆ ಅದರ ಭಿನ್ನ ಪಾಠಗಳ ಮಾಹಿತಿ ಸಾಮಗ್ರಿಗಳನ್ನು ಮುಖಾಮುಖಿಯಾಗಿಟ್ಟು ಅವುಗಳ ಪರಸ್ಪರ ಅಂತಃ ಸಂಬಂಧವನ್ನು ಮತ್ತು ತಾರ್ಕಿಕ ವೈರುಧ್ಯಗಳನ್ನು ಗುರುತಿಸುವ ಕೆಲಸವಾಗಬೇಕಾಗುತ್ತದೆ. ಇದಕ್ಕೆ ಹೊರವಿಸ್ತಾರದಲ್ಲಿ ಅದು ಆಡುವ ಮಾತಿಗಿಂತ ಭಿನ್ನವಾಗಿ ಅದರ ಒಳಮಿಡಿತದ ದನಿಯನ್ನು ಗ್ರಹಿಸಬೇಕಾಗುತ್ತದೆ. ಇದಕ್ಕಾಗಿ ಜನಪದ ಸಂಗತಿ ಅಥವಾ ಪ್ರಕಾರವೊಂದರ ಪಠ್ಯ, ಸಂದರ್ಭದೊಂದಿಗೆ ಬಂಧುತ್ವ ವ್ಯವಸ್ಥೆಯ ಹಿನ್ನೆಲೆಯಲ್ಲಿಟ್ಟು ಅರ್ಥವನ್ನು ಬಗೆಯಬೇಕಾಗುತ್ತದೆ. ಇದೇ ಮೊದಲಬಾರಿಗೆ 'ಕೆರೆಗೆಹಾರ'ವನ್ನು ಸ್ತ್ರೀ ಕೇಂದ್ರಿತ ನೆಲೆಯಿಂದ ಭಾಗೀರಥಿಯ ಮೌನವನ್ನು ಬಗೆಯುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ. ತನ್ನನ್ನು ಹಾರಕೊಡುವ ಸಂಗತಿ ತಿಳಿದಲ್ಲಿಂದ ಕಾವ್ಯವನ್ನು ಇಡಿಯಾಗಿ ದಟ್ಟೈಸಿಕೊಂಡಿರುವ ಭಾಗೀರಥಿಯ ಮೌನವನ್ನು ಸ್ವಲ್ಪ ಆಲಿಸಲು ಸಾಧ್ಯವಾದರೆ ಇಲ್ಲಿ ಪುರುಷನ 'ಮಾತುತಪ್ಪದ ಹಿರಿತನದ'ದ ಒಳಗಿನ ಕ್ರೌರ್ಯ ಸಶಕ್ತವಾಗಿ ಕೇಳುತ್ತದೆ. ಇದಕ್ಕಾಗಿ ವಿಭಿನ್ನ

ಸಾಂಸ್ಕೃತಿಕ-ಪ್ರಾದೇಶಿಕ ಪರಿಸರದ ಕೆಳಗೆ ಮುಖ್ಯವಾದವುಗಳನ್ನು ಕಾಣಿಸಿದ ಪಠ್ಯಗಳನ್ನು ಅಧ್ಯಯನಕ್ಕೆ ಆಯ್ದುಕೊಂಡಿದ್ದೇನೆ. ಇಲ್ಲಿ,

೧. ಕೆರೆಗೆಹಾರ- ಸಂ: ಬೆಟಗೇರಿ ಕೃಷ್ಣಶರ್ಮ

೨. ವಡ್ಡರ ಬೋಯಿ- ಸಂ: ಕ.ರಾ.ಕೃ.

೩. ಹುಳಿಯಾರ ಕೆಂಚವ್ವ- ಸಂ: ಜೀ.ಶಂ. ಪರಮಶಿವಯ್ಯ

೪. ಮದಗದ ಕೆಂಚಮ್ಮ- ಸಂ: ಬಳ್ಳಕೆರೆ ಹನುಮಂತಪ್ಪ

೫. ಹೊಸಕೆರಿ ಹೊಸಬಾಮಿ- ಸಂಫ: ಗಾಯಿತ್ರೀ ನಾವಡ

೬. ನಿಗಳ ಬಲಿ- ಸಂ: ಕೆದಿಲಾಯ

೭. ಗುಣಸಾಗರಿ-

೮. ಉತ್ತರದೇವಿ-

೯. ಬಂಜೆ ಹೊನ್ನಮ್ಮ-

೧೦. ಬಯಲು ಸೀಮೆಯ ಗೌಡನ ಮಗಳು-

೧೧. ಜಾಗಲೆ

೧೨. ಕಲಿಯುಗದ ಬಾಲೆ

೧೩. ಮಹಾಸತಿ ವೀರತಿಮ್ಮವ್ವ

೧೪. ಮಹಾಸತಿ ತಾಡಿನಾಗಮ್ಮ

೧೫. ಮಹಾಸತಿ ಕಾಟವ್ವ

೧೬. ಮದಗದ ಕೆಂಚಮ್ಮ (ಕೆಂಚವ್ವ)

೧೭. ಧರಣಿಯಮ್ಮ

೧೮. ವಲ್ಲಣದೇವಿ

೧೯. ಕಾಡಸಿದ್ದವ್ವ

೨೦. ಸತಿ ಚೆನ್ನಮ್ಮ

೨೧. ಈರೋಬಿ

೨೨. ಹುಳಿಯಾರು ಕೆಂಚಮ್ಮ

೨೩. ಅಣಜಿ ಹೊನ್ನಮ್ಮ

೨೪. ಒಡ್ಡರ ಬೋಯಿ

೨೫. ಮಲ್ಲಿಗೆ ಮಾದೇವಿ

೨೬. ಕೆರೆ ಹೊನ್ನಮ್ಮ

೨೭. ಧರಣೆಯಮ್ಮ

'ಕೆರೆಗೆಹಾರ' ಕಥನಗೀತೆಯನ್ನು ಹಲವು ವಿದ್ವಾಂಸರು ಪ್ರಾದೇಶಿಕ ಹಿನ್ನೆಲೆಯಲ್ಲಿ ವಿಭಿನ್ನವಾಗಿ ಸಂಗ್ರಹಿಸಿದ್ದಾರೆ. ಅಂತಹವುಗಳಲ್ಲಿನ ಭಿನ್ನತೆಯನ್ನು ಪಾತ್ರದ ವಿಶ್ಲೇಷಣೆ, ಸಂಕಥನವನ್ನು ಚರ್ಚಿಸಲಾಗಿದೆ. ಕಥಾಚಲನವನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು. ಊರಗೌಡ ಕೆರೆ ಕಟ್ಟಿಸುತ್ತಾನೆ. ಹೊತ್ತಿಗೆ ತೆಗಿಸಿ ಕೇಳಿದಾಗ ನರಬಲಿ ಕೊಡಬೇಕು ಎಂದಾಗುತ್ತದೆ. ಮನೆಯಲ್ಲಿ ಸೊಸೆಯನ್ನು ಬಲಿಕೊಡುವ ನಿರ್ಧಾರವಾಗುತ್ತದೆ. ಸಂಗತಿ ಪರೋಕ್ಷವಾಗಿ ಸೊಸೆಗೆ ತಿಳಿಯುತ್ತದೆ. ಬದುಕುವ ಹುಡುಕಾಟ ನಡೆಸುತ್ತಾಳೆ. ಅಲ್ಲಿ ವಿಫಲಳಾಗಿ ಅನಿವಾರ್ಯಕ್ಕೆ ಒಪ್ಪಿಕೊಳ್ಳುತ್ತಾಳೆ. ಸುಳ್ಳು ನೆಪವೊಡ್ಡಿ ಸೊಸೆಯನ್ನು ಕೆರೆಗೆ ಇಳಿಸುತ್ತಾರೆ, ಹಾರವಾಗಿಸುತ್ತಾರೆ.

ಕಥನ ಕವನದಲ್ಲಿ ಬಿಚ್ಚಿಕೊಳ್ಳುವ ಗಂಡಿನ ಅಧಿಕಾರಶಾಹಿ ವಾಸ್ತವದಲ್ಲಿ ಭಾಗೀರಥಿಯ ಪ್ರಜ್ಞೆಯನ್ನಿಟ್ಟು ವಿಶ್ಲೇಷಿಸುವುದು ಸಾಧ್ಯವಾದರೆ ಈ ಇಡೀ ಕತೆ ಹೊಸ ವ್ಯಾಖ್ಯಾನವನ್ನು ಬಯಸುತ್ತದೆ. ಮರುಮೌಲ್ಯ ನಿರ್ಮಾಣಕ್ಕೆ ಒತ್ತಾಯಿಸುತ್ತದೆ. ಈ ಹೊಸ ವ್ಯಾಖ್ಯಾನದ ತಾತ್ವಿಕ ಹಿನ್ನಲೆಯಾಗಿ ನಾನಿಲ್ಲಿ ಹೆಣ್ಣು–ಗಂಡು, ಪ್ರಕೃತಿ–ಸಂಸ್ಕೃತಿಗಳ ದ್ವಂದ್ವ ವರ್ಗೀಕರಣವನ್ನು ಮಾಡಿದ್ದೇನೆ.

ಕೆಲವು ಕಥನ ಗೀತೆಗಳಲ್ಲಿ [ಕೆರೆಗೆಹಾರ, ವಡ್ಡರಬೋಯಿ, ಹುಳಿಯಾರ ಕೆಂಚಮ್ಮ, ಮದಗದ ಕೆಂಚಮ್ಮ, ಹೊಸಕೆರಿ ಹೊಸಬಾಯಿ] ಸಮಾನವಾಗಿರುವ ಒಂದು ಅಂಶವೆಂದರೆ ಕೆರೆಗೆ ಹಾರವಾದವಳು ಹೆಣ್ಣು ಎನ್ನುವುದು ಮತ್ತು ಆಕೆ ಆ ಕುಟುಂಬದ ಸೊಸೆಯಾಗಿರುವುದು. ಇಲ್ಲಿ ಹೆಣ್ಣೇ ಏಕೆ ಬಲಿಯಾಗಬೇಕು ಎನ್ನುವ ಪ್ರಶ್ನೆ ಕಥನ ಕವನ ಮುಚ್ಚಿಟ್ಟುಕೊಂಡಿರುವ ಅನೇಕ ಒಳಸುಳುಹುಗಳನ್ನು ಹೊರಗೆಡಹುತ್ತದೆ. ಪ್ರಕೃತಿಯ (ಹೆಣ್ಣು) ನಾಶದ ಮೇಲೆ ಸಂಸ್ಕೃತಿಯ (ಪುರುಷ) ಕಟ್ಟೋಣ ನಡೆದಿದೆ. ಗಂಡಿನಿಂದ ಮತ್ತು ಗಂಡಿಗಾಗಿ ರಚಿತವಾದ ಈ ಕಟ್ಟುವಿಕೆಯಲ್ಲಿ ಹೆಣ್ಣಿನ ಬದುಕು ಮತ್ತು ಸಾವನ್ನು ಗಂಡಿನ ಶ್ರೇಯಸ್ಸಿಗಾಗಿ ಬಳಸಿಕೊಳ್ಳಲಾಗಿದೆ.

ಪ್ರಕೃತಿ ಮತ್ತು ಸಂಸ್ಕೃತಿಯ ಘರ್ಷಣ ಹಾಗೂ ಗಂಡಿನ ಅಪ್ರಾಮಾಣಿಕತೆ, ವ್ಯವಹಾರ ಜಾಣ್ಮೆಗಳು ಹೆಣ್ಣನ್ನು ಶಾಶ್ವತವಾಗಿ ಕೆರೆಗೆ, ಕೋಟೆಗೆ, ಕಟ್ಟಡಕ್ಕೆ, ಸೇತುವೆಗೆ ಬಲಿಯಾಗಿಸಿದೆ. ಗಂಡಿನ ಆಪ್ರಾಮಾಣಿಕತೆ ಗಂಡಿನ ಸಾವಿಗೆ ಕಾರಣವಾಗುವುದಿಲ್ಲ. ಅದು ಹೆಣ್ಣಿನ ಸಾವಿನಲ್ಲಿಯೇ ಪರ್ಯಾವಸಾನವಾಗುತ್ತದೆ ಎನ್ನುವಲ್ಲಿನ ಪುರುಷ ದ್ವಂದ್ವವನ್ನು ಬಯಲಿಗೊಡ್ಡಬೇಕು.

ಈ ಎಲ್ಲಾ ತೆರನ ಬಲಿಗಳು ರಾಜಪ್ರಭುತ್ವ ಮತ್ತು ಹೋರಾಟದ ಬಣಗಳ ಉತ್ಪನ್ನಗಳು. ಹೋರಾಟದ ಗುಂಪುಗಳ ಅಥವಾ ಆಳರಸರ ನಡುವಿನ ಹೋರಾಟಗಳಲ್ಲಿ ಸೋತ ಗುಂಪಿನ

ಚರಾಚರ ವಸ್ತುಗಳು ಗೆದ್ದವನ ಆಸ್ತಿಯೊಳಗೆ ಸೇರ್ಪಡೆಯಾಗುತ್ತಿತ್ತು. ಹೆಣ್ಣನ್ನು ಗಂಡಿನ ವಸ್ತುವಾಗಿಯೇ ಗ್ರಹಿಸಲ್ಪಟ್ಟ ಇಂತಹ ಸಮಾಜದಲ್ಲಿ ಸೋತವನ ಹೆಣ್ಣುಗಳು ಗೆದ್ದವನಿಗೆ ಹಸ್ತಾಂತರವಾಗುತ್ತಿತ್ತು. ವಂಶಪಾವಿತ್ರ್ಯದ ಕಲ್ಪನೆಯಲ್ಲಿ ತನ್ನ ಹೆಣ್ಣುಗಳನ್ನು ಹೀಗೆ ವರ್ಗಾಯಿಸುವುದು ಗಂಡನಾದವನಿಗೆ ಸಹಿಸದ ಸಂಗತಿ. ಹೀಗಾಗಿ ಶೀಲದ ಪಾವಿತ್ರ್ಯವನ್ನು ಹೇರಿ, ಮುಕ್ತಿಯ ಆಸೆ ತೋರಿ ಆ ಹೆಣ್ಣುಗಳನ್ನು ಸತ್ತ ತನ್ನೊಂದಿಗೆ ಜೀವಂತ ಸುಡುವ ಹುನ್ನಾರ ನಡೆಸಿದ ಸ್ವಾಮಿಭಕ್ತಿ-ರಾಜಭಕ್ತಿಯ ನೆಪದಲ್ಲಿ ಶತ್ರುವಿನ ಬಲಸಂವರ್ಧನೆಯನ್ನು ಒಡೆಯುವಲ್ಲಿ ತನ್ನ ಸೈನಿಕ ಸೇವಕರನ್ನು ಕೊಲ್ಲಲಾಯಿತು. ಜನಪದ ಸಮುದಾಯದಲ್ಲಿ ನಡೆದ ಕೆರೆಗೆ ಹಾರದಂತಹ ನರಬಲಿಯನ್ನು ಕುರಿತು ಅವು ಏನೂ ಹೇಳುವುದಿಲ್ಲ. ಇದೇ ಈ ಎರಡು ಬಗೆಯ ನರಬಲಿಗಳ ಸಾಂಸ್ಕೃತಿಕ ಹಿನ್ನೆಲೆಯನ್ನು ವಿವರಿಸಿಕೊಳ್ಳಲು ಸಹಕರಿಸುತ್ತದೆ. ರಾಜಶಾಹಿ ವ್ಯವಸ್ಥೆಯಲ್ಲಿನ ನರಬಲಿ ರಾಜನ ವ್ಯಷ್ಟಿ ಹಿತವನ್ನು ಮುಂದೊಡ್ಡಿ ನಡೆದರೆ ಜಾನಪದ ಲೋಕದ ನರಬಲಿ ಸಮಷ್ಟಿ ಹಿತವನ್ನು ಕಾಯ್ದುಕೊಳ್ಳುವ ನೆಪವನ್ನು ಮುಂದಿಡುತ್ತದೆ. ಆದರೆ ಶಾಸನಗಳು ವೈಭವೀಕರಿಸುವಂತೆ ಮೌಖಿಕ ಇತಿಹಾಸದ ಪಾತ್ರಗಳು ಸಮಷ್ಟಿ ಹಿತದತ್ತ ಮುಖಮಾಡಿ ನಡೆದರೂ ಜನಪದ ಕವಿಯ ಮನಸ್ಸು ಆ ಸಮಷ್ಟಿ ಹಿತವನ್ನು ಪ್ರಶ್ನಿಸುವುದನ್ನು ಕಾಣುತ್ತೇವೆ.

ಕೆರೆಗೆಹಾರ ವಾಸ್ತವದಲ್ಲಿ ಹೆಣ್ಣೊಬ್ಬಳು ಸಮಷ್ಟಿ ಹಿತಕ್ಕಾಗಿ ಆತ್ಮಬಲಿದಾನವಾದದ್ದ? ಅಥವಾ ಸಮಷ್ಟಿಹಿತ ಹೆಣ್ಣನ್ನು ಬಲಿಯಾಗಿಸಿದ್ದ? ಹೀಗೆ ಹೆಣ್ಣು ಸ್ವ ಇಚ್ಛೆಯಿಂದ ಆತ್ಮ ಬಲಿದಾನ ಗೈದದ್ದೇ ನಿಜವಾದರೆ ಖಂಡಿತ ಹೆಣ್ಣಿನ ಬಲಿದಾನದ ಕತೆ ಹೇಳುವ ಇಷ್ಟೊಂದು ಉದಾಹರಣೆಗಳು ಸಿಗುತ್ತಿರಲಿಲ್ಲ. ಬಲಿಯಾದವರು ಎಲ್ಲರೂ ಹೆಣ್ಣುಗಳೇ ಆಗುತ್ತಿರಲಿಲ್ಲ. ಮತ್ತು ಅವರೆಲ್ಲ ಕುಟುಂಬದ ಸೊಸೆಯರೇ ಆಗುತ್ತಿರಲಿಲ್ಲ 'ಸಮಷ್ಟಿಹಿತ'ದ ಮಾತನ್ನು ಗೌಡನ ವ್ಯಕ್ತಿತ್ವಕ್ಕೆ ಆರೋಪಿಸಿ ಒಪ್ಪಿಕೊಂಡರೂ ಈ ಸಮಷ್ಟಿಹಿತದ ಕಾಯ್ದುಕೊಳ್ಳುವಿಕೆಗೆ ಗೌಡ ಸ್ವತಃ ತನ್ನನ್ನು ತನ್ನ ಹೆಂಡತಿ, ಮಗ ಅಥವಾ ಮಗಳನ್ನು ಹಾರವಾಗಿ ಕೊಡಲಿಲ್ಲ ಏಕೆ? ಈ ಎಲ್ಲರ ಸಾವನ್ನು ಒಪ್ಪಿಕೊಳ್ಳದ ಸ್ವಾರ್ಥ ಗೌಡನೊಳಗಿರುವುದು. ಪರರ ಮನೆಯ ಹೆಣ್ಣಾದ ಸೊಸೆ ಸತ್ತರೆ ಮತ್ತೆ ತರಬಹುದು ಎಂಬ ಕ್ರೌರ್ಯವನ್ನು ಯಾವ ಔದರ್ಯವೂ ಮುಚ್ಚಿಟ್ಟುಕೊಳ್ಳಲಾರದು.

ಪಠ್ಯದ ಮಾತನ್ನು ಉದ್ಧರಿಸಿ ಹೇಳುವುದಾದರೆ ಕಿರಿಸೊಸೆ ಭಾಗೀರಥಿಯ 'ಹಾರವ ಕೊಡಬೇಕು ಎಂದು ಮಾತಾತು ಮನೆಯಾಗ' ಎನ್ನುವಲ್ಲಿ ಹಾರ ಕೊಡಬೇಕೆಂದು ತೀರ್ಮಾನವಾಗುತ್ತದೆ ಹೊರತು ಹಾರವಾಗುವ ಇಚ್ಛೆಯಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. 'ಮಾತಾತು ಮನೆಯಾಗ' ಎಂದರೂ ಹಾರದಂತಹ ಪ್ರಶ್ನೆ ಕುಟುಂಬದ ಮುಂದೆ ಸಾರ್ವತ್ರಿಕ ಚರ್ಚೆಗೊಳಗಾಗಿರುವುದು ಸಾಧ್ಯವಿಲ್ಲ. ಇದನ್ನು ದೃಢಪಡಿಸುವಂತೆ ಹಾರದ ಸಂಗತಿ ಭಾಗೀರಥಿಗೆ ತಿಳಿಯುವುದು ಹಾರ ಕೊಡುವ ತೀರ್ಮಾನಗೈದವರಿಂದ ಅಲ್ಲ ಅನ್ಯಮೂಲದಿಂದ ಮತ್ತು ಹಾರದ ಸಂಗತಿ ಭಾಗೀರಥಿಗೆ ತಿಳಿದಿರುವ ವಿಚಾರ ಅವರಿಗೆ ಗೊತ್ತಿರುವುದಿಲ್ಲ. ಭಾಗೀರಥಿ ತವರಿಗೆ ಹೋಗಿ ಬರುವ ಪ್ರಸ್ತಾಪ ಮಾಡಿದಾಗ, ಕಣ್ಣೀರು ಕಾಣಿಸಿದಾಗ ಸಹಜವಾಗಿಯೇ ಅತ್ತೆ ಮಾವರನ್ನು ಕಾಡಿದ ಸಂಶಯ

ಮತ್ತು ಆತಂಕಗಳು ಅವರ ಪ್ರತಿಕ್ರಿಯೆಯಲ್ಲಿ ದಾಖಲಾಗಿದೆ. ಇಲ್ಲಿ ಎಸ್.ಜಿ. ಸಿದ್ದರಾಮಯ್ಯ ಹೇಳುವಂತೆ ಅವರಲ್ಲಿ ಆತ್ಮೀಯ ಅನುಬೋಧನೆಯ ಧ್ವನಿ ಅರಸುವುದು ಸರಿಯಲ್ಲ.[೧] ಭಾಗೀರಥಿಯ ಕೇಳಿಕೆಗೆ ಒಪ್ಪಿಗೆ ನೀಡುವುದು ನಿರಾಕರಿಸಿದರೆ ಪ್ರಸಂಗ ಇನ್ನಷ್ಟು ಜಟಿಲಗೊಳ್ಳುವ ಸಾಧ್ಯತೆ ಇದೆ ಎಂಬ ಭಯದಿಂದ ಎನ್ನುವುದು ಅವರು ಒಡ್ಡುವ ಷರತ್ತಿನಲ್ಲಿ ಪ್ರಕಟಕೊಳ್ಳುತ್ತದೆ.

ಕಿರಿಸೊಸೆ ಭಾಗೀರತಿಗೆ ಹಾರ ಕೊಡುವ ವಿಷಯ ತಿಳಿಯುತ್ತದೆ. ಅತ್ತೆಯಿಂದ ಅನುಮತಿ ಪಡೆದು ತವರು ಮನೆಗೆ ಹೋಗುತ್ತಾಳೆ. ಎಂದಿಲ್ಲದ ಭಾಗೀರತಿ ಇಂದ್ಯಾಕ ಬಂದೆವ್ವ? ಬಾಡಿದ ಮಾರ್‍ಯಾಕ ಕಣ್ಣಾಗ ನೀರ್‍ಯಾಕ? ಎಂದು ತಂದೆಯ ಪ್ರಶ್ನೆ ತನಗೆ ತಿಳಿದ ವಿಷಯ ಮರೆಮಾಚಿ 'ನಮ್ಮ ಅತ್ತೆ ಮಾವ ಬ್ಯಾರೆ ಇಡುತಾರಂತ' ಎನ್ನುತ್ತಾಳೆ. ಇವಳನ್ನು ಸಂತೈಸುವುದಕ್ಕಾಗಿ ಹೊಲ–ಮನೆ, ಒಡವೆ ಕೊಡುತ್ತೀವಿ ಅಳಬೇಡ ಎನ್ನುವ ಮಾತುಗಳನ್ನಾಡುತ್ತಾರೆ.

ಕವಿ ಭಾಗೀರತಿಯ ಯಾತನೆಯನ್ನು ಹೆಜ್ಜೆ ಹೆಜ್ಜೆಗೂ ಮೂಡಿಸಿದ್ದಾನೆ. ಅದನ್ನು ಅತ್ತೆ–ಮಾವ ಒಳಗಾದವರು ಅರ್ಥ ಮಡಿಕೊಂಡಿದ್ದರೂ ಮರೆಮಾಚಿ ಅವಳ ದುಃಖದ ಕಾರಣ ಕೇಳುವ ನಾಟಕ ಮಾಡುವಂತಿದೆ. ತಂದೆ ತಾಯಿಗಳಿಗೆ ಸ್ವಲ್ಪ ಕಾಳಜಿ ಇದ್ದರೂ ಹೊಲಕೊಡುವ, ವಾಲೆಕೊಡುವ ಜೊತೆಗೆ ಮಕ್ಕಳನ್ನು ಕಳಿಸುವ ಮಟ್ಟಿಗೆ ಮಾತ್ರ ಭಾಗೀರತಿಯ ಸಮಸ್ಯೆಗೆ ಉತ್ತರ ಇರುವುದು ಅವಳ ಗೆಳತಿಯ ಮಾತಿನಲ್ಲಿ 'ಇಟ್ಟಂಗ ಇರಬೇಕು' ಎನ್ನುವಲ್ಲಿ ಸ್ತ್ರೀಯ ಸಹಾಯಕ ಪರಿಸ್ಥಿತಿಯ ಕಳವಳ ರೋಧನೆಗಳು ಬಂಧಿತವಾಗಿವೆ. ಆಗಲೇ ಭಾಗೀರತಿಯ ಭವಿಷ್ಯವೂ ನಿರ್ಧಾರಗೊಳ್ಳುತ್ತದೆ. ಈಗಾಗಲೇ ಅವಳು ಒಳಗೊಳಗೇ 'ಕೆರೆಗೆ ಹಾರ'ವಾಗಿದ್ದಾಳೆ.[೨]

ಇಲ್ಲಿನ ಮೊದಲಿನ ನಾಲ್ಕು ಪಠ್ಯಗಳ ಪ್ರಕೃತಿ–ಸಂಸ್ಕೃತಿಗಳ ತಾರ್ಕಿಕತೆಯ ಹೆಣ್ಣನ್ನು ಕೆರೆಗೆ ಹಾರವಾಗಿಸಿದುದನ್ನು ಘಟನಾತ್ಮಕ ನಿರೂಪಣೆಯ ಮೂಲಕ ವಿವರಿಸುತ್ತದೆ. ಹೆಣ್ಣಿನ ಈ ಬಗೆಯ ಸಾವು ಆಕೆಯ ಬದುಕಿಗೆ ಇರುವ ಅರ್ಥ ಮತ್ತು ಮೌಲ್ಯವನ್ನು ಹೇಳುತ್ತದೆ. ಕರಾವಳಿಯ ಉಡುಪಿ ಜಿಲ್ಲೆಯಲ್ಲಿ ದೊರೆತ ಐದನೆಯ ಪಠ್ಯ ಇದಕ್ಕಿಂತ ಭಿನ್ನವಾಗಿದೆ. ಇತರೆಡೆಯ ಪಠ್ಯಗಳಲ್ಲಿ ಹೆಣ್ಣನ್ನು ಹಾರವಾಗಿಸುವುದು ಮತ್ತು ಅವಳ ಸಾವು ಕಾಣಿಸಿಕೊಂಡರೆ ಕರಾವಳಿಯ ಪಠ್ಯದಲ್ಲಿ ಹೆಣ್ಣನ್ನು ಹಾರವಾಗಿಸುವುದು ಮತ್ತು ಆಕೆ ಸಾಯದಿರುವುದು ಮಹತ್ವದ ವ್ಯತ್ಯಾಸವನ್ನು ಹೇಳುತ್ತದೆ. ಇದಕ್ಕೆ ಅವುಗಳ ಹಿನ್ನೆಲೆಯಲ್ಲಿನ ಕುಟುಂಬ ರಚನೆಗಳ ಪಠ್ಯವನ್ನು ಪ್ರಧಾನವಾಗಿ ನಿಯಂತ್ರಿಸಿವೆ. ದಕ್ಷಿಣ ಕನ್ನಡದಲ್ಲಿ ಮಾತೃಪ್ರಧಾನ ಸಂಸ್ಕೃತಿ ಪ್ರಚಲಿತವಿದೆ. ಕರ್ನಾಟಕದ ಇತರೆಲ್ಲಡೆ ಪಿತೃಪ್ರಧಾನ ಕುಟುಂಬ ರಚನೆಯಿದ್ದು ಇದಕ್ಕೆ ವಿರುದ್ಧವಾಗಿ ಹೆಣ್ಣಿನ ಸ್ಥಿತಿಯಿರುತ್ತದೆ. ಈ ಎರಡು ಮಾದರಿಯ ಪಠ್ಯಗಳು ಪಿತೃಪ್ರಧಾನ ಮತ್ತು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ರೂಪಕವಾಗಿ ದುಡಿಯುತ್ತಲೇ ಅದನ್ನೊಂದು ಸೈದ್ಧಾಂತಿಕ ಸಾಧ್ಯತೆಯಾಗಿ ಮಂಡಿಸುತ್ತದೆ.

"ಪ್ರಾಯಶಃ ಅದು (ನರಬಲಿ) ಮೊದಲಿಗೆ ಅವನ ಆರ್ಥಿಕ ವ್ಯವಸ್ಥೆಯ, ಆಹಾರ ವ್ಯವಸ್ಥೆಯ ಒಂದು ಅಂಗವೂ ಆಗಿದ್ದಿರಬೇಕು" (ಸತ್ಯನಾಥ್ ೧೯೭೭:೬) ನರಬಲಿಯ ಹಸಿವೆಯಿಂದ ಕೆರೆಗೆ

ಹಾರದ ಕತೆ ಆರಂಭವಾಯಿತೋ ಇಲ್ಲವೋ ಆದರೆ ಹೆಣ್ಣನ್ನೇ ಏಕೆ ಬಲಿ ಕೊಡಲಾಯಿತು ಎನ್ನುವುದನ್ನು ಇಲ್ಲಿನ ಕ್ರಿಯೆಗಳು ತೆರೆದಿಡುತ್ತವೆ. ಗಂಡು ಸಂಸ್ಕೃತಿಯ ಗುಡಿಯಲ್ಲಿ ಹೆಣ್ಣನ್ನು ದೇವತೆಯಾಗಿಸುತ್ತಾನೆ ಮತ್ತು ಆ ದೇವತೆಯನ್ನು ತನ್ನ ಶ್ರೇಯಸ್ಸಿಗಾಗಿಯೇ ನಿರ್ಮಿಸುತ್ತಾನೆ. ಹೀಗಾಗಿ ಸತಿದೇವತೆಯನ್ನು ಪೂಜಿಸುವ ಗಂಡಿಗೆ ಬದುಕಿನಲ್ಲಿ ತನ್ನ ಸತಿಯನ್ನು ಹೊಡೆಯುವುದು, ಕೊಲ್ಲುವುದು ಸಾಧ್ಯವಾಗಿದೆ. 'ಕೆರೆಗೆಹಾರ'ವನ್ನು ಕಂಡುಕೊಂಡ ಹೊಸ ವ್ಯಾಖ್ಯಾನವನ್ನು ಹೀಗೆ ಅಡಕಗೊಳಿಸುತ್ತದೆ. ಕೆರೆಗೆಹಾರ ಹೆಣ್ಣಿನ ಬಲಿಯೇ ಹೊರತು ಆತ್ಮಬಲಿ ಅಥವಾ ಬಲಿದಾನವಲ್ಲ. ಇದಕ್ಕೆ ಪಠ್ಯಗಳು ಆಂತರಿಕ ಸಾಕ್ಷ್ಯಗಳನ್ನು ಒದಗಿಸುತ್ತವೆ. ಇದು ಪುರುಷರೂಪಿ ಸಮಾಜದಲ್ಲಿ ಹೆಣ್ಣು ಜೀವಕ್ಕಿರುವ ಅರ್ಥ ಮತ್ತು ಮೌಲ್ಯವನ್ನು ಹೇಳುತ್ತದೆ. ಕೆರೆಗೆ ಹಾರ ಆತ್ಮ ಬಲಿಯೇ ಹೌದಾದರೆ ಹೆಣ್ಣಿನ ಬಲಿದಾನದ ಇಷ್ಟೊಂದು ಉದಾಹರಣೆಗಳು ಸಿಗುತ್ತಿರಲಿಲ್ಲ ಮತ್ತು ಹೀಗೆ ಜೀವ ಕಳೆದುಕೊಂಡವರೆಲ್ಲರೂ ಹೆಣ್ಣಾಗುತ್ತಿರಲಿಲ್ಲ. ಹೆಣ್ಣಿನ ನರಬಲಿಗೆ ಲಿಂಗಪ್ರಭೇದದ ನೆಲೆಯ ರೂಢಿಗತ ಧೋರಣೆ ಮುಖ್ಯಕಾರಣವಾಗಿದೆ. ಹೆಣ್ಣಿನ ನರಬಲಿ ಸಮಷ್ಟಿಹಿತದ ನೆಪದಲ್ಲಿ ಪುರುಷ ಶಾಹಿಯ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವ ಉದ್ದೇಶದ್ದಾಗಿದೆ. ದೇಶ, ಕಾಲ, ವ್ಯಕ್ತಿ ಸಂದರ್ಭಗಳು ಜನಪದ ಸಂಗತಿ ಅಥವಾ ಪ್ರಕಾರವೊಂದನ್ನು ಪ್ರಭಾವಿಸುವಂತೆ ಬಂಧುತ್ವ ವ್ಯವಸ್ಥೆಯೂ ನಿಯಂತ್ರಿಸುತ್ತದೆ. ಪುರುಷ ಯೋಚನೆಯ ಹೆಣ್ಣಿನ ನರಬಲಿ ಮಾತೃರೂಪಿ ವ್ಯವಸ್ಥೆಯಲ್ಲಿ ತಲೆಕೆಳ ಗಾಗುತ್ತದೆ.

ಕರ್ನಾಟಕದಾದ್ಯಂತ ಅತ್ಯಧಿಕ ಪಾಠಾಂತರಗಳು ಲಭ್ಯವಾಗುವ 'ಉತ್ತರದೇವಿ' ಲಾವಣಿಯ ಪೂರ್ಣಪಾಠ ಇಲ್ಲಿ ಸಂಕಲಿತವಾಗಿದೆ. ಆದರೆ ಇದೇ ಪರಿಪೂರ್ಣವಾದ ಪಾಠವಲ್ಲ. ಪ್ರಸ್ತುತ ಪಾಠಕ್ಕೂ ಈಗಾಗಲೇ ಸಂಪೂರ್ಣ ಪಾಠವೆಂದು ಪರಿಗಣಿಸಿರುವ ಮಲೆನಾಡಿನ ಭಾಗಗಳಲ್ಲೇ ಸಂಗ್ರಹಿಸಿ ಪ್ರಕಟಿಸಿರುವ ಕೆ.ವಿ. ಲಿಂಗಪ್ಪನವರ 'ಮಲೆನಾಡಿನ ಮಡಿಲಲ್ಲಿ' ಸಂಕಲನದಲ್ಲಿರುವ ಉತ್ತರದೇವಿ ಪಾಠಕ್ಕೂ ಕೆಲವು ಘಟನೆ, ಪಾತ್ರಗಳ ವಿನ್ಯಾಸ ಮತ್ತು ಕಥೆಯ ಹಂದರದಲ್ಲಿ ವ್ಯತ್ಯಾಸಗಳಿರುವುದು ಕಂಡುಬರುತ್ತದೆ.

ಕ.ರಾ.ಕೃ. ಅವರ 'ಜಾನಪದ ಕಥನಗೀತೆಗಳು' ಸಂಕಲನದ ಪಾಠದಲ್ಲಿ ಬರುವ ಆರಂಭವೇ ಈ ಸಂಕಲನದ ಪಾಠದಲ್ಲೂ ಬರುತ್ತದೆ. ಆಗಂತುಕನೊಬ್ಬ ಬಂದು 'ಬಾಯಾರಿಗೆ ನೀರುss ಕೊಡುವೇನೆ? ಎಂದು ಕೇಳುತ್ತಾನೆ. ಗಂಡುಳ್ಳಗರತಿ ಉತ್ತರದೇವಿ ತನಗೊಬ್ಬ ಚಲುವನಿದ್ದಾನೆಂದು ಸೂಚಿಸಿ ನೀರು ಕೊಡಲು ನಿರಾಕರಿಸುತ್ತಾಳೆ. ಆತ 'ನೀನು ಕೈಯ್ಯss ನೀರೇ ಸವಿರುಚಿ, ನೀರು ಕೊಡು' ಎಂದು ಹೊಗಳಿ ತನ್ನತ್ತ ಆಕರ್ಷಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಅವಳು ಅವನ ಅಭಿಲಾಷೆಗೆ ಸೊಪ್ಪುಹಾಕದೆ ನೀರು ಮೊಗೆಯುತ್ತಿದ್ದಾಗ ಅಂಗೈ ಬಿದ್ದು ಕೊಡವು ಒಡೆದುಹೋಗುತ್ತದೆ. ಮುಂದೆ ಇದೇ ಘಟನೆಯು ಉತ್ತರದೇವಿಯನ್ನು ಅವಳ ಅತ್ತೆ ಅನುಮಾನಿಸಲು ನಿಜವಾದ ಕಾರಣವಾಗಿ ತೋರಿಬರುತ್ತದೆ.[೩]

ಜೀ.ಶಂ.ಪ ಅವರ 'ಜಾನಪದ ಖಂಡಕಾವ್ಯ'ಗಳು ಕೃತಿಯಲ್ಲಿ ಬರುವ 'ಉತ್ತರದೇವಿ' ಪಾಠದಲ್ಲಿ ಉತ್ತರದೇವಿ ತಡವಾಗಿ ಬಂದುದಕ್ಕೆ ಹಲವು ಸುಳ್ಳು ಹೇಳುತ್ತಾಳೆ. ತಡವಾದುದಕ್ಕೆ ಇದ್ದ ನಿಜವಾದ ಕಾರಣ ಅಲ್ಲಿಲ್ಲದುದು ಒಂದು ಲೋಪವಾಗಿದೆ. ಆದರೆ ಈ ಪಾಠದಲ್ಲಿ ಬರುವ ಅತ್ತೆ ಉರಿಸಿದ ಉರಿತವನ್ನು ಉತ್ತರದೇವಿ ನೆರೆಮನೆಯ ಅಕ್ಕತಂಗಿಯರೊಡನೆ ತೋಡಿಕೊಳ್ಳುವ ಪ್ರಸಂಗ, ಮಾವಟಿಗರಿಗೂ, ಗೊಲ್ಲರಿಗೂ ಹೇಳಿ ತವರಿಗೆ ಹೋಗುವ ಪ್ರಸಂಗ, ದನಕಾಯುವ ಹುಡುಗರು ಗೊಳ್ಗೆರೆಯುತ್ತ ಸ್ವಲ್ಪ ದೂರ ಅವಳನ್ನು ಹಿಂಬಾಲಿಸಿಕೊಂಡು ಹೋಗುವುದು, ಹೆಂಡತಿಯ ಅಗಲಿಕೆಗಾಗಿ ಉತ್ತರದೇವಿಯ ಗಂಡ ಮರಗುವುದು, ಆತ ತನ್ನ ಹೆಂಡತಿಯ ಗೊತ್ತುಗುರಿಗಳನ್ನು ವಿಚಾರಿಸುವುದು, ಅನ್ಯಪುರುಷನೊಬ್ಬನ ಕೈಮೇಲೆ ಒರಗಿದ್ದಾಳೆಂದು ಕೇಳಿ ತಿಳಿದು ಪ್ರಾಣಹತ್ಯೆ ಮಾಡಿಕೊಳ್ಳುವುದು, ಉತ್ತರದೇವಿ ಕೊಂಡ ಹಾರುವ ಪ್ರಸಂಗಗಳು-ಪ್ರಸ್ತುತ ಸಂಕಲನದ ಪಾಠದಲ್ಲಿ ಬರುವುದಿಲ್ಲ. ಪ್ರೊ, ದೇಜಗೌ ಅವರೇ ಹೇಳುವಂತೆ ಕೆ.ವಿ. ಲಿಂಗಪ್ಪನವರು ಸಂಗ್ರಹಿಸಿದ ಪಾಠದಲ್ಲಿ ಸುಸ್ಪಷ್ಟವಾದ ಪಾತ್ರರಚನೆ ಇದೆ. ಉತ್ತರದೇವಿಯ ಗುಣಶೀಲಗಳ ಒರೆಗಲ್ಲಾಗಿ ಇತರ ಪಾತ್ರಗಳು ಬರುತ್ತವೆ.[೯]

'ಹೊನ್ನಿಹಾಡು' ಕಥನಗೀತೆಯು ಹೊನ್ನಿ ಕೆರೆಗೆಹಾರವಾಗುವ ರೀತಿ ತುಸು ಒಡ್ಡರಬೋಯಿಯ[೫] ಆಶಯವನ್ನು ಹೋಲುತ್ತದೆ. 'ಕೆರೆಗೆಹಾರ' ಲಾವಣಿಯಲ್ಲಿ ಆದರ್ಶ 'ಹೊನ್ನಮ್ಮ' ಈ 'ಹೊನ್ನಿ' ಅಲ್ಲ. 'ಕೆರೆಗೆಹಾರ'ದ ಹೊನ್ನಮ್ಮ ಸ್ವ ಇಚ್ಛೆಯಿಂದ ಅಲ್ಲವಾದರೂ ಸಮಷ್ಟಿಯ ಹಿತವನ್ನು ಬಯಸಿ ಆತ್ಮಾರ್ಪಣೆ ಮಾಡಿಕೊಂಡವಳು. ಅಲ್ಲಿ ಕವಿ ಹೊನ್ನಮ್ಮನ ಆದರ್ಶ ಉದಾತ್ತ ವ್ಯಕ್ತಿತ್ವಗಳನ್ನು ಎತ್ತಿಹಿಡಿದಿದ್ದಾನೆ. ಅಷ್ಟೇ ಏಕೆ? 'ಕೆರೆಗೆಹಾರ'ದ ಹೊನ್ನಮ್ಮನ ಸಿಗ್ಗು, ಸಂಯಮ, ತಳಮಳ ಹೊನ್ನಿಹಾಡು ಲಾವಣಿಯ 'ಹೊನ್ನಿ' ಯಲ್ಲಾಗಲೀ 'ಕೆರೆಪೂಜೆ'ಯ ಹೊನ್ನಿ ಯಲ್ಲಾಗಲೀ ವ್ಯಕ್ತ ಗೊಳ್ಳುವುದೇ ಇಲ್ಲ. ಒಟ್ಟಿನಲ್ಲಿ ಹೇಳುವುದಾದರೆ 'ಹೊನ್ನಿ'ಯ ಪಾತ್ರ 'ಕೆರೆಗೆಹಾರದ ಹೊನ್ನಮ್ಮನ ಪಾತ್ರದಷ್ಟು ಪರಿಣಾಮಕಾರಿಯಾಗಿ ಒಡಮೂಡಿ ಬಂದಿಲ್ಲ. ತುಸು ಕಥನ ವ್ಯತ್ಯಯವಿರುವ ಪ್ರಸ್ತುತ ಸಂಕಲನದ ಪಾಠಗಳಲ್ಲಿ ನಿರೂಪಣಾ ಸಂವಿಧಾನವೂ ಭಿನ್ನವಾಗಿ ಕಂಡುಬರುತ್ತದೆ. ಅಷ್ಟು ಮಾತ್ರವಲ್ಲ ಸತ್ತವರು ಬದುಕಿಬಂದು ತಮ್ಮ ಮಹಾತ್ಮೆಯನ್ನು ಪ್ರಕಟಿಸುವ ಅಂತ್ಯಲಾವಣಿ ರಚನಾಕಾರನ ಅಭಿರುಚಿಗನುಸರವಾಗಿಯೇ ಇರುವುದೇನೋ ಎಂಬ ಅನುಮಾನಕ್ಕೆ ಆಸ್ಪದವಾಗುತ್ತದೆ. ಒಟ್ಟಿನಲ್ಲಿ ಕೆರೆಗೆಹಾರದ ಅಂತ್ಯದಂತಹ ಹೃದಯಸ್ಪರ್ಶಿಯಾದ ಪರಿಣಾಮಕಾರಿಯಾದ ಅಂತ್ಯ ಪ್ರಸ್ತುತ ಸಂಕಲನದ ಲಾವಣಿಗಳಲ್ಲಿ ಬರುವುದಿಲ್ಲ.

ಹಳ್ಳಿಯಲ್ಲಿ ನಡೆಯುವ ವಾಸ್ತವಿಕ ಜೀವನದ ವಿಲಾಸವನ್ನು ನೇರವಾಗಿ ನಿರೂಪಿಸುವ ಲಾವಣಿಗಳೂ ಇವೆ. ಅತ್ತೆಯ ಕಾಟವನ್ನು ಸಹಿಸಿಕೊಳ್ಳಲಾಗದೆ ನೇಣುಹಾಕಿಕೊಂಡ ಸೊಸೆಯೊಬ್ಬಳ ದಾರುಣ ಚಿತ್ರ 'ಹೊನ್ನಮ್ಮ'- 'ಹೊಳಾಲಮ್ಮ' ಎಂಬ ಕಥನಗೀತೆಯಲ್ಲಿರುವುದನ್ನು ನೋಡಬಹುದು.

ಜೊತೆಯಾಗಿ ನೀರಿಗೆ ಹೋಗಿದ್ದ ಅತ್ತಿಗೆ-ನಾದಿನಿಯರಲ್ಲಿ ನಾದಿನಿ ಹೊಳಾಲಮ್ಮ ನೀರು ತೆಗೆದುಕೊಂಡು ಮುಂದೆ ಬರುವಳು. ಅತ್ತಿಗೆ ಹೊನ್ನಮ್ಮ ನೀರು ಮೊಗೆದು ಕೊಡವನ್ನು ಸೊಂಟಕ್ಕೆತ್ತಿ

ಕೊಳ್ಳುವಾಗ ಕೊಡ ಕೈತಪ್ಪಿ ಕೆಳಗೆಬಿದ್ದು ಒಡೆದುಹೋಗುವುದು. ಸೊಸೆ ಕೊಡ ಒಡೆದು ಹಾಕಿದುದನ್ನೇ ದೊಡ್ಡ ಪ್ರಮಾದವೆಂದು ಬಗೆದು ಅತ್ತೆ ಬೊಮ್ಮಣದೇವಿ ಸೊಸೆಯ ರಕ್ತಹೀರುವುದಾಗಿ ಆರ್ಭಟಿಸುವಳು. ಅತ್ತೆಯ ಆರ್ಭಟ ಅಟ್ಟಹಾಸಗಳಿಗೆ ಮರುಗಿದ ಸೊಸೆ ಕ್ಷುಲ್ಲಕವಾದ ಮಣ್ಣಿನ ಕೊಡಕ್ಕೆ ಇಷ್ಟೆಲ್ಲಾ ಹಗರಣ ಬೇಡವೆಂದೂ ತನ್ನ ತವರಿನಿಂದ ಕೊಡ ತರಿಸಿ ಕೊಡುವುದಾಗಿಯೂ ಹೇಳುವಳು. ಆದರೂ ಅತ್ತೆಯ ಕೋಪ ತಣಿಯುವುದಿಲ್ಲ. ಹೀನಾಮಾನವಾಗಿ ಬೈಯುತ್ತಾಳೆ. ಹೊನ್ನಮ್ಮನಿಗೆ ಅತ್ತೆಯ ಹಿಂಸಾತ್ಮಕ ನುಡಿಗಳು ಕರ್ಣಕಠೋರವಾಗುತ್ತವೆ.

ಅಸಮಾಧಾನಗೊಂಡ ಸೊಸೆ ಎಲ್ಲವನ್ನೂ ನಿರ್ಧರಿಸಿಕೊಂಡವಳಂತೆ ಗಂಡ ಮೈದುನರಿಗೆ ಬುತ್ತಿ ಕಟ್ಟಿಕೊಂಡು ಹೊಲಕ್ಕೆ ಹೋಗುವಳು. ಇಬ್ಬರಿಗೂ ಉಣಬಡಿಸುವಳು. ಇಬ್ಬರೂ ಒಟ್ಟಾಗಿ ಕುಳಿತು ಉಣ್ಣುವುದನ್ನು ನೋಡಿದ ಹೊನ್ನಮ್ಮನಿಗೆ ತಾನೂ ಊಟ ಮಡುವ ಹಂಬಲವಾಗುವುದು. ಹೊಟ್ಟೆಯ ಹಂಬಲವನ್ನು ಉಪೇಕ್ಷಿಸಿ ಗಂಡಮೈದುನರನ್ನು ಕಣ್ತುಂಬ ನೋಡಿಕೊಂಡು ಬುಟ್ಟಿ ಹೊತ್ತುಕೊಂಡು ಮನೆಯಹಾದಿ ಹಿಡಿಯುವಳು. ಮೊದಲೇ ನಿರ್ಧರಿಸಿಕೊಂಡಿದ್ದಂತೆ ತುಸುದೂರ ಬಂದು ಆಲದಮರವೊಂದಕ್ಕೆ ನೇಣುಹಾಕಿಕೊಂಡು ಸಾವನ್ನಪ್ಪುವಳು.

ಗಂಡ ಮೈದುನರು 'ಆರು' ಬಿಟ್ಟು ಮನೆಗೆ ಬರುವರು ಮಡದಿಯ ಸುಳಿವು ಕಾಣದ ಗಂಡ ಹೊನ್ನಮ್ಮನ ಬಗೆಗೆ ತಂಗಿ ಹೊಳಾಲಮ್ಮನನ್ನು ವಿಚಾರಿಸುವನು. ಆಗ ತಾಯಿ ಬೊಮ್ಮಣದೇವಿ ಮಗಳ ಬಾಯಿಂದ ಮಾತು ಕಸಿದುಕೊಂಡು ಹೊನ್ನಿ ತವರಿಗೆ ಹೋಗಿರುವಳೆಂದು ಸುಳ್ಳು ಹೇಳುವಳು ತಾಯಿಯ ಸ್ವಭಾವವನ್ನು ಹಿಂದಿನಿಂದಲೂ ದ್ವೇಷಿಸುತ್ತಿದ್ದ ಮಗಳು ತಾಯಿಯ ವರ್ತನೆಗೆ ಅಸಹ್ಯಪಟ್ಟುಕೊಳ್ಳುವಳು.

ಹೊನ್ನಮ್ಮನ ಗಂಡ ಮಡದಿಯನ್ನು ತವರಿನಲ್ಲೂ ಕಾಣದೆ ಹಿಂತಿರುಗಿ ಬರುತ್ತಿದ್ದಾಗ ಆಲದಮರವೊಂದರಲ್ಲಿ ಶವ ನೇತಾಡುತ್ತಿರುವುದು ಕಣ್ಣಿಗೆ ಬೀಳುತ್ತದೆ. ಹೊನ್ನಮ್ಮನ ಸಾವಿಗೆ ಕಾರಣ ತಾಯಿಯೊಂದೇ ಎಂದು ಸುಲಭವಾಗಿ ಗ್ರಹಿಸುವನು. ಶವದ ತೊಡೆಯ ಖಂಡವೊಂದನ್ನು ಬಿಡಿಸಿಕೊಂಡು 'ಕೂಡಸು' ಕಟ್ಟಿಕೊಂಡು ಮನೆಗೆ ತಂದು ತಾಯಿಗೆ ಪಲ್ಯಮಾಡಲು ಹೇಳಿ ಕೊನೆಗೆ ತಾಯಿಯೊಬ್ಬಳಿಗೇ ಅದನ್ನು ತಿನ್ನಿಸಿ ಸೇಡುತೀರಿಸಿಕೊಳ್ಳುವನು. ಶವ ಮಾಂಸ ತಿಂದ ಬೊಮ್ಮಣದೇವಿ ತೀರಿಕೊಳ್ಳುವಳು.

ಈ ಕಥನದ ಪೂರ್ವ ಭಾಗದಲ್ಲಿ ಬರುವ ಕೆಲವು ಆಶಯಗಳು 'ಉತ್ತರದೇವಿ' ಲಾವಣಿಯ ಆಶಯಗಳನ್ನೇ ಹೋಲುತ್ತವೆ. ಆದರೆ ಇಲ್ಲಿಯ ಅತ್ತೆಸೊಸೆಯರಿಗೆ ಮಾತಿಗೆ ಮಾತು ಬೆಳೆಯುತ್ತದೆಯೇ ಹೊರತು ಕದನವೇರ್ಪಡುವುದಿಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಹೊನ್ನಮ್ಮನ ಅಸಹಾಯಕ ಹಿಂಸಾ ಪರಿಸ್ಥಿತಿ. ಅವಳು ಮೌನವಾಗಿ ನೇಣುಹಾಕಿಕೊಂಡು ಸಾವನ್ನಪ್ಪುವುದರಲ್ಲಿ ಇದು ವ್ಯಕ್ತಗೊಳ್ಳುತ್ತದೆ. ಇದನ್ನು ಜನಪದ ಕವಿ ಅತ್ಯಂತ ಗಂಭೀರವಾದ ನಿರೂಪಣೆಯೊಂದಿಗೆ ಸಹಾನುಭೂತಿಯಿಂದ ಕರುಣಾರಸ ಸಂಪೂರ್ಣವಾಗಿ ಚಿತ್ರಿಸಿಕೊಂಡು

ಹೋಗಿದ್ದಾನೆ. ಅದರಲ್ಲಿ ಹೊನ್ನಮ್ಮನ ಪಾತ್ರದ ಉದಾತ್ತತೆಯನ್ನು ಸ್ಥಾಪಿಸುವ ಉದ್ದೇಶವಿಟ್ಟುಕೊಂಡಂತೆ ಕಾಣುತ್ತದೆ.

ಜನಪದ ರಮ್ಯಕಥನಗೀತೆಗಳಲ್ಲಿ ಅನೇಕ ಸ್ತ್ರೀಪಾತ್ರಗಳನ್ನು ಗುರುತಿಸಬಹುದು. ಇಲ್ಲಿ ಬರುವ ಪಾತ್ರಗಳು ಸಾಮಾಜಿಕ ಸಮಸ್ಯೆಗಳನ್ನು ಪ್ರತಿಬಿಂಬಿಸುತ್ತವೆ. ಅವುಗಳಲ್ಲಿ ಮುಖ್ಯವಾಗಿ ಕಾಡಸಿದ್ಧಮ್ಮ, ಬಾಲನಾಗಮ್ಮ, ನೀಲವೇಣಿ, ನೀಲಕಂಠ ರೂಪಾವತಿ, ಪಾತ್ರಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ರಮ್ಯಕಥನಗೀತೆಯ ಕಥಾವಸ್ತು ಕಟ್ಟುಕಥೆಯಿಂದ ಪ್ರಾರಂಭವಾಗಿ ಪಡೆದುಕೊಳ್ಳುತ್ತವೆ. ಇಲ್ಲಿ ಬರುವ ಘಟನೆಗಳು, ಪಾತ್ರಗಳು ವಾಸ್ತವಿಕ ನೆಲೆಗಟ್ಟಿನಲ್ಲಿಯೇ ರೂಪುಗೊಂಡಿದ್ದರು ಇದರ ಕಥಾಶರೀರದಲ್ಲಿ ಸಂಭವನೀಯ ಎನ್ನಬಹುದಾದ ಸನ್ನಿವೇಶಗಳು ನಡೆಯುತ್ತವೆ. ಈ ಸನ್ನಿವೇಶಗಳು ಕಥೆಗಳ ಆವರಣದಲ್ಲಿ ಸಹಜವಾದ ರೀತಿಯಲ್ಲಿ ಬೆಸೆದುಕೊಂಡು ಬಂದಿರುವುದನ್ನು ಗಮನಿಸಬಹುದಾಗಿದೆ.

ಈ ಕಥನಗೀತೆಗಳಲ್ಲಿ ಮಾನವರು ಬರುವಹಾಗೆ ರಾಕ್ಷಸರು, ದೈವಗಳು, ಮಂತ್ರವಾದಿಗಳು, ಮಾಟಗಾತಿಯರು ಬರುತ್ತಾರೆ. ಮಾನವಲೋಕ, ದೇವಲೋಕವೆಂಬ ಭೇದಭಾವವಿಲ್ಲದೆ ಸಂಚರಿಸ ಬಹುದು. ನಿಜ ಜೀವನದಲ್ಲಿ ಅಸಾಧ್ಯವಾದ ಸಾಹಸ, ಅದ್ಭುತ ಘಟನೆಗಳು ಇಲ್ಲಿ ಕಾಣಬಹುದು. ಇಂಥಹ ವಿಶಿಷ್ಟ ಆವರಣದಲ್ಲಿ ಬೆಳೆದುಬಂದಿರುವ ಜನಪದ ಕಾವ್ಯಗಳನ್ನು 'ರಮ್ಯಕಥನಗೀತೆಗಳು' ಎಂದು ಇಲ್ಲಿ ವರ್ಗೀಕರಿಸಬಹುದಾಗಿದೆ. ಜನಪದ ಸಾಹಿತ್ಯದಲ್ಲಿ ಈ ತರಹದ ಕಥನಗೀತೆಗಳು ದೊರೆಯುವುದರಿಂದ ಒಂದು ಪ್ರತ್ಯೇಕ ಇಲ್ಲಿ ಅವಶ್ಯಕವೆನಿಸಿದೆ.[೬]

ರಮ್ಯಕಥನಗೀತೆಗಳನ್ನು ವೃತ್ತಿಗಾಯಕರು ಹಾಡುತ್ತಾರೆ. ಈ ವೃತ್ತಿಗಾಯಕರನ್ನು ದೇವರಗುಡ್ಡರು, ನೀಲಗಾರರು, ಚೌಡಿಕೆಯವರು, ಗಣಿಯವರು, ಗೊರವರು ಎಂದು ಗುರುತಿಸಲಾಗಿದೆ. ಇವರುಗಳು ತಮ್ಮ ತಮ್ಮ ಕುಲದೇವರ ಕತೆಯನ್ನು ಭಕ್ತಿಯಿಂದ, ನಿಷ್ಠೆಯಿಂದ ಹಾಡಿ ಕಾಪಾಡಿಕೊಂಡು ಬಂದಿದ್ದಾರೆ. ಈ ಗೀತೆಗಳನ್ನು ಹಾಡುವಾಗ ಇವರು ವಿಶೇಷವಾದ ಉಡುಪುಗಳನ್ನು ಧರಿಸುತ್ತಾರೆ. ಹಬ್ಬ, ಜಾತ್ರೆ, ಉತ್ಸವ ಇತ್ಯಾದಿ ಶುಭಸಂದರ್ಭಗಳಲ್ಲಿ ಹಾಡುತ್ತಾರೆ.

### ೪.೨ ಕಥನಗೀತೆಗಳಲ್ಲಿ ಮಹಿಳಾ ಪಾತ್ರಗಳ ಸ್ವರೂಪ

ಜನಪದ ಕಥನಗೀತೆಗಳಲ್ಲಿ ಬರುವ ಮಹಿಳೆಯರ ಜೀವನದ ರೀತಿ ನೀತಿ ಸುಖ ದುಃಖ ಹಾಗೂ ಅವರು ಎದುರಿಸುವ ಬಿಕ್ಕಟ್ಟುಗಳೆಲ್ಲದರ ಪರಿಚಯವನ್ನು ಮಾಡುತ್ತವೆ. ಕಥನಗೀತೆಗಳಲ್ಲಿ ಬರುವ ಮಹಿಳೆಯರು ಜೀವನದ ಒಂದೊಂದು ಮೌಲ್ಯವನ್ನು ಪ್ರತಿಪಾದಿಸುವ ಹೋರಾಟಗಾರ್ತಿ ಯರಾಗಿ ಕಂಡುಬಂದಿದ್ದಾರೆ. ಈ ಮೌಲ್ಯಗಳು ಯಾವುದೇ ಜನಾಂಗದ ಸಾಂಸ್ಕೃತಿಕ ಪ್ರತೀಕವಾಗಿ ಕಂಡುಬಂದಿಲ್ಲ. ಜೀವಂತ ಸಮಾಜದಲ್ಲಿ ಬರುವ ಮಹಿಳೆ, ಕಥನಗೀತೆಗಳಲ್ಲಿ ಬರುವ ಮಹಿಳೆ ಯಾಗಿದ್ದಾಳೆ ಎಂದರೆ ತಪ್ಪಾಗಲಾರದು.

ಜನಪದ ಕಥನಗೀತೆಗಳಲ್ಲಿ ಬರುವ ಮಹಿಳೆಯ ತ್ಯಾಗ, ಬಲಿದಾನ, ಪಾತಿವ್ರತ್ಯ, ಬಂಜೆತನ, ವೈಧವ್ಯ ಹೀಗೆ ಹಲವು ನೆಲೆಗಳಲ್ಲಿ ಅವಳ ವ್ಯಕ್ತಿತ್ವವನ್ನು ಗುರುತಿಸಬಹುದು. ಅದಲ್ಲದೆ ಮಾನವ

ಸಹಜವಾದ ಕಾಮ, ಕ್ರೋಧಕ್ಕೆ ಬಲಿಯಾಗಿದ್ದಾಳೆ. ಅಪಮಾನ ಅನುಮಾನಕ್ಕೆ ಒಳಗಾಗಿದ್ದಾಳೆ. ಹೀಗೆ ಒಂದೇ ಎರಡೇ ಹಲವು ಹತ್ತಾರು ಮುಖಗಳ ಪರಿಚಯವನ್ನು ಕಥನಗೀತೆಗಳಲ್ಲಿ ಕಾಣಬಹುದು. ಈ ಗೀತೆಗಳಲ್ಲಿ ಬರುವ ಪಾತ್ರಗಳ ಸ್ವರೂಪ ಎಂತಹದ್ದು ಹೇಗೆ ಪ್ರತಿಬಿಂಬಿತವಾಗಿ ಮಹಿಳೆ ಪ್ರತಿನಿಧಿತವಾಗಿದ್ದಾಳೆ ಎಂಬುದನ್ನು ತಿಳಿಯುವುದು ಬಹಳ ಮುಖ್ಯವಾದಂತಹ ಅಂಶವಾಗಿದೆ. ವಾಸ್ತವಿಕ, ರಮ್ಯ, ಸಹಗಮನ, ತ್ಯಾಗ, ಬಲಿದಾನ, ದೈವಸಂಬಂಧಿ ಹಾಗೂ ಪುರಾಣ, ಕಥನಗೀತೆಗಳಲ್ಲಿ ಬರುವ ಎಲ್ಲಾ ಸ್ತ್ರೀಯರ ಸ್ವರೂಪವನ್ನು ತಿಳಿಯುವಂತಹ ಒಂದು ಪ್ರಯತ್ನ.

**ಕಾಡಸಿದ್ಧಮ್ಮ :** ಈ ಕಥನಗೀತೆಗಳಲ್ಲಿ ಬರುವ ಕಾಡಸಿದ್ಧಮ್ಮ ಕಾಡುಸಿದ್ದೇಶ್ವರನ ಸಾಕುಮಗಳು. ಇವಳು ಸವತಿ ಮಾತ್ಸರ್ಯಕ್ಕೆ ಸಿಕ್ಕಿ ನರಳಿ, ಪಡುವ ಕಷ್ಟ ಅಷ್ಟಿಷ್ಟಲ್ಲ. ಇವರ ಮಾತ್ಸರ್ಯಕ್ಕೆ ಒಳಗಾಗಿ ಹೆತ್ತಮಕ್ಕಳನ್ನು ಕಳೆದುಕೊಳ್ಳುತ್ತಾರೆ. ಇದು ಅಲ್ಲದೆ, ಗಂಡನಿಂದ ದೂರವಾಗಿ ಸಾಯುತ್ತಾಳೆ. ಅಂತ್ಯದಲ್ಲಿ ಮತ್ತೆ ಕಾಡಸಿದ್ದೇಶ್ವರನ ಕೃಪೆಯಿಂದ ಬದುಕಿ ತನ್ನವರನ್ನು ಸೇರುತ್ತಾಳೆ. ಸವತಿಯರ ಹಲವಾರು ಕುತಂತ್ರಗಳಿಗೆ ಒಳಗಾಗದೆ ದೇವರ ದಯೆ ಕೃಪೆಯಿಂದ ಬದುಕುಳಿಯುವುದು ಕಥನದುದ್ದಕ್ಕೂ ಕಂಡುಬರುತ್ತದೆ. ಇಲ್ಲಿನ ಮುಖ್ಯ ಆಶಯವೆಂದರೆ ಸವತಿ ಮಾತ್ಸರ್ಯ ಇದು ಇಂದಿಗೂ ಕಂಡುಬರುವ ಅಂಶವಾಗಿದೆ. ಹೆಣ್ಣು ತ್ಯಾಗಕ್ಕೆ ಹೇಗೆ ಸಿದ್ಧಳೂ ಹಾಗೇ ಮಾತ್ಸರ್ಯಕ್ಕೇ ಸಂಕೇತವಾಗಿ ಬರುತ್ತಾಳೆ.

**ಬಾಲನಾಗಮ್ಮ :** ಬಾಲನಾಗಮ್ಮಳಿಗೆ ನಾಗರಗನ್ನೆ ಎಂತಲೂ ಕರೆಯುವರು. ಇವಳು ಅಪ್ರತಿಮ ಸುಂದರಿ, ಮಂಡೆ ಬಿಡಿಸುತ್ತಾ ನಿಂತಿರುತ್ತಾಳೆ. ಇವಳ ಸೌಂದರ್ಯಕ್ಕೆ ಮನಸೋತು ಮಂತ್ರಗಾರ ಅವಳನ್ನು ನಾಯಿಯನ್ನಾಗಿ ಮಾಡಿಕೊಂಡು ಕರೆದುಕೊಂಡು ಹೋಗುವನು. ಬಾಲನಾಗಮ್ಮ ಅಥವಾ ನಾಗರಗನ್ನೆ ಮೂರು ತಿಂಗಳ ಬಾಣಂತಿ. ಭಿಕ್ಷೆಗೆಂದು ವೇಷ ಮರೆಸಿಕೊಂಡು ಜೋಗಿ ಇವಳಿಗೆ ಮಂಕುಬೂದಿ ಎರಚಿ ತನ್ನ ಹಿಂದೆ ಕರೆದುಕೊಂಡು ಹೋಗುತ್ತಾನೆ. ಇತ್ತ ಮೂರು ತಿಂಗಳ ಮಗುವನ್ನು ಬಿಟ್ಟು ಹೋಗುತ್ತಾಳೆ. ಬಾಲನಾಗಮ್ಮಳ ಕಥೆ ಮಂತ್ರಗಾರನ ಕೈಗೆ ಸಿಕ್ಕಿ ಕೊನೆಯವರೆಗೂ ಕಷ್ಟಪಡುವ ಹೆಣ್ಣೊಬ್ಬಳ ಸ್ಥಿತಿಯನ್ನು ಹೇಳುತ್ತದೆ. ಅಂತ್ಯದಲ್ಲಿ ಮಂತ್ರಗಾರನನ್ನು ಕೊಂದು ಅವಳನ್ನು ಬದುಕಿಸುವ ಧೈರ್ಯವನ್ನು ಅವಳ ಮಗನಲ್ಲಿ ಕಾಣಬಹುದು. ಇದು ಕುತೂಹಲಭರಿತವಾದ ಕಥನಗೀತೆ, ಮಾಂತ್ರಿಕತೆಯ ಪ್ರಭಾವವನ್ನು ಈ ಕಥನಗೀತೆಯಲ್ಲಿ ಕಾಣಬಹುದು.

**ನೀಲವೇಣಿ :** ನೀಲವೇಣಿ ತಾಯಿಗೆ ಮಕ್ಕಳ ಬಯಕೆಯನ್ನು ಆಶಿಸಿ ಪಾರ್ವತಿದೇವಿಯಿಂದ ಪುತ್ರಿ ಭಿಕ್ಷೆ ಪಡೆಯುತ್ತಾಳೆ. ಮಗಳು ೧೨ ವರ್ಷ ವಯಸ್ಸಾಗಿ ಸೀರೆಹುಟ್ಟು ಮಂಡೆ ಬಾಚುವಾಗ ನೀನು ಸಾಯುತ್ತೀಯಾ ಎಂದು ಹೇಳುತ್ತಾಳೆ ಪಾರ್ವತಿ. ಆದರೂ ಆ ಸಾವಿಗೆ ಹೆದರದೆ ಹೆಣ್ಣು ಪುತ್ರಿಗಾಗಿ ಪರಿತಪಿಸಿ ಭಿಕ್ಷೆ ಬೇಡಿ ನೀಲವೇಣಿಯನ್ನು ಪಡೆಯುವಳು. ನೀಲವೇಣಿ ಅಪ್ರತಿಮ ಸುಂದರಿ. ಮುಂದೆ ದೊಡ್ಡವಳಾದಾಗ ಪಾರ್ವತಿದೇವಿ ಹೇಳಿದಂತೆ ತಂದೆ ತಾಯಂದಿರು ಮರಣ ಹೊಂದುತ್ತಾರೆ. ತನ್ನ ಅಣ್ಣನ ಆಶ್ರಯದಲ್ಲಿ ನೀಲವೇಣಿ ಬೆಳೆಯುವಳು. ನೀಲವೇಣಿ ಮೈನೆರೆದ ಮೇಲೆ ತನಗೆ ವಿದ್ಯೆ ಕಲಿಸುವ ಗುರುವಿನ ಕಾಮದ ಕಣ್ಣಿಗೆ ಬಲಿಯಾಗುವಂತದ್ದು. ತನ್ನ ಅಣ್ಣನಿಗೆ

ಸುಳ್ಳು ನಕ್ಷತ್ರ ಹೇಳಿ ಕಾಡಿಗೆ ಅಟ್ಟುವುದು. ನೀಲವೇಣಿಗಾಗಿ ಓಜಯ್ಯ ಅಲೆಯುವುದು, ಕೊನೆಯಲ್ಲಿ ನೀಲವೇಣಿ ಓಜಯ್ಯನನ್ನು ಕೊಲ್ಲುತ್ತಾಳೆ. ಹೀಗೆ ಕಾಮುಕ ಗುರುವಿನಿಂದ ಶಿಷ್ಯೆಯೊಬ್ಬಳಿಗೆ ಉಂಟಾದ ಕಷ್ಟ–ನಷ್ಟವನ್ನು ಬಿಂಬಿಸುವ ಕಥೆಯಾಗಿದೆ. ಅನೇಕ ಆಶಯಗಳ ಸುತ್ತ ಬೆಳೆದುಕೊಂಡಿರುವ ಒಂದು ಸಂಕೀರ್ಣ ಜನಪದ ಕಾವ್ಯದ ಹೆಣ್ಣಾಗಿದ್ದಾಳೆ.

**ನೀಲಕಂಠ ರೂಪಾವತಿ**

ಕಥೆಯ ಮುಖ್ಯ ಅಂಶ 'ಸಂತಾನ ಆಪೇಕ್ಷೆ' ರೂಪಾವತಿಯ ಗಂಡ ನೀಲಕಂಠ ರಾಜನು ದೇವಲೋಕದ ಪಕ್ಷಿಗಳ ಮಾತಿನಂತೆ ಸಂತಾನಕ್ಕಾಗಿ ಹೆಂಡತಿಯನ್ನು ನಡುರಾತ್ರಿಯಲ್ಲಿ ಸಂಧಿಸುವುದು ಮತ್ತು ಆ ವಿಷಯವನ್ನು ರಹಸ್ಯವಾಗಿಡುವಂತೆ ಹೆಂಡತಿಗೆ ಹೇಳುವುದು. ಕಥೆಯ ಮುಖ್ಯ ತಿರುವುಗಳಲ್ಲಿ ರೂಪಾವತಿ ಗರ್ಭಧರಿಸುವುದು, ಅದರ ಬಗ್ಗೆ ಅತ್ತೆ–ಮಾವರು ಅನುಮಾನ ಮಾಡಿ ಅವಳನ್ನೂ ಕಾಡಿಗೆ ಅಟ್ಟುವುದು. ಕಾಡಿಗೆ ಬಂದ ರೂಪಾವತಿಯ ಸ್ಥಿತಿ ಸೀತೆಯ ನೆನಪನ್ನು ತರುತ್ತದೆ. ಕಾಡಿನಲ್ಲಿ ನೀರಿಲ್ಲ ನೆರಳಿಲ್ಲ ಪಕ್ಷಿಗಳ ಸಹಪಾಟಿಯಿಲ್ಲದೆ ಒಬ್ಬಂಟಿಗಳಾಗಿ ಅಲೆದು ಕೊನೆಗೆ ವೇಶ್ಯೆ ಕೈಯಲ್ಲಿ ಸಿಕ್ಕುತ್ತಾಳೆ. ಈ ವೇಶ್ಯೆ ರೂಪಾವತಿಗೆ ಹೆಣ್ಣು ಆಗುತ್ತಾಳೆ ಎಂಬ ಆಸೆ ಇರುತ್ತದೆ. ಅದೃಷ್ಟವಷಾತ್ ಗಂಡುಮಗುವಿಗೆ ರೂಪಾವತಿ ಜನ್ಮ ನೀಡುತ್ತಾಳೆ. ಇದಕ್ಕೆ ವೇಶ್ಯ ಬೇಸತ್ತು ಆ ಮಗುವನ್ನು ಬಿಲ್ವವೃಕ್ಷದ ಕೆಳಗೆ ಇಟ್ಟು ಬರುತ್ತಾಳೆ. ಈ ಮಗು ನೀಲಾದೇವಿಯ ಕೈಗೆ ಸಿಕ್ಕುತ್ತದೆ. ಮುಂದೆ ದೊಡ್ಡವನಾದ ಮೇಲೆ ಅವನೇ ರಾಜ್ಯಕ್ಕೆ ರಾಜನಾಗುವುದು, ತಾಯಿಯೆಂದು ಅರಿಯದೆ ಅವಳ ರೂಪಿಗೆ ಮರುಳಾಗಿ ಮಗ ಬಯಸಿದಾಗ, ಕರುವೊಂದರಿಂದ ಜ್ಞಾನೋದಯ ವಾಗುವುದು ಅವಳು ಪಡುವ ಕಷ್ಟ ಅಷ್ಟಿಷ್ಟಲ್ಲ ಹೀಗಾಗಿ ಕಥೆಯ ಆಶಯದಲ್ಲಿ ಪ್ರಧಾನವಾಗಿ ಸಂತಾನಾಪೇಕ್ಷೆ ಕಂಡು ಬಂದಿದೆ. ಹಾಗೂ ಕಥೆಯ ಆದಿ ಅಂತ್ಯಗಳಿಗೆ ಕಾರಣವಾಗಿದೆ.

**ವೇಶ್ಯೆನಾಯಕಿ ಸಾನಿ**

ವೇಶ್ಯೆ ವೃತ್ತಿ ಧರ್ಮವನ್ನು ಬಿಡದ ಛಲಗಾತಿ ರೂಪಾವತಿ ಗಂಡು ಮಗುವನ್ನು ಹಡೆದಳು ಎಂದು ಗೊತ್ತಾದ ಕೂಡಲೇ ಆ ಮಗುವನ್ನು ತಾಯಿಯಿಂದ ಬೇರ್ಪಡಿಸುವುದು. ರೂಪಾವತಿಯನ್ನು ವೇಶ್ಯೆ ವೃತ್ತಿಗಾಗಿ ಬಲವಂತಪಡಿಸುತವುದು. ಅವಳ ಮೂತಿಗೆ ಒಪ್ಪದ ರೂಪಾವತಿಯನ್ನು ಕೊನೆಯ ಪಕ್ಷ ಜಗುಲಿಯ ಕಟ್ಟೆಯ ಮೇಲಾದರೂ ಶೃಂಗರಿಸಿಕೊಂಡು ಕುಳಿತುಕೋ ಎನ್ನುವುದು. ಮುಂದೆ ತಾಯಿ ಮಗನ ಸಂಬಂಧ ವಿಷಯ ತಿಳಿದ, ಬಿಲ್ವಶೇಖರದಿಂದ ವೇಶ್ಯೆಯು ಶಿಕ್ಷೆಗೆ ಒಳಗಾಗುವುದು.

**ಗುಣಸಾಗರಿ**

ಗುಣಸಾಗರಿಗೆ ಆರು ವರ್ಷದವಳಿದ್ದಾಗ ೧೦ ವರ್ಷದ ಸಂಪನ್ನನಿಗೆ ಮದುವೆ ಮಾಡುತ್ತಾರೆ. ಹೊಸದರಲ್ಲಿ ಮದುವೆಯಾಗಿ ಗಂಡನ ಮನೆಗೆ ಬಂದ ಕೂಡಲೆ ಸಂಪನ್ನನ ತಮ್ಮ ನಿರ್ವಾಣೆ ಗುಣಸಾಗರಿ ಕುರಿತು ಹೇಳುವ ರೀತಿ ಹೀಗಿದೆ. "ನಮ್ಮಣ್ಣಂಗೆ ತಕ್ಕಾದ ಮಡದ್ಯಲ್ಲ ಗುಣಸಾಗ್ರಿ ನನಗೆ ತಕ್ಕಾದ ಮಡದ್ಯಂದ."[೧] ಈ ರೀತಿ ಅತ್ತಿಗೆ ತಾಯಿ ಸಮನಾದರೂ ಕೆಟ್ಟ ದೃಷ್ಟಿ ಗುಣಸಾಗರಿಯನ್ನು

ಸಂಧಿಸಿದ್ದು ಗರ್ಭವತಿಗೆ ಕಾರಣವಾಯಿತು. ಗುಣಸಾಗರಿ ಅದಕ್ಕೆ ಸಾಕ್ಷಿಯಂಬಂತೆ 'ಮುದ್ರೆ ಉಂಗುರ' ಕೊಟ್ಟುಹೋಗತ್ತಾನೆ.

ನಿರ್ವಾಣಿಗೆ ಗುಣಸಾಗರಿ ಬಸುರಿ ಆಗಿರುವುದು ಗೊತ್ತಾದ ಕೂಡಲೆ ಕಳ್ಳ ಬಸುರಿಯಾಗಿದ್ದಾಳೆ ಎಂದು ಅವಳಿಗೆ ವಿಚಿತ್ರವಾದ ಶಿಕ್ಷೆಯನ್ನು ಕೊಡುತ್ತಾನೆ. ಮುಂದೆ ಅವಳ 'ಪಾತಿವೃತೆ'ಯಿಂದ ಅವು ಯಾವುವು ಅನಾಹುತ ಮಾಡುವುದಿಲ್ಲ. ಗುಣಸಾಗರು 'ಮುದ್ರೆ ಉಂಗುರ' ಕೊಟ್ಟು ಹೋಗಿದ್ದಾರೆ ಎಂದು ಹೇಳಿದರು ಅವರ್‍ಯಾರು ಒಪ್ಪುವುದಿಲ್ಲ. ಮುದ್ರೆ ಉಂಗುರು ಸಹ ಮಾಯೆ ಯಾಗಿರುತ್ತದೆ. ಕಳ್ಳ ಬಸುರಿನ ವಿಷಯ ಗುಣಸಾಗರಿಯ ಮೇಲೆ ತನ್ನ ತೌರಿಗೆ ತಿಳಿಸುತ್ತಾರೆ. ತವರಿನವರು ಸಹ ಪ್ರಾಮಾಣಿಸಿ ನೋಡದೆ ಅವಳನ್ನು ದೂಷಿಸುತ್ತಾರೆ. ಹೀಗಾಗಿ ಕಾಡಿನಲ್ಲಿ ಗುಣಸಾಗರಿ ಬಾಯಾರಿ ಬಳಲಿ ಹೋಗುವಾಗ ಮುದ್ದಣ್ಣನ ತೋಟ ಪ್ರವೇಶಿಸುತ್ತಾಳೆ. ಬಾಡಿಹೋದ ತೋಟ ಮತ್ತೆ ಹಸಿರಿನಿಂದ ಕಂಗೊಳಿಸಿದ್ದರಿಂದ ಮಹಾನ್ ಪತಿವೃತೆ ಗುಣಸಾಗರಿಯನ್ನು ಮನೆಗೆ ಕರೆತಂದು ಅವಳಿಗೆ ಹೆರಿಗೆ ಮಾಡಿಸುತ್ತಾನೆ. 'ಮಣೆಯಪ್ಪ' ಎಂಬ ಮಗನಿಗೆ ಜನ್ಮ ನೀಡುತ್ತಾಳೆ. ಮುಂದೆ ಮುತ್ತಿನ ವ್ಯಾಪಾರಕ್ಕೆ ಹೋದ ಸಂಪನ್ನ ಬಂದ ಹೆಂಡತಿಯಿಲ್ಲದ ವಿಚಾರ ತಿಳಿದು ವ್ಯಥೆಪಟ್ಟು ಹುಡುಕಾಡುತ್ತಾನೆ. ಮಣೆಯಪ್ಪ ತನ್ನ ತಂದೆ ತಾಯಿ ಹೊಂದಾಗುವಂತೆ ಮಾಡುತ್ತಾನೆ.

**ಮಲ್ಲಿಗಮ್ಮ**

ಗುಣಸಾಗರಿಯ ಅತ್ತೆ ಸಂಪನ್ನನ ತಾಯಿ ಮಾನವನ ಸಹಜವಾದ ಪ್ರೀತಿಗೆ, ರಾಗಕ್ಕೆ ಸಂಕೇತವಾಗಿ ಬರುತ್ತಾಳೆ. ಗುಣಸಾಗರಿಯನ್ನು ಮಗಳಂತೆ ನೋಡಿಕೊಳ್ಳುತ್ತಾಳೆ. ತನ್ನ ಎರಡನೇ ಮಗನ ವಿರುದ್ಧ ಸಹ ಪ್ರತಿಭಟನೆ ಮಾಡಿ ಗುಣಸಾಗರಿಯ ಪರ ನಿಲ್ಲುತ್ತಾಳೆ. ಇವಳು ಗುಣವಂತಳು.

**ಅಲ್ಲಕ್ಕ ಮಲ್ಲಕ್ಕ**

ಗುಣಸಾಗರಿಯ ನಾದಿನಿಯರು, ಮಲ್ಲಿಗಮ್ಮ ಮಲಶೆಟ್ಟಿಯ ಹೆಣ್ಣು ಮಕ್ಕಳು. ಅತ್ತಿಗೆ ಗುಣಸಾಗರಿಯ ಮೇಲೆ ಚಾಡಿ ಹೇಳುವುದು, ಕಿರುಕುಳಕೊಡುವುದು ಅತ್ತಿಗೆ ಶ್ರೇಯಸ್ಸನ್ನು ಕಂಡು ಸಹಿಸಿದಿರುವ ಗುಣ ಇರುವಲ್ಲಿದೆ. ಇವರಿಬ್ಬರನ್ನು 'ನಸುಕುನ್ನಿ' ಕಾಯಿಗೆ ಹೋಲಿಸಲಾಗಿದೆ. ಗುಣಸಾಗರಿಯ ಬದುಕಿನಲ್ಲಿ ಅನುಭವಿಸುವ ಕಷ್ಟಕ್ಕೆ ಇವರು ಕಾರಣರಾಗುತ್ತಾರೆ.

**ಸಂಗಮ್ಮ**

ಗುಣಸಾಗರಿಯ ಕಥನ ಗೀತೆಯಲ್ಲಿ ಬರುವ ಸೂಲಗಿತ್ತಿ ನಿಷ್ಠಾವಂತಳು, ಗುಣಸಾಗರಿಯ ಕಷ್ಟ ಸುಖಕ್ಕೆ ಭಾಗಿಯಾಗುತ್ತಾಳೆ. ಗುಣಸಾಗರಿಗೆ ಸುಖದಾಯಕವಾಗಿ ಹೆರಿಗೆ ಮಾಡಿಸುತ್ತಾಳೆ. ಸಂಗಮ್ಮ ತುಂಬಾ ಸೊಗಸುಗಾತಿ. ಗುಣಸಾಗರಿಗೆ ಹೆರಿಗೆ ಬೇನೆ ಸುರುವಾಗಿದೆ ಎಂದು ವಿಷಯ ತಿಳಿದರೂ ಪಟ್ಟೆಸೀರೆಧರಿಸಿಕೊಂಡು, ಮುತ್ತಿನ ಬಟ್ಟಕ್ಕೆ, ಮುತ್ತಿನ ಕೊಡೆಯ ಹಿಡಕೊಂಡು ಮುದ್ದಣ್ಣನ ಮನೆಗೆ ಬರುತ್ತಾಳೆ. ಉತ್ತರದೇವಿ. ದಿನದಿತ್ಯ ಬದುಕಿನಲ್ಲಿ ಮಾನವನ ರಾಗದ್ವೇಷಗಳಿಗೆ ಸಂಬಂಧಿಸಿದಂತೆ, ಅತ್ತೆ-ಸೊಸೆಯ ನಡುವಿನ ಜಗಳ ಕಥನಗೀತೆಯ ವಸ್ತುವಾಗಿದೆ. ಅತ್ತೆ ಸೊಸೆಯರ ನಡುವಿನ ವಾದವಿವಾದಕ್ಕೆ ಕಾರಣ ಕ್ಷುಲ್ಲಕವಾಗಿದ್ದರೂ, ಮಾತಿಗೆ ಮಾತು ಬೆಳೆದು ಮನೆಯಿಂದ ಹೊರಬಂದ

ಉತ್ತರೆಗೆ ಎಲ್ಲೂ ಆಶ್ರಯಸಿಗದೆ ಸಾವನ್ನಪ್ಪುವುದು. ಅತ್ತೆಯ ವಿರುದ್ಧ ಉತ್ತರೆ ನೇರವಾಗಿ ಪ್ರತಿಭಟಿಸದೇ ಇದ್ದರೂ ಪರೋಕ್ಷವಾಗಿ ವಿರೋಧಿಸುವ ಗುಣವುಳ್ಳವಳು, ನೀರಿಗೆ ಹೋಗಿ ತಡವಾಗಿ ಬಂದದ್ದು, ಕೊಡ ಒಡೆದದ್ದು ಮೇಲು ನೋಟಕ್ಕೆ ಸತ್ಯವಾಗಿದ್ದರೂ ಅದು ಅವರ ಅತ್ತೆಗೆ 'ಶೀಲ'ದ ದೃಷ್ಟಿ ಇಟ್ಟುಕೊಂಡು ಬೈಯುವುದು. ಗಂಡ ತನ್ನ ತಾಯಿಯ ವಿರುದ್ಧ ಮೊದಮೊದಲು ವಿರೋಧಿಸಿದರು ತನ್ನ ತಾಯಿಯ ಮಾತಿಗೆ ಕಟ್ಟು ಬಿದ್ದು ಸುಮ್ಮನಾಗುವುದು. ಇಲ್ಲಿ ಉತ್ತರೆ ತಾನೇ ಬೆಳೆಸಿದ ಮರಗಿಡ ಪ್ರಾಣಿಪಕ್ಷಿಗಳನ್ನು ನೆನೆಯುತ್ತಾ ಅವುಗಳಿಗೆ ಪರೋಕ್ಷವಾಗಿ ತನ್ನ ಅಳಲನ್ನು ವ್ಯಕ್ತಪಡಿಸುತ್ತಾಳೆ. ತನ್ನ ಮದುವೆ ಸಂದರ್ಭದಲ್ಲಿ ವರದಕ್ಷಿಣೆಯಾಗಿ ಕೊಟ್ಟದ್ದನ್ನು ನಾನೇ ಇಲ್ಲದ ಆ ಮನೆಯಲ್ಲಿ ನನ್ನ ವಸ್ತುಗಳನ್ನೇಕೆ ಬಿಡುವುದೆಂದು ಅದನ್ನು ವಾಪಸ್ಸು ಪಡೆಯುವುದು ಒಂದು ಸೋಜಿಗದ ಸಂಗತಿ. ಇಬ್ಬರ ಮಕ್ಕಳನ್ನೂ ಕರೆದುಕೊಂಡು, ಚುಕ್ಕಿ ಬೆಳಕಿನಲ್ಲಿ ನಡೆದು ಬರುವಾಗ ಅನೇಕರು ಬದುಕು ಕೊಡುತ್ತೇವೆ ಎಂದು ಹೇಳಿದರು. ಅವನ್ನೆಲ್ಲಾ ಎದುರಿಸಿ ಬರುವ ಒಂದು ಸಾಹಸಿ ಗುಣ ಅವಳದು. ತಂದೆ ತಾಯಿ, ಬಂಧು ಬಳಗದವರ ಆಶ್ರಯ ದೊರೆಯದಿದ್ದಾಗ ಕೊನೆಗೆ ಅವಳು ಹಂಪಿಯ ಉತ್ತರೆ ಮಳೆಯಾಗಿ ನೀರಲ್ಲಿ ಮುಳಗಿ ಸಾವನ್ನಪ್ಪುವುದು ಅವಳ ತೀರ್ಮಾನವೇ ಸರಿಯಾದಂತಿದೆ.

**ಬಂಜೆ ಹೊನ್ನಮ್ಮ**

ಬಂಜೆತನದ ನೋವನ್ನು ಹೃದಯಂಗಮವಾಗಿ ಚಿತ್ರಿಸಿರುವುದನ್ನು ಜನಪದ ಕಾವ್ಯದಲ್ಲಿ ಕಾಣಬಹುದು. ಆರು ಜನ ಅಕ್ಕಂದಿರೂ ಮಕ್ಕಳ ಭಾಗ್ಯವನ್ನು ಪಡೆದರು. ಇವಳು ಮಾತ್ರ ಬಂಜೆಯಾಗಿ ಉಳಿದಳು. ಅಕ್ಕತಂಗಿಯರು ಸಹ ಮಕ್ಕಳನ್ನು ಮುದ್ದಾಡಲು ಬಿಡುತ್ತಿರಲಿಲ್ಲ. ಇದರ ನೋವನ್ನು ಆ ದೇವರೇ ಬಲ್ಲ. ಮಕ್ಕಳನ್ನು ಪಡೆಯುವುದಕ್ಕಾಗಿ ಅನೇಕ ಪುಣ್ಯ ಕಾರ್ಯಗಳನ್ನು ಮಾಡುತ್ತಾಳೆ. ಬಾವಿಯನ್ನು ತೆಗೆಸುತ್ತಾಳೆ. ಕಿತ್ತಲೆ, ಸೀಬೆ, ನಿಂಬೆ ತೋಟನ್ನು ಬೆಳೆಸುತ್ತಾಳೆ. ಮೂಡಲ ಸೀಮೆಯಿಂದ ಬಂದ ಯಾವ ಹಕ್ಕಿ ಪಕ್ಷಿಗಳು ಬಂಜೆ ತೆಗೆಸಿದ ಬಾವಿಯಿಂದ ನೀರು ಕುಡಿಯುವುದಿಲ್ಲ. ಹಣ್ಣು ತಿನ್ನುವುದಿಲ್ಲ. ಒಂದು ವೇಳೆ ತಿಂದರೂ ತಮ್ಮ ಮಕ್ಕಳಿಗೂ ಬಂಜೆತನ ಬರುತ್ತದೆ ಎಂದು ತಿನ್ನುವುದಿಲ್ಲ. ಅವಳ ಊರಿನ ನಾರಿಯರೆಲ್ಲ ಅವಳನ್ನು ಹಂಗಿಸುತ್ತಾರೆ. ಕೊನೆಯಲ್ಲಿ ದೇವರ ಮೊರೆಹೋಗಿ ಮಕ್ಕಳ ಸಂತಾನ ಪಡೆಯುತ್ತಾಳೆ. ಮಗುವಿಗೆ ಹನ್ನೆರಡು ವರ್ಷ ಆದಾಗ ಆ ಮಗುವನ್ನು ಕಡಿದು ತಮಗೆ ಅಡಿಗೆ ಮಾಡಬೇಕೆಂದು ಹೇಳುತ್ತಾರೆ. ಅವರಿಚ್ಚೆಗೆ ಸಮ್ಮತಿಸುತ್ತಾಳೆ. ಮೊದಲು 'ಬಂಜೆ' ಎನ್ನುವ ಶಬ್ದ ತೊಲಗಲಿ ಎನ್ನುವ ಮನೋಭಾವ ಹೊನ್ನಮ್ಮಳದು. ದೇವರ ಆಪೇಕ್ಷದಂತೆ ಮಗುವನ್ನು ಕಡಿದು ಊಟಕ್ಕೆ ಬಡಿಸುತ್ತಾಳೆ. ಇವಳ ಭಕ್ತಿಗೆ ಮೆಚ್ಚಿ ಪುನಃ ಶಿವ ಮಗುನ್ನು ಬದುಕಿಸುತ್ತಾರೆ. ಮುಂದೆ ಸುಖ ಜೀವನ ಮಾಡುತ್ತಾಳೆ.

**ಬಯಲು ಸೀಮೆಯ ಗೌಡನ ಮಗಳು**

ಈ ಕಥನಗೀತೆಯಲ್ಲಿ ಬಯಲು ಸೀಮೆಯ ಗೌಡನ ಪಾರಂಪರಿಕ ವ್ಯಕ್ತಿತ್ವ ಹಾಗೂ ಅವನ ಮಗಳ ಅಹಂಕಾರ, ಹಮ್ಮು, ಬಿಮ್ಮು, ದೌರ್ಜನ್ಯವನ್ನು ಕಾಣಬಹುದು. ಗೌಡನ ಮಗಳು

ಕೆಳವರ್ಗದ ಗೊಲ್ಲ ಸಮುದಾಯದ ಬಡವ ಹುಡುಗನನ್ನು 'ಇನವಂದ' ಆಡಲು ಕರೆಯುವಂತಿದ್ದು, ಇದಕ್ಕೆ ತನ್ನ ಸ್ಥಾನವನ್ನು ಅರಿತ ಗೊಲ್ಲರ ಹುಡುಗ 'ಇನವಂದ' ಹಾಡಲು ಒಪ್ಪುವುದಿಲ್ಲ. ಇದೇ ಈ ಕಥನಗೀತೆಯ ತಿರುವಿಗೆ ಕಾಣವಾಗುತ್ತದೆ. ಅವನು ಬಾರದಿದ್ದಕ್ಕೆ ಗೌಡನ ಮಗಳು ಸಿಟ್ಟಿಗೆದ್ದು ಅವನ ಮೇಲೆ ಸೇಡು ತೀರಿಸಿಕೊಳ್ಳುತ್ತಾಳೆ. ಮುಗ್ಧ ಹುಡುಗನ ಸಾವಿಗೆ ಕಾರಣವಾಗುತ್ತಾಳೆ. ಮುಗ್ಧ ಗೊಲ್ಲರ ಹುಡುಗನ ಪ್ರಾಣಕ್ಕೆ ಸಂಚಕಾರವನ್ನು ತರುತ್ತಾಳೆ. ಅವನ ಮೇಲಿನ ಕೋಪಕ್ಕೆ ತನ್ನ ತಂದೆಯಿಂದ ಶಿಕ್ಷೆ ಕೊಡಿಸುತ್ತಾಳೆ. ಎಂದು ಪಣ ತೊಟ್ಟಳು ಆ ತಕ್ಷಣವೇ ತೊಟ್ಟಿರುವ ಬಳೆಗಳನ್ನು ಒಡೆದಾಕಿ. ತೊಟ್ಟ ಸೀರೆ ರವಿಕೆಯನ್ನು ಹರಿದುಕೊಂಡಳು. ಒಡೆದೋದ ಗಾಜಿನ ಚೂರುಗಳಿಂದ ಮೈಮೇಲೆ ರಕ್ತ ಬರುವಂತೆ ಗೀಚಿಕೊಂಡು ಮನೆಗೆ ಬಂದು ಮಂಚಕ್ಕೆ ಮಕಾಡೆಯಾಗಿ ಮಲಗಿದಳು.

ಇಷ್ಟೆಲ್ಲಾ ರಂಪ ರಾದ್ಧಂತ ಮಾಡಿಕೊಂಡಿದ್ದಾಳೆ ಎಂದರೆ, ಅವಳನ್ನು ಆ ಸ್ಥಿತಿಯಲ್ಲಿ ನೋಡಿದ ಯಾರೇ ಆಗಲಿ ಗೊಲ್ಲರ ಹುಡುಗನ ಮೇಲೆ ಕೋಪ ಅನುಮಾನ ಪಟ್ಟುಕೊಳ್ಳುವುದಂತೂ ಸತ್ಯ. ಅದಕ್ಕೆ ತಕ್ಕಂತೆ ಗೌಡನಮಗಳು ಹೀನವಾದ ಸ್ಥಿತಿಯಲ್ಲಿ ತನ್ನ ವೇಷಭೂಷಣಗಳನ್ನು ಬದಲಾಯಿಸಿಕೊಂಡು ಮನೆಗೆ ಬಂದು ಮಕಾಡೆಯಾಗಿ ಮಲಗಿದ್ದಾಳೆ. ಶ್ರೀಮಂತಿಕೆಯ ಅಮಲಿನಲ್ಲಿ ಬೆಳೆದು ಸೊಕ್ಕಿದ ಮಗಳ ಮಾತನ್ನು ಕೇಳಿದ ಗೌಡ ಗೌಡತಿ ಹಿಂದೆ ಮುಂದೆ ಆಲೋಚಿಸದೆ ಅವಳ ಮಾತನ್ನು ನಂಬಿ ಗೊಲ್ಲರ ಬಡ ಹುಡುಗನನ್ನು ಸಾಯಿಸುತ್ತಾರೆ. ಗೊಲ್ಲರ ಹುಡುಗನ ಶಿರವ ಮೆಟ್ಟಿಕೊಂಡು ನಾ ತಣ್ಣೀರು ಮೀಯಾಬೇಕು[3] ಎಂದು ತಂದೆಗೆ ತಿಳಿಸುತ್ತಾಳೆ. ಅದರಂತೆ ಅವಳು ಹಾಗೆ ಮಾಡುತ್ತಾಳೆ. ಒಟ್ಟಾರೆ ಈ ಕಥೆಯ ಆದಿ ಅಂತ್ಯ ತಿರುವುಗಳಿಗೆ ಗೌಡನ ಮಗಳು ಪ್ರತಿಷ್ಠೆಯೇ ಕಾರಣವಾಗಿದೆ ಎಂದು ತಿಳಿದು ಬರುತ್ತದೆ.

**ಜಾಗಲೆ**

ಜಾಗಲೆ ಮೂರು ತಿಂಗಳ ಮಗುವಾಗಿದ್ದಾಗ ಆರು ತಿಂಗಳ ರಂಗಯ್ಯನಿಗೆ ಎತ್ತಿ ತಂದು ಮದುವೆ ಮಾಡಿಸಿರುತ್ತಾರೆ ಅಂದಿನಿಂದ ಬಹಳ ವರ್ಷಗಳವರೆಗೂ ತನ್ನ ತೌರಿನಲ್ಲಿ ಇರುತ್ತಾಳೆ. ತನ್ನ ಮಾವಂದಿರು ದಂಡಿನ ಓಲೆ ಕಳುಹಿಸುತ್ತಾರೆ. ದಂಡಿಗೆ ಹೋಗುವ ಕಾರಣ ಜಾಗಲೆಯನ್ನು ಕರೆತರುವಂತೆ ತನ್ನ ತಾಯಿಗೆ ಹೇಳುತ್ತಾನೆ. ತಾಯಿ ಮಗನ ಆಸೆಯಂತೆ ಮಗಳನ್ನು ಕರೆತರಲು ಜಾಗಲೆಯ ಊರಿಗೆ ಹೊಗುತ್ತಾಳೆ. ಹೋಗುವ ದಾರಿಯ ತಪ್ಪಿದ್ದರಿಂದ ಜಾಗಲೆಯನ್ನು ಬಯ್ಯುತ್ತಾ ಊರು ಸೇರುತ್ತಾಳೆ. ಅತ್ತೆ ಮನೆಗೆ ಬಂದಾಗ ಜಾಗಲೆ ಸೌಜನ್ಯದಿಂದ ಆರತಿ ಮಾಡಿ ಗೌರವದಿಂದ ಉಪಚರಿಸುತ್ತಾಳೆ. ನಂತರ ತನ್ನ ತವರಿನಿಂದ ಉಡುಗೊರೆಯನ್ನು ಪಡೆದುಕೊಂಡು ಹೊರಡುತ್ತಾಳೆ. ಒಂದು ಗಾವುದ ದೂರದವರೆಗೆ ಹೋಗಿ ಕಳುಹಿಸಿ ಕೊಡುತ್ತಾರೆ. ಯೋಜನೆ ದೂರ ಬಂದ ಜಾಗಲೆ ತವರೂರ ಕಡೆ ತಿರುಗಿ ತಿರುಗಿ ನೋಡುವುದಕ್ಕೆ ಅತ್ತೆಯಿಂದ ಬೈಯಿಸಿಕೊಳ್ಳುತ್ತಾಳೆ. ಅದಕ್ಕೆ ಜಾಗಲೆ ಏನೂ ಪ್ರತಿಕ್ರಿಯೆ ವ್ಯಕ್ತಪಡಿಸುವುದಿಲ್ಲ. ಮನೆಗೆ ಬಂದ ಸೂಸೆಯನ್ನು ಕಾಲಿನಿಂದ ಜಾಡಿಸಿ ಒದೆಯುತ್ತಾಳೆ. ಜಾಗಲೆಯ ಮೇಲಿನ ಒಡವೆ ವಸ್ತ್ರವನ್ನು ಅತ್ತೆ ಬಿಚ್ಚಿಸಿಕೊಂಡು ಅವಳ ಮಗಳಿಗೆ ತೊಡಿಸುತ್ತಾಳೆ ಇದನ್ನು ನೋಡಿದ ಮಗ ರಂಗಯ್ಯ ಏನು ಮಾತನಾಡುವುದಿಲ್ಲ.

ತನ್ನ ಗಂಡನಿಗೆ ಹೀಗೆ ಹೇಳುತ್ತಾಳೆ "ನೀವೇನೂ ಹೋತ್ತೀರೀಗ ನಾನು ಎಲ್ಲಿ ಇರಬೇಕು ಗುರುತ ಏನು ಕೊಡುತ್ತೀರಿ"' ಎಂದು ಕೇಳಿದಾಗ ಮುದ್ರೆ ಉಂಗುರವನನು ಜಾಗಲೆಯ ಕೈಗೆ ತೊಡಿಸುತ್ತಾನೆ. ಇತ್ತ ಮಗ ದಂಡಿಗೆ ಹೋದ ಕೂಡಲೆ ಅತ್ತೆ ನಾದಿನಿ ಸೇರಿ ಒಂದೇ ಸಮನೆ ಕೆಲಸ ಮಾಡಿಸುತ್ತಾರೆ. ದೊಡ್ಡ ಕೊಡದಲ್ಲಿ ನೀರು ತೆಗೆದುಕೊಂಡು ಬಾ ಎಂದು ಹೇಳಿದಾಗ ತೆಗೆದುಕೊಂಡು ಬರುತ್ತಾಳೆ. ಅದನ್ನು ಇಳಿಸಿಕೊಳ್ಳಲು ಯಾರು ಬರದಿದ್ದಾಗ ಮೈದುನ ಬಂದು ಇಳಿಸುತ್ತಾನೆ. ಅದಕ್ಕೆ ಅನೈತಿಕ ಸಂಬಂಧದಿಂದ ಬಸುರಿಯಾಗಿದ್ದಾಳೆ ಎಂದು ಇಲ್ಲ ಸಲ್ಲದ ಬೈಗಳಿಂದ ಬೈಯುತ್ತಾರೆ. ಇವಳನ್ನು ಕಾಡಿಗೆ ಅಟ್ಟುತ್ತಾರೆ. ನಂತರ ಇವಳು ಶಿವನನ್ನು ಧ್ಯಾನಿಸಿ ಮೊರೆಹೋಗುತ್ತಾಳೆ. ಅದರಿಂದ ದೇವರು ಪ್ರತ್ಯಕ್ಷವಾಗಿ ಅವಳಿಗೆ ಗಂಡುಮಗುವನ್ನು ನೀಡಿ ಸುಖ ಪಡಿಸುತ್ತಾರೆ. ನಂತರ ಗಂಡ ದಂಡೆಗೆ ಹೋದವನು ಬಂದು ತನ್ನ ಹೆಂಡತಿಯನ್ನು ಪತ್ತೆಹಚ್ಚಿ ಅಂತ್ಯದಲ್ಲಿ ಸುಖಾಂತವಾಗಿರುತ್ತಾರೆ.

**ಕಲಿಯುಗದ ಬಾಲೆ**

ಕಲಿಯುಗ ಬಾಲೆ ಕಥೆಯಲ್ಲಿ ಕಂಡು ಬರುವ ಸತಿಪತಿಗಳ ಸಂಬಂಧ ಅಚ್ಚುಕಟ್ಟಾಗಿತ್ತು. ಅವರ ಸುಖದಾಂಪತ್ಯದ ಫಲವಾಗಿ ಬೆಲೆಗೆ ಎರಡು ಮಕ್ಕಳಾಗಿರುತ್ತವೆ. ಇತ್ತ ಗಂಡ ದಂಡಿಗೆ ಹೋಗಿರುತ್ತಾನೆ. ಅಂತಹ ಸಂದರ್ಭದಲ್ಲಿ ಬಾಲೆ ಪರಪುರಷನೊಬ್ಬನನ್ನು ಅನೈತಿಕ ಸಂಬಂಧಕ್ಕೆ ಅಹ್ವಾನಿಸುತ್ತಾಳೆ. ಬಂದಂತಹ ಪುರುಷನಿಗೆ ಒಪ್ಪು ಅಡುಗೆ ಸಿಹಿ ತಿನಿಸುಗಳು ಅಡುಗೆ ಮಾಡಿ ತಿನಿಸುತ್ತಾಳೆ. ನಂತರ ಸರಸ ಸಲ್ಲಾಪದಲ್ಲಿ ತಲ್ಲೀನರಾದಾಗ ತನ್ನ ಎರಡು ಮಕ್ಕಳು ತಾಯಿಯನ್ನು ಪ್ರಶ್ನಿಸಿದಕ್ಕೆ ಎರಡು ಮಕ್ಕಳನ್ನು ಕೊಲೆಮಾಡಿ ಬುಟ್ಟಿಗೆ ತುಂಬಿ ಹಿತ್ತಲಲ್ಲಿ ಹಾಕುತ್ತಾಳೆ. ನಂತರ ಈ ವಿಷಯ ಗಂಡನಿಗೆ ತನ್ನ ಮಕ್ಕಳಿಂದ ಕನಸಿನಲ್ಲಿ ವಿಷಯ ತಿಳಿಯುತ್ತದೆ. ಗಂಡ ಮನೆಗೆ ಬಂದು ಮಕ್ಕಳೆಲ್ಲಿ ಎಂದು ವಿಚಾರಿಸಿದಾಗ ವಿಷಯ ಗೊತ್ತಾಗಿದೆ ಎಂದು ಅರಿತು ಗಂಡನಿಗೆ ಅನ್ನದಲ್ಲಿ ವಿಷಹಾಕಿ ಸಾಯಿಸುತ್ತಾಳೆ. ಇದನ್ನೆಲ್ಲಾ ಅರಿತ ಜನ ಅವಳನ್ನು ಶಪಿಸುತ್ತಾರೆ. ಹಾಗೆಯೇ ಶಿವನು ಸಹ ಅವಳನ್ನು ಶಪಿಸುವುದಲ್ಲದೆಃ ಸುಣ್ಣದ ಗುಂಡಿಗೆ ಹಾಕಿ ಸುಡುತ್ತಾನೆ. ಕಲಿಯುಗದ ಬಾಲೆ ಕಥನಗೀತೆಯಲ್ಲಿ ಹೆಣ್ಣೊಬ್ಬಳ ವಿಕೃತ ಕಾಮವನ್ನು ಚಿತ್ರಿಸುವುದರಲ್ಲಿ ಸಫಲನಾಗಿದ್ದಾನೆ ಎಂದರೆ ತಪ್ಪಾಗಲಾರದು.

**ನಾಗವ್ವ**

ಕಾಡುಗೊಲ್ಲ ಸಮುದಾಯದಲ್ಲಿ ಹುಟ್ಟಿದವಳು. ಸೀರೆ ಉಡಲರಿಯದವಳಿಗೆ ನವಿಲೂರಿನ ಮುತ್ತನ ಮಗ ಬೆಂದಯ್ಯನಿಗೆ ಮದುವೆ ಮಾಡುತ್ತಾರೆ. ಮದುವೆ ಸಂದರ್ಭದಲ್ಲಿ ಅನೇಕ ಅಪಶಕುನಗಳು ಆದರೂ ಹಿರಿಯರು ಶ್ರೀಮಂತರ ಮನೆತನವೆಂದು ಭಾವಿಸಿ ಮದುವೆಗೆ ಅಣಿಯಾಗುತ್ತಾರೆ. ಧಾರೆ ಸಂದರ್ಭದಲ್ಲಿ ನವಿಲೂರಿನ ಚಿಂದಯ್ಯನ ತಂಗಿ ಅಣ್ಣನಿಗೆ ಬೇಡರು ಆಡನ್ನು ಬಂಧಿಸಿದ ಸುದ್ದಿ ತಿಳಿಸುತ್ತಾಳೆ. ಅಲ್ಲಿಂದ ಹೊರಟ ಚಿಂದಯ್ಯ ಬೇಡರ ಬಲೆಗೆ ಆಹುತಿಯಾಗುತ್ತಾನೆ. ಇದನ್ನು ತಿಳಿದ ನಾಗವ್ವ ಸ್ವತಃ ತಾನೇ ಕೆಂಡಕೊಂಡವಾದ ದಾರುಣ ಚಿತ್ರಣ ಈ ಕಥನಗೀತೆಯಲ್ಲಿ ಕಂಡುಬರುತ್ತದೆ.

**ಚಿಕ್ಕೋಳು ಹಿರಿದಿಮ್ಮವ್ವ**

ಚಿಕ್ಕೋಳು ಹಿಂದಿಮ್ಮವ್ವನ ಮನೆಯಲ್ಲಿ ಅವಳ ತಂದೆ ತಾಯಿಗಳ ಆಶ್ರಯದಲ್ಲಿ ಬೆಳೆದ ಬೇಡರ ಹುಡುಗ ಹಿರಿದಿಮ್ಮವ್ವಳ ಸೌಂದರ್ಯಕ್ಕೆ ಮನಸೋತು ಮದುವೆಯಾಗುವಂತೆ ಪ್ರೇರೇಪಿಸಿದ. ಹಿರಿದಿಮ್ಮವ್ವಳಿಗೆ ಅವನ ಮೇಲೆ ಕೆಟ್ಟ ಅಭಿಪ್ರಾಯವಿಲ್ಲದಕ್ಕೆ ಮದುವೆಯಾಗಲು ತಿರಸ್ಕರಿಸುತ್ತಾಳೆ. ಮುಂದೆ ಹಿರಿದಿಮ್ಮವ ಬೇರೊಬ್ಬನನ್ನು ಸಂಭ್ರಮದಿಂದ ಮದುವೆಯಾಗಿ ಗಂಡನ ಮನೆಗೆ ಹೋಗುವಾಗ ದಾರಿಯಲ್ಲಿ ಹಿರಿದಿಮ್ಮವ್ವನ ಗಂಡನನ್ನು ಮೋಸದಿಂದ ಬೇಡರ ಹುಡುಗ ಕೊಂದು ಬಿಡುತ್ತಾನೆ. ಅದಕ್ಕೆ ಅವಳು ಬೇಡರ ಹುಡುಗನನ್ನು ಪ್ರೀತಿಸುವ ಮಡದಿಯಾಗುವ ನಟನೆಮಾಡಿ ಅವನನ್ನು ಕೊಲೆಗೈಯುತ್ತಾಳೆ. ನಂತರ ತನ್ನ ತವರು ಮನೆಯವರಿಗೆ ವಿಷಯ ತಿಳಿಸಿ. ತನ್ನ ಗಂಡನ ರುಂಡವನ್ನು ಮಡಿಲಲ್ಲಿ ಕಟ್ಟಿಕೊಂಡು, ಬೇಡರ ಹುಡುಗನ ಶಿರವನ್ನು ಕಾಲಲ್ಲಿ ಒದ್ದುಕೊಂಡು ಬರುವ ಸನ್ನಿವೇಶ ಭಯಾನಕವಾಗಿದೆ. ಮುಂದೆ ಹಿರಿದಿಮ್ಮವ್ವ ಕೆಂಡವಾಗುತ್ತಾಳೆ.

**ಮಹಾಸತಿ ವೀರತಿಮ್ಮವ್ವ**

ವೀರನಾಗಣ್ಣನ ಹೆಂಡತಿ ವೀರತಿಮ್ಮ್ವ ಇವರ ಲಗ್ನವಾದ ಕೆಲವೇ ವರ್ಷಗಳಲ್ಲಿ ನಾಗಣ್ಣ ಸಾಣಿಕೆರೆಯ ಬಳಿ ಆದ ಬಂಡಾಯದಲ್ಲಿ ಭಾಗವಹಿಸಿ ತೀರಿಕೊಂಡ. ತಿಮ್ಮವ್ವ ತನ್ನ ಎರಡು ಮಕ್ಕಳನ್ನು ಬಿಟ್ಟು ಬಂದು ಬಳಗ ತಂದೆ ತಾಯಂದಿರ ಮಾತನ್ನು ಲೆಕ್ಕಿಸದೇ ಕೊಂಡವೇರಿ ಮಹಾ ಸತಿಯಾದಳು. ವೀರ ತಿಮ್ಮವ್ವ ಎಲ್ಲರ ಕಣ್ಣಿನಲ್ಲಿ ದೇವತೆಯಾದಳು.

**ತಾಡಿನಾಗಮ್ಮ**

ನಾಗಮ್ಮ ಎಲಿಯೋರ ಕುಲದಲ್ಲಿ ಹುಟ್ಟಿದವಳು. ಇವಳು ಚಿಕ್ಕವಳು ಇರುವಾಗಲೇ ಸಿರಿವಂತ ಮನೆತನಕ್ಕೆ ಮದುವೆಮಾಡಿಕೊಟ್ಟರು. ಮದುವೆಯಾದ ಹೊಸದರಲ್ಲಿಯೇ ತನ್ನ ಗಂಡ ದಂಡಿಗೆ ಹೋದ. ಇತ್ತ ನಾಗಮ್ಮ ಅಜ್ಜಿಯ ಜೊತೆ ಹೊಲಕ್ಕೆ ಹತ್ತಿ ಬಿಡಿಸಲು ಹೋದಳು. ಬಿಸಿಲಿಗೆ ಬಾಯಾರಿ ನೀರುಕುಡಿಯಲು ಮರಳು ಸರಿಸಿ ಚೆಲುಮೆ ತೆಗೆದಳು. ಅಲ್ಲಿ ರಕ್ತಕಾಣಿಸಿತು. ತನ್ನ ಗಂಡ ಸಾವನ್ನಪ್ಪಿದ ವಿಷಯ ತಿಳಿದು ತನ್ನ ಸತ್ತ ಗಂಡನ ಜೊತೆಯಲ್ಲಿ ಸ್ವರ್ಗಕ್ಕೆ ಸೇರಬೇಕೆಂದು ತೀರ್ಮಾನಿಸಿದಳು. ಬಂಧು-ಬಳಗದವರಿಗೆ ವಂಡಾಕೆ ಕಲ್ಲ ವಡೀರಣ್ಣ ಎಂದು ಕೇಳಿಕೊಂಡಳು. ಈ ಮಾತನ್ನು ಕೇಳಿದ ಅತ್ತೆ ಮಾವ ತಂದೆ ತಾಯಿಯರು ರಾಜ್ಯೆವ ಕೊಡುತ್ತೀವಿ ತುಪ್ಪಾ ಬೋನಾ ಹುಣ್ಣಮಗಳೇ ಎಂದೆಲ್ಲಾ ಸಮಾಧಾನ ಹೇಳಿದರೂ, ಕೇಳದ ನಾಗಮ್ಮ ಕೊಂಡಾ ಕೊಡದಿದ್ದರೆ ಸುಟ್ಟು ಕಂಬೆನಾಲಿಗೆ, ಬಂದಳು. ಕೊಂಡಕ್ಕೆ ಹೋಗುವಾಗ ಎಲ್ಲರಿಗೂ ಅನ್ನಸಂತರ್ಪಣೆ ಮಾಡಿ ಕೊಂಡವಾದಳು.

**ಕಾಟವ್ವ**

ಈ ಕಥನಗೀತೆ ಪ್ರಾರಂಭವಾಗುವುದೇ ಕೊಂಡಕ್ಕೆ ಹೋಗುವ ದೃಶ್ಯದಿಂದ ಪ್ರಾರಂಭವಾಗುತ್ತದೆ. ಇವಳ ಮದುವೆ ವಿಚಾರ, ಗಂಡನ ವಿಚಾರ ತಿಳಿಯುವುದಿಲ್ಲ. ಇಲ್ಲಿ ಕಾಟವ್ವ ಕೊಂಡವಾಗುವಾಗ ಬಂಧುಬಳಗದವರೆಲ್ಲರೂ ಬೇಡವೆಂದು ಒತ್ತಾಯಪಡಿಸುತ್ತಾರೆ. ಈ ಕಥನಗೀತೆಯಲ್ಲಿ ಪಾಳೆಗಾರನ ಅಪ್ಪಣೆ ಪಡೆದು ಕೊಂಡವಾಗುತ್ತಾಳೆ.

ಹೀಗೆ ಜನಪದ ಕಥನಗೀತೆಗಳಲ್ಲಿ ಬರುವ ಪಾತ್ರಗಳ ಸ್ವರೂಪವನ್ನು ನಾವು ನೋಡಬಹುದು. ಒಂದೊಂದು ಪಾತ್ರವರ್ಗ ವಿಭಿನ್ನ ನೆಲೆಗಳಲ್ಲಿ ಬಿಂಬಿತವಾಗಿವೆ. ತನ್ನದೇ ಆದ ಛಾಪನ್ನು ಜನಪದ ಕಥನ ಗೀತೆಗಳಲ್ಲಿ ಕಾಣಬಹುದಾಗಿದೆ.

### ೪.೩ ಮಹಿಳಾ ಪಾತ್ರಗಳ ವಿಶ್ಲೇಷಣೆ

ಜನಪದ ಕಥನಗೀತೆಗಳನ್ನು ಗಮನಿಸಿದಾಗ ಗೀತೆಗಳಲ್ಲಿ ಬರುವ ಸ್ತ್ರೀ ಪಾತ್ರಗಳು ವೈವಿಧ್ಯಮಯವಾದ ವ್ಯಕ್ತಿತ್ವವನ್ನು ಪರಿಚಯಿಸುತ್ತವೆ. ಕಟುಂಬದಲ್ಲಿನ ತಾಯಿ, ಮಗಳು, ಪತ್ನಿ, ಸೊಸೆ, ನಾದಿನಿ ಹೀಗೆ ಹಲವು ನೆಲೆಗಳಲ್ಲಿ ತನ್ನ ಪ್ರಭಾವವನ್ನು ಬೀರಿರುವ ಹೆಣ್ಣು ಪುರಷ ಸಮಾಜದಲ್ಲಿ 'ಬಲಿಪಶು' ಆಗಿರುವುದು ಕಂಡುಬರುತ್ತದೆ. ಇದಕ್ಕೆ ಸಾಕ್ಷಿಯಾಗಿ ಕಥನಗೀತೆಗಳನ್ನು ವಿಶ್ಲೇಷಿಸಿದಾಗಿ ಸ್ತ್ರೀಯ ಸಖಕ್ಕಿಂತ ಹೆಚ್ಚಾಗಿ ಅವಳ ವೇದನೆಯನ್ನು ಗುರುತಿಸಬಹುದಾಗಿದೆ. ಕಥನಗೀತೆಗಳುದ್ದಕ್ಕೂ ಮಹಿಳೆ ಅಲ್ಲಲ್ಲಿ ಪ್ರತಿಭಟನೆಯ ಎಳೆಯೂ ಕಂಡುಬಂದರೂ, ಪ್ರಯೋಜನವಾಗಿರುವುದಿಲ್ಲ. ಈ ಸ್ತ್ರೀ ಪಾತ್ರಗಳು ತಾವು ಬದುಕಿರುವ ಸಮಾಜ, ತಮಗೆ ಆಶ್ರಯ ಕೊಟ್ಟ ಕುಟುಂಬ ಎರಡನ್ನು ಸಮಾನವಾಗಿ ಕಾಣುವ ಮನೋಭಾವನೆಯನ್ನು ಬೆಳಸಿಕೊಂಡಿರುವಂಥವು. ಸ್ತ್ರೀಯು ಕೌಟುಂಬಿಕವಾಗಿ ಬರುವ ಕಷ್ಟನಷ್ಟಗಳಿಗೆ ಹೇಗೆ ತಲೆಬಾಗವಳು, ಹಾಗೆಯೇ ಸಮಾಜ ಒಡ್ಡಿದ ಸವಾಲುಗಳಿಗೂ, ಆಚಾರ ವಿಚಾರ ಪದ್ಧತಿಗಳಿಗೂ ಸ್ಪಂದಿಸುತ್ತಾ ಬಂದಿದ್ದಾಳೆ.

ಜನಪದ ಕಥನಗೀತೆಗಳಲ್ಲಿ ಬರುವ ಮಹಿಳೆಯ ತ್ಯಾಗ, ಬಲಿದಾನ, ಪಾತಿವ್ರತ್ಯ, ಬಂಜೆತನ, ವೈಧವ್ಯ, ಸಹಗಮನ, ಬಹಿಷ್ಕಾರ ಹೀಗೆ ಹಲವು ನೆಲೆಗಳಲ್ಲಿ ವಸ್ತುಗಳಾಗಿ ಅವಳ ವ್ಯಕ್ತಿತ್ವವನ್ನು ಗುರುತಿಸಬಹುದು. ಅಪಮಾನ ಅನುಮಾನಕ್ಕೆ ಒಳಗಾಗಿದ್ದಾಳೆ. ಹೀಗೆ ಒಂದೇ ಎರಡೇ ಹಲವು ಹತ್ತಾರು ಮುಖಗಳ ಪರಿಚಯವನ್ನು ಕಥನಗೀತೆಗಳಲ್ಲಿ ಕಾಣಬಹುದು. ಸ್ತ್ರೀಯ ಶೋಷಣೆಗೆ ಈ ಸಮಾಜದ ವ್ಯವಸ್ಥೆ ಮುಖ್ಯ ಕಾರಣಗಳಲ್ಲಿ ಒಂದಾಗಿದೆ. ಜನಪದ ಸ್ತ್ರೀ ಅಷ್ಟೆಲ್ಲಾ ನೋವನ್ನು ಅನುಭವಿಸಿದರೂ ಅವಳು ತನಗೆ ದೊರೆತ ಜೀವನವನ್ನು ತಿರಸ್ಕರಿಸದೇ ಅದು ನನಗೆ ಬಂದ ಭಾಗ್ಯ ಎಂದು ತಿಳಿದು ತನ್ನನ್ನು ತಾನೇ ಸಮಾಧಾನ ಪಡಿಸಿಕೊಂಡಿರುವುದನ್ನು ಈ ಕಥನಗೀತೆಗಳಲ್ಲಿ ಕಾಣಬಹುದು. ಅತ್ತೆ, ನಾದಿನಿ, ಮೈದುನ, ಗಂಡ ಅಲ್ಲದೆ ಹೊರಗಿನವರ ಸಂಶಯಕ್ಕೆ ಒಳಗಾಗಿ ನಿಷ್ಕಾರುಣವಾಗಿ ತೊಂದರೆಯಲ್ಲಿ ಸಿಕ್ಕಿಬಿದ್ದು ಕಣ್ಣೀರಿನಲ್ಲಿ ಕೈತೊಳೆಯುವ ಅಸಹಾಯಕ ಹೆಣ್ಣು ಮಕ್ಕಳ ಚಿತ್ರ ಒಂದೆಡೆಯಾದರೆ, ಗಂಡನ ಸಂಶಯಕ್ಕೆ ಗುರಿಯಾಗಿ ಪಾತಿವ್ರತ್ಯವನ್ನು ಸಾಬೀತು ಪಡಿಸಲು ಅಗ್ನಿ ಪ್ರವೇಶಕ್ಕೆ ಗುರಿಯಾದದು ಇನ್ನೊಂದೆಡೆ. ತುಂಬಬೇಕಾದ ಕೆರೆ ಅಥವಾ ಉಕ್ಕಬೇಕಾದ ಪ್ರವಾಹಗಳಿಗೆ ತಮ್ಮನ್ನು ಅರ್ಪಿಸಿಕೊಂಡವರು ಹಲವರು. ಅನೇಕ ಕ್ಲಿಷ್ಟ ಪರೀಕ್ಷೆಗಳಿಗೆ ಒಡ್ಡಿಕೊಂಡು ಸಾವನ್ನಪ್ಪಿದ ಬಸಿರಿ, ಬಾಣಂತಿಯರ, ಮದುವೆ ಹೊಸ್ತಿಲಲ್ಲಿ ಕಾಲಿಟ್ಟವರು, ಎಳೆಯ ಮಕ್ಕಳನ್ನು ಪಡೆದವರು ಹರೆಯದರಲ್ಲಿ ಗಂಡನನ್ನು ಕಳೆದುಕೊಂಡು ಪರಿತಪಿಸುವವರು ಕೂಡ ಹೇರಳವಾಗಿ ಸಿಗುತ್ತಾರೆ. ಇಲ್ಲಿನ ಪಾತ್ರಗಳು ಕರುಣಾಜನಕ ಕಥೆಯನ್ನೇ ಹೇಳಿಕೊಳ್ಳುತ್ತವೆ.

ಜನಪದ ಕಥನಗೀತೆಗಳಲ್ಲಿ ವ್ಯವಸ್ಥೆಯ ಕ್ರೌರ್ಯಕ್ಕೆ ಸಿಲುಕಿ ತತ್ತರಿಸಿದ ಅಮಾಯಕರ ಶೋಷಣೆ. ಅದಕ್ಕೆ ಶೋಷಿತರು ತೋರಿದ ಪ್ರತಿಭಟನೆಯ ಜನಪದ ಕಥನಗೀತೆಗಳಲ್ಲಿ ಬಹಳ ಮುಖ್ಯವಾಗಿವೆ. ಸಾಮಾಜಿಕ ಕಟ್ಟುಪಾಡುಗಳಿಂದ ತಮ್ಮ ಜೀವನಕ್ಕೆ ಧಕ್ಕೆ ಉಂಟಾದಾಗ ಬದುಕಿನ ಬಗೆಗೆ ಕಟ್ಟಿಕೊಂಡ ಕನಸುಗಳು ನುಚ್ಚುನೂರಾದಾಗ ಶಾಸ್ತ್ರ, ಸಂಪ್ರದಾಯ, ಧರ್ಮ, ಅಧಿಕಾರ ಇಂತಹ ಆತಂಕಕಾರಿ ವಿಚಾರಗಳು ಬದುಕನ್ನು ಹೇಗೆ ದುರಂತಕ್ಕೆ ಒಳಗಾಗಿಸಿ ನರಕಯಾತನೆ ಅನುಭವಿಸುತ್ತವೆ. ಸಮಾಜ ಒಡ್ಡಿದ ಸವಾಲನ್ನು ಒಪ್ಪಿ ತಲೆ ಬಾಗಿದವರೇ ಹೆಚ್ಚು. ಅಂತಹವರ ಮಧ್ಯದಲ್ಲಿಯೂ ಸಮಾಜದ ಕಟ್ಟು ಪಾಡುಗಳನ್ನು ಸೌಮ್ಯವಾಗಿ ಧಿಕ್ಕರಿಸಿದವರು ಮತ್ತು ಉಗ್ರವಾಗಿ ಪ್ರತಿಭಟಿಸಿದವರೂ ಇದ್ದಾರೆ. ಈ ಪ್ರತಿಭಟನೆಯ ಧ್ವನಿಯನ್ನು ಗುರುತಿಸುವುದು ಮತ್ತು ಪಾತ್ರಗಳ ವಿಶ್ಲೇಷಣೆ ಅತ್ಯವಶ್ಯವಾಗಿದೆ.

ಕನ್ನಡದ ಜನಪದ ಸಾಹಿತ್ಯದಲ್ಲಿ ಕಥನಗೀತೆಗಳ ಕರ್ನಾಟಕದಾದ್ಯಂತ ಹೇರಳವಾಗಿವೆ. ಕೆರೆಗೆಹಾರ, ಹುಳಿಯಾರು ಕೆಂಚಮ್ಮ, ವಡ್ಡರಬೋಯಿ, ಮದಗದ ಕೆಂಚಮ್ಮ, ಧಣಿಯಮ್ಮ, ಚಿಕ್ಕೋಳು ಹಿರಿದಿಮ್ಮಿ, ತೌಡಿನಾಗಮ್ಮ, ಮಹಾಸತಿ ಕಾಟವ್ವ, ಮಹಾಸತಿ ವೀರತಿಮ್ಮವ್ವ, ಈರೋಬಿ, ಉತ್ತರದೇವಿ, ಗುಣಸಾಗರಿ, ಹರಿಗೋಲು ರೂಪಾಣಿ, ಕಲಿಯುಗದ ಬಾಲೆ, ಕಾಶಿಬಾಯಿ, ಗೋವಿನ ಹಾಡು ನಾಗವ್ವ, ಹೊನ್ನಮ್ಮ, ಚತುರಂಗಿ, ನಾದಿನಿ ಮೊದಲಾದವು ಕನ್ನಡ ಜನಪದ ಶ್ರೇಷ್ಠ ಕಥನಗೀತೆಗಳ ಸಾಲಿನಲ್ಲಿ ನಿಲ್ಲುತ್ತವೆ. ಈ ಕಥನಗೀತೆಗಳು, ಸಂಪ್ರದಾಯ ಹಾಗೂ ಆಚರಣೆಗಳ ವಿರುದ್ಧ ಬಂಡೆದ್ದ ಮಹಿಳೆಯರ ಕಥನಗೀತೆಗಳಾಗಿವೆ. ಹೀಗೆ ಹಲವಾರು ವಸ್ತುಗಳನ್ನು ಇಟ್ಟುಕೊಂಡ ಕಥನಗೀತೆಗಳು ರಚನೆಯಾಗಿರುವುದು ನಮಗೆ ಕಾಣಸಿಗುತ್ತವೆ. ಅಂತವುಗಳಲ್ಲಿ ಪಾತ್ರಗಳ ವಿಶ್ಲೇಷಣೆ ಮಾಡವುದು ಮುಖ್ಯವೆನಿಸಿದೆ.

ಕನ್ನಡ ಜನಪದ ಸಾಹಿತ್ಯದಲ್ಲಿ 'ಕೆರೆಗೆಹಾರ' ಕಥನಗೀತೆ ಹೆಚ್ಚು ಪರಿಚಿತವಾಗಿದೆ. ಈ ಕಥನಗೀತೆಯಲ್ಲಿ ಬರುವ ಭಾಗೀರತಿಯ ಪಾತ್ರ ಮುಖ್ಯವಾದುದಾಗಿದೆ. ಈ ಕಥನಗೀತೆಯನ್ನು ತೀ.ನಂ.ಶ್ರೀ ಯವರು ಸಾಹಿತ್ಯ ದೃಷ್ಟಿಯಿಂದ ಚರ್ಚಿಸಿದರೆ, ಗಿರಡ್ಡಿ ಗೋವಿಂದರಾಜು ಅವರು ಮೌಲ್ಯ ಪ್ರಜ್ಞೆಯ ನೆಲೆಯಿಂದ ಚರ್ಚಿಸಿದ್ದಾರೆ. ಆದರೆ ಇತ್ತೀಚೆಗೆ ಸಿದ್ಧರಾಮಯ್ಯ ಎಸ್.ಜಿ. ಅವರು ಭಾಗೀರತಿಯ ಪಾತ್ರ ಸಮಷ್ಟಿ ಹಿತಕ್ಕಾಗಿ ಬಲವಂತದ ಬಲಿದಾನ ಎಂದು ಮರುಪರಿಶೀಲನೆಗೆ ಒಡ್ಡಿದ್ದಾರೆ. ಹಾಗಾಗಿ ಭಾಗೀರತಿ ತ್ಯಾಗ ಬಲಿದಾನದ ಮಹಾ ಸ್ತ್ರೀಯಾಗಿ ಕನ್ನಡ ಜನಪದ ಕಾವ್ಯಲೋಕದಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆದುಕೊಂಡಿದ್ದಾಳೆ.

'ಕೆರೆಗೆ ಹಾರ' ವೆಂಬ ಪ್ರಸಿದ್ಧ ಕಥನಗೀತೆಯಲ್ಲಿ ಊರ ಮುಖಂಡ ಮಲ್ಲನಗೌಡ ಕೆರೆಯನ್ನು ಕಟ್ಟಿಸಿದ. ಕಟ್ಟಿಸಿದ ಕೆರೆಯಲ್ಲಿ ನೀರು ಬಾರದಿದ್ದಾಗ ಜ್ಯೋತಿಷ್ಯ ಕೇಳುವುದು ಒಂದು ಕಾಲದ ಭಾರತೀಯ ಸಮಾಜದ ಚಿತ್ರಣ. ಜ್ಯೋತಿಷ್ಯ ಪ್ರಕಾರ ಮನೆಯ ಹಿರಿಯ ಸೊಸೆಯನ್ನು ಬಲಿನೀಡ ಬೇಕೆಂದು ಪುರೋಹಿತ ಹೇಳುತ್ತಾನೆ. ಆದರೆ ಹಿರಿತನಕ್ಕೆ ಯಾರಿಲ್ಲವೆಂದು ಹೊಸದಾಗಿ ಮನೆಗೆ ತಂದ ಕಿರಿಯ ಸೊಸೆ ಭಾಗೀರತಿಯನ್ನು ಬಲಿಕೊಡವುದೆಂದು ತೀರ್ಮಾನವಾಯಿತು. ಇತ್ತ

ಭಾಗೀರತಿಯ ಗಂಡ ಮಾದೇವರಾಯ ದಂಡಿಗೆ ಹೋಗಿರುತ್ತಾನೆ. ಬಲಿಕೊಡುವ ವಿಷಯ ತಿಳಿದ ಭಾಗೀರಥಿಗೆ ತಿಳಿದೊಡನೆ ಎಳೆಯ ಜೀವ ತಲ್ಲಣಗೊಳ್ಳತ್ತದೆ. ಗಂಡ ದಂಡಿಗೆ ಹೋದವನು ತಿರುಗಿ ಬರುವ ಸುದ್ಧಿಯೂ ಇಲ್ಲವಾದ್ದರಿಂದ ಅವನ ವಿಷಯವೇ ಇಲ್ಲ. ದುಃಖದ ಹೊತ್ತಿನಲ್ಲಿ ಸಾಂತ್ವನ ನೀಡಬಲ್ಲವರನ್ನು ಹುಡುಕಿಕೊಂಡು ಮನೆಗೆ ಹೋಗುತ್ತಾಳೆ. ಅತ್ತೆ ಮಾವಂದಿರ ನಿರ್ಣಯದ ಬಗ್ಗೆ ಆಕೆ ಏನನ್ನೂ ಹೇಳುವುದಿಲ್ಲ. ಬಹುಶಃ ಹೇಳದೇ ಇರುವುದಕ್ಕೆ ಏನಾದರೂ ಕಾರಣ ಇರಬಹುದೇನೋ? 'ಅತ್ತೆ ಮಾವಂದಿರು ಬೇರೆ ಇಡುತ್ತಾರಂತೆ ಎಂದು ನೆಪಹೇಳುತ್ತಾಳೆ'. ತಂದೆ ತಾಯಿ 'ಇಟ್ಟರೆ ಇಡಲಿ ಹೊಲಮನೆ ಕೊಡುತ್ತೇನೆ ಓಲೆಕೊಡುತ್ತೇವೆ' ಎಂದರೆ 'ಹೊಲಮನಿ ಒಯ್ದು ಒಲಿಯಾಗ ಹಾಕವ್ವ ಎನ್ನುತ್ತಾಳೆ. ಈ ಮಾತುಗಳಲ್ಲಿ ಅಸಾಹಯಕತೆ, ಸಂಕಟ ವ್ಯಕ್ತವಾಗುತ್ತದೆ. ತನ್ನ ಪತಿ ದೈವವನ್ನೇ ತಾನು ಮೌನವಾಗಿ ಹಳಿದುಕೊಳ್ಳವ ಸ್ಥಿತಿ. ಭಾಗೀರಥಿ ಸಂಯಮದಿಂದ ಎಲ್ಲವನ್ನೂ ನುಂಗಿಕೊಂಡಿದ್ದರೂ ಅವಳ ಅಂತರಂಗದ ಹೊಯ್ದಾಟ ಅವಳ ಕ್ರಿಯೆಯಲ್ಲಿ ವ್ಯಕ್ತ ವಾಗುತ್ತದೆ. ಬೇಳೆ ಹಸನು ಮಾಡುವಾಗ ಕಣ್ಣಿರು ಉದುರುವುದು, ತಂದೆ-ತಾಯಿ, ಗೆಳತಿಯರಿಗೆ ಕೊಡುವ ಉತ್ತರ ಇವೆಲ್ಲವುಗಳು ಪ್ರತಿಭಟನೆಯಾಗಿ ತೋರುತ್ತವೆ. ಆದರೂ ಅಸಾಹಯಕಳಾಗಿ ಅವಳು ತ್ಯಾಗಕ್ಕೆ, ಬಲಿಗೆ ಸಿದ್ಧಳಾಗುತ್ತಾಳೆ. ಅತ್ಯಂತ ಅಮಾನವೀಯವಾದ ಸಮಾಜ ಒಂದು ಎಳೆಯ ಜೀವವನ್ನು ಬಲಿಕೊಡುತ್ತದೆ.

ಮಹದೇವರಾಯನ ದಂಡಿನಿಂದ ಮನೆಗೆ ಬಂದಾಗ ಮನೆಯಲ್ಲಿ ತನ್ನ ಮಡದಿ ಇಲ್ಲದಿರುವುದು ತಿಳಿಯುತ್ತಾನೆ. ತನ್ನ ತಂದೆ ತಾಯಿಯನ್ನು ಕೇಳಿದರೂ ಉತ್ತರ ಸಿಗದಿದ್ದರಿಂದ ತವರೂರಿಗೆ ಹೋಗುತ್ತಾನೆ. ಅಲ್ಲಿ ತನ್ನ ಗೆಳತಿಯಿಂದ ಸತ್ಯವು ತಿಳಿಯುತ್ತದೆ. ಅವಳು ಹೇಳುವ "ಕೊಟ್ರೆ ಕೊಡಲೇಳು ಇಟ್ಟಂಗ ಇರಬೇಕು? ಎನ್ನುವಲ್ಲಿನ ನಿಲುವಿಗೆ, ಹೆಂಡತಿಯ ಸಾವಿನ ನಂತರ ಮಹದೇವರಾಯನ ನಿರ್ಲಿಪ್ತತಗೆ ಅರ್ಥವೇನು? ಎಂಬ ಪ್ರಶ್ನೆಯೂ ಜೊತೆಜೊತೆಯಲ್ಲಿಯೇ ಏಳುತ್ತದೆ. ಪ್ರತಿಭಟನೆಯ ಒಂದು ಕ್ಷೀಣ ಧ್ವನಿ ಹುಟ್ಟಲಿಲ್ಲವೇ? ಎಂಬುದು ಪ್ರಶ್ನಾರ್ಹವಾದ ವಿಚಾರವೇ ಆಗುತ್ತದೆ" ಎಂಬ ಗಿರಡ್ಡಿ ಗೋವಿಂದರಾಜು ಅವರ ಮಾತು ಪರಿಗಣಿಸಲ್ಪಡುವ ಮಾತಾಗಿದೆ. ಇಲ್ಲಿ ಭಾಗೀರಥಿ ತಣ್ಣನೆಯ ಪ್ರತಿಭಟನೆಯಾಗಿದೆ. ಈ ತಣ್ಣನೆಯ ಪ್ರತಿಭಟನೆಯನ್ನು ಕವಿ ಅತ್ಯಂತ ಧ್ವನಿಬದ್ಧವಾಗಿ ತೋರಿರುವುದು ಈ ಕಾವ್ಯದಲ್ಲಿ ಗಮನಾರ್ಹವಾದ ಸಂಗತಿಯಾಗಿದೆ. ಭಾಗೀರಥಿಯು ಮೌನದಿಂದ ತನ್ನನ್ನು ತ್ಯಾಗಮಾಡಿಕೊಂಡು ಸಮಾಜಕ್ಕೆ ಶ್ರೇಷ್ಠ ಹೆಣ್ಣು ಎಂಬುದಕ್ಕೆ ಮಾದರಿಯಾಗಿ ದೇವತೆಯಾಗಿ ಪೂಜೆಗೆ ಒಳಪಟ್ಟಿರುವುದು ಕಂಡುಬರುವುದಲ್ಲದೆ. ಸಮಾಜಕ್ಕೆ ಮಾದರಿ ಎನಿಸಿಕೊಂಡಿದ್ದಾಳೆ.

ತ್ಯಾಗ ಬಲಿದಾನ ಕಥನಗೀತೆಗಳಲ್ಲಿ 'ಒಡ್ಡರ ಬೋವಿ' ಕಥನಗೀತೆಯೂ ಸಹ ಪರಿಗಣಿಸ ಬಹುದಾಗಿದೆ. ಈ ಕಥನಗೀತೆಯಲ್ಲಿಯು ಸಹ ಕಲ್ಲನಕೇರಿ ಮಲ್ಲನಗೌಡ ಕೆರೆಯನ್ನು ಕಟ್ಟಿಸತ್ತಾನೆ. ಆದರೆ ಕೋಡಿ ನಿಲ್ಲುವುದಿಲ್ಲ. ಅದಕ್ಕೆ ಮನೆಯ ಸೊಸೆಯನ್ನು ಬಲಿಕೊಡಬೇಕು ಎಂದು ತೀರ್ಮಾನಿಸುತ್ತಾನೆ. ಹಿರಿ ಸೊಸೆಯಾದ ಒಡ್ಡರ ಭೋವಿಯ ಒಂದು ಮಗವಿನ ತಾಯಿಯಾಗಿರುತ್ತಾಳೆ.

ಅಂದರೆ ಬಾಣಂತಿ. ಇಂಥವಳನ್ನು ಬಲಿಕೊಡುವುದು ಗಮನಿಸಿದರೆ ಬಹುಶಃ ಹುಟ್ಟಿದ ಮಗು ಹೆಣ್ಣು ಆಗಿರಬಹುದೇನೋ? ಎಂಬ ಸಂಶಯ ಅಲ್ಲದೆ ಕಿರಿಯ ಸೊಸೆ 'ಬಿಮ್ಮನಸೆ' ಇರಬಹುದೇನೋ ಹಾಗಾಗಿ ಹಿರಿಯ ಸೊಸೆಯನ್ನು ಬಲಿಕೊಡಲು ನಿರ್ಧರಿಸಿ, ಮಾವ ತವರಿಗೆ ಹೋಗಿ ಬಾರಮ್ಮ ಎಂದು ಹೇಳುತ್ತಾನೆ. ಒಡ್ಡರ ಬೋಯಿಗೆ ಸೂಕ್ಷ್ಮವಾಗಿ ಗೊತ್ತಾಗುತ್ತದೆ. ಕೆರೆಗೆ ನನ್ನನ್ನು ಬಲಿಕೊಡುತ್ತಾರೆ ಎಂದು ಮನಗಂಡು ತಂದೆ ತಾಯಿಯವರ ಹತ್ತಿರ ಹೇಳಿಕೊಳ್ಳುತ್ತಾಳೆ. ಆದರೆ ಇವರ್‍ಯಾರು ಇವಳ ಕಷ್ಟಕ್ಕೆ ಮುಂದಾಗುವುದಿಲ್ಲ. ಕೊನೆಗೆ ಒಡ್ಡರಬೋವಿ ತನ್ನ ಕಂದನೊಡನೆ ಕೆರೆಯ ಹತ್ತಿರ ಬರುತ್ತಾಳೆ. ಅಲ್ಲೆ ಕಾದಿದ್ದ ಮಾವ ಅವಳನ್ನು ಕೆರೆಗೆ ಬಲಿಯಾಗವಂತೆ ಪುನಃ ಒತ್ತಾಯಿಸುತ್ತಾನೆ. ಒಡ್ಡರಬೋವಿಯು ಕೆರೆಗೆ ಪೂಜೆಮಾಡಿ, ಮೂರು ಬೊಗಸೆ ನೀರು ಕುಡಿದು ಇನ್ನೇನೂ ಮಾಡಬೇಕು ಮಾವಯ್ಯ ಎಂದಳು. ಆಗ ಮಾವ "ಅವಳ್ನಿಂದಕ್ಕೆ ತಿರುಗೆಂದು ಅವಳು ತಿರುಗಿದಾಗ ಮುಂದಕ್ಕೆ ನೂಕ್ಯಾನೆ" ಅವಳನ್ನು ಮಾವ ಮುಂದಕ್ಕೆ ನೂಕಿದಾಗ ಅವಳೆನ್ನೇಂದು ಹೇಳುತ್ತಾಳೆ ಎಂದರೆ 'ನನ್ನಕ್ಕ ನನ್ನಕ್ಕ ಕಾಲು ತುಂಬ ನೀರು ಬಂತು, ಕೊಳ್ಳವ್ವ ಕಂದಾನ ಎಂದು ಕಂದನನ್ನು ಗಂಗೆಯ ಕೈಯಲ್ಲಿ ಕೊಟ್ಟು ತಾನು ನೀರಪಾಲಾದಳು. ಮೂರು ದಿನಗಳ ನಂತರ ಅವಳ ಶವ ನೀರಿನಲ್ಲಿ ತೇಲಾಡುತ್ತದೆ. ಅಷ್ಟರಲ್ಲಿ ದಂಡಿಗೆ ಹೋಗಿದ್ದ ಅವಳ ಗಂಡ ಹಿಂತಿರಗುತ್ತಾನೆ.

ಒಡ್ಡರ ಬೋವಿಯ ಅತ್ತೆ ಹಾಗೂ ತಂಗಿ ಮಾತಾಡಿಕೊಂಡು ಹಿತ್ತಲಲ್ಲಿದ್ದ ಹಾವನ್ನು ಹೊಡೆಸಿ ಅದನ್ನು ಹಾಕಿ ಅಡಿಗೆ ಮಾಡುತ್ತಾರೆ. ಅದನ್ನು ಅವನಿಗೆ ಊಟಮಾಡಲು ಕರೆಯುತ್ತಾರೆ ಆದರೆ ಅವನು ಶುಕ್ರವಾರ ಒಪತ್ತು ಮಾತ್ರ ಉಟವೆಂದು ತಿಳಿಸಿ, ಊಟಕ್ಕೆ ಬರವುದಿಲ್ಲ. ನಂತರ ತನ್ನ ಹೆಂಡತಿಯನ್ನು ಹೊಸಕೆರೆಗೆ ಬಲಿಕೊಟ್ಟಿರುವ ವಿಷಯ ತಿಳಿಯುತ್ತಿದ್ದಂತೆ ಕೆರೆಯ ಹತ್ತಿರ ಬರುತ್ತಾನೆ. ಅಲ್ಲಿದ್ದ ಜನರೆಲ್ಲಾ 'ನಿಮ್ಮಪ್ಪ ಬಡ್ಡೀಮಗ ಹೊಸಕೆರೆ ಕಟ್ಟಿಸಿದ್ದ, ಬಲಿಯನ್ನು ಕೊಟ್ಟಾನು' ಎಂದು ಹೇಳಿದರು. ಆಗ ಅವನು ನನ್ನ ಹೆಂಡತಿ ಪತಿವ್ರತೆಯಾಗಿದ್ದರೆ, ನನ್ನ ಕಣ್ಣಿಗೆ ಕಾಣಲಿ ಎಂದಾಗ, ಅದೇ ರೀತಿ ನೀರಿನಿಂದ ಒಡ್ಡರಬೋವಿ ಎದ್ದು ಬರುತ್ತಾಳೆ. ಆದರೆ ಅವಳ ಮಗು ಸತ್ತು ಹೋಗಿರುತ್ತದೆ. ಅವಳನ್ನು ಗಂಡ ಮನೆಗೆ ಕರೆತಂದಾಗ, ಅವಳ ಭಕ್ತಿಗೆ ಮೆಚ್ಚಿ ಎಲ್ಲರೂ ಆರತಿ ಮಾಡಿ ಒಳಗೆ ಕರೆದುಕೊಳ್ಳುತ್ತಾರೆ. ಒಡ್ಡರಬೋವಿ ಪಾತ್ರ ಎಲ್ಲಾ ಪಾತ್ರದಂತೆಯೇ ಅಂತ್ಯಗೊಳ್ಳುವುದಿಲ್ಲ ಮತ್ತೆ ಹುಟ್ಟು ಬರುವುದು ಈ ಕಥನಗೀತೆಯ ವಿಶೇಷ. ಒಡ್ಡರಬೋವಿ ಇಲ್ಲಿ ನೇರವಾಗಿ ಪ್ರತಿಭಟನೆ ಮಾಡಿರುವಂತದ್ದು, ಇಲ್ಲಿ ಸ್ವ ಇಚ್ಛೆಯಿಂದ ಬಲಿಯಾಗಿರುವುದಿಲ್ಲ. ಮಾವ ಮೋಸದಿಂದ ಕೆರೆಗೆ ನೂಕಿರುವುದು ಅಮಾನುಷ ಕೃತ್ಯವೆನಿಸಿದೆ.

'ಮದಗದ ಕೆಂಚವ್ವ' ಕಥನಗೀತೆ ಚಿತ್ರದುರ್ಗ, ದಾವಣಗೆರೆ, ಹಿರೇಕೆರೂರು, ಶಿವಮೊಗ್ಗ ಭಾಗಗಳಲ್ಲಿ ಹೆಚ್ಚು ಜನಪ್ರಿಯವಾಗಿದೆ. ಮದಗದ ಕೆರೆಗೆ ಕೆಂಚವ್ವ ಬಲಿಯಾಗವ ವಿವರದಿಂದ ಕೂಡಿದೆ. ಈ ಕೆರೆಯನ್ನು ಕೆಂಚವ್ವ ಕೆರೆ ಎಂತಲೂ ಕರೆಯುತ್ತಾರೆ. ಮಲ್ಲಯ್ಯಗೌಡನ ಮಗಳು ದೂರದಿಂದ ಕೊಡದಲ್ಲಿ ನೀರು ತರಲಾರದೆ ಕೆರೆಯೊಂದನ್ನು ಕಟ್ಟಿಸುವಂತೆ ತಂದೆಗೆ ತಿಳಿಸಿದಳು. ಅದರಂತೆ ಕೆರೆಯನ್ನು ಕಟ್ಟಿಸಿದ್ದಾಯಿತು. ಕೆರೆಯಲ್ಲಿನ ನೀರು ಬಹುಕಾಲ ನಿಲ್ಲುತ್ತಿರಲಿಲ್ಲ. ನೀರು

ಬಹುಕಾಲ ನಿಲ್ಲಬೇಕಾದರೆ ಕೆರೆ ಕಟ್ಟಿಸಿದ ಯಜಮಾನನ ಹೆಂಡತಿಯನ್ನು ಬಲಿಕೊಡಲಾರದೆ ತನ್ನ ಮಗನಿಗೆ ಮದುವೆ ಮಾಡಿ ಸೊಸೆಯನ್ನು ಬಲಿಕೊಡಲು ತೀರ್ಮಾನಿಸಿದ. ಬಲಿಕೊಡುವ ಹೆಣ್ಣು ಕೆಂಚವ್ವ ಗೌಡನ ತಂಗಿಯ ಮಗಳು. ವಿಷಯ ತಿಳಿದ ಕೆಂಚವ್ವ ತೌರು ಮನೆಗೆ ಹೋಗಿ ಗಂಡನಿಗೆ ತಂಗಿ ಕೆಂಚೆಯನ್ನು ಗೊತ್ತುಮಾಡಿ ಬರತ್ತಾಳೆ. ಕೆಂಚವ್ವ ಒಂದು ಕೂಸಿನ ತಾಯಿಯಾಗಿರುತ್ತಾಳೆ. ಅಂತೆಯೇ ದುಃಖಿತಳಾದ ಕೆಂಚವ್ವ ಬಲಿಕೊಡುವ ಕ್ರೂರ ಪದ್ಧತಿಯ ವಿರುದ್ಧ ತನ್ನ ತಾಯಿಯ ಎದುರು ಬಲಿಕೊಡುವ ಮಾವನ ಕ್ರಮವನ್ನು ಪ್ರತಿಭಟಿಸುತ್ತಾಳೆ.

"ನಿಮ್ಮಣ್ಣನೆ ದುರ್ಮಾರುಗ ನಿಮ್ಮಣ್ಣ ಮೋಸಾಗರ
ಮದಗದ ಕೆರೆಯೇ ಮಾಡಿಸಿ ನನ್ನ ಬಲಿಕೊಟ್ಟ"

"ಆಳಾದ ಕೆರೆಗೆ ಗೋದಿ ಬಿತ್ತಿದಂಗೆ
ಆಳಾದ ಕೆರೆಗೆ ಮಗಳ ಅಡೆದಿದ್ದೆ
ಮದಗಾಕೆ ಮಗಳ ಅಡಿದೆದ್ದೆ"

ಎಂದು ಹೇಳುವ ಮಾತುಗಳಲ್ಲಿ ಕೆಂಚವ್ವನ ಬಂಡಾಯವಿದೆ. ಮಾವ ತನ್ನ ಹೆಂಡತಿ, ಮಗಳನ್ನು ಬಲಿಕೊಡದೆ ಸೊಸೆಯನ್ನು ಬಲಿಕೊಡುವುದು ತುಂಬಾ ಕ್ರೂರವಾಗಿದೆ.

ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಎಷ್ಟು ಕ್ರೂರವಾಗಿದೆ ಎಂಬುದು ಬಲಿದಾನ ಪದ್ಧತಿಯಲ್ಲಿ ಎದ್ದುಕಾಣುತ್ತದೆ. ಅದೇ ಸಮಾಜದಲ್ಲಿ ಪುರುಷನೊಬ್ಬ ತನ್ನ ಹೆಂಡತಿಗಾಗಿ ದುಃಖಿಸುವುದು ಹೃದಯ ಕಲಕುವಂತಿದೆ. ಇಲ್ಲಿ ತನ್ನ ನೆನಪಿನಲ್ಲಿ ಗಂಡ ದುಃಖಿಸಬಾರದೆಂದು ತನ್ನ ತಂಗಿ ಕೆಂಚೆಯನ್ನು ಗೊತ್ತುಪಡಿಸಿ ಕೆರೆಗೆ ಹಾರವಾಗುವುದು ಪುರುಷ ಸಮಾಜಕ್ಕೆ ಕೊಟ್ಟ ಬಹುದೊಡ್ಡ ಮೌಲ್ಯವೆಂತಲೂ ಅನ್ನಬಹುದು.

ಕೆರೆಗೆಹಾರದ ಆಶಯದ ಮೇಲೆ ಕಟ್ಟಿದ ಕಥನಗೀತೆ 'ಕೆರೆಪೂಜೆ' ಇದೇ ಸಂಕಲನದಲ್ಲಿ ಬರುವ 'ಹೊನ್ನಿಯಹಾಡು' ಕಥನಗೀತೆ ಕೂಡ ಇದೇ ಆಶಯವನ್ನೇ ಹೋಲುತ್ತದೆ. ಹೊನ್ನಿಯನ್ನು ಬಲಿಕೊಡುವ ಸಂಗತಿ ಹಿರಿಯರಿಗೆ ತಿಳಿದಿದ್ದರೂ ಅವಳು ಅದನ್ನು ಬಾಯಿಬಿಟ್ಟು ಹೇಳದೇ ಪರೋಕ್ಷ ಸೂಚನೆ ಕೊಡುತ್ತಾಳೆ. ಹೊನ್ನಿಯ ಸಲಹೆಯ ಮೇರೆಗೆ ತನ್ನ ತವರಿಗೆ ಕಳುಹಿಸಿಕೊಟ್ಟು ಅಣ್ಣಂದಿರಿಗೆ ತನ್ನ ಹೆಸರಿನಲ್ಲಿ ತುಳಸಿಪೂಜೆ ಮಾಡುವಂತೆ ತಿಳಿಸುತ್ತಾಳೆ. ಪೂಜೆ ಮಾಡುವಾಗ ದೀಪ ಆರಿದರೆ ಎರಡು ಆಸಿಯನ್ನು ಹೊಡೆದುಕೊಂಡು ಬರಬೇಕೆಂದು ಹೇಳಿ ಬರುತ್ತಾಳೆ. ಕಂದನಿಗೆ ಎಣ್ಣೆಹಚ್ಚಿ ತೊಟ್ಟಿಲಲ್ಲಿ ಮಲಗಿಸಿ ಪೂಜಾಸಾಮಾಗ್ರಿಯೊಂದಿಗೆ ಕೆರೆಗೆ ಹೊರಡುತ್ತಾಳೆ. ಮನೆಯವರೆಲ್ಲರ ಪೂಜೆಯ ನಂತರ ಪೂಜಾಸಾಮಗ್ರಿಗಳನ್ನು ಅಲ್ಲಿಯೇ ಬಿಟ್ಟು ಬರುವುದು, ಅನಂತರ ಅತ್ತೆ ಹೊನ್ನಿಗೆ ಒಬ್ಬಳನ್ನೇ ಕೆರೆಗೆ ತರಲು ಕಳುಹಿಸುವುದು. ಅತ್ತೆ ಅವಳನ್ನು ಕೆರೆಗೆ ನೂಕಲ್ಪಡುವ ಇತ್ಯಾದಿ ಪ್ರಸಂಗಗಳು ಬರುತ್ತವೆ. ಆನಂತರ ಹೊನ್ನಿ ಬದುಕಿ ಬರುವುದು ಒಂದು ವಿಶೇಷವಾದರೂ ತನಗೆ ಅನ್ಯಾಯ ಎಸಗಿದವರ ವಿರುದ್ಧ ಪ್ರತಿಭಟನೆಯನ್ನು ಮಾಡುವುದು ಒಂದು ಸಂಗತಿಯಾಗಿದೆ.

ಡಿ. ಲಿಂಗಯ್ಯ ಅವರು ಸಂಗ್ರಹಿಸಿದ 'ಮಲ್ಲಿಗೆ ಮಾಹಾದೇವಿ' ಕಥನಕಾವ್ಯವು ಕೆರೆಗೆಹಾರದ ಆಶಯವನ್ನು ಹೊಂದಿದ್ದರು ಅದಕ್ಕಿಂತಲೂ ಕೆಲವು ಭಿನ್ನಾಭಿಪ್ರಾಯಗಳಿವೆ. ಶ್ರೀಮಂತನಾದ ಮೊದಮೇಸ್ತ್ರೀ ಜನರ ಒಳತಿಗಾಗಿ 'ಕಟ್ಟೆಬಾಳ'ನ್ನು ಕಟ್ಟಿಸಿದ. ಆ ಕಟ್ಟೆ ಸಂಜೆಯ ಸಮಯಕ್ಕೆ ಸರಿಯಾಗಿ 'ಮದಗಟ್ಟೆ' ಬಿದ್ದು ಹೋಗುತ್ತಿತ್ತು. ಅಷ್ಟು ಹಣ ವ್ಯಯಮಾಡಿ ಕಟ್ಟಿಸಿದ ಕೆರೆ ನಿಲ್ಲುತ್ತಿಲ್ಲವಲ್ಲ ಎಂಬ ಚಿಂತೆಯಿಂದ ಮಲಗಿದ್ದ ಸ್ವಪ್ನದಲ್ಲಿ ಶಿವಪಾರ್ವತಿಯರು ಬಂದು ಎರಡು ಎತ್ತುಗಳನ್ನು ಬಲಿಕೊಟ್ಟಾರೆ ನಿಲ್ಲುತ್ತದೆ ಎಂದರು. ಅದರಂತೆ ಮೇಸ್ತ್ರೀ ಹಾರಕೊಟ್ಟ. ಆದರೆ ಮದಗಟ್ಟೆ ನಿಲ್ಲಲಿಲ್ಲ. ಇನ್ನಷ್ಟು ಚಿಂತೆ ಹೆಚ್ಚಾಯಿತು. ಮತ್ತೊಮ್ಮೆ ಕನಸಿನಲ್ಲಿ ಶಿವಪಾರ್ವತಿಯರು ಪ್ರತ್ಯಕ್ಷರಾಗಿ ನಿನ್ನ ಕಿರಿಯ ಸೊಸೆಯನ್ನು ಬಲಿಕೊಟ್ಟರೆ ನಿಲ್ಲುತ್ತದೆ ಎಂದು ಹೇಳಿದರು. ಮೇಸ್ತ್ರೀ ದುಃಖತಪ್ತನಾಗಿ ಇನ್ನಷ್ಟು ಚಿಂತಾಕ್ರಾಂತನಾದನು. ಎಲ್ಲಾ ಕಥನಗೀತೆಗಳಲ್ಲಿ ಮಾವಂದಿರು ಸೊಸೆಯನ್ನು .ಬಲಿಕೊಡುವುದು ಕಂಡುಬಂದರೆ ಈ ಕಥನಕಾವ್ಯದಲ್ಲಿ ಮಾವ ದುಃಖತಪ್ತನಾಗುತ್ತಾನೆ. ಮಾದೇವಿಯೇ ಜನೋಪಕಾರಿಯಾದ ಕಟ್ಟೆಯನ್ನು ಉಳಿಸಲು ಮಗು ಸಹಿತ ಕೆರೆಯ ಹತ್ತಿರ ಬರುತ್ತಾಳೆ. ಕಟ್ಟೆತಾಳಕ್ಕೆ ಬಂದು ಗಂಗೆ ಪೂಜೆ ಮಾಡಿ "ಗಂಗಮ್ಮ ಗಂಗಮ್ಮನ ಮ್ಯಾಲೆ ಹರಿಯೆ" ಎಂದು ಒಂದೇ ದೃಢದಿಂದ ಪ್ರಾರ್ಥಿಸಿಕೊಳ್ಳುತ್ತಾಳೆ. ಇವಳ ಭಕ್ತಿಗೆ ಗಂಗೆ ಇವಳ ಮೇಲೆ ಹರಿಯುತ್ತಾಳೆ. ಆದರೆ ಇಲ್ಲಿ ಗಂಡನ ಸುಳಿವೇ ಇಲ್ಲ. ಮಾವ ದುಃಖಪಡುವುದನ್ನು ಗಮನಿಸಿದರೆ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯರ ಬಗ್ಗೆ ಮಾನವೀಯತೆಯ ಅಂಶವನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ. ಜನತೆಯ ಒಳತಿಗಾಗಿ ಸ್ವಪ್ರೇರಣೆಯಿಂದ ಮಾದೇವಿ ಬಲಿಯಾಗವುದು ವ್ಯವಸ್ಥಿತವಾದ ಮೌಲ್ಯವನ್ನು ಒಪ್ಪಿಕೊಂಡ ಪ್ರತೀಕವಾಗಿದೆ.

ಸುರಪುರ ನಾಡಿನಲಿ ನಡೆದ ಘಟನೆಯನ್ನು ಚಿತ್ರಿಸುವ ಕಥನಗೀತೆ ಇದು. ಇದು ಅತ್ಯಂತ ದೊಡ್ಡ ಕೆರೆ ಇದನ್ನು ಒಕ್ಕಲಿಗನೊರ್ವನು ಕಟ್ಟಿಸಿದ. ಆದರೆ ಸೆಲೆಯಿಲ್ಲ.

"ಉಕ್ಕಲಿ ಸುರಪರ ದಿಕ್ಕೀಗೆ ದೊಡ್ಡದು
ವಕ್ಕಲಗೇರಿ ಕೆರಿಕಟ್ಟಿ ನೋಡಿದರು
ಯತ್ತ ನೋಡಿದುರೆ ಸೆಲಿನಿಲ್ಲ"[೨]

ವಕ್ಕಲಿಗ ಕಟ್ಟಿದ ವಡ್ಡನನ್ನು ಕೇಳುತ್ತಾನೆ. ಕೆರೆಯಲ್ಲಿ ಸೆಲೆಯಾಕಿಲ್ಲ ಎಂದು. ಅದಕ್ಕೆ ವಡ್ಡನು "ಸೇಲೀ ಹೊತ್ತಿಗಿ ತೆಗೆದಾನ ತಾ ಕೇಳ್ಯಾನ ಬೇಡ್ಯೆತಿ ನಿನ್ನ ಹಿರಿಸೊಸಿನ" ಎಂದು ಹೇಳಿದ. ಕೆರೆಗೆ ಹಾರದ ಕಥೆಯಂತು ಆಶಯ ಸಹ ಈ ಕಥನಗೀತೆಯಲ್ಲಿ ಕಂಡಬರುತ್ತದೆ. ಕಿರಿಯ ಸೊಸೆಯನ್ನು ಹಾರಕೊಡಲು ತೀರ್ಮಾನಿಸುತ್ತಾನೆ. ಹೊನ್ನಮ್ಮ ಎಂಬ ಕಿರಿಸೊಸೆ ಹಾರದ ವಿಚಾರ ಗೊತ್ತಾದ ಕೂಡಲೇ ತನ್ನ ಮೂರು ತಿಂಗಳ ಕಂದನನ್ನು ತಬ್ಬಲಿ ಮಾಡುವುದು ಹೇಗೆ ಎಂದು ಚಿಂತಿಸುತ್ತಾಳೆ, ದುಃಖಪಡುತ್ತಾಳೆ. ಆದರೆ ಈ ವಿಚಾರವನ್ನು ತನ್ನ ತವರೀಗೆ ತಿಳಿಸಬೇಕೆಂದು ಪ್ರಯತ್ನಪಡುತ್ತಾಳೆ. ಒಂದು ದಿನ ತಗಡಿನ ಸಿಂಬಿಮಾಡಿಕೊಂಡು ತಾಮ್ರದ ಕೊಡವನ್ನು ತೆಗೆದುಕೊಂಡು ಹೊಳೆಯ ನೀರಿಗೆ ಹೋಗುತ್ತಾಳೆ. ಅಲ್ಲಿ ಅವರ ಊರಿನಿಂದ ಬಳೆಗಾರ ಭೇಟಿಯಾಗುತ್ತಾನೆ. ಅವನನ್ನು

ತವರೂರಿನ ವಿಚಾರ ಕೇಳಬೇಕೆಂದು ಬಳೆಗಾರನನ್ನು ವಿಚಾರಿಸುವಳು. ನಮ್ಮ ತವರೂರಿನ ಸುದ್ದಿ ಏನಪ್ಪ ಎಂದು ಕೇಳಿದಾಗ ಬಳೆಗಾರ ಹೇಳುತ್ತಾನೆ. ನಾಗರಪಂಚಮಿ ಇನ್ನು ನಾಲ್ಕು ತಿಂಗಳ ಇದೆ. ಈಗೇನು ಸುದ್ದಿ ಎಂದು ಮುಂದೆ ಹೋಗುತ್ತಾನೆ. ತವರೂರಿಗೆ ಹೇಗಾದರು ಮಾಡಿ ಸುದ್ದಿ ಮುಟ್ಟಿಸಬೇಕೆಂದು ಅವಳು ಒಂದು ಉಪಾಯ ಮಾಡಿಕೊಂಡು ನಾಲ್ಕು ಎಮ್ಮೆ ಹಾಲು ಕಾಯಿಸಲು ಬೆರಣೆ(ಕುಳ್ಳು) ಇಲ್ಲ. ಕುಳ್ಳು ತರಲಿಕ್ಕೆ ಅಡವಿಗೆ ಹೋಗಿ ಬರುವೆನೆಂದು ಹೇಳಿ ತವರೂರಿಗೆ ಹೋಗುತ್ತಾಳೆ. ಅಲ್ಲಿ ತಂದೆ, ತಾಯಿ, ತಂಗಿಯರನ್ನು ಭೇಟಿಯಾಗಿ ನೈಜಸ್ಥಿತಿ ಹೇಳಲಾರದೆ ನಮ್ಮತ್ತೆ ನಮ್ಮಾವ ಬೇರೆ ಇಡತಾರಂತೆ ಎಂದು ಹೇಳುವಳು. ಆದರೆ ಅವರು ಬೇರೆ ಇಟ್ಟರೆ ಇಡಲಿ ಬದುಕಲಿಕ್ಕೆ ನಾವು ಬೇರೊಂದು ಮಾರ್ಗವನ್ನು ಮಾಡಿ ನಿನಗೆ ಮಾಡಿಕೊಡುತ್ತೇವೆ ಎನ್ನುವರು. ಅವಳ ಸಂಕಟ, ನೋವು ಅವರಿಗೆ ಅರ್ಥವಾಗದೇ ಇರುವುದು ಮನಗಂಡು ನನ್ನ ನೋವು ಅವರಿಗ್ಯಾಕೆ ಎಂದು ಹೇಳಿ ಅತ್ತೆಯ ಮನೆಗೆ ಬರುವಳು.

ಇತ್ತ ಅತ್ತೆ ಮಾವಂದಿರು ಅವಳು ಬರುವುದರೊಳಗಾಗಿ ಬಲಿಕೊಡಲು ಎಲ್ಲಾ ಪೂರ್ವ ತಯಾರಿ ಮಾಡಿಕೊಂಡಿದ್ದರು. ಅವಳು ಬಂದಕೂಡಲೇ ಕೆರೆಯ ದಂಡೆ ಮ್ಯಾಲೆ ಬೆಳ್ಳಿ ಬಟ್ಟಲು ಬಿಟ್ಟು ಬಂದಿದ್ದೇವೆ ತೆಗೆದುಕೊಂಡು ಬಾ ಎಂದು ಹೇಳುವರು. ಅವಳು ಕೂಡಲೇ ಹೋಗುವಳು, ಹೊನ್ನಮ್ಮ ಕೆರೆಯ ದಡದಿಂದ ಒಂದೊಂದು ಮೆಟ್ಟಿಲು ಕೆಳಗೆ ಇಳಿಯುತ್ತಿದ್ದಂತೆ ನೀರು ಹೆಚ್ಚುತ್ತಾ ಹೋಗುತ್ತದೆ. ಕೊನೆಗೆ ಗಂಗೆಯಲ್ಲಿ ಲೀನವಾಗುತ್ತಾಳೆ. ಹೊನ್ನವ್ವ ಮೊದಲಿಗೆ ಕೆರೆಗೆ ಹಾರವಾಗಲು ಸಿದ್ಧವಾಗಿರಲಿಲ್ಲ. ಅದಕ್ಕಾಗಿ ಪ್ರತಿಭಟಿಸಿ ಬೆರಣೆ ತರುವ ನೆಪದಲ್ಲಿ ತನ್ನ ತವರಿಗೆ ಹೋಗುತ್ತಾಳೆ. ಅಲ್ಲಿ ಈ ಸುದ್ದಿಯನ್ನು ತಿಳಿಸುವುದಿಲ್ಲ. ಹಾಗೆಯೇ ಹೊನ್ನಮ್ಮ ಬಂದಕೂಡಲೇ ಬಟ್ಟಲು ತರಲು ಹೇಳುವರು. ಬಹುಶಃ ಇವಳು ಬೆರಣಿ ನೆಪದಲ್ಲಿ ತವರೂರಿಗೆ ಹೋಗಿದ್ದು, ಹಾರವಾಗುವುದಕ್ಕೆ ಒಪ್ಪುವುದಿಲ್ಲ ಎಂಬ ಸಂಶಯ ಬಂದು ಬೇಗನೇ ಹಾರವಾಗಿಸಿರುವುದು ಸಂಶಯಕ್ಕೆ ನಾಂದಿಯಾಗಿದೆ.

ಕೋಟೆಗೆ ಬಲಿಯಾದವರಲ್ಲಿ ಧರಣಿಯಮ್ಮ ಪ್ರಮುಖಳು. ಕೆರೆ ಕಟ್ಟೆಗೆ ಬಲಿಯಾದವರನ್ನು ಈ ಕಥೆ ಹೋಲುತ್ತದೆ. ಸಹಗಮನ ಮಾಡುತ್ತಿದ್ದವರ ಸಂಖ್ಯೆಗಿಂತ, ನೀರಿಗೆ ಬಲಿಯಾಗುತ್ತಿದ್ದವರ ಸಂಖ್ಯೆಗಿಂತ, ಕೋಟೆಯ ಕಟ್ಟೆಗೆ ಬಲಿಯಾಗುತ್ತಿದ್ದವರ ಸಂಖ್ಯೆ ಇನ್ನೂ ಕಡಿಮೆ ಎನ್ನಬಹುದು. ಆದ್ದರಿಂದ ಕೋಟೆ ಧರಣಿಯಮ್ಮನ ಕಥೆ ನಡೆದ ಸ್ಥಳ, ಆ ಬಗ್ಗೆ ಐತಿಹಾಸಿಕ ಆಧಾರ, ಗುರುತುಗಳು ಇಂದು ಸಿಗುವುದಿಲ್ಲ. ಕೋಟೆಯ ಗೋಡೆ ಹೆಚ್ಚುಕಾಲ ಉಳಿಯುವ ಸಾಧ್ಯತೆಯಿಲ್ಲವಾಗಿ ಧರಣಿಯಮ್ಮನ ಹೆಸರಿನಲ್ಲಿ ಎದ್ದ ಗುಡಿಯು ಬಹುಶಃ ಕೋಟೆಯೊಡನೆ ಹಾಳಗಿರಬೇಕೆಂಬ ಅಭಿಪ್ರಾಯವಿದೆ.

ಧರಣಿಯಮ್ಮನ ಕಥೆಯಲ್ಲಿ ಹೇಮಾರೆಡ್ಡಿ ಕೋಟೆಯನ್ನು ಕಟ್ಟಿಸಲು ಪ್ರಾರಂಭಿಸುತ್ತಾನೆ. ಕೋಟೆ ಭದ್ರವಾಗಿ ನಿಲ್ಲದೆ ಬೀಳುತ್ತದೆ. ಇದಕ್ಕೆ ಚಿಂತಾಕ್ರಾಂತನಾದ ಹೇಮರೆಡ್ಡಿ ಒತ್ತಿಗೆ ತೆಗೆಸಿ ಕೇಳಿದಾಗ ಪುರೋಹಿತ ನಿನ್ನ ಕಿರುಬೆರಳು ಹಾರ ಕೊಟ್ಟಾಗ ನಿಲ್ಲುತ್ತದೆ ಎಂದು ಹೇಳುತ್ತಾನೆ. ಇದನ್ನು ಅರಿತ ಹೇಮರೆಡ್ಡಿ ಮನೆಯ ಕಿರಿಸೊಸೆಯನ್ನು ಬಲಿಕೊಡಲು ನಿರ್ಧರಿಸತ್ತಾನೆ. ಕಿರಿಯ

ಸೊಸೆ ಧರಿಣೆಯಮ್ಮನಿಗೆ ಹೊಸ ಸೀರೆ, ಕುಪ್ಪಸ ತಂದು ನಿಮ್ಮ ಅಣ್ಣನ ಮದುವೆಗೆ ಹೋಗೋಣವೆಂದು ಕರೆದುಕೊಂಡು ಹೋಗುತ್ತಾನೆ. ಧರಣಿಯಮ್ಮ ಅಣ್ಣನ ಮದುವೆಗೆ ಹೋಗುವ ಮುನ್ನ ಅರಮನೆಯಲ್ಲಿದ್ದ ಗಾಜಿನ ಕಂಬಕ್ಕೆ ಅಣ್ಣನ ಮದುವೆಗೆ ಹೋಗಿಬರುವೆನೆಂದು ಹೇಳುತ್ತಾಳೆ. ಅಲಂಕೃತಗೊಂಡು ಹೊರಟ ಧರಿಣಿಯಮ್ಮನ ಮಾತು ಕೇಳಿ ನಕ್ಕಿತು.

ಗಾಜಿನ ಕಂಬ ನಕ್ಕ ಧರಣಿಯಮ್ಮನಿಗೆ ಹೀಗೆ ಹೇಳಿತು. ನೀನು ಧರಣಿಗೆ ಹೋಗೋದು ನಿಮ್ಮ ಅಣ್ಣನ ಮದವೆಗೆ ಅಲ್ಲ ನಿಮ್ಮ ಮಾವ ಹೇಮರೆಡ್ಡಿ ಧರಣಿ ಕೋಟೆ ಕಟ್ಟಿಸ್ಯಾನೆ ಅದಕ್ಕೆ ಬಲಿಕೊಡಲು ಕರೆದುಕೊಂಡು ಹೋಗುವನು ಎಂದಿತು. ಅದಕ್ಕೆ ಧರಣಿಯಮ್ಮ ದಿಗ್ಭ್ರಮೆಯಾದಳು. ಅಲ್ಲದೆ ತನ್ನ ಗೆಳತಿ ಹತ್ತಿರ ಹೋಗಿ ಅಣ್ಣನ ಮದುವೆಗೆ ಹೋಗಿಬರುವೆ ಎಂದಳು. ಅದಕ್ಕೆ ಗೆಳತಿ ಅವಳನ್ನು ತಡೆಹಿಡಿದು ನೀನು ಹೋಗಬೇಡ ಮೋಸಗಾರ ನಿಮ್ಮ ಮಾವ ಧರಣಿ ಕೋಟೆಗೆ ಬಲಿಕೊಡಲು ಕರೆದೊಯ್ಯುವನು ಎಂದಳು. ಹಾರವಾಗುವುದು ಖಾತ್ರಿಯಾದಾಗ ಧರಣಿಯಮ್ಮ ತನ್ನ ಗೆಳತಿಗೆ ಹೀಗೆ ಹೇಳುತ್ತಾಳೆ. 'ಬಲಿನಾದರೂ ಕೊಡಲಮ್ಮ ಬಾವಿಗಾದರೂ ಆಕಲಮ್ಮ ಮುಂದಕಿಟ್ಟ ಕಾಲನ್ನು ನಾನು ಇಂದಕ್ಕಿಡಲಾರೆನಮ್ಮ' ಎಂದು ಹೇಳಿ ಧರಣಿ ಕೋಟೆಗೆ ಬಲಿಯಾಗಲು ಹೊರಟಳು. ಧರಣಿಯಮ್ಮನಿಗೆ ತಾನು ಕೋಟೆಗೆ ಬಲಿಯಾಗುವ ವಿಷಯ ಗೊತ್ತಾದ ಮೇಲೆ ತಾನು ಪ್ರತಿಭಟನೆ ಮಾಡಿದರೆ ಪ್ರಯೋಜನವಿಲ್ಲ ಎಂದು ಅರಿತ ಧರಣಿಯಮ್ಮ ವಿಧಿಯಿಲ್ಲದೆ ದೊಡ್ಡವರು ಹಾಕಿದ ದಾರಿಯಲ್ಲಿ ತಾನು ಹೋಗಬೇಕು ಎಂದು ತೀರ್ಮಾನಿಸಿದಳು. ಒಂದು ಸಾರಿ ಇಟ್ಟ ಹೆಜ್ಜೆಯನ್ನು ಹಿಂತೆಗೆಯುವುದಿಲ್ಲ ಎನ್ನುವ ನಿರ್ಧಾರವೇ ಅವಳದಾಗಿತ್ತು. ಬಹುಶಃ ಆಗಾಗಲೇ ಧರಣಿಯಮ್ಮನಿಗೆ ಮಾನಸಿಕವಾಗಿ ಚಿತ್ರಹಿಂಸೆ ಕೊಟ್ಟಿರಬಹುದೆಂದು ಸಂಶಯ ಮೂಡುತ್ತದೆ.

ಧರಣಿಯಮ್ಮ ಒಂದು ಮಗುವಿನ ತಾಯಿ. ಮಗವಾದರು ಬದುಕಲಿ ಎಂಬ ಆಶಯದಿಂದ ಮಾವನ ಕೈಗೆ ಕೊಡಲು ಹೋಗುತ್ತಾಳೆ. ಮಾವ ಮಗುವನ್ನು ನೀನೇ ಹೊತ್ತುಕೊಂಡು ಗಂಗೆಪೂಜೆ ಮಾಡಮ್ಮ ಎಂದು ಹೇಳುತ್ತಾನೆ. ಹಾಗೆಯೇ ಧರಣಿಯಮ್ಮ ಮಗನನ್ನು ಹೊತ್ತುಕೊಂಡು ಕೋಟೆ ಒಳಕೆ ಹೋದಳು. ಅಲ್ಲಿ ಭಯಭಕ್ತಿಯಿಂದ ಗಂಗಮ್ಮನನ್ನು ಪೂಜೆ ಮಾಡುವಾಗ ಅವಳ ಮಗುವನ್ನು ಕೋಟೆ ಮುಚ್ಚಿತು. ಆದರೆ ಆ ಊರಿನ ಗತಿ ಏನಾಯಿತು.

ಏಮಾರೆಡ್ಡಿ ಪಟ್ಣಾವೆ
ಹಾಳು ಪಟ್ನವೇ ಆಯ್ತು
ಏಮಾರೆಡ್ಡಿ ಗೋವುಗಳೇ
ನಿಲುಗಲ್ಲೇ ಆದಾವ
ಸತ್ಯವಂತೆ ಧರಣಿಯಮ್ಮ
ಕೋಟಿವಳಗಾದಳು[೬]

ಸತ್ಯವಂತೆ ಧರಣಿಯಮ್ಮನ ಬಲಿಯಿಂದಾಗಿ ಊರೇ ಹಾಳು ಬಿದ್ದಿತು. ಹಸುಕರುಗಳು ಸೊರಗಿದವು. ಮಾವ ಹೇಮರೆಡ್ಡಿ ಏಳೆಡೆ ಸರ್ಪವಾಗಿ ಹುತ್ತಸೇರಿದ. ಮುಂದೆ ಧರಣಿಯಮ್ಮ

ಗವಿಯಲ್ಲಿದ್ದ ಗಂಡನಿಗೆ ತನ್ನೆಲ್ಲಾ ಸಂಗತಿ ಮಗನ ಸಂಗತಿ ಕನಸಿನಲ್ಲಿ ಹೇಳಿದಳು. ಇದನ್ನರಿತ ಗಂಡ ತುಂಬಾ ದುಃಖಪಡುತ್ತಾನೆ. ಇಲ್ಲಿ ಧರಣಿಯಮ್ಮನ ಆಕ್ರೋಶ ಹೆಚ್ಚಾಗಿದ್ದರು ತೋರ್ಪಡಿಸಲಿಲ್ಲ. ನೋವು ತನ್ನ ಮನದಲ್ಲಿಯೇ ಇಟ್ಟುಕೊಂಡು ಜನರಲ್ಲಿ ದೇವತೆಯಾಗಿ ನೆಲೆನಿಂತಳು.

ಕರ್ನಾಟಕದ ಎಲ್ಲಾ ಭಾಗಗಳಲ್ಲಿ ದೊರೆಯುವ 'ಉತ್ತರದೇವಿ'ಯು ಅತ್ಯಂತ ಜನಪ್ರಿಯ ಕಥನಗೀತೆಯಾಗಿದೆ. ಕನ್ನಡ ಜನಪದ ಸಾಹಿತ್ಯದಲ್ಲಿ ಹಲವಾರು ಪಾಠಂತರಗಳಲ್ಲಿ ಮಾಹಿತಿ ಲಭ್ಯವಾಗುತ್ತದೆ. ದಕ್ಷಿಣ ಕರ್ನಾಟಕ ಮತ್ತು ಮಲೆನಾಡಿನ ಭಾಗ ಹಾಗೂ ಕರಾವಳಿ, ಉತ್ತರ ಕರ್ನಾಟಕದ ಎಲ್ಲಾ ಪಾಠಾಂತರಗಳಲ್ಲಿ ಉತ್ತರೆಯ ಮೇಲಾಗುವ ಅತ್ತೆಯ ದೌರ್ಜನ್ಯ, ದಬ್ಬಾಳಿಕೆ, ಅಧಿಕಾರ ಚಲಾವಣೆಗೆ ಉತ್ತರೆ ಪ್ರತಿಭಟಿಸದಿರುವುದು ಕಂಡುಬರುತ್ತದೆ. ಉತ್ತರೆ ಮತ್ತು ಅತ್ತೆಯ ಮತ್ಸರವೇ ಈ ಕಥನಗೀತೆಯ ಬಹುಮುಖ್ಯ ಅಂಶವಾಗಿದೆ. ಉತ್ತರದೇವಿಯು ನೀರಿಗೆ ಹೋದಾಗ ಕೊಡ ಒಡೆದು ಹೋಗುತ್ತದೆ. ಒಡೆದ ಕೊಡದೊಂದಿಗೆ ಬಂದಂತಹ ಸೊಸೆಯನ್ನು ಅತ್ತೆಯು ಸಂಶಯ ದೃಷ್ಟಿಯಿಂದ ನೋಡುತ್ತಾಳೆ. ಕೊಡ ಒಡೆದು ಅವಳು ಪರಪುರಷನ ಕಡೆ ಕಣ್ಣಾಡಿಸಿದ್ದ ಕಾರಣದಿಂದ ಎಂದು ಅತ್ತೆಯ ತಿಳುವಳಿಕೆಯಾಗಿರುತ್ತದೆ. ಕೊಡವು ದೇವನನ್ನು ಸಂಕೇತಿಸುವಂತಹದು. ಇದನ್ನು ಪ್ರಶ್ನಿಸುವ ಉತ್ತರೆಯ ದಿಟ್ಟತನ ಇಲ್ಲಿ ಗಣನೀಯವಾಗಿದೆ. ಆದರೆ ಅದನ್ನು ಅತ್ತೆ ಒಪ್ಪುವುದಿಲ್ಲ. ಮಗನಿಗೆ ಸುಳ್ಳು ಸುದ್ದಿಯನ್ನು ಹೇಳಿ ಅವಳನ್ನು ಬಿಟ್ಟುಬಿಡುವಂತೆ ಒತ್ತಾಯಿಸುತ್ತಾಳೆ. ಅವಮಾನಿತಳಾದ ಉತ್ತರದೇವಿಯು ತನ್ನ ಗಂಡನ ಮನೆಯನ್ನು ತೊರೆಯುವ ನಿಶ್ಚಯ ಮಾಡುತ್ತಾಳೆ. ಸ್ವಾಭಿಮಾನಿಯಾದ ಉತ್ತರದೇವಿ ಈ ಬಗೆಯ ಸಾಮಾಜಿಕ ನಡವಳಿಕೆಯನ್ನು ತಿರಸ್ಕರಿಸುತ್ತಾ, ಸಮಾಜ ಸೃಷ್ಟಿಸಿದ ಸಂಕೋಲೆಗಳನ್ನು ಕಿತ್ತೆಸೆಯುತ್ತಾಳೆ. ಅವಳು ತೋರಿದ ಪ್ರತಿಭಟನೆ ಕಥನಗೀತೆಯಲ್ಲಿ ಬಹಳ ಮುಖ್ಯವಾಗಿದೆ.

ಉತ್ತರದೇವಿ ತನಗೆ ಎದುರಾಡಿದ್ದನ್ನು ಕಂಡ ಅತ್ತೆ ಅವಳನ್ನು ತನ್ನ ಮನೆಯಿಂದ ಹೊರ ಹಾಕುತ್ತಾಳೆ. ದಿಟ್ಟ ಹೆಣ್ಣಾದ ಉತ್ತರೆ ಅಂಜದೆ ತನ್ನ ಪಾತ್ರೆ ಪಡಗ ಹಣದ ಪೆಟ್ಟಿಗೆ ಎತ್ತಿಕೊಂಡು ತೌರಿಗೆ ಹೊರಟು ನಿಲ್ಲುತ್ತಾಳೆ. ಆಗ ಸೊಸೆಯ ದಿಟ್ಟತನಕ್ಕೆ ಬೆರಗಾದ ಅತ್ತೆ ಅವಳಿಗೆ ಊಟ ಮಾಡುವಂತೆ ಹೇಳುತ್ತಾಳೆ. ಉತ್ತರೆಯು ತಿರಸ್ಕರಿಸುತ್ತಾಳೆ.

"ಮೊಸರುಣ್ಣುವ ಅತ್ತೆ ಕೆಸರಿನಲ್ಲಿ ಉಣ್ಣು
ತುಪ್ಪ ಅನ್ನವನುಂಡು ನೀನು ನೀರು ಉಪ್ಪು ಉಣ್ಣು
ಬರಿದಾದ ಮನೆಯನ್ನು ಕಂಡು ಮರಗು"[೭]

ಅತ್ತೆಗೆ ತಿನ್ನಲು ಅನ್ನ ಸಿಗದಂತಾಗಲಿ, ತನ್ನನ್ನು ಹೊರಹಾಕಿದ ಅವಳ ಮನೆ ಸರ್ವನಾಶವಾಗಲಿ ಎಂದು ಶಪಿಸುತ್ತಾಳೆ. ಹೆಣ್ಣೊಬ್ಬಳು ಮನೆಯಲ್ಲಿದ್ದರೆ ತುಂಬಿದ ಮನೆಯಾಗುತ್ತದೆ. ಅವಳಿಗೆ ಹಿಂಸೆ ಕೊಡುವ, ಮನೆಯಿಂದ ಹೊರಗಟ್ಟುವ ಮನೆಗಳು ಸ್ಮಶಾನ ಸದೃಶವಾದವು ಎಂಬ ಅರ್ಥ ಮೇಲಿನ ಭಾಗಗಳಲ್ಲಿ ಮೂಡಿ ಬಂದಿದೆ. ಉತ್ತರದೇವಿಯ ಹೃದಯಾಂತರಾಳದ ನೋವು ಶಾಪದ ರೂಪವಾಗಿ ಹೊರಹೊಮ್ಮಿರುವುದು ಇಲ್ಲಿ ಗಮನಾರ್ಹ ಅಂಶವಾಗಿದೆ. ತನಗಾದ ಅನ್ಯಾಯಕ್ಕೆ ತೀವ್ರವಾಗಿ

ಪ್ರತಿಭಟನೆ ಇಲ್ಲಿ ವ್ಯಕ್ತವಾಗಿದೆ. ಬಹುಶಃ ಹೆಣ್ಣೊಬ್ಬಳು ಇದಕ್ಕಿಂತ ತೀವ್ರತರವಾದ ಪ್ರತಿರೋಧವನ್ನು ತೋರಲು ಸಾಧ್ಯವಿಲ್ಲವೇನೋ?

ಉತ್ತರದೇವಿ ಇಷ್ಟಕ್ಕೆ ಸುಮ್ಮನಾಗದೆ ಕೊನೆಗೆ ಇಡೀ ಗಂಡನ ಮನೆಯ ಆಸ್ತಿ ದನಕರು, ಗಿಡ, ಮರಗಳನ್ನೆಲ್ಲಾ ಶಪಿಸುತ್ತಾ ತನ್ನ ಆಕ್ರೋಶವನ್ನು ವ್ಯಕ್ತಪಡಿಸುತ್ತಾಳೆ. ತನ್ನನ್ನು ಬಹಿಷ್ಕರಿಸುವ ಇವನ ಮನೆ ಆಸ್ತಿ–ಪಾಸ್ತಿ ಎಲ್ಲವೂ ಮಣ್ಣಾಗಿ ಹೋಗಲಿ ಎಂದು ಕೋಪದಿಂದ ನುಡಿಯುತ್ತಾಳೆ. ತನ್ನ ಅಪ್ಪಕೊಟ್ಟ ಎಮ್ಮೆ ಹೊಡಕೊಂಡು ತನ್ನ ಎರಡು ಮಕ್ಕಳಲ್ಲಿ ಒಂದನ್ನು ಎತ್ತಿಕೊಂಡು, ಒಂದನ್ನು ನಡೆಸಿಕೊಂಡು ತೌರಿಗೆ ಹೊರಡುತ್ತಾಳೆ. ಅಂತಹ ಸಂದರ್ಭದಲ್ಲಿ ಅತ್ತೆ, ಮಾವ, ಗಂಡ ನಿಂತು ನೋಡುತ್ತಿರುತ್ತಾರೆ. ಯಾರೂ ತಡೆಯುವುದಿಲ್ಲ. ಉತ್ತರದೇವಿ ನಡೆದುಕೊಂಡು ಹೋಗುವಾಗ ಬೆಳಕು ಇರಲಿಲ್ಲ ಕತ್ತಲಾಗಿತ್ತು. ಚುಕ್ಕಿಗಳ ಬೆಳಕಿನಲ್ಲಿ ಎರಡು ಹಸುಗೂಸುಗಳನ್ನು ಕಟ್ಟಿಕೊಂಡು ರಾತ್ರಿಯಲ್ಲಿ ಅಪ್ಪನ ಮನೆಗೆ ಬರುತ್ತಾಳೆ. ಅಂತೂ ಮೊಮ್ಮಕ್ಕಳು ಸೊಸೆಯನ್ನು ಮನೆಯಿಂದ ಅಟ್ಟುವುದರಲ್ಲಿ ಅತ್ತೆಗೆ ತೃಪ್ತಿಯಾಗಿದೆ. ಅತ್ತೆ ಎಂದರೆ 'ಭಯಂಕರ ವ್ಯಾದಿ' ಎನ್ನುವ ಹಾಗೆ ಉತ್ತರದೇವಿಯ ಅತ್ತೆ ಚಿತ್ರಿತಳಾಗಿದ್ದಾಳೆ. ಇನ್ನು ತವರಿಗೆ ಬಂದ ಉತ್ತರದೇವಿ ಅಪ್ಪನ ಮನೆಯ ಮುಂದೆ ನಿಂತು ನನ್ನಪ್ಪ ನನಗೆ ಕದ ತೆಗೆಯೋ ಎನ್ನುತ್ತಾಳೆ. ಆದರೆ ಇಲ್ಲಿ ಅಪ್ಪ ಕೊಡುವ ಉತ್ತರ ತುಂಬಾ ಅಸಹ್ಯವೆನಿಸುತ್ತದೆ. 'ಹಾಸಿಗೆ ಹಾಸೈತೆ ದೀಪವ ಆರೈತೆ ನಿಮ್ಮವ್ವ ತೋಳಲ್ಲಿ ಮಲಗೈತಿ ಹೋಗೆ ದೊಡ್ಡಪ್ಪನ ಮನೆಗೆ' ಎಂದು ಉತ್ತರಿಸುತ್ತಾನೆ. ಇಲ್ಲಿ ಕಿರಿಯ ಹೆಂಡತಿಯನ್ನು ಮಾಡಿಕೊಂಡಿರುತ್ತಾನೆ. ಮುಂದೆ ಉತ್ತರದೇವಿ ದೊಡ್ಡಪ್ಪ, ಚಿಕ್ಕಪ್ಪ, ಅಣ್ಣ–ತಮ್ಮಂದಿರು, ಬಂಧು–ಬಳಗದವರ ಮನೆಬಾಗಿಲಿಗೆ ಹೋದಾಗ, ಯಾರ ಆಶ್ರಯವು ಅವಳಿಗೆ ದೊರೆಯುವುದಿಲ್ಲ. ಕೊನೆಗೆ ತನ್ನ ಹಡೆದವ್ವನ ಮನೆಗೆ ಬರುತ್ತಾಳೆ. ಆಕೆಯೂ ಸಹ ತನ್ನ ಗಂಡನಿಂದ ವಂಚಿತಳಾಗಿ ಒಂಟಿಯಾಗಿ ಬದುಕುತ್ತಿರುವಾಗ ಅವಳು ತನ್ನ ಮಗಳಿಗೆ ಹೇಗೆ ಆಶ್ರಯ ಕೊಡುತ್ತಾಳೆ. ಸಮಾಜಕ್ಕೆ ಹೆದರಿ ಮಗಳಿಗೆ ನೇರವಾಗಿ 'ಸಾಯಿ' ಎನ್ನಲಾರದೆ 'ಉತ್ತರೆ ಮಳೆಯಾಗು' ಹೋಗು ಎನ್ನುತ್ತಾಳೆ. ಉತ್ತರದೇವಿ ಯಾರ ಆಶ್ರಯ ಸಿಗದಿದ್ದಕ್ಕೆ ತನ್ನ ಮಕ್ಕಳನ್ನು ಕರೆದುಕೊಂಡು ಬಂದು ನೀರಿನಲ್ಲಿ ಹಾರಿ ಪ್ರಾಣಬಿಡುತ್ತಾಳೆ. ಉತ್ತರದೇವಿ ತೌರದಾರಿಯಲ್ಲಿ ಅನೇಕರು ಉತ್ತರದೇವಿಯನ್ನು ಪಡೆದು, ತಮ್ಮನ್ನು ಕೂಡಿ ಸುಖವಾಗಿರುವಂತೆ ಕೇಳುತ್ತಾರೆ. ಅವಳು ನಿರಾಕರಿಸಿ ಮುಂದೆ ಹೋಗುತ್ತಾಳೆ. ಹೀಗೆ ಉತ್ತರದೇವಿಗೆ ಅನೇಕ ಸಮಸ್ಯೆಗಳು ಎದುರಾದರು ಅವನ್ನೆಲ್ಲಾ ಎದುರಿಸಿದರು ಸಮಾಜಕ್ಕೆ ಹೆದರಿ ತನ್ನ ಮಕ್ಕಳ ಜೊತೆ ಹೊಳೆಗೆ ಹಾರಿ ಪ್ರಾಣ ಕಳೆದುಕೊಳ್ಳುತ್ತಾಳೆ. ಉತ್ತರದೇವಿಯು ಸಾಕಷ್ಟು ಬುದ್ಧಿವಂತಳಾಗಿದ್ದರೂ, ಅತ್ತೆಯ ದುಡುಕುತನ ಮಾತ್ಸರ್ಯದಿಂದಾಗಿ ಕುಟುಂಬವನ್ನೇ ತ್ಯಾಗಮಾಡಬೇಕಾದ ಸಂದರ್ಭ ಒದಗುತ್ತದೆ.

ಗುಣಸಾಗರಿ ಕಥನಗೀತೆ ಜನಪದರಲ್ಲಿ ಇದೊಂದು ಪುಣ್ಯದ ಕಥೆ ಎಂದು ಪ್ರಸಿದ್ಧಿ ಪಡೆದುಕೊಂಡಿದೆ. ಕೌಟಂಬಿಕ ಕಷ್ಟಗಳನ್ನು ಹೊತ್ತಿರುವ ಈ ಗೀತೆಯ ಮುಖ್ಯಪಾತ್ರ ಗುಣಸಾಗರಿ. ಈ ಕಥೆಯು ವಾಸ್ತವಿಕ ಜೀವನಕ್ಕೆ ಸಂಬಂಧಿಸಿದ ನೈಜತೆಯ ಅಂಶವನ್ನು ಒಳಗೊಂಡಿದೆ. ಮುಗ್ಧ

ಹೆಣ್ಣೊಬ್ಬಳ ಅಸಾಹಯಕ ಪರಿಸ್ಥಿತಿಯಿಂದಾಗಿ ಅವಳು ಎದುರಿಸುವ ಅಪಮಾನವನ್ನು ಈ ಕಥೆಯಲ್ಲಿ ಗುರುತಿಸಬಹುದು. ಗುಣಸಾಗರಿಯ ತಂದೆ ಜೊತೆಯಲ್ಲಿ ಹುಟ್ಟಿದ ಅಣ್ಣತಮ್ಮಂದಿರಿಗೆ ಇರುವುದು ಗುಣಸಾಗರಿ ಒಬ್ಬಳೆ. ಇವಳನ್ನು ಮಲ್ಲಶೆಟ್ಟಿಯ ಮಗ ಸಂಪನ್ನನಿಗೆ ತನ್ನ ಆರನೇ ವಯಸ್ಸಿಗೆ ಧಾರೆ ಎರೆದುಕೊಟ್ಟರು. ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದು ಬಂದ ಗುಣಸಾಗರಿ ಮದುವೆ, ಬದುಕು ಎಂದರೆ ಏನು ಎನ್ನುವ ತಿಳುವಳಿಕೆಯಿಲ್ಲದ ಮುಗ್ಧ ಬಾಲೆ. ಅಂಥವಳಿಗೆ ಧಾರೆ ಎರೆದಿರುವುದು ವಿಪರ್ಯಾಸವೇ ಸರಿ. ಮದುವೆಯಾದ ಮೂರುದಿನಕ್ಕೆ ಸಂಪನ್ನ ಮುತ್ತಿನ ವ್ಯಾಪಾರಕ್ಕೆ ಹೊರಡಲು ಅಣಿಯಾಗುತ್ತಾನೆ. ಅಂತಹ ಸಂದರ್ಭದಲ್ಲಿ ಸಂಪನ್ನನ ತಾಯಿ ಮಲ್ಲಿಗಮ್ಮ "ಮುತ್ತಿನಂಥ ಮಡದಿ ಮನೆಯಲ್ಲಿರುವಾಗ ಮುತ್ತಿನ ವ್ಯಾಪಾರ ಏಕೆಬೇಕು"? ಎಂದು ಮಗನನ್ನು ತಡೆಯುತ್ತಾಳೆ. ತಾಯಿ ಮಾತನ್ನು ಕೇಳದೆ ಹೊರಡುತ್ತಾನೆ. ಹೊರಡುವ ಮುನ್ನ ತನ್ನ ಮಡದಿ ಗಣಸಾಗರಿಗೆ ಉಪ್ಪರಿಗೆ ಅರಮನೆಯನ್ನು ಕಟ್ಟಿಸುತ್ತಾನೆ. ಅವಳ ಒಂಟಿತನವನ್ನು ನೀಗಲು 'ಎರಡು ಮಾತಾನಾಡವ ಗಿಳಿ'ಗಳನ್ನು ಅವಳ ತೌರಿನಿಂದ ತರಿಸಿ ಕೊಡುತ್ತಾನೆ.[೮] ಈ ಮಾತನ್ನು ನಾವು ಅಲೋಕಿಸಿದಾಗ ಗುಣಸಾಗರಿ ಹುಟ್ಟಿನಿಂದಲೇ ಆಗರ್ಭ ಶ್ರೀಮಂತ ಮನೆತನದಲ್ಲಿ ಬೆಳೆದವಳಾಗಿದ್ದಾಳೆ. ಸಂಪನ್ನ ಹೊರಡುವಾಗ ಗುಣಸಾಗರಿಗೆ ಬುದ್ಧಿ ಹೇಳುತ್ತಾನೆ. ಹಾಗೆಯೇ ತನ್ನ ತಮ್ಮನ ನಡವಳಿಕೆಯ ಬಗ್ಗೆ ಎಚ್ಚರಿಕೆ ಕೊಟ್ಟು ಹೊರಡುತ್ತಾನೆ. ಯಾಕೆಂದರೆ "ತನ್ನ ತಮ್ಮನಾದ 'ನಿರ್ವಾಣೆ' ಗುಣಸಾಗರಿ ಮನೆಗೆ ಬಂದ ಕೂಡಲೆ ಅವಳ ಸೌಂದರ್ಯಕ್ಕೆ ಮನಸೋತು ಅಣ್ಣನ ಹೆಂಡತಿ ಎಂದು ಗೊತ್ತಿದ್ದರೂ ಗುಣಸಾಗರಿ ನಮ್ಮಣ್ಣಗೆ ತಕ್ಕಾದ ಮಡದಿ ಅಲ್ಲ ಅವಳು ನನಗೆ ತಕ್ಕಾದ ಮಡದಿ" ಈ ಮಾತನ್ನು ಕೇಳಿದ್ದರಿಂದ ಅಣ್ಣ ಇವನ ಬಗ್ಗೆ ಎಚ್ಚರವಾಗಿರವುದಕ್ಕೆ ಸೂಚನೆ ನೀಡಿದಾಗ ಗುಣಸಾಗರಿಗೆ ಎಲ್ಲಿಲ್ಲದ ದುಃಖವಾಗುತ್ತದೆ. ಆ ಸಂದರ್ಭದಲ್ಲಿ ಎಷ್ಟೋ ಕಾಡಿ ಬೇಡಿ ವ್ಯಾಪಾರಕ್ಕೆ ಹೋಗುವುದು ಬೇಡವೆಂದು. ಆದರೂ ಮಡದಿ ಮಾತು ಕೇಳದೆ ಹೊರಡುತ್ತಾನೆ. ಮದುವೆ ಸಾಲ ಬಹಳ ಐತಿ ತೀರಿಸಬೇಕಾದರೆ ನಾನು ವ್ಯಾಪರಕ್ಕೆ ಹೋಗಲೇಬೇಕೆಂದು ಹೊರಡುತ್ತಾನೆ.

ಗುಣಸಾಗರಿ ಗಂಡ ವ್ಯಾಪಾರಕ್ಕೆ ಹೋದ ಮೇಲೆ ಗಂಡನನ್ನು ನೆನಸಿಕೊಂಡು "ಮಂಚಕ್ಕೆ ಮಕಾಡೆ ಮಲಗ್ಯಾಳೆ ಹತ್ತಿರದಲ್ಲಿ ಹಡೆದಂಥ ಅವ್ವಯಿಲ್ಲ ತಂದಂಥ ಅತ್ತಿಲ್ಲ" ಯಾರಿಗೆ ಹೇಳಲಿ, ಭಗವಂತ ನನ್ನ ಕಷ್ಟವ ಎಂದು ಗುಣಸಾಗರಿ ದುಃಖಿಸುತ್ತಾಳೆ. ಹೀಗಿರುವಾಗ ಗುಣಸಾಗರಿ ಒಂದು ದಿನ ಮೈನೆರೆಯುತ್ತಾಳೆ. ಅತ್ತೆ ಮಲ್ಲಮ್ಮನಿಗೆ ತಿಳಿಯುತ್ತದೆ. ಅತ್ತೆಗೆ ಒಂದು ಕಡೆ ಸಂತೋಷ ಮತ್ತೊಂದು ಕಡೆ ದಃಖವಾಗತ್ತದೆ. ಗುಣಸಾಗರಿಯ ರಕ್ಷಣೆಗಾಗಿ ತನ್ನ ಹೆಣ್ಣು ಮಕ್ಕಳಾದ ಅಲ್ಲಕ್ಕ, ಮಲ್ಲಕ್ಕ ಇಬ್ಬರನ್ನು ಕಾವಲು ಇಟ್ಟಳು. ನಾದಿನಿಯರು ಗುಣಸಾಗರಿಗೆ "ಕೊಪ್ಪರಿಗೆ ನೀರು ಹಿಡಿದು ಕಮ್ಮೆಣ್ಣೆ ಕಸ್ತೂರಿ ಎರೆದು ಪುಟ್ಟಸೀರೆ ಉಡಿಸಿ, ಏಳು ಮಾರುದ್ದ ಮಂಡೆ ಬಾಚಿ" ಅಲಂಕರಿಸುತ್ತಾರೆ. ಅದೇ ಸಮಯದಲ್ಲಿ ದಾರಿಯಲ್ಲಿ ಹೋಗುತ್ತಿದ್ದ ಬುಡಬುಡಕೆಯವನು "ಆ ನಾರಿಗೇನು ಶೃಂಗಾರ ಮಾಡುತೀರಾ! ಯಿಡಿರಮ್ಮ ಅವಳ್ಗಣೆಯಾಗೆ ಬರಿದಿದೆ ವನವಾಸ! ಎಂದನು. ಬುಡಬುಡಕೆಯ ಮಾತು ಕೇಳಿದ ನಾದಿನಿಯರು ಅವನನ್ನು ದ್ವೇಷಿಸುತ್ತಾರೆ. ಅತ್ತೆಗೆ ಅವನ ಮಾತು ಕೇಳಿ

ಸೊಸೆಯ ವಿಷಯದಲ್ಲಿ ಆತಂಕ ಉಂಟಾಗುತ್ತದೆ. ಆಗ ಸೊಸೆಗೆ ಅರಮನೆ ಬಿಟ್ಟು ಹೊರಗಡೆ ಬರಬ್ಯಾಡ ಎಂದು ಹೇಳಿ ಒಬ್ಬಳನ್ನೆ ಬಿಟ್ಟು ಬಂದಳು.

ಗುಣಸಾಗರಿಯನ್ನು ಬಿಟ್ಟು ವ್ಯಾಪಾರಕ್ಕೆ ಬಂದ ಸಂಪನ್ನ ಒಂದು ದಿನ ರಾತ್ರಿ ವಿಶ್ರಾಂತಿಗೆಂದು ಮರದ ಕೆಳಗೆ ತಂಗಿದನು. ಆ ಸಂದರ್ಭದಲ್ಲಿ ಗಿಜುಗ ದಂಪತಿಯ ಸರಸ-ಸಲ್ಲಾಪ ಕಂಡು ಅವುಗಳ ಮಾತು ಕೇಳಿ ಸಂಪನ್ನ ರಹಸ್ಯವಾಗಿ ಬಂದು ಗುಣಸಾಗರಿಯನ್ನು ಸೇರುತ್ತಾನೆ. ಈ ಸೇರಿದ ವಿಷಯ ಬೇರೆಯವರ ಹತ್ತಿರವಾಗಲಿ ಕುಟುಂಬದ ಸದಸ್ಯರಿಗಾಗಲಿ ತಿಳಿಸಬೇಡ. ಮುಂದೆ ನಾನೆ ಬಂದು ಹೇಳುವೆ ಎಂದು ಹೇಳಿ ಹೊರಟು ಹೋದ. ಇತ್ತ ಗುಣಸಾಗರಿ ಗರ್ಭವತಿಯಾದಳು. ಅತ್ತೆಗೆ ಬಸರಿಯಾದ ವಿಚಾರ ಗೊತ್ತಾಯಿತು. ಅತ್ತೆಗೆ ನಂಬಲಾರದ ನುಂಗಲಾರದ ತುತ್ತಾಯಿತು. ಗುಣಸಾಗರಿಯ ಜೀವನದ ಬಗ್ಗೆ ವ್ಯಥೆಪಟ್ಟಳು. ಆದರೆ ನಾದಿನಿಯರಾದ ಅಲ್ಲಕ್ಕ, ಮಲ್ಲಕ್ಕರು ಹಾಗೂ ಮೈದುನ, ಗುಣಸಾಗರಿಯಮೇಲೆ 'ಕಳ್ಳಬಸಿರಿನ' ಆರೋಪ ಹೊರಿಸಿ, ಬಾಯಿಗೆ ಬಂದ ಹಾಗೆ ಬೈದರು. ತೊಟ್ಟಿ, ತಳವಾರ, ಗೊಲ್ಲರಿಗೆ ಕದ್ದು ಬಸುರಿಯಾಗಿದಿಯಾ ಎಂದು ಅಂದರು. ಆದರೂ ಗುಣಸಾಗರಿ ನಿಜಾಂಶ ಹೇಳಿದರು ನಂಬುವುದಿಲ್ಲ. ಸಂಪನ್ನ ಕೊಟ್ಟ 'ಮುದ್ರೆ ಉಂಗುರ' ತೋರಿಸಲು ಇಟ್ಟಿದ ಕರಿಬಾನಕ್ಕೆ ಕೈ ಹಾಕುತ್ತಾಳೆ. ಅಲ್ಲಿ ಉಂಗುರ ಇರುವುದಿಲ್ಲ. ಇದರಿಂದಾಗಿ ನಿರ್ವಾಣೆಯ ಅನುಮಾನ ಇನ್ನೂ ಹೆಚ್ಚಾಯಿತು. ಅತ್ತೆಗೆ ತಾಯಿ ಸಮಾನ ಎಂಬುದನ್ನು ಮರೆತು ಅವಾಚ್ಯ ಶಬ್ಧಗಳಿಂದ ಬೈಯುತ್ತಾಳೆ.

ನಿರ್ವಾಣೆ ಗುಣಸಾಗರಿ ಕಳ್ಳ ಗರ್ಭವತಿಯಾದ ಬಗ್ಗೆ ತೌರಿಗೂ ಹೇಳಿಕಳಿಸುತ್ತಾಳೆ. ಗುಣಸಾಗರಿಯ ತೌರಿನವರು ಸಹ 'ಪ್ರತ್ಯಕ್ಷವಾಗಿ ನೋಡಿದರೂ ಪ್ರಮಾಣಿಕರಿಸಿ ನೋಡು' ಎನ್ನುವ ಮಾತನ್ನು ಗಮನಿಸದೆ ದಯದಾಕ್ಷಿಣೆಯಿಲ್ಲದೆ ನಿಂದಿಸುತ್ತಾರೆ. ನಿರ್ವಾಣೆ ಗುಣಸಾಗರಿಯನ್ನು ಕಾಡಿನಲ್ಲಿ ಕತ್ತರಿಸಿ ಬಿಡುವಂತೆ ದಳವಾಯಿಗೆ ಆಜ್ಞೆ ಮಾಡುತ್ತಾಳೆ. ಬಹುಶಃ ಇಲ್ಲಿ ನಿರ್ವಾಣೆಯ ಕೋಪವನ್ನು ಗಮನಿಸಿದರೆ ಗುಣಸಾಗರಿಯ ನಿರ್ವಾಣೆ ಕಾಮುಕತೆಗೆ ಒಪ್ಪದಿದ್ದಕ್ಕೆ ಈ ತರಹದ ಕೋಪದ್ವೇಷ ಸಾಧಿಸ ಬಹುದು ಎಂಬ ಅಂಶ ಗೊತ್ತಾಗುತ್ತದೆ. ದಳವಾಯಿ ಪತಿವ್ರತೆಯಾದ ಗುಣಸಾಗರಿಯನ್ನು ಕೊಲ್ಲದೆ ಕಾಡಿನಲ್ಲಿ ಬಿಟ್ಟುಬರುತ್ತಾನೆ. ಕಾಡಿನಲ್ಲಿ ಒಬ್ಬಳೆ ದುಃಖಪಡುತ್ತಾಳೆ. ಹೇಗಾದರೂ ಮಾಡಿ ದಿಕ್ಕು ತೋಚದೆ ಸಾಯಲೇ ಬೇಕು ಎಂದು ನಿರ್ಧರಿಸಿದ ಗುಣಸಾಗರಿ ಹುತ್ತಕ್ಕೆ ಕೈಹಾಕುತ್ತಾಳೆ. ಅಲ್ಲಿರುವ ನಾಗೇಂದ್ರ ಕಚ್ಚುವುದಿಲ್ಲ. ನಾಯಿ ಹತ್ತಿರ ಹೋಗಿ ಮಲಗುತ್ತಾಳೆ. ನಾಯಿಯು ಕಚ್ಚುವುದಿಲ್ಲ. ಮುಂದೆ ಮುದ್ದಣ್ಣನ ತೋಟಕ್ಕೆ ಬರುತ್ತಾಳೆ. ತೋಟ ಒಣಗಿ ಹೋಗಿರುತ್ತದೆ. ಗುಣಸಾಗರಿಯ ಕಾಲುಗುಣದಿಂದ ತೋಟವೆಲ್ಲಾ ಚಿಗುರುತ್ತದೆ. ಒಣಗಿದ ಹಾಳು ಬಾವಿ, ನೀರುಬಾವಿ, ನೀರಿನಿಂದ ಹಾಲಿನಿಂದ ತುಂಬುತ್ತದೆ. ಇದನ್ನು ಗಮನಿಸಿದ ಮುದ್ದಣ್ಣ ಅವಳನ್ನು ತನ್ನ ಮಗಳಂತೆ ಭಾವಿಸಿ ಅರಮನೆಗೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಗುಣಸಾಗರಿ ಗಂಡು ಮಗುವಿಗೆ ಜನ್ಮನೀಡುತ್ತಾಳೆ. ಆ ಮಗು ಮುಂದೆ ದೊಡ್ಡವನಾಗಿ ತಂದೆಯನ್ನು ಗುರುತಿಸಿ ಇಬ್ಬರನ್ನು ಒಂದುಮಾಡುವ ಸನ್ನಿವೇಶ ಅದ್ಭುತವಾಗಿದೆ ಇಲ್ಲಿ ಗುಣಸಾಗರಿ ಪಟ್ಟ ಕಷ್ಟ ವಾಸ್ತವಿಕ ಜಗತ್ತಿಗೂ ಅನ್ವಯವಾಗುತ್ತದೆ ಎಂಬುದನ್ನು ಮರೆಯುವಂತಿಲ್ಲ.

'ಮಲ್ಲಿಗೆಮ್ಮ' ಗುಣಸಾಗರಿಯ ಅತ್ತೆ ಸಂಪನ್ನನ ತಾಯಿ ಮಾನವನ ಸಹಜವಾದ ಪ್ರೀತಿಗೆ, ರಾಗಕ್ಕೆ ಸಂಕೇತವಾಗಿ ಬರುತ್ತಾಳೆ. ಗುಣಸಾಗರಿಯನ್ನು ಮಗಳಂತೆ ನೋಡಿಕೊಳ್ಳುತ್ತಾಳೆ. ವ್ಯಾಪಾರಕ್ಕೆ ಹೋಗುವ ಮಗನನ್ನು ತಡೆಯುತ್ತಾಳೆ. ಗುಣಸಾಗರಿ ಕಳ್ಳಬಸುರಿ ಆರೋಪಕ್ಕೆ ಕಾಡಿಗೆ ಕಳಿಸಲು ಸಿದ್ಧನಾದ ಮಗ ನಿರ್ವಾಣೆಯನ್ನು ತಡೆಯುತ್ತಾಳೆ. ಕಥನ ಗೀತೆಗಳಲ್ಲಿ ಹೆಚ್ಚಾಗಿ ದುಷ್ಟ ಅತ್ತೆಯನ್ನು ನೋಡುವುದಾದರೆ ಗುಣಸಾಗರಿ ಅತ್ತೆ ಗುಣವಂತಳು. ಮಾತೃಹೃದಯವನ್ನು ಪಡೆದವಳು. ಸಮಾಜದ ಕಟ್ಟು ಪಾಡುಗಳನ್ನು ಅರಿತವಳಾಗಿದ್ದಾಳೆ.

ಒಂದು ಕುಟುಂಬದಲ್ಲಿ ಏನೆಲ್ಲಾ ಸಂಪತ್ತು, ಸುಖ, ಸೌಲಭ್ಯಗಳಿದ್ದರೂ ಮಕ್ಕಳಿಲ್ಲದವರ ಬದುಕು ಮರುಭೂಮಿಯಂತೆ ಎಂಬ ಭಾವನೆ ಈಗಲೂ ಇದೆ. 'ಬಂಜೆ' ಎಂಬ ನುಡಿ ಕೇಳಲು ಎಂಥವರು ಅಳುಕುತ್ತಾರೆ ಬಂಜೆ ಎನ್ನುವ ಶಬ್ಧ ಗರತಿಯ ಕಿವಿಗೆ ಕಾದ ಕಬ್ಬಿಣವನ್ನು ಹೊಯ್ದಂತೆ. ಆ ಮಾತು ತಪ್ಪಿಸಿಕೊಳ್ಳಲು ಆಕೆ ತನಗೊಂದು ಮಗುವನ್ನು ಕರುಣಿಸು, ತನ್ನನ್ನು ಹಂಗಿನಿಂದ ಪಾರು ಮಾಡೆಂದು ಶಿವನಲ್ಲಿ ಗೋಳಿಡುವ ಹೊನ್ನಮ್ಮ. ಹೊನ್ನಮ್ಮ ಏಳು ಜನ ಅಕ್ಕತಂಗಿಯರಲ್ಲಿ ಒಬ್ಬಳು ಹಾಗೂ ಕೊನೆಯವಳು. ಏಳು ಜನಕ್ಕೂ ಲಗ್ನವಾಗಿ ಆರು ಜನ ಅಕ್ಕಂದಿರ ಮಕ್ಕಳ ಭಾಗ್ಯವನ್ನು ಪಡೆದರು. ಇವಳು ಮಾತ್ರ ಬಂಜೆಯಾಗಿ ಉಳಿದಳು.

ಬಂಜೆತನವನ್ನು ಹೋಗಲಾಡಸಲು ಅನೇಕ ಪುಣ್ಯ ಕಾರ್ಯಗಳನ್ನು ಮಾಡುತ್ತಾಳೆ. ಬಾವಿಯನ್ನು ತೆಗೆಸುತ್ತಾಳೆ, ಕಿತ್ತಳೆ, ಸೀಬೆ, ನಿಂಬೆ, ತೋಟವನ್ನು ಬೆಳೆಸುತ್ತಾಳೆ. ಮೂಡಲ ಸೀಮೆಯಿಂದ ಬಂದ ಯಾವ ಹಕ್ಕಿ ಪಕ್ಷಿಗಳು ಬಂಜೆ ತೆಗೆಸಿದ ಬಾವಿ, ಬಂಜೆ ಬೆಳೆಸಿದ ತೋಟ ನೋಡಿ ನೀರನ್ನು ಕುಡಿದರೆ, ಹಣ್ಣನ್ನು ತಿಂದರೆ ನಾವು ನಮ್ಮ ಮಕ್ಕಳು ಬಂಜೆರಾಗುವೆವು ಎಂದು ಹೊರಟುಹೋಗುತ್ತವೆ. ಇದರಿಂದಲೂ ಮಕ್ಕಳ ಫಲ ದೊರೆಯುವುದಿಲ್ಲ. ಮಕ್ಕಳಿಗಾಗಿ ಗಂಗೆ ಪೂಜೆಯನ್ನು ಮಾಡಬೇಕೆಂದು ಬಾವಿಗೆ, ಹೊಳೆಗೆ ಹೋದರೆ ಗಂಗೆಯೇ ಬತ್ತಿ ಹೋಗುತ್ತಾಳೆ.[೯] ಪ್ರಕೃತಿಯು ಸಹ ಬಂಜೆಯ ಬಗ್ಗೆ ಮರುಕು ತೋರಿದಂತೆ ಕಾಣುವುದಿಲ್ಲ. ಅಕ್ಕ ತಂಗಿಯರು ಸಹ ಬಂಜೆ ಎಂದು ಹಿಯ್ಯಾಳಿಸಿ ಅವಳಿಗೆ ತಮ್ಮ ಮಕ್ಕಳನ್ನು ಕೊಡದೆ ಅವಳನ್ನು ಚೆನ್ನಾಗಿ ಹೊಡೆದು ಕೂರೆಕಲ್ಲಿಗೆ ಎಸೆಯುತ್ತಾರೆ. ಆಗ ಕೋಪಗೊಂಡ ಹೊನ್ನಮ್ಮ ಅತೀವ ದುಃಖದಿಂದ ಒಂದೆ ಮೂಡೆಯಲ್ಲಿ ಮುಚ್ಚಿಟ್ಟ ಅಕ್ಕಂದಿರ ಮಕ್ಕಳು 'ಹುಳಿತು ಹೋಗಲಿ' ಎಂದು ಶಾಪ ಹಾಕುತ್ತಾಳೆ. ಹೊನ್ನಮ್ಮನ ಶಾಪ ನಿಜವಾಗುತ್ತದೆ. ಇಲ್ಲಿ ಅಕ್ಕಂದಿರೇ 'ಬಂಜೆ' ಎಂದು ಹಿಯ್ಯಾಳಿಸಿದರೆ ಹೊರಗಿನ ಜನ ಬಿಡತ್ತಾರೆಯೇ, ತನ್ನ ಸಹೋದರಿಯರಿಗೆ ಇದು ಅರ್ಥವಾಗಲಿಲ್ಲವೆ?

ಬಂಜೆತನಕ್ಕೆ ಬೇಸತ್ತ ಹೊನ್ನಮ್ಮ ಸಾಯಲು ನಿರ್ಧರಿಸಿ ಮುಂದಾಗುತ್ತಾಳೆ. ಆದರೆ ದೈವದ ನೆರವಿನಿಂದ ಉಳಿದು, ಗಂಡು ಮಗವಿನ ಫಲವನ್ನು ಪಡೆಯುತ್ತಾಳೆ. ಮಗವಿನ ವರಕೊಟ್ಟ ದೇವರು 'ಮಗುವಿಗೆ ಹನ್ನೆರಡು ವರ್ಷವಾದಾಗ ಆ ಮಗುವನ್ನು ಕಡಿದು ತಮಗೆ ಅಡಿಗೆ ಮಾಡಬೇಕೆಂದು ಹೇಳುತ್ತಾರೆ. ಅವರ ಇಷ್ಟದಂತೆ ಉಣಬಡಿಸುತ್ತಾಳೆ. ಅವಳ ಭಕ್ತಿಗೆ ಮೆಚ್ಚಿ ಶಿವಪಾರ್ವತಿಯರ ಪುನಃ ಮಗುವನ್ನು ಮರುಕಳಿಸುತ್ತಾರೆ. ಅವಳ ಹೊನ್ನಕ್ಕಲಾಗಿ ಬದುಕುತ್ತಾಳೆ.[೧೦]

ಬಂಜೆ ಹೊನ್ನಮ್ಮ ಕಥೆಯ ಚೌಕಟ್ಟಿನಲ್ಲಿ ಬರುವ ಬಂಜೆತನದ ಭೀಕರತೆ ಹಾಗೂ ಅವಳ ಮಾನಸಿಕ ತೊಳಲಾಟ ಅತ್ಯಂತ ಕ್ರೌರ್ಯವಾಗಿದೆ. ಆರುಲೋಕ ಆಳಿದರೇನು, ಪಟ್ಟೆಸೀರೆ ಉಟ್ಟರೇನು, ಮುಕ್ಕಣ್ಣನ ಹತ್ತಿರ ಅಷ್ಟಭಾಗ್ಯವ ತಂದರೇನು 'ಮೆಟ್ಟಿ ಮಲಗೊಮಗನಿಲ್ಲ' ಎಂದು ಗೋಳಾಡುವ ಸ್ಥಿತಿ ಹೊನ್ನಮ್ಮನದು. ಮಕ್ಕಳಿಗಾಗಿ ಹಂಬಲಿಸುವ ಹೊನ್ನಮ್ಮ ಬೇಡದೆ ಇರವ ದೇವರಿಲ್ಲ, ಮಾಡದೆ ಇರುವ ಕಾರ್ಯವಿಲ್ಲ. ಆದರೂ ಬಂಜೆಯೆಂಬ ನುಡಿ ತಪ್ಪಿದ್ದಲ್ಲ ಅವಳ ನಾರಿಯರೆಲ್ಲ ಅವಳನ್ನು ಹಂಗಿಸುವ ನುಡಿಕೇಳಿದರೆ, ಹೊನ್ನಮ್ಮನಿಗೆ ಮಾತ್ರವಲ್ಲ ಹೊನ್ನಮ್ಮನಂತಹ ಎಷ್ಟೋ ಸ್ತ್ರೀಯರಿಗೆ ದುಃಖವಾಗದೆ ಇರುವುದಿಲ್ಲ.

ಒಟ್ಟಿನಲ್ಲಿ ಬಂಜೆ ಹೊನ್ನಮ್ಮನ ಎಲ್ಲಾ ಕಥೆಯು ಬಂಜೆತನದ ಭೀಷಣತೆ ಪರಿಣಾಮವನ್ನು ತೋರಿಸುವುದರ ಜೊತೆಗೆ, ಬಂಜೆಯು ದೈವದ ನೆರವಿನಿಂದ ಉದ್ದಾರವಾದಳು ಎಂಬುದು ಕಂಡು ಬರುತ್ತದೆ. ಬಂಜೆತನಕ್ಕೆ ಹೆಣ್ಣೊಬ್ಬಳೇ ಕಾರಣವಾಗವುದಿಲ್ಲ, ಪುರುಷನು ಅಷ್ಟೇ ಕಾರಣನಾಗಿರುತ್ತಾನೆ ಎಂಬುದು ಕಟುಸತ್ಯ. ಆದರೆ ನಮ್ಮ ಸಮಾಜ ಗುರುತಿಸುವುದು ಹೆಣ್ಣಾದ ಬಂಜೆಯನ್ನೇ ಹೊರತು ಪುರುಷನನ್ನು ಗುರುತಿಸುವುದಿಲ್ಲ.

ಹಳ್ಳಿಗಳಲ್ಲಿ ಅಂದಿನಿಂದ ಇಂದಿನವರೆಗೂ ವರ್ಗ, ವರ್ಣ, ವೈಷಮ್ಯಗಳು ಹೇಗೆ ತನ್ನ ಸತ್ವವನ್ನು ಕಳೆದುಕೊಳ್ಳದೆ ಉಳಿದುಕೊಂಡು ಬಂದಿವೆ ಎಂಬುದನ್ನು ಬಯಲುಸೀಮೆಯ ಕಥನಕಾವ್ಯದಲ್ಲಿ ಕಾಣಬಹುದು. ಒಮ್ಮೆ ಬಯಲು ಸೀಮೆಯ ಗೌಡನ ಮಗಳು ದನಕಾಯುವ ಗೊಲ್ಲ ಹುಡುಗನ ಕೊಳಲಿನ ಗಾನ ಕೇಳಿದ ಅವಳು ಅವನ ಸ್ನೇಹವನ್ನು ಬಯಸಿ 'ಇನವಂದ' ಆಡಲು ಕರೆಯುತ್ತಾಳೆ. ಇನವಂದ ಎಂದರೆ ವಿನೋದ, ಚೆಲ್ಲಾಟ ಎಂದರ್ಥ. ಇದು ಗೊಲ್ಲಹುಡುಗನಿಗೆ ಇಷ್ಟವಿರಲಿಲ್ಲ ಯಾಕೆಂದರೆ ಅವಳ ಮತ್ತು ಅವನ ಅಂತರ ಭಿನ್ನವಾದುದ್ದು. ಆಟವಾಡಲು ಬಾರದಿದ್ದ ಕಾರಣಕ್ಕೆ ಗೌಡನ ಮಗಳು ಸಿಟ್ಟಿನಿಂದ

ಇನವಂದ ಆಡದೆ ಹೋದ್ರೆ
ನಿನ್ನ ಶಿರವ ಕಡಿಸವೆ
ನಿನ್ನ ಶಿರವಾನೆ ಮೆಟ್ಟಿಕೊಂಡು
ನಾ ತಣ್ಣೀರ ಮೀಯುತೀನಿ[೧೧]

ಎಂದು ಮುಗ್ಧ ಗೊಲ್ಲರ ಹುಡುಗನ ಪ್ರಾಣಕ್ಕೆ ಸಂಚಕಾರವನ್ನು ತರುತ್ತಾಳೆ. ಅವನು ಆಟವಾಡಲು ಬಾರದಿದ್ದ ಕಾರಣ ಅವನ ಪ್ರಾಣಕ್ಕೆ ಅಪಾಯಬಂದಿತು. ತನ್ನ ತಂದೆಗೆ ಹೇಳಿ ಶಿಕ್ಷೆ ಕೊಡಿಸಲು ಮುಂದಾದಗ ಅವಳ ನಟನೆ ಅದ್ಭುತವಾಗಿ ಕಾವ್ಯದಲ್ಲಿ ಮೂಡಿಬಂದಿದೆ.

ತೊಟ್ಟಿದ ಬಳೆಗಳ ಲಗ್ಗಾನೆ ನರಕಾಳೆ
ಇಕ್ಕಿದ್ದ ಸೀರೆ ರವಿಕೆ ಪರಪರನೆ ಹರಿದಾಳೆ
ಬಳೆಯ ಗಾಜ, ತಕ್ಕೊಂಡವಳು ಮೈಕೈಯ ನಜ್ಜುಕೊಂಡು
ಊರಿಗೆ ಹೋಗಿ ಮಂಚಾಕೆ ಮಾಕಾಡೆಯಾಗಿ
ಮಲಗಾಳೆ ಗೌಡನ ಮಗಳು[೧೨]

ಅವಳ ಸ್ಥಿತಿಯನ್ನು ನೋಡಿದ ಯಾರೇ ಆಗಲಿ ಗೊಲ್ಲರ ಹುಡುಗನ ಮೇಲೆ ಕೋಪ ಅನುಮಾನ ಪಟ್ಟುಕೊಳ್ಳುವುದಂತೂ ಸತ್ಯ. ಮಗಳು ಮನೆಗೆ ಬಂದು ಗೊಲ್ಲರ ಹುಡುಗ ನನ್ನನ್ನು ಹಿಡಿದುಕೊಳ್ಳಲು ಬಂದ ಎಂದು ಸುಳ್ಳು ಹೇಳಿದಳು. ಇದಕ್ಕೆಲ್ಲ ಕಾರಣ ಗೊಲ್ಲರ ಹುಡುಗ 'ಅವನ ಶಿರವ ಮೆಟ್ಟಿಕೊಂಡು, ನಾ ತಣ್ಣೀರು ಮೀಯಾಬೇಕು' ಎಂದು ತಂದೆಗೆ ತಿಳಿಸಿದಳು. ಗೌಡ ತನ್ನ ಮಗಳಿಗಾದ ಅವಮಾನವನ್ನು ಸಹಿಸದೆ ಗೊಲ್ಲರ ಹುಡುಗನನ್ನು ತಮ್ಮ ಆಳುಗಳಿಂದ ಬಂಧಿಸಿ ಶಿರವನ್ನು ಕಡಿಯುತ್ತಾನೆ. ಮಗಳಿಗೆ ಶಿರವನ್ನು ತಂದು ಕೊಡುತ್ತಾನೆ. ಮಗಳು ಅವನ ಶಿರವನ್ನು ಮೆಟ್ಟಿಕೊಂಡು ಸ್ನಾನ ಮಾಡುತ್ತಾಳೆ. ಶ್ರೀಮಂತರು ಹೇಗೆ ಅಮಾಯಕರ ಜೀವಕ್ಕೆ ಬೆಲೆ ಕೊಡದೆ ಅವರನ್ನು ತಮ್ಮ ಆಟದ ವಸ್ತುವನ್ನಾಗಿ ಮಾಡಿಕೊಂಡಿರುತ್ತಾರೆ ಎಂಬುದನ್ನು ಗೌಡ ಹಾಗೂ ಅವನ ಮಗಳಲ್ಲಿ ಕಾಣಬಹುದು. ಆದರೆ ಮನುಷ್ಯರಂತೆ ಪರಾಣಗಳು ಇರುವುದಿಲ್ಲ. ಅವುಗಳಿಗೆ ಜೀವದ ಬೆಲೆ, ಸಂಬಂಧದ ಬೆಲೆ, ಒಡೆಯನ ಬೆಲೆ ಮಾನವೀಯ ಮೌಲ್ಯಗಳ ಸಂಬಂಧದ ಬೆಲೆಯ ಅರಿವು ಇರುತ್ತದೆ. ಇದಕ್ಕೆ ಸಾಕ್ಷಿಯಾಗಿ ಗೊಲ್ಲರ ಹುಡುಗ ಸಾಕಿದ ಜೂಲುನಾಯಿ ಕಳ್ಳ ನಾಯಿ ಗಳು ಬರುತ್ತವೆ.

ಗೊಲ್ಲರ ಹುಡುಗನ ದನಗಳ ರಕ್ಷಣೆಯನ್ನು ಹೊತ್ತಿದ್ದ ಈ ನಾಯಿಗಳು ತಮ್ಮ ಒಡೆಯನ ಸಾವಿಗೆ ಕಾರಣವಾದವರನ್ನು ಸಂಹರಿಸಿ ತನ್ನ ಒಡೆಯನನ್ನು ಪುನಃ ದೈವಶಕ್ತಿಯಿಂದ ಬದುಕಿಸಿ ಕೊಳ್ಳುತ್ತವೆ. ಈ ಕಥನಗೀತೆಯಲ್ಲಿ ಗೊಲ್ಲರ ಹುಡುಗ ತನ್ನ ಸ್ಥಿತಿಗತಿಗಳನ್ನು ಅರಿತು 'ಇನವಂದ' ಆಡಲು ನಿರಾಕರಿಸಿದ. ಆದರೆ ಶ್ರೀಮಂತಿಕೆ ಅಹಂಕಾರದಿಂದ ಮೆರೆಯುತ್ತಿದ್ದ ಗೌಡ ಹಿಂದೆಮುಂದೆ ಆಲೋಚಿಸದೆ ದುರಹಂಕಾರಿ ಮಗಳ ಮಾತನ್ನು ಕೇಳಿ ಕೆಳವರ್ಗದ ಹುಡುಗನ ಪ್ರಾಣದ ಜೊತೆ ಚಕ್ಕಂದ ಆಡಿರುವದು ತಿಳಿದುಬರುತ್ತದೆ. ಗೌಡನ ಮಗಳ ನಡವಳಿಕೆ ಅಹಂಕಾರದ ದೌರ್ಜನ್ಯದ ಪ್ರತೀಕವಾಗಿ ಕಂಡುಬಂದಿದೆ.

ನಿತ್ಯ ಜೀವನದಲ್ಲಿ ಅಂದಿನಿಂದ ಇಂದಿನವರೆಗೂ ಕೌಟಂಬಿಕ ಸಮಸ್ಯೆಗಳು ಮಾನವನ ರಾಗ ದ್ವೇಷಗಳು, ಇಡೀ ಕುಟುಂಬದ ವಿನಾಶಕ್ಕೆ ಹೇಗೆ ಕಾರಣವಾಗುತ್ತವೆ ಎಂಬುದನ್ನು ಜನಪದರು ಕೆಲವು ಕಥನಗೀತೆಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಅಂತಹ ಹಲವು ಗೀತೆಗಳಲ್ಲಿ 'ಜಾಗಲೆ' ಕಥನಗೀತೆಯು ಒಂದು. 'ಜಾಗಲೆ' ಮುಗ್ಧರಲ್ಲಿ ಮುಗ್ಧ ಹೆಣ್ಣು ಮಗಳು. ಜಾಗಲೆ ರಂಗಯ್ಯನ ಹೆಂಡತಿ ದೇವಮ್ಮನ ಸೊಸೆ. ಆರುತಿಂಗಳ ರಂಗಯ್ಯನಿಗೆ ಮೂರುತಿಂಗಳ ಜಾಗಲೆಯನ್ನು ಎತ್ತಿ ತಂದು ಮದುವೆ ಮಾಡಿಸಿರುತ್ತಾಳೆ. ಇವನ ಹೆಂಡತಿ ಜಾಗಲೆ ತೌರಿನಲ್ಲಿರುತ್ತಾಳೆ.

ಒಮ್ಮೆ ರಂಗಯ್ಯನ ಸೋದರ ಮಾವಂದಿರ ದಂಡಿನ ಓಲೆ ಕಳುಹಿಸುತ್ತಾರೆ. ಇದನ್ನು ಓದಿದ ರಂಗಯ್ಯ ದುಃಖಿಸತ್ತಾನೆ. ತನ್ನ ಹೆಂಡತಿ ತೌರಿನಲ್ಲಿದ್ದಾಳೆ. ಮದುವೆಯಾದ ದಿನದಿಂದ ಒಂದು ದಿನವೂ ಜೊತೆಯಲ್ಲಿ ಇಲ್ಲ. ಈಗ ಅವಳನ್ನು ಬಿಟ್ಟು ದಂಡಿಗೆ ಹೋಗಬೇಕಲ್ಲ ಎಂದು ದುಃಖಪಡುತ್ತಾನೆ. ತನ್ನ ಇಂಗಿತವನ್ನು ತಾಯಿ ಹತ್ತಿರ ಹೇಳುತ್ತಾನೆ. ತನ್ನ ಮಡದಿಯನ್ನು

ಕರೆತರುವಂತೆ, ಅದಕ್ಕೆ ತಾಯಿ ಶೃಂಗಾರ ಮಾಡಿಕೊಂಡು ನಡೆದುಕೊಂಡು ಹೋಗಬೇಕಾಗತ್ತದೆ. ಬಿಸಿಲಿಗೆ ನಡೆದು ಸುಸ್ತಾದ ದೇವಮ್ಮ ಜಾಗಲೆಯನ್ನು ಶಪಿಸುತ್ತಾ ಬೈಯುತ್ತಾ ಹೋಗುತ್ತಾಳೆ.

ಬೇರೆಯವರಿಂದ ದಾರಿ ತಿಳಿದು ಸೊಸೆಯ ಮನೆಗೆ ತಲುಪುತ್ತಾಳೆ. ಜಾಗಲೆ ಮದುವೆ ಮಾಡಿದ ದಿನದಂದು ನೋಡಿದ ಊರು ಇಲ್ಲಿಯವರೆಗೂ ನೋಡಿರಲಿಲ್ಲ. ಅತ್ತೆ ಬಂದದ್ದನ್ನು ನೋಡಿದ ಜಾಗಲೆ ಆರತಿ ಬೆಳಗಲು ಬರುತ್ತಾಳೆ. ಅತ್ತೆ ಆರತಿ ತಟ್ಟೆಯನ್ನು ಕಾಲಿನಿಂದ ಒದೆಯುತ್ತಾಳೆ. ಕಡು ಕಣ್ಣ ಕೋಪದಲ್ಲಿಯೇ ಮಂಚದ ಮೇಲೆ ಕೂರುತ್ತಾಳೆ. ಬಹುಶಃ ಇವಳ ಅತ್ತೆಯು ಇವಳಿಗೆ ಇದೇ ರೀತಿ ಮಾಡಿದ್ದಳೇನೋ, ಅದನ್ನು ತನ್ನ ಸೊಸೆಯ ಮೇಲೆ ಪ್ರಯೋಗಿಸುತ್ತಾಳೆ. ಏಕೆಂದರೆ ಹೆಣ್ಣು ತನಗೆ ಸಿಗದಿದ್ದ ಸುಖ ಮತ್ತೊಂದು ಹೆಣ್ಣಿಗೆ ಸಿಕ್ಕರೆ ಸಹಿಸುವುದಿಲ್ಲ ಎನ್ನುವ ಮಾತಿನಂತೆ ಹೋದರೆ ದೇವಮ್ಮನಿಗೆ ಇದು ಅನ್ವಯಿಸುತ್ತದೆ. ಅತ್ತೆಯ ನಡವಳಿಕೆಯನ್ನು ಕಂಡು ಜಾಗಲೆಯು ಬೇಸರ ಪಟ್ಟುಕೊಳ್ಳದೆ ಗೌರವದಿಂದ ಅತ್ತೆಯನ್ನು ಉಪಚರಿಸುತ್ತಾಳೆ. ತನ್ನ ತವರಿನಿಂದ ಉಡುಗೊರೆ ಆಭರಣ ವಸ್ತ್ರಗಳನ್ನು ತೆಗೆದುಕೊಂಡು ಅತ್ತೆ ಜೊತೆ ಗಂಡನಮನೆಗೆ ಬರುತ್ತಾಳೆ. ಬರುವ ದಾರಿಯಲ್ಲಿ ಜಾಗಲೆ ತನ್ನ ತವರೂರನ್ನು ಹಿಂತಿರುಗಿ ಹಿಂತಿರುಗಿ ನೋಡುತ್ತಾ ದಾರಿ ನಡೆಯುವುದನ್ನು ನೋಡಿದ ದೇವಮ್ಮ ಕೋಪಗೊಂಡು ಬೈಯುತ್ತಾಳೆ. ಆದರೂ ಜಾಗಲೆ ಏನೂ ಪ್ರತಿಕ್ರಿಯೆ ವ್ಯಕ್ತಪಡಿಸುವುದಿಲ್ಲ. ಮನೆಗೆ ಸೊಸೆಯನ್ನು ಕರೆತಂದು ದೇವಮ್ಮ ಆ ಕ್ಷಣವೇ ಜಾಗಲೆಯ ಮುಂದೆಲೆ ಹಿಡಿದು, ಮಗ ರಂಗಣ್ಣನ ಮುಂದೆ ಜಾಡಿಸಿ ಒದೆಯುತ್ತಾಳೆ. ಅಲ್ಲಿಗೆ ಅತ್ತೆಯ ಕಾಟ ಸುರುವಾಗುತ್ತದೆ.

ಮುಂದೆ ಗಂಡ ಹೆಂಡತಿ ಪರಸ್ಪರ ನೀರು ಮಿಂದ, ಮಡಿಯುಟ್ಟು, ಊಟ ಮಾಡಿ ಅಂದವಾಗಿ ಪಗಡೆಯಾಡುತ್ತಾರೆ. ನಂತರ ರಂಗಯ್ಯ ಮಡದಿಯನ್ನುದ್ದೇಶಿಸಿ ಈ ರೀತಿ ಹೇಳುತ್ತಾನೆ.

ಕೇಳಾಲ ಎಲೆ ಹೆಣ್ಣೆ
ದಂಡೀಗೆ ನಾನು ಹೋಯ್ತೀನಿ ಹೆಣ್ಣೆ
ಬಾಳ ಸುಖದಲ್ಲಿರಬೇಕು! ಎಂದನು

ರಂಗಯ್ಯ ದಂಡಿಗೆ ಹೋಗುವಾಗ ತಾಯಿಗೆ ತಮ್ಮ ತಂಗಿಯರಿಗೆ ತನ್ನ ಹೆಂಡತಿಯನ್ನು ಚನ್ನಾಗಿ ನೋಡಿಕೊಳ್ಳಿರಿ ಎಂದು ಹೇಳಿ ಹೊರಡಿದ. ಕೂಡಲೆ ಇತ್ತ ಜಾಲೆಗೆ ಬೈಗಳು ಪ್ರಾರಂಭವಾದವು. ಅತ್ತೆ ಸೊಸೆಗೆ ಒಂದೇ ಸಮನೆ ಕೆಲಸವನ್ನು ಸೊಸೆಗೆ ಹಚ್ಚುತ್ತಾಳೆ. ಆದರೆ ಮುಗ್ಧ ಸೊಸೆ ಏನೂ ಮಾತಾಡದೆ ಕೆಲಸ ಪೂರೈಸುತ್ತಾಳೆ. ಏಳು ಹಟ್ಟಿಯ ಕಸವನ್ನು ಒಬ್ಬಳೆ ಗೂಡಿಸಿ ಒಂದೇ ಮಟ್ಟಿಗೆ ತುಂಬಿ ತನ್ನ ನಾದಿನಿಯನ್ನು ಎತ್ತಲು ಕರೆಯುತ್ತಾಳೆ. ಆದರೆ ನಾದಿನಿ ನಿಮ್ಮಪ್ಪನ ಮನೆ ಹಾಳಾ ನಿಮ್ಮಪ್ಪನ ಹಟ್ಟಿ ಆಳೇನೆ? ಎಂದು ಉತ್ತರಿಸುತ್ತಾಳೆ. ಇಲ್ಲಿ ತಾನು ಒಬ್ಬ ಹೆಣ್ಣು ಅನ್ನೋದನ್ನಾ ಮರೆತು ಮಾತನಾಡುತ್ತಾಳೆ. ಜಾಗಲೆ ಒಬ್ಬಳೆ ಮಂಕ್ರಿ ಎತ್ತಿಕೊಂಡು ಹೋಗಿ ತಿಪ್ಪೆಗೆ ಹಾಕುತ್ತಾಳೆ. ಅಲ್ಲದೆ ಅತ್ತೆ ತೂತುಬಿದ್ದಿರುವ ಅರವಿಯನ್ನು ಕೊಟ್ಟು ನೀರುತರಬೇಕೆಂದು ಹೊಳೆಗೆ ಕಳುಹಿಸುತ್ತಾಳೆ.

ಹೊಳೆಯ ದಡದಲ್ಲಿ ಜಾಗಲೆ ತನ್ನ ಸ್ಥಿತಿಗಾಗಿ ಕಣ್ಣೀರು ಕೋಡಿ ಹರಿಸುತ್ತಾಳೆ. ಶಿವಪಾರ್ವತಿ ಪ್ರತ್ಯಕ್ಷರಾಗಿ ಅವಳ ಸಮಸ್ಯೆ ಪರಿಹರಿಸುತ್ತಾರೆ.

ಮನೆಗೆ ಬಂದ ಜಾಗಲೆ ಬಾರವಾದ ಅರವಿಯನ್ನು ಇಳಿಸಲಿಕ್ಕೆ ತನ್ನ ನಾದಿನಿಯನ್ನು ಕರೆಯುತ್ತಾಳೆ. ಆದರೆ ನಾದಿನಿ ಬಂದು ಇಳಿಸುವದಿಲ್ಲ. ಅಲ್ಲೆ ಕೂತಿದ್ದ ಜಾಗಲೆಯ ಮೈದುನ ಹರವಿಯನ್ನು ಇಳಿಸುತ್ತಾನೆ. ಇದನ್ನು ಸಹಿಸದ ನಾದಿನಿ ಅತ್ತೆಗೆಯು ಅವಳ ಮೈದುನನಿಗೆ ಬಸರಾಗಿದ್ದಾಳೆಂದು ಸುದ್ದಿ ಹಬ್ಬಿಸುತ್ತಾಳೆ.

ದಂಡಿಗ್ಹೋದ ರಂಗಯ್ಯ ಹೆಂಡ್ತಿ
ಮಯ್ದುನ್ನಾಗದರೆ ಬಸರಂತೆ!
ಅಂದ ಊರಲೆಲ್ಲಾ ಸಾರಳೆ[೧೩]

ಹಸಿದ ಜಾಗಲೆಗೆ ಊಟಕ್ಕೂ ಸಹ ನೀಡುವುದಿಲ್ಲ. ಅಪರಾಧವನ್ನು ಹೊತ್ತ ಜಾಗಲೆ ಮನೆ ಬಿಟ್ಟು ಹೊಳೆದಂಡಿಗೆ ಹೋಗುತ್ತಾಳೆ. ಅಲ್ಲಿ ಶಿವಪಾರ್ವತಿಯರನ್ನು ಭಕ್ತಿಯಿಂದ ನೆನಸಿಕೊಂಡ ಕಣ್ಣೀರಿಡುತ್ತಾಳೆ. ಇವಳ ಭಕ್ತಿಗೆ ಪ್ರತ್ಯಕ್ಷರಾಗಿ ಅವಳನ್ನು ಅಲ್ಲಿಂದ ಕರೆದುಕೊಂಡು ಹೋಗಿ ಮುತ್ತಿನ ಅರಮನೆಯಲ್ಲಿ ಇಡುತ್ತಾರೆ. ಅಲ್ಲಿಯೇ ಜಾಗಲೆಗೆ ಗಂಡು ಮಗು ಆಗುತ್ತದೆ. ದಂಡುನಿಂದ ಬಂದ ರಂಗಯ್ಯ ಮನೆಯಲ್ಲಿ ಮಡದಿ ಇರದೇ ಇದ್ದುದನ್ನು ನೋಡಿ ಅಲೆಯುತ್ತಾನೆ. ಕೊನೆಗೆ ಬಳೆಗಾರನ ವೇಷ ಹಾಕಿಕೊಂಡು ಜಾಗಲೆ ಇರುವ ಸ್ಥಳವನ್ನು ಗುರುತಿಸಿ ತಾನು ಕೊಟ್ಟ ಮುದ್ರೆ ಉಂಗುರದ ಗುರುತು ನೆನಪು ಮಾಡಿ ಒಂದಾಗಿ ಬಾಳುತ್ತಾರೆ. ಈ ಕಥನಗೀತೆಯಲ್ಲಿ ಜಾಗಲೆ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ವಾಸ್ತವ ಸ್ಥಿತಿಗೂ ಇಂದಿಗೂ ಈ ತರಹದ ಕಷ್ಟ ನೋವುಗಳ ಅನುಭವಿಸಿರುವ ಮಹಿಳೆಯರು ಇಂದಿಗೂ ಇದ್ದಾರೆ.

'ಕಲಿಯುಗದ ಬಾಲೆ' ಕಥನಗೀತೆಯು ಚಾರಿತ್ರ್ಯಹೀನವಾಗಿ ಬದುಕುವ ಹೆಣ್ಣೊಬ್ಬಳನ್ನು ಕುರಿತ ಕಥೆಯಾಗಿದೆ. ಹೆಣ್ಣಿನ ವಿವಿಧ ಮುಖಗಳಲ್ಲಿ ಒಂದು ವಿಕೃತ ಕಾಮದ ಒಂದು ಮುಖವನ್ನು ಕಲಿಯುಗದ ಬಾಲೆ ಜನಪದರು ಗುರುತಿಸಿದ್ದಾರೆ. ನಮ್ಮ ಭಾರತೀಯ ಸಂಸ್ಕೃತಿಯ ಪರಂಪರೆಯ ಚೌಕಟ್ಟಿನಲ್ಲಿ ಬೆಳೆದು ಬಂದಿರುವ ಮಹಿಳೆಯರಲ್ಲಿ ಶೀಲ, ಚಾರಿತ್ರ್ಯ, ಶುದ್ಧಿ, ಪಾವಿತ್ರತೆ, ವಿಧೇಯತೆ, ತ್ಯಾಗ, ಸಹನೆ ಇವೇ ಮೊದಲಾದ ಗುಣಗಳನ್ನು ಹೆಣ್ಣಿನ ಪರಮ ಆದರ್ಶಗಳೆಂದು ಇಂದಿಗೂ ಭಾವಿಸಲಾಗಿದೆ. ಆದರೆ ಈ ಕಥನಗೀತೆಯಲ್ಲಿ ಬರುವ ಹೆಣ್ಣು ಗಂಡನಿದ್ದರೂ, ತನ್ನ ಅತೀ ಕಾಮದ ತೃಪ್ತಿಗಾಗಿ ಬೇರೊಬ್ಬನನ್ನು ಬಯಸುತ್ತಾಳೆ. ಅದಕ್ಕೆ ಅಡ್ಡ ಬಂದ ಮಕ್ಕಳು, ಗಂಡನನ್ನು ಕೊಲ್ಲುವುದು ಈ ಕಥನಗೀತೆಯಲ್ಲಿ ಕಂಡುಬರುತ್ತದೆ.

ಕಲಿಯುಗದ ಬಾಲೆ ಆರು ಮಂದಿ ಅಕ್ಕತಂಗಿಯರಲ್ಲಿ ಕೊನೆಯವಳು. ಅವಳು ದೇವರ ವರಪ್ರಸಾದದಿಂದ ಎರಡು ಗಂಡುಮಕ್ಕಳು ಇದ್ದರು. ಒಳ್ಳೆಯ ಗಂಡ, ಮನೆ, ಸಂಸಾರ ಎಲ್ಲವೂ ಇತ್ತು. ಇವಳ ಗಂಡ ಸಿಪಾಯಿ. ಒಮ್ಮೆ ದಂಡಿಗೆ ಹೋಗುವ ಪ್ರಸಂಗ ಒದಗಿ ಬಂದಿತು. ತನ್ನ

ಮಡದಿಗೆ ಹೇಳಿ ಹೊರಟ. ಸಿಪಾಯಿ ಹೋದ ಕೂಡಲೆ ಕಲಿಯುಗದ ಬಾಲೆ ಬೇರೊಬ್ಬನನ್ನು ಸೇರಲು ಇಷ್ಟಪಡುತ್ತಾಳೆ. ಗಂಡ ಹೋದ ಘಳಿಗ್ಘೊತ್ತಿಗೆ ಟೀಕು, ಮಂಡೆ ಮಜಾಕು ಮಾಡುತ್ತಾಳೆ. ಗಂಧ, ಕಸ್ತೂರಿ, ಪುನುಗು, ಜವ್ವಾಜಿ, ಲೇಪನ ಮಾಡಿಕೊಂಡು ನೀರಿಗೆ ಹೋಗುತ್ತಾಳೆ. ಹೋಗುವ ದಾರಿಯಲ್ಲಿ ರಾಮ ಕೂತಿದ್ದ ಅವನನ್ನು ಸಂಜೆಗೆ ಮನೆಗೆ ಬರಲು ಸಮ್ಮತಿ ಸೂಚಿಸುತ್ತಾಳೆ.

ಹೆಣ್ಣೇ ಕರೆದ ಮೇಲೆ ಗಂಡು ಹಿಂದುಮುಂದು ಆಲೋಚಿಸದೆ ಬಂದ. ಅವನಿಗಾಗಿ ಒಳ್ಳೆಯ ಅಡುಗೆ, ಸ್ನಾನ ಮುಂತಾದವುಗಳನ್ನು ಉಪಚರಿಸಿ ಮಿಲನಕ್ಕೆ ಅಣಿಯಾಗಿ ಸರಸವಾಡಲು ಪ್ರಾರಂಭಿಸಿದರು. ಮಕ್ಕಳು ಇದನ್ನು ಪ್ರಶ್ನಿಸಿದರು. ಅದಕ್ಕೆ ಅವರನ್ನು ನೂಲಿನ ಹಗ್ಗತಂದು, ಕಾಲು ಬಿಗಿದು, ಇಬ್ಬರಿಗೂ ಹಿಂಸೆಕೊಡತ್ತಾಳೆ. ಇಂಥ ಹಿಂಸೆ ತಾಳಲಾರದೆ ಮಕ್ಕಳು ಏನಂಥ ಹೇಳುತ್ತಾರೆ ಎಂದರೆ. ಅಮ್ಮ ನನ್ನನಾದರೂ ಕೊಲ್ಲು ತಮ್ಮನ ಕೊಲ್ಲಬೇಡ ಎಂದು ಅಣ್ಣ ತಮ್ಮಂದಿರು ಪರಸ್ಪರ ಕೇಳಿಕೊಂಡರೂ ತಾಯಿಗೆ ಕನಿಕರ ಬರುವುದಿಲ್ಲ. ಇಬ್ಬರನ್ನು ಕೊಂದು ಮಂಕರಿಗೆ ತುಂಬಿ ಕೊಟ್ಟಿಗ್ಹೆಯಲ್ಲಿರಿಸಿ ಸರಸವಾಡುತ್ತಾಳೆ. ಮುಂದೆ ಮಕ್ಕಳು ಸ್ವಪ್ನಕ್ಕೆ ಹೋಗಿ ನಮ್ಮನ್ನು ತಾಯಿ ಕೊಂದಳು. ಬೇರೊಬ್ಬನ ಜೊತೆ ಚಕ್ಕಂದ ಆಡುತ್ತಾಳೆ ಎದ್ದೇಳಿ ಅಪ್ಪ ಎಂದು ಹೇಳುತ್ತಾರೆ. ಎದ್ದು ಗಾಬರಿಯಾದ ತಂದೆ ಮೂರು ತಿಂಗಳ ದಂಡು ಮೂರು ದಿನಕ್ಕೆ ಮುಗಿಸಿ ಮನೆಗೆ ಬರುತ್ತಾನೆ. ತನ್ನ ಮಕ್ಕಳು ಕಾಣುವುದಿಲ್ಲ. ಮಕ್ಕಳೆಲ್ಲಿ ಎಂದು ಒತ್ತಾಯಮಾಡಿ ಗಂಡ ಕೇಳಿದ್ದಕ್ಕೆ ಗಂಡನಿಗೆ ಅನ್ನದಲ್ಲಿ ಇಲಿಪಾಷಾಣ ಹಾಕಿ ಕಲಿಸಿ ಉಣಬಡಿಸತ್ತಾಳೆ. ಉಣಬಡಿಸಿದ್ದನ್ನು ತಿಂದ ಗಂಡನಿಗೆ ಕಣ್ಣು ಕಾಣದಂತಾಗುತ್ತವೆ. ಅವನನ್ನು ಕೊಟ್ಟಿಗೆಗೆ ತಳ್ಳುತ್ತಾಳೆ. ಅಲ್ಲಿಯೇ ಇದ್ದ ಮಕ್ಕಳ ಶವಗಳನ್ನು ಕಂಡು ದುಃಖಿಸುತ್ತಾನೆ. ಬಾಲೆಗೆ ನಿಜಾಂಶ ಗೊತ್ತಾದ ಕೂಡಲೆ ಕೊಟ್ಟಿಗೆಗೆ ಬೇರೆಯವರ ಮನೆಯಿಂದ ಬೆಂಕಿತಂದ ಅದರ ಮೇಲೆ ತೂರುತ್ತಾಳೆ. ಈ ಉರಿಯುತ್ತಿರುವ ಬೆಂಕಿಗೆ ಮಕ್ಕಳು ತಂದೆ ಜೀವವನ್ನು ತ್ಯಜಿಸುತ್ತಾರೆ.

ಬಾಲೆ ತನ್ನ ತಪ್ಪಿಲ್ಲವೆಂದು ಜನರು ನಂಬುವಂತೆ ನಟಿಸಿದಳು. ಜನರು ನಂಬಬಹುದು, ಆದರೆ ಭಗವಂತನು ನಂಬುವುದಿಲ್ಲ. ಸತ್ಯವಂತ ಸಿಪಾಯಿಯನ್ನು ಶಿವ ಬದುಕಿಸುತ್ತಾನೆ. ಕರ್ಮನಾರಿ ಕಲಿಯುಗದ ಬಾಲೆ ಇರಬಾರದೆಂದು ಸುಣ್ಣದ ಗುಂಡಿಗೆ ಹಾಕಿ ಜೀವಸಹಿತ ಸುಟ್ಟುಹಾಕಿದ. ಸೀತೆ ಸಾವಿತ್ರಿಯಂಥ ಪಾತ್ರಗಳನ್ನು ಅತೀ ಹೆಚ್ಚಿನ ಗೌರವದಿಂದ ವರ್ಣಿಸುವ ಜನಪದ ಕವಿ. ಕಲಿಯುಗ ಬಾಲೆಯಂಥ ಕುಟೀಲ ಸ್ತ್ರೀಯನ್ನು ವ್ಯಂಗ್ಯವಾಗಿ ವರ್ಣಿಸುತ್ತಾನೆ. ನೀತಿಗೆಟ್ಟ ನಾರಿಯ ಬಗ್ಗೆ ದೈವಕ್ಕೂ ಮುನಿಸು ಎನ್ನುವ ಹಾಗೆ ಬಾಲೆಯನ್ನು ಶಿವನೇ ಸುಣ್ಣದ ಗುಂಡಿಗೆ ಹಾಕಿ ಸಟ್ಟು ಹಾಕುವುದು ಕಥನಗೀತೆಯಲ್ಲಿ ಕಂಡುಬರುತ್ತದೆ.

ಜನಪದ ಕಾವ್ಯದಲ್ಲಿ ಬರುವ ಸ್ತ್ರೀಪಾತ್ರಗಳ ಸಂಖ್ಯೆ ಮತ್ತು ವ್ಯಾಪ್ತಿ ವಿಶಾಲವಾದದು ಹಾಗೂ ವೈವಿಧ್ಯಮಯವಾದುದು. ಜನಪದ ಸ್ತ್ರೀ ಅರ್ಧನಾರಿಯಾಗಿ ತನ್ನ ಶೀಲ ಚಾರಿತ್ರ್ಯದಿಂದ ಬೆಳಗಿದ್ದಾಳೆ. ಇವಳು ಕೆರೆಗೆ ಬಾವಿಗೆ ಹಾರವಾಗಿದ್ದಾಳೆ. ಇಂತಹ ಪಾತ್ರಗಳಲ್ಲಿ ನಾಗವ್ವಳ ಪಾತ್ರ ಒಂದು. ಸತಿ

ಆಚರಣೆಯ ಹಿನ್ನೆಲೆಯಲ್ಲಿ ನಾಗವ್ವಳ ಆದರ್ಶ ಹಿರಿದಾದದು. ವಿವಾಹಕ್ಕೆ ಮೊದಲೇ ಎಳೆಯ ಹರಯದಲ್ಲೇ ಕೊಂಡವನ್ನೇರುವ ದಾರುಣ ಚಿತ್ರ ನಾಗವ್ವಳ ಜೀವನದಲ್ಲಿ ಜರಗುತ್ತದೆ.

ನಾಗವ್ವ ಕಾಡಗೊಲ್ಲರ ಹಟ್ಟಿಯಲ್ಲಿ ಹುಟ್ಟಿದ್ದು. ಚಿಕ್ಕವಳಾದ ನಾಗವ್ವಳನ್ನು ನವಿಲೂರಿನ ಮುತ್ತನ ಮಗ ಚಿಂದಯ್ಯನಿಗೆ ಮದುವೆಗೆ ಕೇಳುತ್ತಾರೆ. ಸೀರೆ ಉಡಲರಿಯದ ಮಗುವನ್ನು ಕೊಡಲು ಹಿರಿಯರು ವಿರೋಧಿಸುತ್ತಾರೆ. ಆನಂತರ ಮದುವೆಗೆ ಸಮ್ಮತಿಸುತ್ತಾರೆ. ಮದುವೆ ಸಿದ್ಧತೆಗಳು ಭರದಿಂದ ಸಿದ್ಧತೆಗಳು ನಡೆಯುತ್ತವೆ. ಅತ್ತ ಹೆಣ್ಣಿನ ಮನೆಯಲ್ಲಿ ಹೆಣ್ಣಿಗೆ ಶಾಸ್ತ್ರದ ಬಳೆಗಳನ್ನು ತೊಡಿಸುವಾಗ ಅಪಶಕುನಗಳಾಗುತ್ತವೆ. ಆದರೂ ಒದಗಿದ ಮದುವೆ ನಿಲ್ಲಿಸೋದು ಬೇಡವೆಂದು ಮುಂದವರೆಸಿದರು.

ನವಿಲೂರಿನಲ್ಲಿ ಚಿಂದಯ್ಯ ಮದುವಣಗನಾಗಿ ಉಗುರೆಣ್ಣೆ ಮೀಯುವಾಗ ತಂಗಿ ಚೆಲುವಮ್ಮ ಬಂದ ಬೇಡರು ತಮ್ಮ ಆಡನ್ನು ಹೊಡೆದ ಸುದ್ಧಿಯನ್ನು ಅಣ್ಣನಿಗೆ ತಿಳಿಸುತ್ತಾಳೆ. ಅವಳ ಮಾತನ್ನು ಕೇಳಿದ ಚಿಂದಯ್ಯ ಹಸಿ ಮೈಯಲ್ಲಿ ಆಡುಗಳನ್ನು ಬೇಡರಿಂದ ಬಿಡಿಸಿಕೊಂಡು ಬರಲು ತೆರಳುತ್ತಾನೆ. ಬೇಡರಿಂದ ಆಡುಗಳನ್ನು ಬಿಡಿಸಿಕೊಳ್ಳುತ್ತಾನೆ. ಆದರೆ ಅದರಲ್ಲಿ ಕುಂಟಾಡಿನಮರಿ ಕಾಣಿಸುವುದಿಲ್ಲ. ಅದನ್ನು ಹುಡುಕುತ್ತಾ ಕಾಡಿನಲ್ಲಿ ಅಲೆದಾಡುವಾಗ ಸೀಗೆಯ ಮಳೆಯಲ್ಲಿ ಅಡಗಿ ಕೂತಿದ್ದ ಬೇಡರಿಂದ ಕೊಲೆಗೀಡಾಗುತ್ತಾನೆ. ಈ ಸುದ್ಧಿ ತಿಳಿದ ನಾಗವ್ವ ತಾಳಿಕಟ್ಟಿಸಿಕೊಳ್ಳುವುದಕ್ಕೆ ಮುನ್ನ ಸತ್ತ ಗಂಡ ಎಂದು ಭಾವಿಸಿದ ನಾಗವ್ವ ಅವನ ಚಿತೆಯಲ್ಲಿಯೇ ಕೊಂಡ ಹಾಯಬೇಕೆಂದು ನಿರ್ಧರಿಸಿಕೊಂಡ ಹಾಯುತ್ತಾಳೆ.

ಬಹುಶಃ ನಾಗವ್ವಳ ಸ್ಥಿತಿಯನ್ನು ಗಮನಿಸಿದರೆ ಕೆಲವು ವಿದ್ವಾಂಸರು ನಾಗವ್ವ ಸ್ವತಃ ಕೊಂಡ ಹಾರಿದ್ದಾಳೆ ಬೇರೆಯಾರಿಂದ ಬಲವಂತಕ್ಕೆ ಅಲ್ಲ ಎಂಬ ನಿಲುವು ಸ್ವಲ್ಪ ಹುಸಿಯಾಗಿ ಕಾಣುತ್ತದೆ. ಏಕೆಂದರೆ ನಾಗವ್ವಳಿಗೆ ಸೀರೆ ಉಡಲು ಬರುವುದಿಲ್ಲ ಎಂದಾದರೆ ಅವಳಿಗೆ ಈ ರೀತಿ ತೀರ್ಮಾನ ತೆಗೆದುಕೊಳ್ಳಲು ಸಾಧ್ಯವಿಲ್ಲ. ಹಿರಿಯರ ಪ್ರಚೋದನಾಕಾರಿ ಮಾತುಗಳಿಂದ ಉದ್ರೇಕಗೊಂಡು ಕೊಂಡಹಾಯ್ದಿರಬೇಕೆಂದು ನನ್ನ ಅಭಿಪ್ರಾಯ. ಒಟ್ಟಾರೆ ನಾಗವ್ವ ಜನಪದರಲ್ಲಿ ದೇವತೆಯಾಗಿದ್ದಾಳೆ.

'ಚಿಕ್ಕೋಳು ಹಿರಿದಿಮ್ಮವ್ವ' ಕಥೆ ಮಂಡ್ಯ, ತುಮಕೂರು ಜಿಲ್ಲೆಗಳಲ್ಲಿ ಪ್ರಸಿದ್ಧಿಯಾಗಿದೆ. ಹಿಂದಿಮ್ಮವ್ವನ ಮನೆಯಲ್ಲಿ ಅವಳ ತಂದೆ ತಾಯಿಗಳ ಆಶ್ರಯದಲ್ಲಿ ಬೆಳೆದ ಬೇಡರ ಹುಡುಗ 'ಬೊಮ್ಮಲಿಂಗ' ಹಿರಿದಿಮ್ಮವ್ವನನ್ನು ಆಸೆ ಪಡುತ್ತಾನೆ. ಅವನ ಅಂತರಂಗದಲ್ಲಿ ಹಿರಿದಿಮ್ಮವ್ವನ ಮೇಲೆ ದುರ್ಭಾವನೆಯನ್ನು ಬೆಳಸಿಕೊಂಡಿರುತ್ತಾನೆ. ಮುಂದೆ ಹಿರಿದಿಮ್ಮವ್ವ ಸಂಭ್ರಮದಿಂದ ಮದುವೆಯಾಗಿ ತನ್ನ ಗಂಡನ ಮನೆಗೆ ಬಾಳಿ ಬದುಕಲು ತೌರಿನಿಂದ ಹೋಗುತ್ತಿರಬೇಕಾದರೆ, ದಾರಿಯಲ್ಲಿ ಹಿಂದಿಮ್ಮವ್ವನ ಗಂಡನನ್ನು ಮೋಸದಿಂದ ಬೇಡರ ಹುಡುಗ ಕೊಂದುಬಿಡುತ್ತಾನೆ. ಆ ಕ್ಷಣದಲ್ಲೇ ಹಿರಿದಿಮ್ಮವ್ವನನ್ನು ತನ್ನ ಮಡದಿಯಾಗುವಂತೆ ಪ್ರೇರೇಪಿಸುತ್ತಾನೆ. ಆಗ ದಿಟ್ಟ ಮನಸ್ಸಿನ ಹಿರಿದಿಮ್ಮವ್ವ ಒಂದುಗಳಿಗೆ ಬೇಡರ ಹುಡುಗನ ಮಡದಿಯಂತೆ ನಟಿಸಿ, ಮರುಗಳಿಗೆಯಲ್ಲಿ ಅವನ ತಲೆಯನ್ನು ತಾನೇ

ಕಡಿಯುತ್ತಾಳೆ. ಅವಳು ಸಾಕುನಾಯಿಯಿಂದ ಅಣ್ಣಂದಿರಿಗೆ ಈ ಸುದ್ದಿ ಹೋಗುತ್ತದೆ. ಅಣ್ಣಂದಿರು ತಂಗಿಯನ್ನು ಹುಡುಕಿಕೊಂಡು ಬರುವಾಗ ವಿಚಿತ್ರವಾದ ಭಯ ಭೀಕರವಾದ ದೃಶ್ಯವೊಂದನ್ನು ನೋಡುತ್ತಾರೆ.

ಚೆಕ್ಕೋಳ್ ಹಿರಿದಿಮ್ಮವ್ವ ಸುವ್ವಾಲಾಲೆ
ಹಿಂದುರುಗಿ ಬರುತ್ತಾಳೆ ಸುವ್ವಾಲಾಲೆ
ಗಂಡಾನ ತಲೆಯನ್ನು ಸುವ್ವಾಲಾಲೆ
ಮಡಿಲಾಗಿ ಕಟ್ಟಿಕೊಂಡು ಸುವ್ವಾಲಾಲೆ
ಬೊಮ್ಮಲಿಂಗನ ತಲೆಯ ಸುವ್ವಾಲಾಲೆ
ಕಾಲಾಗ ಒದ್ದುಕೊಮಡು ಸುವ್ವಾಲಾಲೆ
ಬರುತ್ತಾಳ ಬೇಗದಿಂದ ಸವ್ವಾಲಾಲೆ[೮೪]

ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು, ಬೇಡರ ಹುಡುಗನ ತಲೆಯನ್ನು ಕಾಲಿನಲ್ಲಿ ಒದೆದುಕೊಂಡು ಹಿರಿದಿಮ್ಮವ್ವ ಬರುತ್ತಿದ್ದಳು. ಆ ಭಯಂಕರ ದೃಶ್ಯ ನೋಡಲು ಭಯಾನಕವಾಗಿರುತ್ತದೆ. ಮುಂದೆ ಹಿರಿದಿಮ್ಮವ್ವ ಕಂಡಕೊಂಡವಾದಳು. ಆದರೆ ಅವಳು ಕೊಂಡವೇರಿದ ರೀತಿಯೇ ಬೇರೆ. ತನ್ನ ಪತಿಯ ತಲೆಯನ್ನು ತನ್ನ ನೆತ್ತಿಯ ಕಡೆ ಇಟ್ಟುಕೊಂಡು, ಬೇಡರ ಹುಡುಗನ ತಲೆಯನ್ನು ತನ್ನ ಕಾಲಿನ ಬಳಿ ಇಟ್ಟುಕೊಂಡು ಕೊಂಡವೇರಿದಳು.

ಬದುಕಿನ ಪ್ರಾರಂಭದಲ್ಲಿಯೇ ದುರಂತವನ್ನು ಕಂಡ ಹಿರಿದಿಮ್ಮವ್ವ ಕೈ ಹಿಡಿದ ಗಂಡನ ಜೊತೆ ಸಹಗಮನ ಮಾಡುತ್ತಾಳೆ. ಉಂಡ ಮನೆಗೆ ಎರಡು ಬಗೆಯುವುದು ಎನ್ನುವ ನಾಣ್ಣುಡಿಯಂತೆ ಹಿರಿದಿಮ್ಮವ್ವಗೆ ಕೋಪಬಂದಿದೆ. ಹಾಗಾಗಿ ಅವನನ್ನು ಕೊಲ್ಲುವುದಲ್ಲದೆ ಕಾಲಿನಿಂದ ತಲೆಯನ್ನು ಒದೆಯುವುದು ಗಮನಿಸಿದರೆ ಅವಳ ಕೋಪ ವಿಕೋಪಕ್ಕೆ ಹೋಗಿದೆ ಎನ್ನುವುದು ಅರ್ಥವಾಗುತ್ತದೆ. ಹಿರಿದಿಮ್ಮಿ ತಪ್ಪನ್ನು ಸಹಿಸದೆ ಶಿಕ್ಷೆ ನೀಡಿ ಬೇರೆ ಸ್ತ್ರೀ ಕುಲಕ್ಕೆ ಮಾದರಿಯಾಗಿದ್ದಾಳೆ.

ವಡ್ಡೇರಿ ನಾಗಮ್ಮ ಮತ್ತು ಈರಣ್ಣನ ಮದುವೆ ಬಹಳ ವೈಭವದಿಂದ ನೆರವೇರುತ್ತದೆ. ಸೊಸೆಯನ್ನು ಕರೆದುಕೊಂಡು ಅತ್ತೆ ಪದ್ಮವ್ವ ಬರುವಾಗ 'ನಿನ್ನ ಬಾಲಿಗ್ಹೆಚ್ಚಾಗಿ ಸಲವಮ್ಮ' ಎಂದು ತೌರಿನವರು ಮಗಳನ್ನು ಹರಸಿ ಕಳಿಸುತ್ತಾರೆ. ಮನೆಯಲ್ಲಿ ನಾಗಮ್ಮನನ್ನು ಎಲ್ಲರೂ ಪ್ರೀತಿಯಿಂದ ನಾಗಮ್ಮನನ್ನು ಕಾಣುತ್ತಿದ್ದರು. ಹೀಗಿರುವಾಗ ಒಂದು ದಿನ ಹೀರಣ್ಣ' ತೊತ್ತಿನ ಮಗನ ಜಗಳಕ್ಹೋಗ ಬೇಕು ಕತ್ತಿಗೆ ಅಪ್ಪಣೆ ಕೊಡೆತಾಯಿ' ಎಂದು ಈರಣ್ಣ ತಾಯಿಯನ್ನು ಬೇಡಿದನು. ನೋಡಿಕೊ ಎಂದು ತಾಯಿಗೆ ಹೇಳಿ ರಣರಂಗಕ್ಕೆ ಹೊರಟು ಹೋಗುತ್ತಾನೆ.

ಅತ್ತೆ ಸೊಸೆ ಇಬ್ಬರು ಅನ್ಯೋನ್ಯಯವಾಗಿ ಬಾಳುತ್ತಿದ್ದರು ಒಮ್ಮೆ ಇಬ್ಬರು ಸಾಲಿನ ಹೊಲದಲ್ಲಿ ಹತ್ತಿ ಬಿಡಿಸಲು ಹೋಗುತ್ತಾರೆ. ನಾಗಮ್ಮಗೆ ಬಾಯಾರಿಕೆಯಾಗುತ್ತದೆ. ನೀರನ್ನು ಹುಡುಕುತ್ತಾ ಮರಳಿನಲ್ಲಿ ನಿರಿಗಾಗಿ ಚಿಲುಮೆ ತೆಗೆದಾಗ ಗಂಡನ ಕತ್ತಿ, ತಲೆ ಸಿಕ್ಕುತ್ತದೆ. ಭಯಂಕರ ಚಿತ್ರ ಎದ್ದು ಕಾಣುತ್ತದೆ. ತನ್ನ ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ತವರಿನವರನ್ನು ಹೀಗೆ ಶಪಿಸುತ್ತಾಳೆ.

ವಡ್ಡಗೇರಿಯಂಬೊದು ದೊಡ್ಡಪಟ್ಟಣವೆಂದು
ಇಪ್ಪತ್ತೆ ಹುಣಸೆ ನೆರಳಿಗೆ! ನನೀಗ
ಕತ್ತೀಗೆ ಧಾರೆ ಎರದವರೆ! ನನ್ನ ತವರೋರು
ಕೊಟ್ಟೋರ ಮನೆಯ ಉರಿಯಾಲಿ'[೧೫]

ಎಂದು ಶಾಪಹಾಕುತ್ತಾಳೆ. ಹಾಗೆಯೇ ತನ್ನ ಮಾವನ ಮನೆಯ ಬಗ್ಗೆ ಎಂಥ ನಿಲುವು ನಾಗಮ್ಮನಿಗೆ ಇದೆ ಎಂದರೆ 'ಮಾವನ ಮನೆಯ ಬೆಳೆಯಾಲಿ ಎಂದಿನ್ನ ಭಾಷೆಕೊಡುತ್ತಾಳೆ ಬಲಗಯ್ಯ'[೧೪] ತೌವರಿಗಿಂತ ಮಾವನ ಮನೆಯ ಮೇಲಿನ ಗೌರವವನ್ನು ಅವಳ ಮಾತಿನಿಂದ ಅರಿಯಬಹುದು. ಹಾಗೆಯೇ ತನ್ನನ್ನು ಕತ್ತಿಗೆ ಧಾರೆ ಎರೆದವರೆ ತನ್ನ ತವರೋರು ಎನ್ನುವಾಗ ಅವಳ ಮನಸ್ಸಿನ ಆಕ್ರೋಶದ ಜ್ವಾಲೆಯನ್ನು ಕಾಣಬಹುದು. ಅವಳ ಮಾತಿನ ಹಿನ್ನೆಲೆ ಏನೆಂದರೆ ಮದುವೆಯಾದ ಹೆಂಡತಿಯನ್ನು ಬಿಟ್ಟು ಕತ್ತಿಗೆ ಎರೆದವರೆ ಎನ್ನುತ್ತಾಳೆ. ಈ ಸಾಲಿನಲ್ಲಿ ನೇರವಾಗಿ ಆಕ್ಷೇಪಿಸಿದ ಮೊನಚು ಅರಿವಾಗುತ್ತದೆ. ಹೆಣ್ಣಾಗಿ ಹುಟ್ಟಿದ ತಪ್ಪಿಗೆ ಈ ಶಿಕ್ಷೆಯನ್ನು ಅನುಭವಿಸುತ್ತಿದ್ದೇನೆ ಎನ್ನುವುದರ ಹಿನ್ನೆಲೆಯಲ್ಲಿ ತೌರನ್ನು ಶಪಿಸುತ್ತಾಳೆ. ಸೊಸೆಗೆ ತಕ್ಕಂತೆ ಅತ್ತೆಯು ಹಾಗೆ ಇದ್ದಾಳೆ. ತನ್ನ ಸೊಸೆ ಕೊಂಡಕ್ಕೆ ಹೋಗುವಾಗ ತಾನು ಬರುತ್ತೇನೆಂದು ಹಟಮಾಡುತ್ತಾಳೆ ನಾಗವ್ವನ ಅತ್ತೆ. ಹೀಗೆ ಕೊನೆಗೆ ನಾಗವ್ವ ತನ್ನನ್ನು ತಾನು ಸಮಾಧಾನ ಪಡಿಸಿಕೊಂಡು, ತಾನು ಹುಟ್ಟಿದ ಮೆಟ್ಟಿದ ಮನೆಯನ್ನು ಹರಸುತ್ತಾಳೆ. ಪ್ರಾರಂಭದ ಆಕ್ರೋಶ, ಆವೇಶ ಕೊನೆಗೆ ಇರುವುದಿಲ್ಲ ಆದರೆ ಊರಿನ ದೃಷ್ಟಿಯಲ್ಲಿ ಅವಳು ಎಂದೆಂದಿಗೂ ವರಕೊಡುವ ದೇವತೆಯಾಗಿ ಕಂಡು ಬರುತ್ತಾಳೆ.

'ಮಹಾಸತಿ ವೀರತಿಮ್ಮವ್ವ' ಕಥನಗೀತೆಯು ಹಿರಿಯೂರು ತಾಲೂಕು ಹಿರಿಯಟ್ಟಿ ಮದನಕುಂಟೆ ಮತ್ತು ಯರಬಳ್ಳಿ ಗ್ರಾಮಗಳಲ್ಲಿ ಹೆಚ್ಚಾಗಿ ಪ್ರಚಲಿತವಾಗಿದೆ. ವೀರ ನಾಗಣ್ಣನ ಹೆಂಡತಿ ವೀರತಿಮ್ಮವ್ವ. ಇವರ ಲಗ್ನವಾದ ಕೆಲವೇ ವರ್ಷಗಳಲ್ಲಿ ನಾಗಣ್ಣ ಸಾಣೆ ಕೆರೆಯ ಬಳಿ ಆದ 'ಲಡಾಯ'ದಲ್ಲಿ (ಗರಡಿ) ಭಾಗವಹಿಸಿ ವೀರಮರಣ ಹೊಂದಿದ. ನಾಗಣ್ಣ ಹರ್ತಿಕೋಟೆಯ ತಿಮ್ಮವ್ವಳನ್ನು ಬಯಸಿ ಮದುವೆಯಾದ ಅವನಿಗೆ ಮೇಯುವ ದನಗಳ ಮೇಲೆ ಎರಗಿ ಬರುವ ಹುಲಿಯನ್ನು ಎತ್ತಿ ಕುಕ್ಕುವಷ್ಟು ಪರಾಕ್ರಮ ಇತ್ತು. ಸಿರಾದವರೆವಿಗೂ ಹೋಗಿ ವೀರತಿಮ್ಮವ್ವ, ಅವಳಿಗೆ ಎರಡು ಮಕ್ಕಳಿದ್ದರೂ, ಗಂಡನ ಮರಣವಾರ್ತೆಯನ್ನು ಕೇಳಿ ಕೆಂಡವಾದಳು.

ಗಂಡನ ಮರಣ ಸುದ್ದಿ ತಿಳಿದ ವೀರ ತಿಮ್ಮವ್ವ ತನ್ನ ಮಕ್ಕಳೆರಡರಲ್ಲಿ ಒಂದನ್ನು ಎತ್ತಿಕೊಂಡು ಒಂದನ್ನು ನಡೆಸಿಕೊಂಡು ಹೊರಟಳು ತನ್ನ ಗಂಡನ ಸಾವಿನ ಬಗ್ಗೆ ದಾರಿಯಲ್ಲಿ ಎಲ್ಲರನ್ನೂ ಕೇಳುತ್ತಾ ಬರುತ್ತಾಳೆ. ವೀರತಿಮ್ಮವ್ವ ಸ್ವತಃ ಕಿಚ್ಚಿಗೆ ಅಂಜುವುದಿಲ್ಲ ಎನ್ನುತ್ತಾಳೆ. ತೆರೆಯ ಮರೆ ಮಾಡಬೇಡಿ ಎಂದು ಹೇಳುವ, ಅವಳ ಧ್ವನಿಯಲ್ಲಿ ಒಂದೆಡೆ ಧೈರ್ಯ, ಇನ್ನೊಂದೆಡೆ ದುಃಖ ಭಯ ದುಮ್ಮಾನ ತುಂಬಿ ತುಳುಕಿದೆ. ಕಿಚ್ಚಿಗೆ ಹೋಗುವಾಗ ನೋವನ್ನುಂಟು ಮಾಡುತ್ತದೆ. ಸಹಗಮನ ತನ್ನ ಪಾಲಿನ ಕರ್ತವ್ಯ ಇದು ತನ್ನಂಥ ಸ್ತ್ರೀಯರಿಗೆ ಸಹಜ. ಇದಕ್ಕೆ ಅಂಜಬೇಕಿಲ್ಲ ಅಳಕಬೇಕಿಲ್ಲ ತೌರನ್ನು ಶಪಿಸಬೇಕಿಲ್ಲ ಎಂದು ನಿರ್ಧಾರ ಮಾಡಿದಳು. ಇವಳ ಹೆಸರಿನಲ್ಲಿ

ಮಹಾಸತಿ ಕಲ್ಲಿರುವುದನ್ನು ಆ ಊರಿನಲ್ಲಿ ಗುರುತಿಸಲಾಗಿದೆ. ತಾಡಿಗೆರೆ ಗ್ರಾಮದ (ಓಬಳಾಪುರ) ಎಲೆಯೋರ ಕುಲದಲ್ಲಿ ಹುಟ್ಟಿದವಳು. ನಾಗಮ್ಮ ಇವರ ಮನೆಗೆ ಆಗರ್ಭ ಸಿರಿವಂತರು ನಾಗಮ್ಮಳನ್ನು ಸೊಸೆಯಾಗಿ ಮಾಡಿಕೊಳ್ಳುವುದಕ್ಕೆ ಬಂದಾಗ ನಾಗಮ್ಮಳಿಗೆ ಚಿಕ್ಕ ವಯಸ್ಸಿನವಳು ಆದರು ಅವರ ಮನೆಯವರು ಇಂತಹ ಸಂಬಂಧ ಸಿಗುವುದು ಅಪರೂಪವೆಂದು ಭಾವಿಸಿ ಧಾರೆಯೆರೆದು ಕೊಟ್ಟರು.

ಮದುವೆಯ ಸಿದ್ಧತೆಯ ಸಂದರ್ಭದಲ್ಲಿ ಅನೇಕ ಅಪಶಕುನಗಳಾದವು. ಆ ಅಪಶಕುನಗಳ ಮಧ್ಯೆ ಧಾರೆ ಎರೆದರು. ಮದುವೆಯಾದ ನಂತರ ಅತ್ತೆ ಗಂಡನೊಂದಿಗೆ ಗಂಡನ ಊರಿಗೆ ಬಂದರು. ಬಂದು ಕೆಲವೇ ದಿನಗಳಲ್ಲಿ ಗಂಡ ನಾಗಣ್ಣ ದಂಡಿಗೆ ಹೋದ. ಅತ್ತೆ ನಾಗಮ್ಮನ ಅಜ್ಜಿಯ ಜೊತೆಯಲ್ಲಿ ಹೊಲಕ್ಕೆ ಹತ್ತಿ ಬಿಡಿಸಲು ಹೋದಳು. ಅಲ್ಲಿ ಬಿಸಿಲು ಇದ್ದುದ್ದರಿಂದ ಬಾಯಾರಿಕೆಯಾಯಿತು. ನೀರಿನ ಸೆಲೆಯಿರುವಲ್ಲಿ ಮರಳು ಸರಿಸಿ ಚಿಲುಮೆ ತೆಗೆದಳು. ಅಲ್ಲಿ ರಕ್ತ ಕಾಣಿಸಿತು. ಅದನ್ನು ನೋಡಿ ಅರಬೆಂದಳು. ಅಷ್ಟರಲ್ಲಿ ವೀರ ನಾಗಣ್ಣ ಜೂಲುನಾಯಿ ಮುಳವೆಲ್ಲಾ ರಕ್ತ ಮಾಡಿಕೊಂಡು ಬಂದಿತು. ಇದನ್ನು ನೋಡಿದ ನಾಗಮ್ಮ ಗಂಡನ ಜೊತೆಯಲ್ಲಿ ಸ್ವರ್ಗಕ್ಕೆ ಸೇರಬೇಕೆಂದು ತೀರ್ಮಾನಿಸಿದಳು ಬಂಧು-ಬಳಗದವರನ್ನು ಕುರಿತು ವಂಡಾಕ್ಕೆ ಕಲ್ಮವ ಹೀರಣ್ಣ ಎಂದು ಕೇಳೀಕೊಂಡಳೂ ಇದಕ್ಕೆ ಜನ ಬಂಧು_ಬಳಗದವರೆಲ್ಲ ಅವಳನ್ನು ಕೊಂಡು ಹೋಗದಂತೆ ಮನವೊಲಿಸಲು ಪ್ರಯತ್ನಿಸಿದರು ಆದರೆ ಅವರ‍್ಯಾರ ಮಾತು ಕೇಳದೇ ತಾನು ಕಿಚ್ಚಿಗೆ ಅಂಜುವಳಲ್ಲ ಎಂದುಕೊಂಡು ಆಗುವುದಕ್ಕೆ ಮುನ್ನ ಅಲ್ಲಿ ನೆರೆದಿದ್ದ ಜನಗಳಿಗೆಲ್ಲಾ ಅನ್ನಸಂತರ್ಪಣೆ ಮಾಡಿಸಿದಳು ತಾನೇ ಸ್ವತಃ ಮದುವಣಗಿತ್ತಿಯಂತೆ ಶೃಂಗಾರ ಮಾಡಿಕೊಂಡು ಅನ್ನ ಬಡಿಸಿದಳು ಊರಿನವರಿಗೆಲ್ಲಾ ಕೈ ಮುಗಿದು ಕೇಳಿಕೊಂಡಳು.

ಇಲ್ಲಿ ತೌರಿಗೆ ಶಾಪ ಹಾಕದಿರುವುದು ಕಂಡು ಬರುತ್ತದೆ. ಸಹಗಮನ ತನ್ನಪಾಲಿನ ಕರ್ತವ್ಯ. ಅದನ್ನು ತಾನು ಮಾಡಲೇಬೇಕು. ಆದ್ದರಿಂದ ತನಗೆ ಸಿದ್ಧಿ ಲಭಿಸುತ್ತದೆ ಎನ್ನುವ ನಿರ್ಧಾರ ಹಟ, ಅವಳಲ್ಲಿ ಬೇರೋರಿ ಸಹಗಮನ ಮಾಡುತ್ತಾಳೆ. ನಾಗಮ್ಮನೇ ಸ್ವತಃ ಸಹಗಮನ ಮಾಡುತ್ತಾಳೆ. ಕಾಟವ್ವನ ಕಥನಗೀತೆಯಲ್ಲಿ ಮದುವೆ ವಿಚಾರವಿಲ್ಲ. ಪ್ರಾರಂಭದಲ್ಲಿ ಕೊಂಡ ಹೋಗದ ವಿಚಾರ ಹೊಂದಿದೆ. ಸುಮಾರು ೩೦೦ ತ್ರಿಪದಿಗಳು ಕೊಂಡದ ಬಗ್ಗೆ ತಿಳಿಸುತ್ತವೆ. ಕಾಟವ್ವ ಕೊಂಡಕ್ಕೆ ಹೋಗುವಾಗ ಬಂಧು-ಬಳಗದವರೆಲ್ಲಾ ಕೆಂಡ ಕೋಪವಾಗುವುದು ಬೇಡವೆಂದರು ಕಾಟವ್ವ ಕೊಂಡವಾಗುತ್ತಾಳೆ. ಇವಳ ಕೊಂಡಹಾಯುವ ಸಂಪೂರ್ಣ ಚಿತ್ರವನ್ನು ಕಾಣಬಹುದು. ಹಾಗೆಯೇ ಕಾಟವ್ವ ಕೊಂಡಕ್ಕೆ ಹೋಗುವ ಸಂದರ್ಭದಲ್ಲಿ ಗಿಡಗಲ್ಲು ಪಾಳೆಯಗಾರನ ಅಪ್ಪಣೆಯನ್ನು ಪದ್ಧತಿಯ ಪ್ರಕಾರ ಪಡೆಯುತ್ತಾಳೆ. ಈ ವಿಚಾರ ಈ ಕಥನಗೀತೆಯಲ್ಲಿ ಬರುತ್ತದೆ.

ಕಿಚ್ಚು ಕೊಡುವಾಕ ವೊಟ್ಯಾಪ್ಪನಾಯಕನಾಣೆ
ಪಚ್ಚೆಕಲ್ಲಾಣೆ ಪ್ರಜೆಯಾಣೆ

ಪಚ್ಚೆ ಕಾಲ್ಲಣೆ ಪ್ರಜೆಯಾಣೆ! ಮುಮ್ಮಡಿ ಬೂಪ್ನ
ರಟ್ಟೆ ಮ್ಯಾಲಾಡೋ ಮಗನಾಣೆ'[೧೬]

ಎಂದು ಕಾಟವ್ವ ತನ್ನ ಸಹಗಮನದ ಅನುಮತಿಯನ್ನು ಮುಮ್ಮಡಿ ಬೂಪ್ನರಲ್ಲಿ ಕೇಳುವುದನ್ನು ಗುರುತಿಸಬಹುದು. ಆಗ ಇದ್ದ ನಿಯಮವನ್ನು ಈ ಗೀತೆಯಲ್ಲಿ ಗುರುತಿಸಬಹುದು ಸಹಗಮನ ವಾಗುವುದು ಒಂದು ಪದ್ಧತಿ ಅದಕ್ಕೆ ಮುಮ್ಮಡಿ ಬೂಪ್ನ ಅಪ್ಪಣೆ ಪಡೆಯಬೇಕು ಎನ್ನುವ ಅಂಶ ಎದ್ದು ಕಾಣುತ್ತದೆ.

'ಸತಿ ಚೆನ್ನಮ್ಮನ' ಕಥನಗೀತೆಯು ಎಲ್ಲಾ ಕಥನ ಗೀತೆಗಿಂತ ಭಿನ್ನವಾದುದು. ಯಾಕೆಂದರೆ ಸತ್ತ ಗಂಡನನ್ನು ಲಗ್ನವಾಗುತ್ತಾಳೆ. ಹಾಗೆಯೇ ಸತ್ತ ಗಂಡನನ್ನು ದೈವಶಕ್ತಿಯಿಂದ ಬದುಕಿಸಿಕೊಂಡು ಸುಖಾಂತ್ಯವಾಗುತ್ತಾಳೆ. ಶಿಷ್ಟ ಸಾಹಿತ್ಯದಲ್ಲಿ ಬರುವ ಸತಿ ಸಾವಿತ್ರಿಯ ಕಥೆಯನ್ನು ಹೋಲುತ್ತದೆ. ಇಲ್ಲಿ ಕತ್ತಲರಾಯನಿಗೆ ಹತ್ತು ಮಂದಿ ರಾಣಿಯರು. ಆದರೆ ಇವರ್‍ಯಾರಿಗೂ ಮಕ್ಕಾಳಾಗುವುದಿಲ್ಲ ಪಟ್ಟದ ರಾಣಿ ಪಾಪುಮಜಣಿಗೆ ಇದೊಂದು ಚಿಂತೆ ಹೀಗಾಗಿ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡು ಮಕ್ಕಳ ಸಂತಾನ ಭಾಗ್ಯ ಪಡೆದುಕೊಂಡಳು. ಆದರೆ ಆ ಬಾಲ ಬಹಳ ದಿನ ಕಾಲ ಬದುಕುವುದಿಲ್ಲ ಎಂದನು ಶಿವ 'ಮುಂಜಾನೆ ಹುಟ್ಟಾಲಿ ಸಮಜೇಲಿ ಸಾಯಲಿ ಬಂಜೆಂಬ ಶಬ್ಧ ಅಡಗಲಿ" ಎಂದು ಸಮಧಾನಗೊಂಡಳು'[೧೭] ಈ ಮಗು ಮುಂದೆ ದೊಡ್ಡವನಾಗಿ ಕದನಕ್ಕೆ ಹೋಗಿ ಕದನದಲ್ಲಿ ಮಡಿದನು. ಶವಸಂಸ್ಕಾರ ಮಾಡುವ ಹೊತ್ತಿಗೆ ವೆಮಕರ್ಣನು ಹೀಗೆ ಶವಸಂಸ್ಕಾರ ಮೊದಲು ಸಿಗಳಿ ತಂಬಿಟ್ಟ ದಂಡೆಯಲ್ಲಿ ಒಂದು ಹೆಣ್ಣು ಗೊಂಬೆಯನ್ನು ಮಾಡಿ ಶವದ ಪಕ್ಕದಲ್ಲಿಡಬೇಕೆಂದನು. ಅದಕ್ಕೆ ಕತ್ತಲರಾಯನು ಹೊನ್ನುವರಹಕೊಟ್ಟು ಜೀವಂತ ಹೆಣ್ಣನ್ನೇ ಯಾಕೆ ತರಬಾರದೆಂದು ಯೋಚಿಸಿ ಊರಲ್ಲಿ ಡಂಗೂರ ಸಾರಿಸಿದನು. ಇದಕ್ಕೆ ಯಾರು ಒಪ್ಪದೆ ಇದ್ದಾಗ ಇಡೀ ದಿನ ಭಿಕ್ಷಾಟಣೆ ಮಾಡಿದರೆ ಒಂದು ಕಾಸು ಬಂದು ಅವಳಿಗೆ ಚೆನ್ನವ್ವ ಸಹ ಇದಕ್ಕೆ ಒಪ್ಪಿಕೊಂಡು ಶಿವನ ಜೊತೆ ವಿವಾಹವಾದಳು. ಆದರೆ ತನ್ನ ಗಂಡನನ್ನು ಸುಡಗೊಡಲಿಲ್ಲ ಭಕ್ತಿಯಿಂದ ದೇವರನ್ನು ಕಾಡಿಬೇಡಿ ಗಂಡನನ್ನು ಬದುಕಿಸಿ ಕೊಂಡಳು. ಚೆನ್ನವ್ವ ಮುಂದೆ ಸುಖವಾಗಿ ಸಂಸಾರ ಮಾಡಿಕೊಂಡಿದ್ದರು.'[೧೮]

ಚೆನ್ನವ್ವನ ಕಥನ ಕರ್ತವ್ಯದಲ್ಲಿ ಗಮನಿಸುವುದಾದರೆ, ಪಾಪುಂಬೆಣೆಗೆ ಹುಟ್ಟಿವ ಬಾಲ ಶಿವನಿಂದ ಅರೆ ಆಯಸ್ಸನ್ನು ಪಡೆದು ಹುಟ್ಟುತ್ತಾನೆ. ಅದೇ ಕಾಳಿಂಗರಾಯನ ಹೆಂಡತಿ ಚೆನ್ನವ್ವ ಶಿವನನ್ನು ಒಲಿಸಿಕೊಂಡು ಸತ್ತಗಂಡನನ್ನು ಬದುಕಿಸಿಕೊಳ್ಳುತ್ತಾಳೆ. ಚೆನ್ನವ್ವನ ಭಕ್ತಿಯನ್ನು ಮೆಚ್ಚು ವಂತಹದ್ದು ಪ್ರತಿಯೊಂದು ಹೆಣ್ಣು ತಾನು ಮದುವೆಯಾಗುವ ಗಂಡ ಚೆನ್ನಾಗಿರಬೇಕು ಎಂದು ಬಯಸಿದರೆ, ಚೆನ್ನವ್ವ ಸತ್ತ ಗಂಡನನ್ನು ಮದುವೆಯಾದಳು[೧೯] ಚೆನ್ನವ್ವ ಬಾಲ್ಯದಿಂದಲೂ ಕಡುಬಡತನದಲ್ಲಿ ನೊಂದು ಬೆಂದವಳು ಕೊನೆಗೆ ಸತ್ತ ಗಂಡನನ್ನು ಮದುವೆಯಾದಳು ಇವೆಲ್ಲ ನಿಜಕ್ಕೂ ನಂಬಲರ್ಹವಾದ ಸಂಗತಿಯಾಗುತ್ತದೆ. ಚೆನ್ನವ್ವ ಸತ್ತಗಂಡನನ್ನು ಮದುವೆಯಾಗು

ಎಂದು ಹೇಳಿದರೆ ಇಲ್ಲಿ ತಿರಸ್ಕರಿಸುವುದಿಲ್ಲ. ಹೀಗೆ ಜನಪದ ಸಮಾಜದಲ್ಲಿ ನ್ಯಾಯನೀತಿ ನಂಬಿ ದೇವರನ್ನು ಒಲಿಸಿಕೊಳ್ಳುವ ಚಲವಾದಿಗಳು ಇದ್ದಾರೆ ಎನ್ನುವುದಕ್ಕೆ ಚೆನ್ನವ್ವ ಸಾಕ್ಷಿಯಾಗುತ್ತಾಳೆ.

ಈರೋಬಿಯ ಕಥೆ ಪ್ರಾರಂಭವಾಗುವುದೇ ಮದುವೆಯಾದ ಮೇಲೆ ಈರೋಬಿಯ ಪತಿ ಶೆಟ್ಟಿಶಂಕರರಾಯ ಮಡದಿಗೆ ಚಿನ್ನದ ಹರಿವಾಣವನ್ನು ತರಲೆಂದು ಘಟ್ಟದ ಕೆಳಗೆ ಹೋದಾಗ ದುರ್ಮರಣಕ್ಕೆ ಈಡಾದನು. ಪತಿ ಸತ್ತಿರಲಾರ ಸರಿಯಾದ ಗುರುತು ಬರಲೆಂದು ಕಾಯುವ ದಿಟ್ಟ ಸ್ವಭಾವವನ್ನೇ ವ್ಯಕ್ತಪಡಿಸುವ ಈರೋಬಿ ಕೊಂಡುವೇರಲು ಅಣಿಯಾದಳು. ಯಾರ ಮಾತಿಗೂ ಕಿವಿಗೊಡದೆ ಕೆಂಡಕೊಡವಾಗುವವಳು. ಇದು ಕಥೆಯ ವಸ್ತು.

ಶೆಟ್ಟಿಶಂಕರರಾಯ ತನ್ನ ಹೆಂಡತಿ ಈರೋಬಿ ಬಾಣಂತಿ. ಅದಕ್ಕೆ ಬಟ್ಟಲಲ್ಲಿ ಊಟ ಮಾಡುತ್ತಿರುತ್ತಾಳೆ. ಅವಳು ಚಿನ್ನದ ಹರಿವಾಣದಲ್ಲಿ ಊಟ ಮಾಡುವಂತೆ ಮಾಡಬೇಕು. ಅವಳನ್ನು ಇನ್ನೂ ಚೆನ್ನಾಗಿ ನೋಡಿಕೊಳ್ಳಬೇಕು ಎಂಬ ಹಂಬಲದಿಂದ ತನ್ನ ಪತಿ ಚಿನ್ನದ ಹರಿವಾಣ ತರಲು ಹೋದವನು ಜೀವಂತವಾಗಿ ಬರಲಿಲ್ಲ. ಕೇವಲ ಸತ್ತನೆಂಬ ಸುದ್ದಿ ಈರೋಬಿಗೆ ತಲುಪಿದೆ. ಸತ್ತು ಬರುವ ಮೊದಲೇ ಅವಳು ಕೆಟ್ಟ ಸ್ವಪ್ನಗಳು ಕಂಡಿದ್ದಾಳೆ. ಈರೋಬಿ ಗಂಡ ಮಲಗುವ ಮಂಚದ ಸುತ್ತ ಕತ್ತಿ ಕವಿಯುವುದು ಹುತ್ತದ ಮೇಲೆ ಕಾಗೆನೆತ್ತರೂ ಕಾರುವುದು ಮೂಗುತಿ ಮುರಿಯುವುದು, ಮುಮಬಲ್ಲು ಸಿಡಿಯುವುದು. ಗಿಂಡಿತುಂಡಾಗುವುದು ಹೀಗೆ ಅನೇಕ ಕೆಟ್ಟ ಕನಸುಗಳು ಕೆಟ್ಟ ಶಕುನಗಳಾಗಿ ಕಾಣಿಸಿಕೊಳ್ಳುತ್ತದೆ. ಕನಸಿನ ಮೂಲಕ ಅಥವಾ ಮದುವೆಗೆ ಮೊದಲು ಬರುವ ಅಪಶಕುನಗಳು ಬಳೆತೊಡುವಾಗ ಬಳೆ ಒಡೆಯುವುದು, ಒಂಟಿಸೀನುವುದು, ಹಲ್ಲಿ ಲೋಚಗುಟ್ಟುವುದು ಮದುವೆ ಪೀಳೆಯಲ್ಲಿ ಕುರಿಮರಿಗಳನ್ನು ಕತ್ತಿ ಕಾಣುವುದು ಮುಂತಾದ ಅಪಶಕುನಗಳು ಈರೋಬಿಗೆ ಬರುತ್ತವೆ. ಇವೆಲ್ಲವನ್ನು ತಿಳಿದು ಈರೋಬಿ ನನ್ನ ಗಂಡನಿಗೆ ಆಪತ್ತು ಇದೆ ಎಂದು ನಿರ್ಧರಿಸಿ ಕಟಂಡಕೊಂಡವಾಗಳು ಮಾನಸಿಕವಾಗಿ ಪೂರ್ವಸಿದ್ಧತೆಯಾದಂತೆ ಗೋಚರಿಸುತ್ತದೆ.

ಈರೋಬಿ ಕೊಂಡಕ್ಕೆ ಹೋಗುವಾಗ ತನ್ನ ತೌರಿನವರಿಗೆ ಹೇಳುವ ಮಾತು ಕೇಳಿದರೆ ಕರುಳು ಕಿತ್ತು ಬರುತ್ತದೆ.

ಹಾಲು ತಕ್ಕಂಡು ನಮ್ಮ ತಾಯಮ್ಮನ ಬರಹೇಳಿ
ತುಪ್ಪಕ್ಕಿಂತ ಮೇಲು ಜೇನುತುಪ್ಪ-ತಕ್ಕಂಡು ನಮ್ಮಪ್ಪ ಮುದ್ದಯ್ಯ
ಣ್ಣೆಣೆತಕ್ಕಂಡು ನಮ್ಮಣ್ಣಯ್ಯನ ಬರಹೇಳಿ ಎಣ್ಣೆಗಿಂತ
ಮೇಲೆ ಹರಳೆಣ್ಣೆ ತಕ್ಕಂಡು ಅಣ್ಣ ನಿಂಗಣ್ಣನ ಬರಹೇಳಿ

ಎಂದು ತನ್ನ ತೌರಿವರಿಗೆ ಹೇಳಿಕಳುಹಿಸುತ್ತಾಳೆ. ಅವಳು ಹೇಳಿದಂತೆ ಎಲ್ಲರೂ ತಗೊಂಡು ಬರುತ್ತಾರೆ ಆದರೆ ಅವರ್‍ಯಾರನ್ನು ಈರೋಬಿ ನೋಡಲು ಇಚ್ಛೆಪಡುವುದಿಲ್ಲ ಅವಳ ಮಾತುಗಳಲ್ಲಿ ವ್ಯಕ್ತವಾಗುತ್ತದೆ.

ಈರೋಬಿಯ ನಿರ್ಧಾರ ಎಂಥ ಧೃಡವಾದುದು ಅವಳ ನಿರ್ಧಾರ ತಪ್ಪೇ ಸರಿಯೇ ಎನ್ನುವ ವಿವೇಚನೆಗೆ ಅವಕಾಶವಿದ್ದರೂ, ಈರೋಬಿ ಮುಗ್ಧೆ ಅವಿದ್ಯಾವಂತೆ ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದಿದ್ದಾಳೆ. ಹೀಗಾಗಿ ಅವಳು ಎಲ್ಲರನ್ನ ಎಲ್ಲವನ್ನು ಎದುರಿಸಿ ಬಾಳಲು ಶಕ್ತಳಾಗಿಲ್ಲ ಅದಲ್ಲದೆ ಅವಳು ವೈವಿಧ್ಯವಾದ ಬದುಕನ್ನು ಎದರಿಸಲು ಸಿದ್ಧಳಿಲ್ಲ. ಅದಕ್ಕೆ ಅವಳು ಬೆನ್ನು ತಿರುಗಿಸಿದ್ದಾಳೆ.

ಪೌರಾಣಿಕ ಕಥನಗೀತೆಗಳಲ್ಲಿ ಬರುವ 'ಕುಂತಿ' ಯ ಪಾತ್ರ ಅತಿಮುಖ್ಯವಾದುದು ಜನಪದರಲ್ಲಿ 'ಕೊಂತಿ'ಯಾಗಿದ್ದಾಳೆ. ಅವಳಿಗೆ ಸಂಬಂಧಿಸಿದಂತೆ ಕೊಂತಿಪೂಜೆಯು ಸಹ ಇಂದಿಗೂ ಕೆಲವು ಕಡೆಗಳಲ್ಲಿ ಆಚರಣೆ ಇದೆ. ಹಾಗೆಯೇ ಕೊಂತಿಪದಗಳಲ್ಲಿ ಕೊಂತಿ ದೇವಿಯ ಜನನ, ಬಾಲ್ಯ ಹಾಗು ವರದಿಂದ ಕರ್ಣನನ್ನು ಪಡೆಯುವುದು ಮದುವೆ ಒಸಗೆ, ಕಾಡಿನಲ್ಲಿ ಮಕ್ಕಳನ್ನು ಪಡೆದುದು ಮಕ್ಕಳ ಜೊತೆ ಆಟಪಾಠಗಳಲ್ಲಿ ಆನಂದಿಂದ ಕಾಲಕಳೆಯುವುದು, ಆ ನಂತರ ಪಾರಿಪವರ ಜೂಜು, ವನವಾಸ, ಕುರುಕ್ಷೇತ್ರ, ಪಾಂಡವರ ಜಯ, ಮುಂತಾದ ಭಾರತದ ಕಥೆಯನ್ನು ಕುರಿತು ಘಟನೆಗಳನ್ನು ಒಳಗೊಂಡಿದ್ದರೂ ಜನಪದರಿಂದ ಕೊಂತಿಯ ಜೀವನ ಚಿತ್ರಣ ಸಾಮಾನ್ಯ ಗೃಹಿಣಿಯ ಜೀವನ ಚಿತ್ರದಂತೆ ಪ್ರತಿಧ್ವನಿತವಾಗಿದೆ.

ಕುಂತಿ ಎಳೆಯ ಮಕ್ಕಳನ್ನು ಕಟ್ಟಿಕೊಂಡು, ಕಾಡುಮೇಡುಗಳನ್ನು ಊರುಕೇರಿಗಳನ್ನು ಅಲೆದು ಸಂಕಷ್ಟದಲ್ಲಿ ಪರಿತಪಿಸಿದ ಬಡತನದ ದಾರುಣ ಚಿತ್ರಣ ಇಲ್ಲಿದೆ. ಬಡತನ ಬಂದಾಗ ಅವಳು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಸಂಬಂಧಿಕರು ಏನಿದ್ದರೂ ಉಣ್ಣುವಾಗ, ಉಡುವಾಗ, ಅದೇ ಕಷ್ಟಬಂತೆಂದರೆ ತಿರುಗಿ ಸಹ ನೋಡವುದಿಲ್ಲ ಹಾದಿನೆರಳು ಬೀದಿನೆರಳು, ಹಗೆಯಾಯಿತು. ಬಂಧು ಬಳಗದವರ ಜೊತೆ ಅಡಬಿಗಿಡವೆಲ್ಲ ಹಗೆಯಾಗಿದೆ. 'ಬಾಳಿ ಬದುಕಿದ ಕುಂತ್ಯಮ್ಮನ ಸ್ಥಿತಿ ಹೀಗಾದ ಮೇಲೆ ಇನ್ನೂ ನಮ್ಮಂಥವರ ಪಾಡೇನು? ಎಂಬ ದೌರ್ಜನ್ಯದ ಧ್ವನಿಯನ್ನು ಜನಪದರ ಹೃದಯಂಗಮವಾಗಿ ವ್ಯಕ್ತಪಡಿಸುತ್ತಾರೆ.

ಕೊಂತ್ಯಮ್ಮನಿಗೆ ಉಣ್ಣುವುದಕ್ಕೆ ಊಟವಿಲ್ಲ, ಉಡುವುದಕ್ಕೆ ಬಟ್ಟೆಯಿಲ್ಲ ಅಂಥ ಬಡತನ ಬಂದೊಂದಗಿದೆ ಚಿಂದಿ ಚಿಂದಿ ಬಟ್ಟೆಗಳನ್ನು ಜೊತೆ ಮಾಡಿಕೊಂಡು ಹೊಲಿಯುವುದಕ್ಕೆ ಸೂಜಿ ದಾರವಿಲ್ಲದೆ ಸಣಬನೆದಾರ ಮಾಡಿಕೊಂಡು ಹಂಚಿಕಡ್ಡಿಯ ಮುರಿದು ಸೂಜಿಯ ಮಾಡಿಕೊಂಡು, ಹೊಲಿಯುತ್ತಾಳೆ ಆದರೂ ಬಡ್ಡೆ ಎದೆ ಭಾಗಕ್ಕೆ ಮತ್ತು ಕೆಳಕ್ಕೆ ಮಾತ್ರ ಆಯಿತು ಎನ್ನುತ್ತಾರೆ ಜನಪದರು. ಊಟಕ್ಕೆ ಕಾಡುಬಳೆ ಸೊಪ್ಪು ಕೊಯ್ದು ಉಪ್ಪುಯಿಲ್ಲದೆ ಸಪ್ಪೆ ಸೊಪ್ಪನ್ನು ಮಕ್ಕಳಿಗೆ ಹಂಚುವುದು ಭೀಮನಿಗೆ ಸೊಪ್ಪ ಸಾಲವಿದ್ದಾಗ ತನ್ನ ಎದೆ ಹಾಲನ್ನು ಕೊಡುತ್ತಾಳೆ ಹಾಲು ಬಾರದಿರಲು ಕೊಂತ್ಯ ತನ್ನ ಕಿರು ಬೆರಳನ್ನು ಭೀಮನ ಬಾಯಿಗೆ ಚೀಪಲು ಕೊಡುತ್ತಾಳೆ. ಕೊಂತ್ಯಮ್ಮ ತನ್ನ ಮಕ್ಕಳ ಊಟಕ್ಕಾಗಿ ಇನ್ನೊಬ್ಬರ ಮನೆಯಲ್ಲಿ ಜೀತ ಮಾಡಿ ಅಕ್ಕಿ ನುಚ್ಚುನ್ನು ಸಂಪಾದಿಸುತ್ತಾಳೆ ಅದರಿಂದ ಗಂಜಿಮಾಡಿಕೊಡಲು ನೆಲೆಯಿಲ್ಲದೆ ಹಿರುವೊಡೆ ಜೀವನ ಮಾಡಿದ್ದಾಳೆ ಎಂದು ಜನಪದರು ಹೇಳುತ್ತಾರೆ. ಶಿಷ್ಟ ಸಾಹಿತ್ಯದಲ್ಲಿ ಬರುವ ಕುಂತಿಯ ಪರಿಚಯಕ್ಕಿಂತ

ಜನಪದ ಸಾಹಿತ್ಯದಲ್ಲಿ ಬರುವ ಕೊಂತ್ಯಮ್ಮನ ಪರಿಚಯ ಭಿನ್ನವಾಗಿದ್ದು ಜನಪದರ ಬದುಕಿನ ನೈಜತೆಯನ್ನು ಪ್ರತಿಬಿಂಬವಾಗಿ ಕಂಡು ಬಂದಿದ್ದಾಳೆ.

ಮಹಾಭಾರತದ ಕುರುಕ್ಷೇತ್ರ ಯುದ್ಧಕ್ಕೆ ಹಾಗೂ ಮಹಾಭಾರತದ ಹೇಳವಣಿಗೆ ಅತ್ಯಂತ ಕ್ರಿಯಾತ್ಮಕ ಶಕ್ತಿಯನ್ನು ಕೊಟ್ಟ ಸ್ತ್ರೀ ಎಂದರೇ ದ್ರೌಪದಿ. ಕುಂತಿಯಷ್ಟೇ ಪ್ರಮುಖವಾದ ಸ್ತ್ರೀ ಪಾತ್ರವಾಗಿದೆ. ಭೀಮನನ್ನ ಸೆರೆ ಹಿಡಿಯುವ ಶಕ್ತಿ ದ್ರೌಪದಿಯಲ್ಲಿದೆ. ಧರ್ಮರಾಜ ದ್ರೌಪದಿ ಮತ್ತು ಜೂಜು ಪ್ರಸಂಗದಲ್ಲಿ ಹೀಗಿದೆ ಒಮ್ಮೆ ನೆಂಟರ ಮದುವೆಗೆ ಬಂದ ಧರ್ಮರಾಜನನ್ನು ದುನೆದಾರ ಜೂಜಿಗೆ ಅಹ್ವಾನಿಸುತ್ತಾನೆ. ಜೂಜಿನಲ್ಲಿ ಸೋಲೂತ ನಡೆದ ಧರ್ಮರಾಜ ಸೋಲುವುದು ರಾಜ್ಯವನ್ನಲ್ಲ ಕೋಶವನ್ನೆಲ್ಲ ಎತ್ತನ್ನು ಎಮ್ಮೆಯನ್ನು ಭತ್ತ, ಆಭರಣಗಳನ್ನು ಕಡೆಗೆ ಮಡದಿಯನ್ನು ಸೋಲುತ್ತಾನೆ. ಧರ್ಮರಾಯ, ನೀಲಗುದರಿ ಏರಿಕೊಂಡು ತನ್ನ ಅರಮನೆಗೆ ಬರುತ್ತಾನೆ. ಬಾಗಿಲು ತೆಗೆದು ಹಡೆದವ್ವನಿಗೆ ತಾನು ಮಡದಿಯನ್ನು ಸೋತ ಸುದ್ದಿಯನ್ನು ತನ್ನ ತಾಯಿ ಕುಂತಿ ಹತ್ತಿರ ಹೇಳುತ್ತಾನೆ. ಕುಂತಿ ಭಯಬೀತಳಾಗಿ ದ್ರೌಪದಿ ಬಿಚ್ಚಿಟ್ಟುಕೊಳ್ಳುವುದಿಲ್ಲ ಅದರ ಬದಲಾಗಿ ದ್ರೌಪದಿ ನೀಲಗುದರಿ ಏರಿ ದುನೆದಾರನ ಮನೆಗೆ ಹೊರಟೇ ಬಿಡುತ್ತಾಳೆ. ಮತ್ತೆ ಗೆದ್ದುಕೊಂಡು ಸಂಪತ್ತನ್ನು ಪುನಃ ವಾಪಸ್ಸು ಗೆದ್ದುಕೊಳ್ಳತ್ತಾಳೆ. ಅಷ್ಟೇ ಅಲ್ಲದೆ ದುನೇದಾರ ಒಂದು ಕರಿನಾಯಿಯನ್ನು ಬಿಟ್ಟವನಲ್ಲ. ನಿನ್ನನ್ನು ಹೇಗೆ ಬಿಟ್ಟ ಎಂದು ಕೇಳುತ್ತಾನೆ. ಇದಕ್ಕೆ ಒಂದು ಕಡೆ ತುಂಬಾ ಖುಷಿಪಡುತ್ತಾನೆ. ಆದರೆ ಅವಳ ಶೀಲದ ಬಗ್ಗೆ ಶೀಲವನ್ನು ಶಂಕಿಸಿದಂತೆ ಕಂಡುಬರುತ್ತದೆ.

ಊರ ಹೊರಗೆ ಉರಿಯುತ್ತಿರುವ ದೊಡ್ಡ 'ಕುಳಬಾಸ' ದಲ್ಲಿ ಕೆಂಪಗೆ ಕಾಯುತ್ತಿರುವ ಹಾರೆಯನ್ನು ತರಲು ದ್ರೌಪದಿಗೆ ಹೇಳುತ್ತಾನೆ. ದ್ರೌಪದಿ ಶಿವನನ್ನು ಸ್ಮರಿಸಿ ಬರುವ ದ್ರೌಪದಿಗೂ ಜನಪದ ಸಾಹಿತ್ಯದಲ್ಲಿ ಬರುವ ದ್ರೌಪದಿಗೂ ಇಷ್ಟೇ ವಿಷಯಗಳಲ್ಲಿ ಅಂತರವನ್ನು ಕಾಣಬಹುದು. ಜನಪದ ಬುದ್ಧಿವಂತಿಕೆಗೆ ತಲೆದೂಗಲೇಬೇಕು.

### ೪.೪ ಮಹಿಳಾ ಸಂಘರ್ಷದ ನೆಲೆಗಳು

ಪ್ರತಿಯೊಂದು ರಾಷ್ಟ್ರ, ಸಮಾಜ, ಕುಟುಂಬದಲ್ಲಿ ಎಲ್ಲಾ ಕಾಲದಲ್ಲಿ ಸ್ತ್ರೀ-ಪುರುಷರು ಸಹಜೀವನ ನಡೆಸುತ್ತಿರುವುದನ್ನು ಕಾಣಬಹುದು. ಮಹಿಳೆಯ ತ್ಯಾಗ, ಬಲಿದಾನ, ಬಂಜೆತನ, ವೈಧವ್ಯ, ಪಾತಿವ್ರತ್ಯ ಹೀಗೆ ಅನೇಕ ನೆಲೆಗಳಲ್ಲಿ ಆಕೆಯ ವ್ಯಕ್ತಿತ್ವ ಸಂಘರ್ಷದ ನೆಲೆಯಾಗಿ ಕಂಡುಬರುತ್ತದೆ. ಮಹಿಳೆಯ ಸವತಿ ಮಾತ್ಸರ್ಯ, ಅತ್ತೆ-ಸೊಸೆ ಜಗಳ, ಅತ್ತಿಗೆ-ನಾದಿನಿ ನಡುವೆ ನಡೆಯುವ ಜಗಳ, ರಹಸ್ಯ ಪ್ರೇಮ, ಏಕೈಕ ಕಾಮ ಹೀಗೆ ಎಲ್ಲ ಸಂಗತಿಗಳು ಇಂದಿಗೂ ಸಹ ನಡೆಯುತ್ತಿವೆ. ಕಥನಗೀತೆಗಳಲ್ಲಿ ಬರುವ ಸ್ತ್ರೀ-ಪಾತ್ರಗಳು ಒಂದೊಂದು ಬಗೆಯ ಮೌಲ್ಯವನ್ನು ಪ್ರತಿಪಾದಿಸುತ್ತವೆ.

ರಮ್ಯ ಕಥನಗೀತೆಯಲ್ಲಿ ಕಾಡಸಿದ್ದಮ್ಮನ ಕಥೆಯು ಸೊಟಗಕ್ಕೆ ಮುಣ್ಯದ ಲಕ್ಷ್ಮಿ ಕತೆಯ ರೂಪದಲ್ಲಿ ಕಾಣಬಹುದು. ಚಂದ್ರಾವತಿ ಪಟ್ಟಣದ ಚದುರಂಗ ರಾಯನೆಂಬ ದೊರೆಗೆ ಐದು ಮಂದಿ ರಾಣಿಯರು ಇವರಲ್ಲಿ ಒಬ್ಬರಿಗೂ ಸಹ ಮಕ್ಕಳ ಫಲವಿರಲಿಲ್ಲ. ಮಕ್ಕಳ ಫಲವನ್ನು

ಪಡೆಯಲು ದೊರೆ ಶಿವನನ್ನು ಹುಡುಕುತ್ತ ಶಿವನ ನೆಲೆಗೆ ಬರುತ್ತಾನೆ. ಸಿದ್ದೇಶ್ವರ ಸ್ವಾಮಿಯ ಮೈಬೆವರಿನಿಂದ ಸೃಷ್ಟಿಯಾದ ಕಾಡಸಿದ್ದಮ್ಮನನ್ನು ಮದುವೆಯಾಗಿ ತನ್ನ ರಾಜ್ಯಕ್ಕೆ ಕರೆತರುತ್ತಾನೆ. ಇದನ್ನು ರಾಜನ ಐವರು ರಾಣಿಯರು ಸಹಕರಿಸುವುದಿಲ್ಲ. ಬಂಜೆಯಾಗಿದ್ದರೂ ಚಿಂತೆಯಿಲ್ಲ ಸವತಿಬೇಡ ಎಂದರು. ಸುಖದ ದಾಂಪತ್ಯದ ಫಲವಾಗಿ ಕಾಡಸಿದ್ದಮ್ಮ ಗರ್ಭವತಿಯಾಗಲು ಇದರಿಂದ ರಾಜನ ಹಿರಿಯ ರಾಣಿಯರು ಅಸೂಯೆ ಪಡುತ್ತಾ ಸೂಲಗಿತ್ತಿಯ ಜೊತೆ ಸೇರಿ ಕಾಡಸಿದ್ದಮ್ಮನಿಗೆ ತೊಂದರೆ ಕೊಡಲು ಮುಂದಾದರು. ಪೊರಕೆ, ಮೊರ, ಬನಕೆ ಹಡೆದಿದ್ದಾಳೆ ಎಂದು ಸುದ್ದಿ ಹಬ್ಬಿಸಿ ರಾಜನಿಂದ ದೂರಮಾಡಿದರು. ಮಕ್ಕಳ ಗೋಣು ಮುರಿದು ಸವತಿ ಮತ್ಸರಕ್ಕೆ ಸಾಕ್ಷಿಯಾದರು. ಇಲ್ಲಿ ಹೆಣ್ಣಿಗೆ ಹೆಣ್ಣೆ ಶತ್ರು. ಹೆಣ್ಣಿನ ಶೋಷಣೆ ಗಂಡಿನಿಂದ ಮಾತ್ರವಲ್ಲ ಹೆಣ್ಣಿನಿಂದಲೂ ಆಗುತ್ತದೆ ಎಂಬುದನ್ನು ಈ ಕಥನ ಕಾವ್ಯದಲ್ಲಿ ಕಾಣಬಹುದು. ಸವತಿ ಮತ್ಸರ, ಬಂಜೆತನ, ಕೌಟುಂಬಿಕ ಕಷ್ಟಗಳು ಈ ಮೂರು ಅಂಶಗಳನ್ನು ಇದರಲ್ಲಿ ಕಾಣಬಹುದು. ಈ ಕಥೆಯಲ್ಲಿ ಮಕ್ಕಳಿಲ್ಲದ ನೋವು ದೊರೆಗೆ ಬಾಧಿಸಿತು. ಇದರಿಂದ ಕಾಡಸಿದ್ದಮ್ಮ ಅನೇಕ ಕಷ್ಟಗಳಿಗೆ ಬಲಿಯಾಗಬೇಕಾಯಿತು. ಆದರೆ ದೈವದ ನೆರವಿನಿಂದ ಆ ಕಷ್ಟಗಳೆಲ್ಲ ಪರಿಹಾರವಾಗಿ ಬಾಳೆಣ್ಣು, ನಿಂಬೆಣ್ಣು, ಮಲ್ಲಿಗೆ ಮಲ್ಲಮ್ಮ, ಕಾಡಸಿದ್ದಮ್ಮ, ರಾಜ ಎಲ್ಲರೂ ಸುಖವಾಗಿದ್ದು ಕಥೆ ಸುಖಾಂತ್ಯವಾಗುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ-ಸ್ತ್ರೀಯಿಂದಲೇ ಶೋಷಿತಳಾಗುತ್ತಾಳೆ ಎಷ್ಟೇ ಶೋಷಣೆಯಾದರೂ ಕೊನೆಗೆ ರಾಜ ಹೆಂಡತಿ ಮಕ್ಕಳ ಜೊತೆಯಲ್ಲಿ ಸೇರಿ ಸುಖವಾಗಿರುತ್ತಾನೆ.

ಜನಪದ ರಮ್ಯ ಕಾವ್ಯಗಳಲ್ಲಿ ಬಾಲನಾಗಮ್ಮ ಅಥವಾ ನಾಗರಗನ್ನೆ ಅತ್ಯಂತ ಜನಪ್ರಿಯವಾದ ಕಥೆಯಾಗಿದೆ. ಪಾಣಿಗಲ್ಲು ಪಟ್ಟಣದ ರಾಜ ನವಭೋಜರಾಜ ಅವನ ಹೆಂಡತಿ ಭೂಲಕ್ಷ್ಮಿ ದೇವಿಯರಿಗೆ ಏಳು ಹೆಣ್ಣು ಮಕ್ಕಳಲ್ಲಿ ಕೊನೆಯವಳು. ಬಾಲನಾಗಮ್ಮ ಊರಗಲ್ಲ ಪಟ್ಟಣದ ದೊರೆ ಕಾರು ಮರ್ದನನಿಗೆ ಏಳು ಮಂದಿ ಗಂಡು ಮಕ್ಕಳೆಲ್ಲರು ಏಳು ಜನ ಹೆಣ್ಣುಮಕ್ಕಳನ್ನು ನೋಡಿ ವೈಭವದಿಂದ ಮದುವೆಯಾಗುವರು. ಇಲ್ಲಿಯೂ ಕೂಡ ಬಾಲನಗಮ್ಮನಿಗೆ ಮಕ್ಕಳಿಲ್ಲದ ಅಪಾರ ದುಃಖ. ಹೆಣ್ಣೆ ಆಗಲಿ, ಗಂಡೆ ಆಗಲಿ ಬಂಜೆ ಎಂಬ ಶಬ್ದ ಬೇಡ ಭಗವಂತ ಎಂದು ಶಿವನನ್ನು ಬೇಡಿಕೊಳ್ಳುತ್ತಾಳೆ. ನಾಗಮುನೀಂದ್ರನನ್ನು ಕುರಿತು ತಪಸ್ಸುಮಾಡಿ ಗಂಡುಮಗುವನ್ನು ಹೆತ್ತು ಏಳು ದಿವಸಕ್ಕೆ ಮಾಯಲ್ ಮರಾಠಿಯ ಪಾಲಾಗುವಳು. ಬಾಲನಾಗಮ್ಮನ ಮಗ ಬಾಲರಾಮಣ್ಣ ಹನ್ನೆರಡು ವರ್ಷದ ಹುಡುಗನಾಗಿ ತಾಯಿಯನ್ನು ಹುಡುಕಿಕೊಂಡು ಬಂದು ಗಂಡಭೇರುಂಡ ಪಕ್ಷಿಯ ನೆರವಿನಿಂದ ಏಳು ಸಮುದ್ರವನ್ನು ದಾಟಿ ಮಾಯಲ್ ಮರಾಠಿಯ ಜೀವವಿದ್ದ ಗಿಣಿಯನ್ನು ಹಿಡಿದು ತಂದು ತನ್ನ ಕಡೆಯವರನ್ನು ಬದುಕಿಸುವನು. ತಾಯಿ ಮತ್ತು ತನ್ನ ಇಬ್ಬರು ಮಡದಿಯರನ್ನು ಕರೆದುಕೊಂಡು ಪಟ್ಟಣಕ್ಕೆ ಬಂದಾಗ ಮರಾಠಿಯ ಜೀವವಿರುವ ಗಿಣಿಯನ್ನು ಮುರಿದು ಬೆಂಕಿಗೆ ಹಾಕಿ ಮಾಯಲ್ ಮರಾಠಿಯನ್ನು ಕೊಲ್ಲುವನು. ಬಾಲನಾಗಮ್ಮಳ ಅಕ್ಕಂದಿರು ತಂಗಿಯ ನಡತೆಯನ್ನು ಶಂಕಿಸಿ ಪಾವಿತ್ರ್ಯವನ್ನು ತಿಳಿಯಲು ಕೆಲವು ಪರೀಕ್ಷೆ ಮಾಡಿ ಒಳಗೆ ಕರೆದುಕೊಳ್ಳುವರು.

ಈ ಕಥನಗೀತೆಯಲ್ಲಿ ಮಹಿಳೆಯ ಬದುಕಿನ ಏಳು-ಬೀಳನ್ನು, ಬಂಜೆತನದಿಂದ ಮುಕ್ತಿ ಪಡೆಯಲು ಮಾತ್ರವಲ್ಲ ಬಾಲನಾಗಮ್ಮ ಹೆಣ್ಣಾಗಿದ್ದರು ತನಗೆ ಗಂಡುಮಗುವೇ ಬೇಕೆಂದು ನಾಗಮುನೀಂದ್ರನ ತಪಸ್ಸು ಮಾಡುವುದು. ಗಂಡಸು ಹೆಣ್ಣಿನ ಸೌಂದರ್ಯಕ್ಕೆ ಮರುಳಾಗಿ ವ್ಯಾಮೋಹದಿಂದ ಮಾಯ-ಮಾಟ ಮಡಿ ನಾಗಮ್ಮನನ್ನು ನಾಯಿಯ ವೇಷದಲ್ಲಿ ಅಪಹರಿಸುವುದು ಮುಂದೆ ಬಾಲನಾಗಮ್ಮ ತನ್ನ ಪಾವಿತ್ರ್ಯತೆ ತೋರಿಸಲು ರಾಮಾಯಣದ ಸೀತೆಯ ಹಾಗೆ ಅಗ್ನಿಪ್ರವೇಶ ಮಾಡುವುದು, ಈ ಕಥನ ಕಾವ್ಯದಲ್ಲಿ ಅನೇಕ ಅಂಶಗಳನ್ನು ಗುರುತಿಸಬಹುದು. ಮಾಂತ್ರಿಕತೆಯ ಪ್ರಭಾವವನ್ನು ಇಲ್ಲಿ ಕಾಣಬಹುದು. ಈ ಕಥನಗೀತೆಯು ಹೆಣ್ಣೊಬ್ಬಳು ಕಷ್ಟಪಡುವ ಸ್ಥಿತಿಯನ್ನು ಹೇಳುತ್ತದೆ.

ನೀಲವೇಣಿ ಕಥನಗೀತೆಯು ಅಸಹಾಯಕ ಹೆಣ್ಣೊಬ್ಬಳ ಅನೇಕ ರೀತಿಯ ಕಷ್ಟಗಳನ್ನು ಕೇಂದ್ರಬಿಂದುವಾಗಿಟ್ಟುಕೊಂಡು ಈ ಕಥನಗೀತೆ ಬೆಳೆಯುತ್ತದೆ. ಕಂಪಿಲರಾಯ, ಹರಿಯೊಲದೇವಮ್ಮ ರಾಜ ದಂಪತಿಗಳು ಹೆಣ್ಣು ಮಗುವನ್ನು ಪಡೆಯುವ ಹಂಬಲದಿಂದ ಪಾರ್ವತಿದೇವಿಯಲ್ಲಿ ವರವನ್ನು ಬಯಸಿ ಕಾಡಿನಲ್ಲಿ ಉಗ್ರವಾದ ತಪಸ್ಸು ಮಾಡುತ್ತಾಳೆ. ಇಲ್ಲಿ ಹೆಣ್ಣು ಮಗುವನ್ನು ಪಡೆಯುವ ಬಯಕೆಯನ್ನು ಕಾಣಬಹುದು. ಗಂಡು ಮಗುವಿನ ಜೊತೆ ಹೆಣ್ಣು ಮಗುವು ಇರಬೇಕೆಂಬದುದನ್ನು ಮುಖ್ಯ ಪಾರ್ವತಿ ದೇವಿಯ ಅನುಗ್ರಹದಿಂದ ಗುಡುಗು, ಮಿಂಚು, ಸಿಡಿಲಿನ ವೇಳೆಯಲ್ಲಿ ಹುಟ್ಟಿದ ಮಗಳಿಗೆ ನೀಲವೇಣಿ ಎಂದು ನಾಮಕರಣ ಮಾಡಿದರು. ನೀಲವೇಣಿ ವಯಸ್ಸಿಗೆ ಬಂದರು ಸೀರೆ ಉಡಲಿಲ್ಲ, ಜಡೆ ಕಟ್ಟಲಿಲ್ಲ. ಆಗ ಪಾರ್ವತಿದೇವಿ ವೇಷಮರೆಸಿಕೊಂಡು ಬಂದು ನಿನಗೆ ಮಾನದ ಪರಿಯಿಲ್ಲವೆ? ಸೀರೆಗೆ ಗತಿ ಇಲ್ಲವೆ ಎಂದು ಶಾಪ ಫಲಿಸುವಂತೆ ಪ್ರಯತ್ನಿಸುವಳು. ನೀಲವೇಣಿ ಸೀರೆ ಉಟ್ಟು ಮಂಡೆ ಬಾಚಿದ ಕಾರಣದಿಂದ ಹರಿಯಾಲ ದೇವಮ್ಮ ಅವಳ ಗಂಡ ಮರಣ ಹೊಂದುವರು. ಮುಂದೆ ನೀಲವೇಣಿ ಅಣ್ಣ-ಅತ್ತಿಗೆಯ ಆಶ್ರಯದಲ್ಲಿ ಬೆಳೆಯುತ್ತಾಳೆ. ಆಕೆಯ ಗುರುವಾದ ಓಜಯ್ಯನ ಕುತಂತ್ರದಿಂದ ನೀಲವೇಣಿಗೆ ತವರಿನ ಆಶ್ರಯವು ತಪ್ಪಿ ಅನೇಕ ಕಷ್ಟವನ್ನು ಅನುಭವಿಸುತ್ತಾಳೆ. ನೀಚ ಉಪಾಧ್ಯಾಯನ ಕಾಮುಕತನದಿಂದ, ಸುಳ್ಳು ನಕ್ಷತ್ರದ ಫಲವಾಗಿ ಘೋರ ಸಂಕಷ್ಟಕ್ಕೆ ಸಿಲುಕುತ್ತಾಳೆ. ಇದರಲ್ಲಿ ದುರ್ಬುದ್ಧಿ ಎನ್ನುವ ಮಂತ್ರಿಯ ಮಗ ಹೆಸರಿಗೆ ತಕ್ಕಂತೆ ಕಾಮುಕನಾಗಿ ನೀಲವೇಣಿಯನ್ನು ಬಯಸುವನು. ಈ ಕಷ್ಟದಿಂದ ಅವಳು ತನ್ನನ್ನು ರಕ್ಷಿಸಿಕೊಳ್ಳುವಳು. ನೀಲಕಂಠ ನೀಲವೇಣಿಯ ಗಂಡನಾಗಿ ನೆನಪಿನಲ್ಲಿ ಅಲೆದಾಡಿದ. ಇಲ್ಲಿ ದುರ್ಬುದ್ಧಿಯ ಸ್ವಾರ್ಥವನ್ನು ಗುರುತಿಸಬಹುದು. ಓಜಯ್ಯ ಮತ್ತು ದುರ್ಬುದ್ಧಿ ಸ್ತ್ರೀಶೋಷಣೆಯ ಹೆಗ್ಗುರುತುಗಳಾಗಿ ಕಂಡುಬರುತ್ತಾರೆ. ಮುಂದೆ ನೀಲವೇಣಿ ತನ್ನವರನ್ನು ಪಡೆಯಲು ಅನ್ನಛತ್ರವೊಂದನ್ನು ಕಟ್ಟಿಸಿ ಅದರಲ್ಲಿ ತನ್ನ ಭಾವಚಿತ್ರವನ್ನು ಹಾಕಿಸಿ "ಚಿತ್ರಪಟವನ್ನು ಯಾರು ನೋಡಿ ಕೋಪ ಮಾಡಿಕೊಳ್ಳುವರೋ ಅವರನ್ನು ಬಂದಿಖಾನೆಗೆ, ದುಃಖ ಪಡುವವರೋ ಅವರನ್ನು ಅರಮನೆಗೆ ಸೇರಿಸಿ ಎಂದು ಕಟ್ಟಪ್ಪಣೆ ಮಾಡುವಳು. ಹೀಗೆ ತನ್ನ ಸಮಸ್ಯೆಗೆ ಉಪಾಯದಿಂದ ಪರಿಹಾರ ಕಂಡುಕೊಂಡು ತನ್ನವರನ್ನು ಸೇರುತ್ತಾಳೆ. ಇದರಲ್ಲಿ

ಇನ್ನೊಂದು ಅಂಶವೆಂದರೆ, ಭೀಮರಾಜನ ಮಗಳು ಮಾಣಿಕ ದೇವಿಯನ್ನು ತನ್ನ ಗಂಡನಿಗೆ ಎರಡನೇ ಮದುವೆ ಮಾಡಿಸುತ್ತಾಳೆ. ಧೈರ್ಯ, ಸ್ಥೈರ್ಯ, ಚುರುಕುತನ, ಬುದ್ದಿವಂತಿಕೆಗೆ ನೀಲವೇಣಿ ಪ್ರಮುಖ ಪಾತ್ರವಾಗಿ ನಿಲ್ಲುತ್ತಾಳೆ.

ಕರಪಾಲ ಮೇಳದಲ್ಲಿ "ನೀಲಕಂಠರೂಪಾವತಿ: ಕಥೆಯು ಗದ್ಯಪ್ರಧಾನವಾಗಿದೆ. ಭಾಮಶೇಖರ ನೆಂಬ ರಾಜ ನೀಲವತಿಯೆಂಬ ಪಟ್ಟಣವನ್ನು ಆಳುತ್ತಿದ್ದ. ಇವನ ಮಗ ನೀಲಕಂಠ. ಪುತ್ರ ಸಂತಾನವಿಲ್ಲದೆ ಕೊರಗುತ್ತಾನೆ. ವಜ್ರಾವತಿಯ ಮೇಲೆ ದಂಡೆತ್ತ ಹೋದಾಗ ಮಾರ್ಗಮಧ್ಯದಲ್ಲಿ ವಿಶ್ರಾಂತಿಗೆ ತಂಗಿದಾಗ ಆಲದಮರದ ಮೇಲೆ ದೇವಲೋಕದ ಎರಡು ಪಕ್ಷಿಗಳು ಮಾನವ ಭಾಷೆಯಲ್ಲಿ "ಇಂದು ಶುಭದಿನ ಶುಭಗಳಿಗೆಯಲ್ಲಿ ಕೂಡಿದರೆ ಸಂತಾನವಾಗುವುದು ಖಂಡಿತ. ನಕ್ಕರೆ ನವರತ್ನ ಸುರಿಯುವ ಅತ್ತರೆ ಮುತ್ತು ಸುರಿಯುವ ಮಗನಾಗುತ್ತಾನೆ" ಎಂದು ಮಾತಾಡಿ ಕೊಂಡವು.[೨೦]

ಎರಡು ಪಕ್ಷಿಗಳ ಮಾತನ್ನು ಕೇಳಿ ನೀಲಕಂಠರಾಜ ಮರಳಿ ಪಟ್ಟಣಕ್ಕೆ ಬಂದು ರೂಪಾವತಿಯಲ್ಲಿ ಪಕ್ಷಿಗಳು ಹೇಳಿದ ವಿಷಯ ಹೇಳಿ ರೂಪಾವತಿಯನ್ನು ಸೇರಿದನು. ತಾನು ಬಂದ ವಿಷಯವನ್ನು ತಂದೆ-ತಾಯಿಗೆ ತಿಳಿಸದೆ ರಹಸ್ಯವಾಗಿಡಲು ರೂಪಾವತಿಯನ್ನು ಬಲವಂತವಾಗಿ ಒಪ್ಪಿಸಿದನು. ರೂಪಾವತಿ ಗರ್ಭಧರಿಸಲು ಅತ್ತೆ-ಮಾವ ಅನುಮಾನಪಟ್ಟು ಕಾಡಿಗೆ ಅಟ್ಟುವುದು ಸೀತೆಯ ನೆನಪನ್ನು ತರುತ್ತದೆ. ರೂಪಾವತಿ ಕಾಡಲ್ಲಿ ಅಲೆದು ವೇಶ್ಯೆಯ ಕೈಗೆ ಸಿಕ್ಕು ಅಲ್ಲಿಯೇ ಗಂಡು ಮಗನನ್ನು ಹೆತ್ತು ಮಗುವನ್ನು ಕಳೆದುಕೊಳ್ಳುತ್ತಾಳೆ. ರೂಪಾವತಿಯ ಮಗು ರಾಣಿ ನೀಲಾದೇವಿಯ ಕೈಗೆ ಸಿಕ್ಕು ಬಿಲ್ವಶೇಖರನೆಂದು ಅವನೇ ರಾಜ್ಯಕ್ಕೆ ರಾಜನಾಗುತ್ತಾನೆ. ತಾಯಿ ಎಂದು ತಿಳಿಯದೆ ರೂಪಾವತಿಯ ರೂಪಕ್ಕೆ ಮರುಳಾಗಿ ಅವಳನ್ನು ಬಯಸುತ್ತಾನೆ. ನಂತರ ವೇಶ್ಯೆಯ ಮನೆಯಲ್ಲಿ ಮೂಕಪ್ರಾಣಿ ಹಸುವಿನಿಂದ ನೀತಿಯನ್ನು ಕಲಿಯುತ್ತಾನೆ. ವೇಶ್ಯೆಯಿಂದ ಸತ್ಯವನ್ನು ತಿಳಿದು ರೂಪಾವತಿಯನ್ನು ತಾಯಿ ಎಂದು ಸ್ವೀಕರಿಸುವ ಮೊದಲು ಪರೀಕ್ಷೆ ಮಾಡುತ್ತಾನೆ. "ಏಳು ಪರದೆಯಿಂದ ತಾಯಿ ಎದೆಹಾಲು ಬಿದ್ದರೆ ಅವಳು ನನ್ನ ತಾಯಿ" ಎಂದಾಗ ತಾಯಿಯ ಎದೆಹಾಲು ತುಂಬಿಬರುತ್ತದೆ. ತಾಯಿ-ಮಗ ಒಂದಾಗುವರು. ಧರ್ಮಛತ್ರದಲ್ಲಿ ರೂಪಾವತಿ ಭಾವಚಿತ್ರವನ್ನು ನೋಡಿ ದುಃಖಿಸುವುದರಿಂದ ನೀಲಕಂಠನೆ ಅವನ ತಂದೆಯೆಂದು ಗೊತ್ತಾಗಿ ತನ್ನ ರಾಜ್ಯಕ್ಕೆ ಮರಳಿ ಸಂತೋಷವಾಗಿ ಬಾಳುವನು. ಹೆಣ್ಣು ಬಂಜೆತನದ ಅಪವಾದದಿಂದ ಹೊರಬರಲು ಎಂತಹ ಕಷ್ಟವನ್ನು ಬೇಕಾದರು ಸಹಿಸುವಳು. ರೂಪಾವತಿಯ ನಡತೆಯ ಬಗ್ಗೆ ಅನುಮಾನ ಪಟ್ಟಾಗಲು, ತವರುಮನ-ಗಂಡನಮನೆ ಆಸರೆ ಇಲ್ಲದೆ ಕಾಡುಪಾಲಾಗಿ ವೇಶ್ಯೆಯ ಮನೆಯಲ್ಲಿ ಇರುವಂತ ಕಷ್ಟ ಒದಗಿದರು ಯಾವುದಕ್ಕೂ ಹೆದರದೆ ಅವೆಲ್ಲವನ್ನು ಎದುರಿಸುತ್ತಾಳೆ.

ಕೌಟುಂಬಿಕ ಜೀವನದ ಕಷ್ಟಗಳನ್ನು ಹೊತ್ತು ಬರುವ ಗುಣಸಾಗರಿ ವಾಸ್ತವಿಕ ಜೀವನಕ್ಕೆ ಸಂಬಂಧಿಸಿದ ಅಂಶಗಳನ್ನೊಳಗೊಂಡ ಮುಗ್ಧ ಹೆಣ್ಣೊಬ್ಬಳ ಅಸಹಾಯಕ ಸ್ಥಿತಿಯಿಂದಾಗಿ ಎದುರಿಸುವ ಅವಮಾನವನ್ನು ಇದರಲ್ಲಿ ಕಾಣಬಹುದು. ಮಲ್ಲಶೆಟ್ಟಿ-ಮಲ್ಲಿಗಮ್ಮರ ಮಗ ಸಂಪನ್ನನ ಜೊತೆ

ಹಿರಿಯರೇ ಒಪ್ಪಿ ಗುಣಸಾಗರಿಯೊಂದಿಗೆ ಬಾಲ್ಯವಿವಾಹ ನಡೆಯುತ್ತದೆ. ದಾಂಪತ್ಯ ಸುಖವನ್ನು ತಿಳಿಯುವ ಮೊದಲೇ ಸಂಪನ್ನ ಗುಣಸಾಗರಿಯನ್ನು ಬಿಟ್ಟು ವ್ಯಾಪಾರಕ್ಕೆಂದು ಹೋಗುತ್ತಾನೆ. ವ್ಯಾಪಾರದ ಮಧ್ಯೆ ವಿಶ್ರಾಂತಿಯಲ್ಲಿದ್ದಾಗ ಗೀಜಗ ದಂಪತಿಯ ಸರಸ-ಸಲ್ಲಾಪ ಕಂಡು ರಹಸ್ಯವಾಗಿ ಬಂದು ಗುಣಸಾಗರಿಯನ್ನು ಸೇರುತ್ತಾನೆ. ಇದರಿಂದಗಿ ಗುಣಸಾಗರಿ ಕಳ್ಳಬಸುರಿನ ಅಪವಾದದಿಂದ ಕಾಡಿಗೆ ಬಂದು ಅನೇಕ ಸಂಕಷ್ಟಗಳಿಗೆ ಗುರಿಯಾಗಿ ಮುದ್ದಣನ ಆಶ್ರಯ ಪಡೆದು ಗಂಡುಮಗುವನ್ನು ಹೆರುತ್ತಾಳೆ. ತನ್ನ ಮಗ ಮಣಿಯಪ್ಪನಿಂದ ಗುಣಸಾಗರಿ ತನ್ನ ಗಂಡನನ್ನು ಮರಳಿ ಸೇರುವಂತಾಗುತ್ತದೆ. ಇಂದಿಗೂ ಸಹ ಗುಣಸಾಗರಿಯ ಹಾಗೆ ಅವಮಾನ, ಅನುಮಾನಕ್ಕೆ ಒಳಗಾಗಿರುವ ಹೆಣ್ಣನ್ನು ಕಾಣಬಹುದು. ಹೆಣ್ಣಿನ ಕಷ್ಟ-ಸುಖ, ಅದನ್ನು ಸರಿಪಡಿಸುವ ದಾರಿ, ಬೆಳಕು ಇವೆಲ್ಲವು ಈ ಕಥನಗೀತೆಯಲ್ಲಿ ಬರುತ್ತವೆ. ಅತ್ತಿಗೆ ತಾಯಿಯ ಸಮಾನ ಎಂಬುದನ್ನು ಮರೆತು ನಾದಿನಿಯುರು ಮೈದುನ ನಿರ್ವಾಣಿ ಗುಣಸಾಗರಿಯ ಮೇಲೆ ಕಳ್ಳ ಬಸುರಿ ಆರೋಪ ಹೊರಿಸಿ ಅವಮಾನಮಾಡಿ ನಿಂದಿಸುವಂತ ಸನ್ನಿವೇಶಗಳನ್ನು ಸಮಾಜದಲ್ಲಿ ಸಾಕಷ್ಟು ಕಾಣಬಹುದು. ಗಂಡ ಮಾಡಿದ ತಪ್ಪಿನಿಂದ ತನ್ನ ಪತಿವೃತಾ ಧರ್ಮಕ್ಕೆ ಸಂಕಷ್ಟ ಒದಗಿದರು ಅದೆಲ್ಲವನ್ನು ನಿಭಾಯಿಸುವ ಗುಣಸಾಗರಿ ವಾಸ್ತವವಾಗಿ ಕಾಣುತ್ತಾಳೆ.

ದಿನನಿತ್ಯದ ಜೀವನದಲ್ಲಿ ಅತ್ತೆ-ಸೊಸೆಯರ ಜಗಳ ಕ್ಷುಲ್ಲಕ ಕಾರಣವಾಗಿದ್ದರು, ಮಾತಿಗೆ ಮಾತು ಬೆಳೆದು ಅತ್ತೆ ಮನೆಯಿಂದ ಹೊರಬರುವ ಸೊಸೆಯ ಸ್ವಾಭಿಮಾನ ಈ ಕಥನಗೀತೆಯಲ್ಲಿ ಎದ್ದು ಕಾಣುತ್ತದೆ. ಅತ್ತೆ-ಸೊಸೆ ಜಗಳ ಎಲ್ಲ ಕಾಲದಲ್ಲಿ ಇರುವಂತದ್ದು. ಆದರೆ ಇಲ್ಲಿರುವ ಅತ್ತೆ ಸ್ವಲ್ಪ ಕಠಿಣ ಹೃದಯಿ, ಮಂಡತನದವಳು. ನೀರನ್ನು ತರಲು ಹೋದ ಸೊಸೆ ಉತ್ತರದೇವಿ ತಡವಾಗಿ ಬಂದಳು. ಜೊತೆಗೆ ಕೊಡವನ್ನು ಒಡೆದುಕೊಂಡು ಬಂದಳು. ಈ ಕಾರಣಕ್ಕಾಗಿ ಅತ್ತೆ ಸೊಸೆಯನ್ನು ಅನುಮಾನಿಸಿ ಮಗನಿಗೆ ಹೆಂಡತಿಯನ್ನು ಬಿಡು ಎಂದು ಬಲವಂತ ಮಾಡುತ್ತಾಳೆ. ತಾಯಿಯನ್ನು ಎದುರಿಸಲು ಸಾಧ್ಯವಾಗದೆ ಅಸಹಾಯಕನಾಗಿ ಹೇಡಿತನವನ್ನು ಪ್ರದರ್ಶಿಸುತ್ತಾನೆ. ಇಲ್ಲಿ ಹೆಣ್ಣನು ಭೋಗದ ಮತ್ತು ಮಾರಾಟದ ವಸ್ತುವನ್ನಾಗಿ ಕಂಡರು, ಅತ್ತೆ, ಗಂಡನ ಸ್ವಭಾವದಿಂದ ಬೇಸತ್ತ ಉತ್ತರದೇವಿ ತವರಿಗೆ ಹೊರಡುತ್ತಾಳೆ. ತನ್ನ ಸಂಕಟವನ್ನು ತಾನೇ ಸಾಕಿ ಬೆಳೆಸಿದ ತೆಂಗು, ಅಡಿಕೆ, ನಿಂಬೆ, ಬಾಳೆ ಗಿಡಗಳಲ್ಲಿ ಹೇಳುವ ಮೂಲಕ ಇಂಥ ಕ್ರೂರ ಅತ್ತೆಗೆ ಫಲಕೊಡಲೇಕೆ ನೀವು ಉರಿದು ಹೋಗರಿ ಎನ್ನುತ್ತ ತನ್ನ ರೋಷವನ್ನು ವ್ಯಕ್ತಪಡಿಸುತ್ತಾಳೆ. ತವರಿನಿಂದ ತಂದ ಹಸು, ಎಮ್ಮೆ, ಕುರಿ, ಮೇಕೆಗಳಲ್ಲಿ ತನ್ನ ದುಃಖ ಹೇಳುತ್ತಾ ನೀವು ಅಡಗಿ ಹೋಗಿರಿ, ಈ ಮನೆಯು ನಾಶವಾಗಲಿ ಎಂದು ಸೇಡನ್ನು ಹಸು, ಕರು, ಸಸಿಗಳಲ್ಲಿ ಹೇಳುತ್ತಾಳೆ. ಪುರುಷ ಪ್ರಧಾನ ಸಮಾಜದೊಳಗೆ ಸ್ತ್ರೀ ಶೋಷಣೆ ಸ್ತ್ರೀಯಿಂದಲೂ, ಪುರುಷನಿಂದಲೂ ಅಷ್ಟೇ ಅಲ್ಲದೆ ತಂದೆ-ತಾಯಿ, ಗಂಡ, ಮಕ್ಕಳಿಂದಲೂ ಶೋಷಣೆಯಾಗುತ್ತದೆಂಬುದು ತಿಳಿಯುತ್ತದೆ. ಉತ್ತರದೇವಿ ಆಸರೆಯಿಲ್ಲದೆ ತವರಿಗೆ ಬಂದಾಗ ತಂದೆ ಕೂಡಾ ಸ್ವಾರ್ಥಿಯಾಗಿ ಮಗಳಿಗೆ ಆಶ್ರಯ ಕೊಡದೆ ಕಳಿಸುತ್ತಾನೆ. ಉತ್ತರದೇವಿಗೂ ಬಂಧು ಬಳಗ ಯಾರ ಆಶ್ರಯವು ದೊರೆಯದೆ ತಾಯಿಯ ಬಳಿ

ಬರುತ್ತಾಳೆ. ಅಲ್ಲಿಯು ನಿರಾಶೆಯಾಗಿ ನಿಂತಾಗ 'ಸಾಯಿ' ಎಂದು ತಾಯಿ ಹೇಳದೆ "ಉತ್ತರ ಮಳೆಯಾಗಿ ಹೋಗು" ಎನ್ನುವಳು. ಆಗ ಉತ್ತರದೇವಿ ಯಾರ ಆಶ್ರಯವಿಲ್ಲದೆ ಕಂಗಾಲಾಗಿ ತನ್ನ ಮಕ್ಕಳೊಂದಿಗೆ ನೀರಪಾಲಾಗುತ್ತಾಳೆ. ದಿನನಿತ್ಯದ ಜೀವನದಲ್ಲಿ ಸಾಮಾನ್ಯ ಸಣ್ಣ ವಿಷಯಗಳೆ ವಿರಸಕ್ಕೆ ಕಾರಣವಾಗಿರಬಹುದಾದಂತೆ ಶೀಲವನ್ನು ಶಂಕಿಸುವ ನುಡಿಗಳು ಹೆಣ್ಣಿನ ಸ್ವಾಭಿಮಾನವನ್ನು ಹೇಗೆ ಕೆರಳಿಸಿ ಸಂಸಾರ ಹಾಳಾಗುವಂತೆ ಮಾಡುತ್ತವೆ ಎಂಬುದು ಅರಿವಾಗುತ್ತದೆ. ನಮ್ಮ ವ್ಯವಸ್ಥೆಯು ಹೆಣ್ಣಿನ ದುರಂತ ಜೀವನಕ್ಕೆ ಮುಖ್ಯ ಕಾರಣ. ಮಗಳು ಕರುಳಿನ ಕುಡಿ, ಸೊಸೆ ಬೇರೆಯವರ ಕುಡಿ ಈ ವ್ಯತ್ಯಾಸದಿಂದ ಇವತ್ತಿಗೂ ಸಹ ಸಮಾಜದಲ್ಲಿ ಒಂದಲ್ಲ ಒಂದು ರೀತಿಯ ಜಗಳ, ಕದನ, ದುರಂತ ಅತ್ತೆ-ಸೊಸೆಯರ ನಡುವೆ ನಡೆಯುತ್ತಲೇ ಇವೆ.

ಜನಪದ ವಾಸ್ತವಿಕೆ ಕಥನಗೀತೆಗಳಲ್ಲಿ **"ಬಂಜೆ ಹೊನ್ನಮ್ಮ"** ಬಂಜೆತನದ ನೋವನ್ನು ಚಿತ್ರಿಸುವ ಜನಪದ ಕಾವ್ಯ. ಮನುಷ್ಯನಿಗೆ ಅದರಲ್ಲೂ ಹೆಣ್ಣಿಗೆ ಏನೆಲ್ಲಾ ಸುಖ-ಸೌಲಭ್ಯ, ಸಂಪತ್ತು ಇದ್ದರು ಮಕ್ಕಳಿಲ್ಲದಿದ್ದರೆ ಜೀವನ ಮರುಭೂಮಿಯಂತೆ ಎಂಬ ಅಭಿಪ್ರಾಯ ಈಗಲೂ ಇದೆ. ದಾಂಪತ್ಯ ಜೀವನ ಸಫಲವಾಗಬೇಕಾದರೆ ಸಂತಾನವಾಗಲೇ ಬೇಕು. ಬಂಜೆತನ ಒಂದು ಶಾಪ ಎಂದರೆ ತಪ್ಪಾಗಲಾರದು. ಇಂಥದೊಂದು ಶಾಪಕ್ಕೆ ಗುರಿಯಾಗಿ ನೋವನ್ನು ಅನುಭವಿಸಿದ ಕಥೆಯನ್ನು ಹೊನ್ನಮ್ಮನ ಜೀವನದಲ್ಲಿ ನೋಡಬಹುದು. ಹೊನ್ನಮ್ಮ ಏಳುಜನ ಅಕ್ಕತಂಗಿಯರಲ್ಲಿ ಕೊನೆಯವಳು, ಎಲ್ಲರಿಗೂ ಲಗ್ನವಾಗಿ ಮಕ್ಕಳಿದ್ದವು ಆದರೆ ಹೊನ್ನಮ್ಮನಿಗೆ ಮಾತ್ರ ಮಕ್ಕಳಾಗದೆ ಬಂಜೆಯೆನಿಸಿಕೊಂಡು ಮಕ್ಕಳನ್ನು ಪಡೆಯಲು ನಾನಾ ವಿಧವಾದ ಸಂಕಷ್ಟಗಳನ್ನು ಅನುಭವಿಸುತ್ತಾಳೆ. ಬಂಜೆತನದಿಂದ ಮುಕ್ತಿ ಪಡೆಯಲು ಅನೇಕ ಪುಣ್ಯದ ಕಾರ್ಯಗಳನ್ನು ಮಾಡುತ್ತಾ, ಬಾವಿಯನ್ನು ತೆಗೆಸಿ, ಕಿತ್ತಲೆ, ನಿಂಬೆ ತೋಟವನ್ನು ಬೆಳೆಸುವಳು. ಅಲ್ಲಿಗೆ ಬಂದ ಯಾವ ಹಕ್ಕಿ-ಪಕ್ಷಿಗಳು ನೀರು ಕುಡಿಯದೆ, ಹಣ್ಣು ತಿನ್ನದೆ ನಾವು ಬಂಜೆಯರಾಗುವೆವು ಎಂದು ಹೊರಟುಹೋಗುತ್ತವೆ. ಹೊನ್ನಮ್ಮ ಗಂಗೆ ಪೂಜೆಗೆ ಬಾವಿಗೆ ಹೋದರೆ ಬಾವಿಯ ನೀರು ಬತ್ತುವುದು. ಅಕ್ಕ-ತಂಗಿಯರು ಅವಳನ್ನು ಬಂಜೆ ಎಂದು ಹಿಯ್ಯಾಳಿಸಿ ತಮ್ಮ ಮಕ್ಕಳನ್ನು ಕೊಡುವುದಿಲ್ಲ. ಇದರಿಂದ ಕೋಪಗೊಂಡು ಹೊನ್ನಮ್ಮ ಅಕ್ಕಂದಿರ ಮಕ್ಕಳು 'ಹುಳಿತು' ಹೋಗಲಿ ಎಂದು ಶಾಪಹಾಕುವಳು. ಬಂಜೆತನದಿಂದ ಸೋತು ಸಾಯಲು ಪ್ರಯತ್ನಿಸಿ ಸಫಲವಾಗದೆ ಶಿವನನ್ನು ಮೊರೆಹೋಗುತ್ತಾಳೆ. ಹೊನ್ನಮ್ಮನ ಉಗ್ರವಾದ ತಪಸ್ಸಿಗೆ ಶಿವನೊಲಿದು ಗಂಡು ಮಗುವಿನ ತಾಯಿಯಾಗುತ್ತಾಳೆ. ಬಂಜೆತನದ ಭೀಕರತೆ, ಮಾನಸಿಕ ಹೊಯ್ದಾಟ, ಹಕ್ಕಿ-ಪಕ್ಷಿಗಳು, ಸಮಾಜ ಕಾಣುವ ಹೀನತೆ ಅತ್ಯಂತ ಕ್ರೂರ ವಾಗಿದೆ. ಎನಿದ್ದರೇನು ಮಕ್ಕಳಿಲ್ಲದಿದ್ದರೆ ಹೆಣ್ಣಿನ ಜೀವನ ಕಾಡುಪಾಲೇ ಸರಿ ಎನ್ನುವಂತೆ ಅರ್ಥವನ್ನು ಹೊನ್ನಮ್ಮನ ಕತೆ ಹೇಳುತ್ತದೆ. ಬಂಜೆತನಕ್ಕೆ ಹೆಣ್ಣು ಮಾತ್ರವಲ್ಲ, ಪುರುಷನು ಕಾರಣ ಎನ್ನುವುದು ಸತ್ಯ. ಆದರೆ ಸಮಾಜ ಗುರುತಿಸುವುದು ಹೆಣ್ಣನ್ನು. ಬಂಜೆತನ ಕೇವಲ ಅಂದಿನ ಸಮಸ್ಯೆಯೇನ್ನಲ್ಲ. ಇದು ನಿರಂತರವಾಗಿ ಬಂದಿರುವ ಸಮಸ್ಯೆಯೇ ಸರಿ. ನಾಗರಿಕ ಸಮಾಜದಲ್ಲೂ ಮಕ್ಕಳಿಲ್ಲದ ಹೆಣ್ಣನ್ನು ಉಪೇಕ್ಷೆ ಮಾಡುವುದನ್ನು ಕಾಣಬಹುದು. ಬಂಜೆತನದ ಕಾಠಿಣ್ಯವನ್ನು ಈ

ಕಥೆ ಎತ್ತಿಹೇಳುತ್ತದೆ. ಹಿಂದಿನ ಜನ್ಮದ ಕರ್ಮದ ಫಲವೆ ಬಂಜೆತನ ಎಂಬ ಅಂಶವನ್ನು ಸಹ ಇದರಲ್ಲಿ ಕಾಣಬಹುದು. ಕೊನೆಗೆ ದೈವ ಕೃಪೆಯಿಂದ ಹೊನ್ನಮ್ಮನ ಜೀವನ ಸುಖವಾಗುತ್ತದೆ.

ಪ್ರಾಚೀನದಿಂದ ಇಂದಿನವರೆಗೂ ಮೇಲು ವರ್ಗದವರು ಕೆಳವರ್ಗದವರನ್ನು ಶೋಷಣೆ ಮಾಡುವುದನ್ನು ಹಳ್ಳಿಗಳಲ್ಲಿ ಕಾಣಬಹುದು. ಸಾಕ್ಷರತೆಯ ಪ್ರಭಾವದಿಂದ ಸ್ವಲ್ಪಮಟ್ಟಿಗೆ ಶೋಷಣೆ ಕಡಿಮೆಯಾಗಿದೆ. ಈ ಕಥೆಯಲ್ಲಿ ಬರುವ **"ಬಯಲು ಸೀಮೆಯ ಗೌಡನ ಮಗಳು"** ಅಹಂಕಾರ, ದೌರ್ಜನ್ಯದ ಪ್ರತೀಕವಾಗಿದ್ದಾಳೆ. ಬಡವನಾದ ಗೊಲ್ಲರ ಹುಡುಗನೊಂದಿಗೆ ಚೆಲ್ಲಾಟವಾಡಲು ಇಷ್ಟಪಡುತ್ತಾಳೆ. ಆದರೆ ಗೊಲ್ಲರ ಹುಡುಗ ವಿನಯದಿಂದ ತಮ್ಮ ನಡುವೆ ಇರುವ ಅಂತರವನ್ನು ತಿಳಿಸಿದರು ಅರ್ಥಮಾಡಿಕೊಳ್ಳದೆ ದುರಂಹಕಾರದಿಂದ ವಿನೋದವಾಡಲು ಒತ್ತಾಯಿಸಿ ಹೆದರಿಸುತ್ತಾಳೆ. ಗೊಲ್ಲರ ಹುಡುಗ ಒಪ್ಪದಿದ್ದಾಗ ತಾನೆ ಬಳೆಗಳನ್ನು ಒಡೆದು ಮೈ–ಕೈ ಪರಚಿಕೊಂಡು ಮೈಯಮೇಲಿನ ಬಟ್ಟೆ ಪರಪರನೆ ಹರಿದುಕೊಂಡು ಹೀನಸ್ಥಿತಿಯಲ್ಲಿ ತನ್ನ ತಂದೆಯ ಹತ್ತಿರ ಸುಳ್ಳು ಚಾಡಿ ಮಾತನ್ನು ಹೇಳುತ್ತಾಳೆ. ಗೌಡ ಹಿಂದುಮುಂದು ಆಲೋಚಿಸದೆ ಮಗಳ ಸ್ಥಿತಿಯನ್ನು ಕಂಡು ಕೋಪದಿಂದ ಅವಳ ಮಾತನ್ನು ನಂಬಿ ಸುರಹೊನ್ನೆ ಮರದ ಅಡಿಯಲ್ಲಿ ಕುಳಿತ ಗೊಲ್ಲರ ಹುಡುಗನ ತಲೆಯನ್ನು ಕಡಿಸುತ್ತಾನೆ. ಮಗಳಿಗೆ ತಲೆಯನ್ನು ತಂದು ಕೊಡುತ್ತಾನೆ. ಇದನ್ನು ಕಂಡು ಅವಳ ಮನಸ್ಸು ಆನಂದದಿಂದ ನಲಿಯುತ್ತದೆ. ಶ್ರೀಮಂತರು ಬಡವರನ್ನು ಹೇಗೆ ಆಟದ ವಸ್ತುವಾಗಿ ಉಪಯೋಗಿಸುತ್ತಾರೆ ಎಂಬುದಕ್ಕೆ ಈ ಕಥೆ ನಿದರ್ಶನವಾಗಿದೆ. ಕಾಳುನಾಯಿ–ಜೂಲುನಾಯಿಗಳೆರಡು ಶಿರವನ್ನು ಮರಳಿತಂದು **"ಮರುಜವಳಿ"** ಕಡ್ಡಿಯಿಂದ ಮಂತ್ರಿಸಿ ತಮ್ಮ ಒಡೆಯನನ್ನು ಬದುಕಿಸುತ್ತವೆ. ಮನುಷ್ಯನಿಗಿಂತ ಪ್ರಾಣಿಗಳೇ ಮಾನವೀಯ ಮೌಲ್ಯವನ್ನು ಮೆರೆಯುತ್ತವೆಂಬುದನ್ನು ಈ ಕಥೆಯಲ್ಲಿ ವ್ಯಕ್ತಪಡಿಸಲಾಗಿದೆ. ಈ ಕಥೆಯಲ್ಲಿ ಹೆಣ್ಣಿನ ಹಟಸಾಧನೆ, ಶ್ರೀಮಂತ ಬಡವರ ತಾರತಮ್ಯ, ಅಹಂಕಾರ, ದೌರ್ಜನ್ಯ ಬರುವ ಈ ಎಲ್ಲ ಅಂಶಗಳು ಇಂದಿಗೂ ಸಮಾಜದಲ್ಲಿ ಕಾಣುತ್ತೇವೆ. ಗೌಡ ಸ್ವಪ್ರತಿಷ್ಠೆ, ಅಹಂಕಾರ, ದರ್ಪಕ್ಕೆ ಸಂಕೇತವಾಗಿ ಕಂಡರೆ ಅವನ ಮಗಳು ವಂಶದ ಮುಂದುವರಿಕೆಗೆ ಸಾಕ್ಷಿಯಾಗುತ್ತಾಳೆ. ತ್ಯಾಗ, ಮಮತೆ, ವಾತ್ಸಲ್ಯ, ಪ್ರೀತಿಗೆ ಹೆಸರಾದ ಹೆಣ್ಣು ಹಟ, ನಿರಾಶೆಯ ದ್ವೇಷದಿಂದ ಬಡವರ ಗೊಲ್ಲ ಹುಡುಗನ ಪ್ರಾಣದ ಜೊತೆ ಆಟವಾಡುವ ಕ್ರೂರ ಹೆಣ್ಣಾಗಿ ಇಲ್ಲಿ ಬಿಂಬಿತವಾಗುತ್ತಾಳೆ.

ಜೀವನದಲ್ಲಿ ಮನುಷ್ಯನ ಆಸೆಗಳು, ದ್ವೇಷಗಳು ಹೇಗೆ ಕುಟುಂಬವನ್ನು ನಾಶಮಾಡುತ್ತವೆ ಎಂಬುದನ್ನು ಜನಪದರ ಕಥನಗೀತೆಯಲ್ಲಿ ಕಾಣಬಹುದು. **ಜಾಗಾಲೆ** ಮುಗ್ಧ ಹೆಣ್ಣು ಮೂರು ತಿಂಗಳ ಮಗುವಾಗಿದ್ದಾಗಲೇ ದೇವಮ್ಮನ ಆರು ತಿಂಗಳ ಮಗ ರಂಗಯ್ಯನ ಜೊತೆ ಮದುವೆ ಆಗಿರುತ್ತದೆ. ರಂಗಯ್ಯ ದಂಡಿಗೆ ಹೋಗುವಂತ ಸಂದರ್ಭ ಬರುವುದು ಆಗ ಹೆಂಡತಿ ಜಾಗಾಲೆಯನ್ನು ಕರೆಸುವಂತೆ ತಾಯಿಗೆ ಹೇಳುತ್ತಾನೆ. ದೇವಮ್ಮ ಮಗನ ಈ ಮಾತು ಕೇಳಿ ಹೊಟ್ಟೆಕಿಚ್ಚಿನಿಂದ ಹೆಣ್ಣಿಗೆ ಹೆಣ್ಣೆ ಶತ್ರು ಎನ್ನುವಂತೆ ನಡೆದುಕೊಳ್ಳುತ್ತಾಳೆ. ಮಗನ ಆಸೆಯಂತೆ ಸೊಸೆ ಜಾಗಾಲೆಯನ್ನು ಕರೆತರಲು ದೇವಮ್ಮ ಹೊರಟು ಬರುತ್ತಾಳೆ. ಅತ್ತೆಯನ್ನು ನೋಡಿ ಸೊಸೆ ಜಾಗಾಲೆ ಪ್ರೀತಿ,

ಆದರದಿಂದ ಮುತ್ತಿನಾರತಿ ಎತ್ತಿ ನಮಸ್ಕರಿಸುವಳು. ಆದರೆ ಅತ್ತೆ ಕಾಲಲ್ಲಿ ಒದ್ದು ಕಣ್ಣಿನಲ್ಲಿ ತನ್ನ ಕೋಪವನ್ನು ವ್ಯಕ್ತಪಡಿಸುತ್ತಾಳೆ. ಜಾಗಾಲೆ ತವರಿನಿಂದ ಹೊರಟು ಅತ್ತೆಯ ಜೊತೆ ಗಂಡನ ಮನೆಗೆ ಬರುತ್ತಾಳೆ. ಇಲ್ಲಿಂದ ಅತ್ತೆಯ ಕಾಟ ಶುರುವಾಗಿ ಜಾಗಾಲೆಯ ಕಷ್ಟ ಹೇಳತೀರದು. ರಂಗಯ್ಯ ಮೃದು ಸ್ವಭಾವದವನು ತನ್ನ ತಾಯಿ ತನ್ನ ಹೆಂಡತಿ ಜಾಗಾಲೆಗೆ ಕೊಡುವ ಕಷ್ಟ ತಿಳಿದರು ಏನು ಮಾಡಲಾಗದೆ ಅಸಹಾಯಕನಾಗಿ ಕಂಡುಬರುತ್ತಾನೆ. ಜಾಗಾಲೆಗೆ ತನ್ನ ಗುರುತಿಗಾಗಿ "ಮುದ್ರೆ ಉಂಗುರವನ್ನು ಕೊಟ್ಟು ಇದು ನಿನ್ನ ಬೆರಳಿನಿಂದ ಬಿದ್ದು ಹೋದರೆ, ನಿನ್ನ ಗಂಡ ಸತ್ತ ಎಂದು ತಿಳಿ, ನಿನ್ನ ಬೆರಳಿನಲ್ಲಿದ್ದರೆ ಬದುಕಿದ್ದಾನೆಂದು ತಿಳಿ ಎಂದು ಹಾರೈಸಿ ದಂಡಿಗೆ ತೆರಳುತ್ತಾನೆ. ಗಂಡ ಹೋದ ಗಳಿಗೆಯಿಂದ ಅತ್ತೆ-ನಾದಿನಿ ಬಹಳ ಕ್ರೂರಿಗಳಾಗಿ ಜಾಗಾಲೆಯನ್ನು ಪರಿಪರಿಯಾಗಿ ಪೀಡಿಸಿ-ಕಾಡಿಸಿ, ಹಿಂಸಿಸುತ್ತಾರೆ. ನಾದಿನಿ ತನ್ನ ಚಿಕ್ಕ ಅಣ್ಣನೊಂದಿಗೆ ಅತ್ತಿಗೆಗೆ ಸಂಬಂಧ ಕಟ್ಟಿ ತಾನು ಹೆಣ್ಣು ಎನ್ನುವುದನ್ನು ಮರೆತು ಕಾಟ ಕೊಡುತ್ತಾಳೆ. ಕೊನೆಗೆ ದೈವಾನುಗ್ರಹದಿಂದ ಶಿವ-ಪಾರ್ವತಿಯರ ಕೃಪೆಯಿಂದ ಮತ್ತೆ ತನ್ನ ಗಂಡ ರಂಗಯ್ಯನನ್ನು ಸೇರಿ ಸುಖದಿಂದ ಬಾಳುತ್ತಾಳೆ. ಇಂಥ ಒಂದು ದೇವರ ಸಹಾಯದ ಸಂದರ್ಭವನ್ನು ನಾವು ಆಧುನಿಕ ಯುಗದಲ್ಲಿ ಕಾಣುವುದಿಲ್ಲ. ಆದರೆ ದೇವರ ಮೇಲಿನ ನಂಬಿಕೆ ನಮ್ಮ ನಾಗರೀಕ ಜನರಲ್ಲೂ ಇಂದಿಗೂ ಸಹ ಕಂಡುಬರುತ್ತದೆ. ಪುರುಷನೇ ಪ್ರಧಾನವಾಗಿದ್ದರು ಇಲ್ಲಿ ಸ್ತ್ರೀಯರ ಶೋಷಣೆ ಸ್ತ್ರೀಯಿಂದಲೇ ನಡೆಯುತ್ತದೆ ಎನ್ನುವುದನ್ನು ಈ ಕಥನಗೀತೆಯಿಂದ ನಾವು ಅರಿಯಬಹುದು.

ಕಲಿಯುಗದಲ್ಲಿ ಚಾರಿತ್ರ್ಯ ಹೀನವಾಗಿ ವಿಕೃತ ಕಾಮಕ್ಕೆ ಸಿಕ್ಕು ನರಳುವ ಹೆಣ್ಣೊಬ್ಬಳನ್ನು ಕುರಿತು "ಕಲಿಯುಗದ ಬಾಲೆ" ಕಥನಗೀತೆಯಲ್ಲಿ ಕಾಣಬಹುದು. ನಮ್ಮ ಸಂಸ್ಕೃತಿಯ ಚೌಕಟ್ಟಿನ ವ್ಯಾಪ್ತಿಯಲ್ಲಿ ಬೆಳೆದು ಬಂದಿರುವ ಸ್ತ್ರೀಯರಲ್ಲಿ ಚಾರಿತ್ರ್ಯ, ಶೀಲ, ಪಾವಿತ್ರ್ಯತೆ, ಮಮತೆ, ತ್ಯಾಗ, ಸಹನೆ, ಪ್ರೀತಿ, ನಡತೆ ಹಲವಾರು ಗುಣಗಳು ಆದರ್ಶಗಳೆಂದು ಇಂದಿಗೂ ಸಹ ಕಾಣುತ್ತೇವೆ. ಜೀವನದಲ್ಲಿ ನಡೆದ ಘಟನೆಗಳಿಂದಲೋ ಅಥವಾ ಪರಿಸರದಲ್ಲಾದ ವ್ಯತ್ಯಾಸದಿಂದ ಕೆಲವೊಂದು ಹೆಣ್ಣುಗಳ ಚಾರಿತ್ರ್ಯ ಹೀನರಾಗಿ ಬಾಳುವುದನ್ನು ವಾಸ್ತವ ಸಮಾಜದಲ್ಲಿ ಕಾಣಬಹುದು. ಆರುಮಂದಿ ಅಕ್ಕ-ತಂಗಿಯರಲ್ಲಿ ಕಿರಿಯವಳಾದ ಬಾಲೆಗೆ ಎರಡು ಗಂಡು ಮಕ್ಕಳು, ಒಳ್ಳೆಯ ಗಂಡ, ಸಂಸಾರ ಇರುತ್ತದೆ. ಬಾಲೆಯ ಗಂಡ ಸಿಪಾಯಿ ದಂಡಿಗೆ ಹೋಗುವ ಸಂದರ್ಭ ಒದಗಿಬರುತ್ತದೆ. ಆಗ ಗಂಡ ತನ್ನ ಹೆಂಡತಿಗೆ ನಾನು ದಂಡಿಗೆ ಹೋಗುತ್ತಿನಿ, ಮಕ್ಕಳು ಜೋಪಾನ, ಮನೆಕಡೆ ಜೋಕೆ ಎಂದು ಹೇಳಿ ಹೊರಡಲು ಇತ್ತ ಬಾಲೆ ಬೇರೊಬ್ಬನನ್ನು ಸೇರಲು ಇಷ್ಟಪಡುತ್ತಾಳೆ. ತಂದೆ ಇಲ್ಲದ ಸಮಯದಲ್ಲಿ ತಾಯಿ ಬೇರೆ ಪುರುಷನೊಂದಿಗೆ ಸರಸವಾಡುವುದನ್ನು ಕಂಡ ಮಕ್ಕಳು ಬಾಲೆಯನ್ನು ಪ್ರಶ್ನಿಸುವರು. ಇದರಿಂದ ಕೋಪಗೊಮಡ ತಾಯಿ ಸಣ್ಣ ನೂಲಿನ ಹಗ್ಗ ತಂದು ಕಾಲು ಬಿಗಿದು ಮಕ್ಕಳನ್ನು ಹಿಂಸಿಸುತ್ತಾಳೆ. ಹೆತ್ತಮಕ್ಕಳನ್ನು ಕೊಂದು ಗೆಳೆಯನ ಜೊತೆ ಸರಸವಾಡುತ್ತಾಳೆ. ಮಕ್ಕಳು ಸತ್ತ ಸುದ್ದಿಯನ್ನು ಸ್ವಪ್ನದಲ್ಲಿ ಕಂಡು ತಂದೆ ದಂಡಿನಿಂದ ಭಯದಿಂದ ಬಂದು ಹೆಂಡತಿಯನ್ನು ಕೇಳಿದಾಗ ಸುಳ್ಳು ಹೇಳುವುದರ ಜೊತೆಗೆ ಗಂಡನಿಗು ವಿಷ ಉಣಿಸಿ ಕೊಲ್ಲುತ್ತಾಳೆ. ಕಲಿಯುಗ ಬಾಲೆಯ ದುಷ್ಟತನ ಕಂಡು ಶಿವನು, ಸಿಪಾಯಿ ಮತ್ತು ಅವನ ಮಕ್ಕಳನ್ನು ಬದುಕಿಸಿ,

ಕಲಿಯುಗ ಬಾಲೆಗೆ ಸುಣ್ಣದ ಗುಂಡಿಗೆ ಹಾಕಿ ಜೀವಂತ ಸುಟ್ಟು ಹಾಕುತ್ತಾನೆ. ಕಲಿಯುಗ ಬಾಲೆಯಂತ ಕುಟೀಲ ಹೆಣ್ಣು, ನೀತಿಗೆಟ್ಟವಳನ್ನು ದೈವವು ಕೈಬಿಡುತ್ತದೆ ಎನ್ನುವುದು ಈ ಕಥನಗೀತೆಯಲ್ಲಿ ಕಂಡುಬರುತ್ತದೆ. ಇಲ್ಲಿ ಲೈಂಗಿಕ ಅತೃಪ್ತಿ, ವಿಕೃತ ಕಾಮವನ್ನು ಹೆಣ್ಣೊಬ್ಬಳಲ್ಲಿ ಕಾಣಬಹುದು. ಅಕಸ್ಮಾತಾಗಿ ಲೈಂಗಿಕ ತೃಪ್ತಿ ಸಿಕ್ಕಿದ ಸಂದರ್ಭದಲ್ಲಿ ಏನೇ ಅಡತಡೆಗಳಿದ್ದರು ದ್ವೇಷ ಬಂದರು ತನ್ನ ಸ್ಥಾನ-ಮಾನಕ್ಕೆ ಸಂಬಂಧಿಸಿದಂತೆ ಭಯ ಹುಟ್ಟುತ್ತದೆ. ಈ ಕಾರಣದಿಂದ ಪ್ರತೀಕಾರ ಕೈಗೊಳ್ಳುವುದು ಸಹಜವಾಗಿ ಕಂಡುಬರುತ್ತದೆ. ಇದೇ ಕೆಲಸವನ್ನು ಪುರುಷನೇ ಕಲಿಯುಗದವನಾಗಿ ಮಾಡಿದ್ದರೆ ಪುರುಷನ ವ್ಯಕ್ತಿತ್ವದ ಇನ್ನೊಂದು ಮುಖವೆಂದು ತಿಳಿಯುತ್ತಿದ್ದರು, ಹೆಣ್ಣು ಮಾಡಿದರೆ ಕಳಂಕಿನಿ, ಕುಲಟೆ ಎಂದು ಅಸಹ್ಯವಾಗಿ ಕಂಡು ಪತ್ರಿಕೆ ಮಾಧ್ಯಮಗಳಲ್ಲಿ ಪ್ರಸಾರವಾಗುತ್ತಿದ್ದಳು.

ಜನಪದ ಸಾಹಿತ್ಯದಲ್ಲಿ ಜನಪದರು ಆಚರಿಸುವ ಪದ್ಧತಿ, ಸಂಪ್ರದಾಯಗಳನ್ನು ಕಾಣಬಹುದು. ಸಹಗಮನ ಆಚರಣೆಗೆ ಸಂಬಂಧಿಸಿದಂತೆ ಕಥನಗೀತೆಗಳನ್ನು ಜನಪದ ಸಾಹಿತ್ಯದಲ್ಲಿ ತಿಳಿಯಬಹುದು. ಗಂಡ ಸತ್ತಮೇಲೆ ತನ್ನ ಜೀವನ ಅತ್ಯಂತ ದುರ್ಭರ, ಅಮಂಗಳೇ, ಸಮಾಜ ನಡೆಸಿಕೊಳ್ಳುವ ರೀತಿ ನೀತಿ ಇಂಥ ಘಟನೆಗಳ ಅರಿವು ಒಂದುಕಡೆ ಆದರೆ, ಪರಲೋಕದಲ್ಲು ಗಂಡನ ಜೊತೆ ಬಾಳಬಹುದು ಎನ್ನುವ ನಂಬಿಕೆಯಿಂದ ರಾಜಮನೆತನದವರಾಗಲಿ, ವೇದ ಪುರಾಣ, ಶಾಸ್ತ್ರ, ಶಾಸನ, ಕಾವ್ಯಗಳಲಿ, ಜನಪದರಲ್ಲಿ ಬರುವ ಎಲ್ಲ ಮಹಿಳೆಯು ಮೃತನಾದ ಗಂಡನ ಜೊತೆ ಚಿತೆಯೇರಿ ಸಹಗಮನ ಮಾಡುತ್ತಿದ್ದರು. ಇಂಥ ಸತಿ ಆಚರಣೆಯಲ್ಲಿ ಬರುವ "ನಾಗವ್ವಳ" ಆದರ್ಶ ಜೀವನ ವಿವಾಹಕ್ಕೆ ಮುಂಚಿನೆ ಹರಯದಲ್ಲಿ ಸಹಗಮನ ಮಾಡುವ ದಾರುಣತೆ ಈ ಕಥನಗೀತೆಯಲ್ಲಿ ಕಾಣಬಹುದು. ಕಾಡುಗೊಲ್ಲರ ಹುಡುಗಿ ನಾಗವ್ವಳನ್ನು ನವಿಲೂರಿನ ಮುತ್ತನ ಮಗ ಚಿಂದಯ್ಯನಿಗೆ ಕೊಟ್ಟು ಮದುವೆಮಾಡಲು ಸಿದ್ಧತೆ ನಡೆದಾಗ, ಬೇಡರು ತಮ್ಮ ಆಡನ್ನು ಹೊಡೆದ ಸುದ್ಧಿ ಕೇಳಿ ಚಂದಯ್ಯ ಆಡುಗಳನ್ನು ಬಿಡಿಸಿಕೊಂಡು ಬರಲು ಹೋಗುತ್ತಾನೆ. ಮರಳಿ ಬರುವಾಗ ಕುಂಟ ಆಡಿನಮರಿ ಕಾಣಿಸದೆ ಮತ್ತೆ ಕಾಡಿಗೆ ಹೋಗಿ ಹುಡುಕಿ ಬರುವಾಗ ಅಡಗಿದ್ದ ಬೇಡರು ಚಂದಯ್ಯನನ್ನು ಕೊಲ್ಲುವರು. ಮದುವೆ ಆಗದೆ ಚಂದಯ್ಯ ಮಡಿದಿದ್ದರು, ನಾಗವ್ವ ಪತಿ ಎಂದು ಒಪ್ಪಿಕೊಂಡಿದ್ದ ಕಾರಣಕ್ಕೆ ಸ್ವತಃ ಅವಳೇ ಕೊಂಡಕ್ಕೆ ಹಾರುತ್ತಾಳೆ. ಮುಗ್ಧ ಮನುಷ್ಯನ ಜೀವನದಲ್ಲಿ ಹೇಗೆ ಬಿರುಗಾಳಿಯನ್ನು ಬೀಸುತ್ತದೆ ಎಂದು ನಾಗವ್ವಳ ಸ್ಥಿತಿಯಿಂದ ಅರಿಯಬಹುದು. ಕೊಂಡಕ್ಕೆ ಧಾರೆಯೆರೆಯುವ ಹೃದಯವಿದ್ರಾವಕ ಸನ್ನಿವೇಶವನ್ನು ಜನಪದರು ಹೇಳುವ ರೀತಿ

ಹೆಣ್ಣೀಗೆ ಮಣ್ಣು ಬಿದ್ದೊ ಕಣ್ಣಿಗೆ ಸೆತ್ತೆಬಿದ್ದೊ
ಸಣ್ಣ ಸೀರೆ ಮ್ಯಾಲೆ ಕಿಡಿಬಿದ್ದೊ ನಾಗವ್ವನ
ಹೆಣೆಗಂಟು ನಲುಗಿ ಉರಿದ್ಹೋದ್ದೊ[೨೧]

ಸುಂದರ ಜೀವನ ಮಾಡಬೇಕಾದ ಹೆಣ್ಣು ಕೊಂಡಯೇರುವ ದುರಂತಕ್ಕೆ ಈಡಾಗಿ ಅವಳ ಬಾಳೇ ಮಣ್ಣಿನ ಪಾಲಾಗಿ ಮುತ್ತಿನಂಥ ಕಣ್ಣು ಕುರುಡಾಗಿ ಅವಳ ಹೆಣಗಂಟು ನೆಲುಗಿ ಬೆಂಕಿಯಲ್ಲಿ ಉರಿದು ಹೋಯಿತು.

ನಾಗವ್ವನ ಕಥನಗೀತೆಗಿಂತ ಹಿರಿದಿಮ್ಮವ್ವನ ಕಥನಗೀತೆ ಭಿನ್ನವಾದಂತದು. ಇಲ್ಲಿಯು ಸಹ ಹಿರಿದಿಮ್ಮವ್ವ ಸಹಗಮನ ಮಾಡುತ್ತಾಳೆ. ಆದರೆ ತನ್ನ ಜೀವನದ ದುರಂತಕ್ಕೆ ಕಾರಣವಾದ ಬೇಡರ ಹುಡುಗನನ್ನು ತನ್ನ ಕಾಲಲ್ಲಿ ಮೆಟ್ಟಿ ಗಂಡನ ಶಿರವನ್ನು ತನ್ನ ತಲೆಯ ಮೇಲೆ ಹೊತ್ತು ಸಹಗಮನ ಮಾಡುವ ರೀತಿ ಭಿನ್ನವಾಗಿದೆ. ಇಲ್ಲಿ ಸೇಡನ್ನು ತೀರಿಸಿಕೊಳ್ಳುವ ಬಗೆಯನ್ನು ಕಾಣ ಬಹುದು. ಹಿರಿದಿಮ್ಮವ್ವನ ತಂದೆ-ತಾಯಿಯ ಆಶ್ರಯದಲ್ಲಿ ಬೆಳೆದ ಬೊಮ್ಮಲಿಂಗ ಎಂಬ ಬೇಡರ ಹುಡುಗ ಅವಳ ಮೇಲೆ ದುಷ್ಟಭಾವನೆ ಬೆಳೆಸಿಕೊಂಡಿರುತ್ತಾನೆ. ಹಿರಿದಿಮ್ಮವ್ವ ಸಂತೋಷದಿಂದ ಮದುವೆಯಾಗಿ ಗಂಡನ ಮನೆಗೆ ಹೋಗುವ ದಾರಿಯಲ್ಲಿ ಮೋಸದಿಂದ ಅವಳ ಗಂಡನನ್ನು ಕೊಂದು ತನ್ನ ಮಡದಿಯಾಗುವಂತೆ ಪೀಡಿಸುತ್ತಾನೆ. ಆಗ ಹಿರಿದಿಮ್ಮವ್ವ ಸಮಯಕ್ಕೆ ಸರಿಯಾಗಿ ಬುದ್ಧಿ ಉಪಯೋಗಿಸಿ ಮಡದಿಯಂತೆ ನಟಿಸಿ ಅವನ ತಲೆಯನ್ನು ಕತ್ತರಿಸುತ್ತಾಳೆ. ಈ ವಿಷಯ ಸಾಕು ನಾಯಿಯ ಮೂಲಕ ಆಕೆಯ ಅಣ್ಣಂದಿರಿಗೆ ತಿಳಿದು ಅವಳನ್ನು ಹುಡುಕಿಕೊಂಡು ಬಂದಾಗ ಅವಳ ಆಕ್ರೋಶದ ಭಯಂಕರ ದೃಶ್ಯವನ್ನು ಕಾಣುತ್ತಾರೆ. ಗಂಡನ ತಲೆಯನ್ನು ಮಡಿಲಲ್ಲಿ ಇಟ್ಟುಕೊಂಡು, ಬೇಡರ ಹುಡುಗನ ತಲೆಯನ್ನು ಕಾಲಲ್ಲಿ ಬಿದ್ದುಕೊಂಡು ಹಿರಿದಿಮ್ಮವ್ವ ಬೀರುವ ದೃಶ್ಯ ದುಷ್ಟರ ಸಂಹಾರ ಮಾಡುವ ಮಹಿಷ ಮರ್ದಿನಿಯಂತೆ ಭಯಂಕರವಾಗಿ ಕಾಣುತ್ತಾಳೆ. ಹೆಣ್ಣಿನ ಮೇಲಿನ ದುರಾಸೆಯಿಂದ ಅವಳನ್ನು ಕೆಣಕುವ ಗಂಡಸಿನ ಸ್ಥಿತಿ ಹೇಗೆ ಸಾವಿನಲ್ಲಿ ಅಂತ್ಯವಾಗುತ್ತದೆ ಎಂಬುದನ್ನು ಇದರಿಂದ ತಿಳಿಯಬಹುದು.

**ವಡ್ಡರಗೆರೆ ನಾಗಮ್ಮ** ಮತ್ತು ಈರಣ್ಣರ ಮದುವೆಯಾಗಿ ಸೊಸೆಯನ್ನು ಅತ್ತೆ ಪದ್ಮವ್ವ ಕರೆದುಕೊಂಡು ಬರುತ್ತಾಳೆ. ಅತ್ತೆ ಮನೆಯಲ್ಲಿ ಸುಖವಾಗಿ ಸಂಸಾರ ಮಡಿಕೊಂಡಿರುವಾಗ ಈರಣ್ಣ "ತೋತ್ತಿನ ಮಗನ ಜಗಳಕ್ಹೋಗಬೇಕು! ಕತ್ತಿಗಪ್ಪಾಣೆ ಕೊಡೆ ತಾಯಿ" ಎಂದು ತಾಯಿಯನ್ನು ಬೇಡುತ್ತಾನೆ." ಮಡದಿಯನ್ನು ಚೆನ್ನಾಗಿ ನೋಡಿಕೊಳ್ಳಲು ಹೇಳಿ ಈರಣ್ಣ ರಣರಂಗಕ್ಕೆ ಹೋಗುತ್ತಾನೆ.

ನೀರಿಗಾಗಿ ವರತೆಯನ್ನು ತೆಗೆದಾಗ ಗಂಡನ ಕತ್ತಿ, ತಲೆಸಿಕ್ಕುತ್ತವೆ. ಆಕ್ರೋಶದಿಂದ ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ತವರಿಗೆ ಶಾಪ ಹಾಕುತ್ತಾಳೆ. ಗಂಡನಿಲ್ಲದ ಬಾಳು ವ್ಯರ್ಥ ಎಂದು ತಿಳಿದು ನನ್ನನ್ನು ಕತ್ತಿಗೆ ಧಾರೆಯೆರದು ಕೊಟ್ಟಿದ್ದಾರೆಂದು ದುಃಖಿಸುತ್ತಾಳೆ. ಹೆಣ್ಣಾಗಿ ಹುಟ್ಟಿದ್ದರಿಂದ ನನಗೆ ಇಂಥ ಕಷ್ಟ ಅದಕ್ಕಾಗಿ ನೀವು ನನಗೆ ಶಿಕ್ಷೆಕೊಟ್ಟಿರೆಂದು ತವರಿಗೆ ಶಪಿಸುತ್ತಾಳೆ. ಆದರೆ ಗಂಡನ ಮನೆಗೆ ಒಳ್ಳೆಯದಾಗಲಿ ಎಂದು ಹರಸಿ, ಮುಂದೆ ಬರುವ ಸೊಸೆಗೆ ಇಂಥ ಕಷ್ಟ ಬರದಿರಲಿ ಎನ್ನುತ್ತಾಳೆ. ಇಲ್ಲಿ ಚಿಕ್ಕವಯಸ್ಸಿನಲ್ಲಿಯೇ ಜೀವನ ಹಾಳಾಗಿಹೋಯಿತಲ್ಲ ಎನ್ನುವ ವೇದನೆ, ಆಕ್ರೋಶ, ಆವೇಶದಿಂದ ತವರಿನ ಮೇಲೆ ಹೆಣ್ಣು ಕೋಪಮಾಡಿಕೊಳ್ಳುವ ರೀತಿ, ಹಾಗೆಯೇ ಗಂಡನ ಮನೆಯ ಮೇಲಿನ ಗೌರವಾಧರ, ಕಾಳಜಿಯನ್ನು ಕಾಣಬಹುದು. ಸೊಸೆ ಕೊಂಡಕ್ಕೆ ಹೋಗುವಾಗ ಅತ್ತೆ ತಾನು ಬರುವೆನು ಎನ್ನುವ ಮಾತು ಅತ್ತೆಯ ಒಳ್ಳೆಯತನವನ್ನು ಸೂಚಿಸುತ್ತದೆ. ಕೊನೆಗೆ ನಾಗವ್ವ ತನ್ನ ಸಿಟ್ಟು ಕಡಿಮೆ ಮಾಡಿಕೊಂಡು ಸಮಾಧಾನವಾಗಿ ತವರು ಮನೆಯನ್ನು, ಗಂಡನ ಮನೆಯನ್ನು ಹರಸುತ್ತಾ ಕೊಂಡವನ್ನು ಏರುತ್ತಾಳೆ.

**ವೀರ ತಿಮ್ಮವ್ವ** ಕಥನಗೀತೆಯಲ್ಲಿ ವೀರನಾಗಣ್ಣನ ಹೆಂಡತಿ ತಮ್ಮವ್ವ, ಧೀರ, ಶೂರನಾದ ನಾಗಣ್ಣ ಸಾಹಸದಲ್ಲಿ ಪಾಳ್ಯೇಗಾರ ರಂಗಣ್ಣ ನಾಯಕರಿಂದ "ಚಿನ್ನದ ಸತ್ತಿಗೆ" "ಭೂಚಕ್ರದ ಕೊಡುಗೆ" ಪಡೆದುಕೊಂಡಂತವನು ಸಾಣಿಕೆರೆಯ ಗರಡಿಯಲ್ಲಿ ಭಾಗವಹಿಸಿ ತೀರಿಕೊಂಡ. ತಿಮ್ಮವ್ವ ಗಂಡ ಮಡಿದ ಸುದ್ದಿಯನ್ನು ಕೇಳಿ ತನ್ನ ಎರಡು ಮಕ್ಕಳನ್ನು ಬಿಟ್ಟು ತಂದೆ-ತಾಯಿ ಮಾತು ಕೇಳದೆ ಕೊಂಡವನ್ನು ಏರಿ ಮಹಾಸತಿಯಾಗಿ ಪೂಜಿಸಲ್ಪಡುತ್ತಾಳೆ. ಇಲ್ಲಿ ವೀರತಿಮವ್ವ ಸಹಗಮನ ಮಾಡುವುದು ತನ್ನ ಕರ್ತವ್ಯ ಇದಕ್ಕೆ ಹೆದರಬೇಕಿಲ್ಲ ಎಂದು ಧೈರ್ಯದಿಂದ ದುಃಖವನ್ನು ತಡೆಹಿಡಿದು ಬೆಂಕಿಗೆ ಹಾರುತ್ತಾಳೆ. ತನ್ನ ಮಕ್ಕಳನ್ನು ಯಾರಾದರು ನೋಡಿಕೊಂಡರೆ ಅವರಿಗೆ ಸಂತಾನ ಭಾಗ್ಯವನ್ನು ಕೊಡುತ್ತೇನೆ ಎಂದು ಹೇಳುತ್ತಾಳೆ. ಇಂಥ ನಂಬಿಕೆಗಳಿಂದ ಮಹಾಸತಿಯನ್ನು ದೇವತೆ ಎಂದು ನಂಬಿ ಜನಪದರು ಪೂಜಿಸುತ್ತಿದ್ದರು. ನನ್ನ ಮಕ್ಕಳನ್ನು ತೊತ್ತಿನ ಮಕ್ಕಳೆಂದು ಜರೆಯಬೇಡಿರವ್ವ ಅವರನ್ನು ಚೆನ್ನಾಗಿ ನೋಡಿಕೊಂಡರೆ ವರವನ್ನು ಕೊಡತೀನಿ. ಎನ್ನುವ ಮೂಲಕ ತಾಯಿಯ ಮಮತೆ, ವಾತ್ಸಲ್ಯವನ್ನು ತೋರಿಸುವುದಷ್ಟೇ ಅಲ್ಲ ಎಂಥವರಿಗಾದರು ದುಃಖವಾಗುವಂತೆ ಹೇಳುತ್ತಾಳೆ. ಇಲ್ಲಿ ಕೊಂಡಯೇರುವುದಕ್ಕೆ ಬೇಡ ಎಂದು ಹೇಳುವಂತಿಲ್ಲ. ಸಹಗಮನ ಗಂಡ ಸತ್ತ ವಿಧವೆಗೆ ಸರಿಯಾದ ದಾರಿಯೆಂದು ಎಲ್ಲ ಜನ ತಿಳಿದಿರುವಾಗ ಅಳುವುದಾಗಲಿ, ಕೊರಗುವುದಾಗಲಿ, ಮರುಗುವುದಾಗಲಿ ಕಾಣುವುದಿಲ್ಲ. ಸಂತೋಷದಿಂದ ಹೆಣ್ಣು ಧೈರ್ಯವಾಗಿ ಚಿತೆ ಏರುವುದನ್ನು ಕಾಣಬಹುದು.

**"ಮಹಾಸತಿ"** ತಾಡಿನಾಗಮ್ಮ ಓಬಳಾಮರದ ವಿಲಿಯೋರ ಕುಲದಲ್ಲಿ ಜನಿಸಿ, ಸಿರಿವಂತ ಗೌಡರ ಮನೆಗೆ ಸೊಸೆಯಾಗಿ ಬರುತ್ತಾಳೆ. ಮುಂದೆ ದಂಡಿಗೆ ಹೋದ ನಾಗಣ್ಣ ಮಡಿದ ಶಕುನ ವಾಗುತ್ತದೆ. ನಾಗಮ್ಮನಿಗೆ ಬಾಯಾರಿಕೆಯಾಗಿ ವರತಿ ತೆಗೆದಾಗ ಅಲ್ಲಿ ರಕ್ತಕಂಡು ಅಳುತ್ತಾಳೆ. ಆಗ ಸಾಕುನಾಯಿಯು ಮುಖದಲ್ಲಿ ರಕ್ತಮಾಡಿಕೊಂಡು ಬಂದುದನ್ನು ಕಂಡು ಗಂಡನ ಸಾವನ್ನು ಖಚಿತಪಡಿಸಿಕೊಂಡು ತಾನು ಗಂಡನ ಜೊತೆ ಸ್ವರ್ಗಕ್ಕೆ ಹೋಗುತ್ತೇನೆಂದು ತೀರ್ಮಾನಿಸಿ ಕೊಂಡಕ್ಕೆ ಹಾರಲು ಸಿದ್ಧಳಾಗುತ್ತಾಳೆ. ತಂದೆ-ತಾಯಿ, ಅತ್ತೆ-ಮಾವ ನಾಗಮ್ಮನು ಚಿತೆಯೇರುವುದು ಬೇಡವೆಂದು ಸಮಾಧಾನ ಹೇಳುವ ಸನ್ನಿವೇಶವನ್ನು ನೋಡಬಹುದು. ಇಲ್ಲಿಯು ಸಹ ನಾಗಮ್ಮನೇ ಸ್ವತಃ ಅನ್ನಸಂತರ್ಪಣೆ ಮಾಡಿ, ತಾನು ವಧುವಿನಂತೆ ಶೃಂಗರಿಸಿಕೊಂಡು ಎಲ್ಲರಿಗು ನಮಸ್ಕರಿಸಿ ತಾನು ಬೆಂಕಿಗೆ ಹೆದರುವುದಿಲ್ಲವೆಂದು ಕೊಂಡಕ್ಕೆ ಬಿದ್ದು ಎಲ್ಲರ ದೃಷ್ಟಿಯಲ್ಲಿ ದೇವತೆ ಆಗುತ್ತಾಳೆ. ಇಲ್ಲಿ ನಾಗಮ್ಮ ಸಹಗಮನ ಮಾಡುವುದು ತನ್ನ ಕರ್ತವ್ಯ. ಇದರಿಂದ ತನಗೆ ಸಿದ್ಧಿ ದೊರೆಯುತ್ತದೆ ಎಂದು ತಿಳಿಯುವುದು ಅವಳ ಮುಗ್ಧತನವನ್ನು ತೋರಿಸುತ್ತದೆ.

ಮಹಾಸತಿ **ಕಾಟವ್ವ** ಕಥನಗೀತೆಯಲ್ಲಿ ಸಹಗಮನವೇ ಮುಖ್ಯವಾಗಿದೆ. ಹುಲಿಕುಂಟೆ ಕಾಟವ್ವನ ಗಂಡನ ಮನೆ. ಈಕೆಯೇ ತನ್ನ ಸಹಗಮನಕ್ಕೆ ಅನುಮತಿಯನ್ನು ನೀಡಲಿಲ್ಲ. ಪಾಳೆಯಗಾರ ಮುಮ್ಮಡಿ ಬೂಸ್ಕರಲ್ಲಿ ಕೇಳುವುದನ್ನು ಗುರುತಿಸಬಹುದು. ಸಹಗಮನಕ್ಕೆ ಅಪ್ಪಣೆ ಬೇಕು ಎಂದು ಅಂಶವನ್ನು ತಿಳಿಯಬಹುದು.

ಇಲ್ಲಿ ಯಾರು ಸಹಗಮನಕ್ಕೆ ಕಡ್ಡಾಯ ಮಾಡದಿದ್ದರು ಕಾಟವ್ವ ಸಹಗಮನ ತನ್ನ ಕರ್ತವ್ಯದಂತೆ ಪಾಳೆಗಾರರ ಅಪ್ಪಣೆ ಪಡೆದು ಕೊಂಡವೇರುತ್ತಾಳೆ.

ಎಲ್ಲ ಜನಪದ ಕಥನಗೀತೆಗಳಿಗಿಂತ **"ಸತಿಚೆನ್ನಮ್ಮ"**ನ ಕಥನಗೀತೆ ವಿಶೇಷವಾಗಿದೆ. ಇಲ್ಲಿ ಚೆನ್ನವ್ವ ತನ್ನ ದೈವಭಕ್ತಿಯಿಂದ ಸತ್ತ ಗಂಡನನ್ನು ಬದುಕಿಸಿಕೊಳ್ಳುತ್ತಾಳೆ. ಕತ್ತಲರಾಯನಿಗೆ ಪಾಪುಂಜಿಣಿ ಪಟ್ಟದ ರಾಣಿ. ಈಕೆಗೆ ಮಕ್ಕಳಿಲ್ಲ ಎಂಬುದೆ ಚಿಂತೆ. ಅದಕ್ಕಾಗಿ ಶಿವನನ್ನು ಕುರಿತು ತಪಸ್ಸು ಮಾಡಿ ಅಲ್ಪಾಯುಷಿ ಪುತ್ರನ ವರವನ್ನು ಪಡೆಯುತ್ತಾಳೆ. ಮಗನಿಗೆ ಕಾಳಿಂಗರಾಯನೆಂದು ಹೆಸರಿಟ್ಟು ಬೆಳೆಸುತ್ತಾಳೆ. ಬೇಟೆಗೆಂದು ಕಾಡಿಗೆ ಹೋದ ಕಾಳಿಮಗರಾಯ ಹುಲಿಯಿಂದ ಮಡಿಯುತ್ತಾನೆ. ಶವ ಸಂಸ್ಕಾರದ ಸಮಯದಲ್ಲಿ ಹೊತ್ತಿಗೆಯವನು ಹೇಳಿದಂತೆ ಹೆಣ್ಣು ಗೊಂಬೆಯನ್ನು ಶವದ ಪಕ್ಕದಲ್ಲಿಡದೆ ಜೀವಂತ ಹೆಣ್ಣನ್ನು ತರಲು ಕಾಳಿಂಗರಾಯ ಡಂಗುಡ ಸಾರಿಸಿ(ಹೊಡೆಸಿ) ಹಾರುವಯ್ಯನ ಮಗಳಾದ ಚೆನ್ನವ್ವನನ್ನು ತಂದು ಸತ್ತ ಮಗನಿಗೆ ಮದುವೆ ಮಾಡಿಸುತ್ತಾಳೆ. ಆಗ ಚೆನ್ನವ್ವ ಸಹಗಮನ ಮಾಡಲು ನಿರ್ಧರಿಸಿ ಸ್ಮಶಾನದಲ್ಲೇ ಮಣ್ಣಿನ ಬಸವಣ್ಣನನ್ನು ಮಾಡಿ ಭಕ್ತಿಯಿಂದ ಪೂಜಿಸಿ ಶಿವನನ್ನು ವಲಿಸಿಕೊಂಡು ಕಾಳಿಂಗರಾಯನ ಜೀವವನ್ನು ಮರಳಿ ಪಡೆಯುತ್ತಾಳೆ. ನಂತರದಲ್ಲಿ ಚೆನ್ನವ್ವ ಗಂಡನೊಂದಿಗೆ ಸುಖವಾಗಿ ಬಾಳುತ್ತಾಳೆ. ಈ ಕಥನಗೀತೆಯಲ್ಲಿ ಸಹಗಮನದ ನಿರ್ಧಾರ ಬಂದರು ಸಹಗಮನವಾಗದೆ ಪತಿಯನ್ನು ಬದುಕಿಸುವ ಅಂಶವನ್ನು ಗಮನಿಸಬಹುದು. ಮತ್ತೊಂದು ವಿಶಿಷ್ಟವೆಂದರೆ, ಚೆನ್ನವ್ವ ಏನನ್ನು ಬಯಸದೆ ಸತ್ತ ವ್ಯಕ್ತಿಯನ್ನು ಗಂಡನನ್ನಾಗಿ ಪಡೆಯುವುದು ಆಕೆಯ ಕಡು ಬಡತನವನ್ನು ತೋರಿಸುವುದಲ್ಲದೆ ನೊಂದು-ಬೆಂದ ಜೀವವನ್ನು ತೋರಿಸುತ್ತದೆ. ಬಡತನ ಮನುಷ್ಯನಿಗೆ ಎಂಥ ಸ್ಥಿತಿಯನ್ನು ತರುತ್ತದೆ ಎಂಬುದಕ್ಕೆ ಚೆನ್ನವ್ವನ ಕಥೆ ಸಾಕ್ಷಿಯಾಗಿದೆ. ಆಕೆಯ ದೈವ ಭಕ್ತಿಯಿಂದ ಸತ್ತ ಕಾಳಿಂಗರಾಯ ಬದುಕಿ ಚೆನ್ನವ್ವನ ಬಾಳು ಬೆಳಕಾಯಿತು. ಇಲ್ಲಿ ದೈವಶಕ್ತಿಯ ಪರಾಕಾಷ್ಠತೆಯನ್ನು ಗುರುತಿಸಬಹುದು.

ಈಡಿಗರ ಸಮುದಾಯದಲ್ಲಿ ಹುಟ್ಟಿದ **"ಈರೋಬಿ"**ಯ ಕಥನಗೀತೆ ಹೃದಯ ಮಿಡಿಯುವ ದುರಂತ ಕಥೆ. ಈರೋಬಿಯ ಪತಿ ಶಂಕರರಾಯ ಶೆಟ್ಟಿ ಮಡದಿಗೆ ಚಿನ್ನದ ಹರಿವಾಣ ತರಲು ಪರ ಊರಿಗೆ ಹೋಗಿ ದುರ್ಮರಣವನ್ನಪ್ಪುತ್ತಾನೆ. ಸತ್ತಸುದ್ದಿ ತಿಳಿಯುವ ಮೊದಲೇ ಕನಸಿನಲ್ಲಿ ಅಪಶಕುನಗಳನ್ನು ಕಂಡು ಭಯದಿಂದ ಬಳಲಿರುತ್ತಾಳೆ. ಈ ಕನಸನ್ನು ಅಂದಿನಿಂದ ಇಂದಿನವರೆಗೂ, ಅವಿದ್ಯಾವಂತರಿಂದ ವಿದ್ಯಾವಂತರವರೆಗೂ ಒಂದಲ್ಲ ಒಂದು ರೀತಿ ನಂಬುತ್ತಾ ಬಂದಿರುವರು. ಅದರಲ್ಲೂ ಜನಪದರಲ್ಲಿ ಶಕುನ ಸ್ವಪ್ನಗಳಲ್ಲಿ ವಿಶೇಷ ಅರ್ಥ, ನಂಬಿಕೆಗಳಿವೆ. ಇದಕ್ಕೆ ಸಾಕ್ಷಿಯೆನ್ನುವ ಹಾಗೆ ಈರೋಬಿಯ ಕನಸು ದುರಂತಕ್ಕೆ ಸಾಕ್ಷಿಯಾಗಿದೆ.[೨೩]

ತನ್ನ ಗಂಡ ಸತ್ತ ಸುದ್ದಿ ತಿಳಿದ ಈರೋಬಿ ಎದೆಗುಂದದೆ ತನ್ನ ದುಃಖವನ್ನು ವ್ಯಕ್ತಪಡಿಸದೆ ಗಂಡನೊಂದಿಗೆ ಕೊಂಡಯೇರಲು ಸಿದ್ಧವಾಗುತ್ತಾಳೆ. ಅತ್ತೆ-ಮಾವ, ತಂದೆ-ತಾಯಿ, ಮೈದುನ, ಅಣ್ಣ-ಅತ್ತಿಗೆ ಕೊಂಡಕ್ಕೆ ಹೋಗದಂತೆ ತಡೆದರೂ ಯಾರ ಮಾತನ್ನು ಕೇಳದೆ, ಯಾರನ್ನು ದೂಷಣೆ ಮಾಡದೆ ಮಗುವನ್ನು ಬಿಟ್ಟು ಕೊಂಡಕ್ಕೆ ಹೋಗುತ್ತಾಳೆ. ಇಲ್ಲಿಯ ವಿಶೇಷತೆಯೆಂದರೆ,

ಗಂಡನ ಸಾವಿನಿಂದ ಈರೋಬಿ ದುಃಖದ ಮಡುವಿನಲ್ಲಿದ್ದರು ಅದನ್ನು ತೋರಗೊಡದೆ ಕೊಂಡಕ್ಕೆ ಕಟ್ಟಿಗೆ ಕಡಿಯುವವರನ್ನು ಪುತ್ರ ಸಂತಾನವಾಗಲೆಂದು ಹಾರೈಸುತ್ತಾಳೆ. ಮತ್ತೊಂದು ವಿಶೇಷವೆಂದರೆ, ಈರೋಬಿಯ ಸೋದರಮಾವ ಕೂಡಿಕೆ (ಮರುಮದುವೆ) ಮಾಡಿಕೊಳ್ಳುತ್ತೇನೆ ಎಂದರು ಆಕೆ ಅವನನ್ನು ತಿರಸ್ಕರಿಸಿ ಮದುವಣಗಿತ್ತಿಯ ಹಾಗೆ ಶೃಂಗರಿಸಿಕೊಂಡು ಸಹಗಮನ ಮಾಡುತ್ತಾಳೆ. ಒಟ್ಟಾರೆ ಜನಪದ ಮಹಿಳೆಯರಲ್ಲಿ ವೈಧವ್ಯ ಬಂಜೆತನ ಇವೆರಡು ಅವರ ಪಾಲಿಗೆ ನರಕ, ಅನಿಷ್ಟ ಎಂದು ತಿಳಿದಿದ್ದರು. ಅದಕ್ಕಾಗಿಯೇ ಏನನ್ನು ಬೇಕಾದರು ತ್ಯಾಗ ಮಾಡಲು ಸಿದ್ಧವಾಗಿರುತ್ತಿದ್ದರು. ಈ ಕಾರಣದಿಂದಾಗಿ ಈರೋಬಿಯು ತಾಯ್ತನ, ವೈಧವ್ಯ ಬೇಡ ಮುತ್ತೈದೆತನ ಬೇಕು ಎಂದು ದೃಢನಿರ್ಧಾರ ಮಾಡಿಕೊಂಡು ಕೊಂಡವನ್ನು ಏರುತ್ತಾಳೆ. ಈರೋಬಿಯ ಒಂದೊಂದು ಮಾತಲ್ಲಿ, ನಡತೆಯಲ್ಲಿ ಆಕ್ರೋಶ, ದುಃಖ ತುಂಬಿದ್ದರು ಅದನ್ನು ತೋರಗೊಡದೆ ತನ್ನ ಕರ್ಮದ ಫಲವೆಂದು ತಿಳಿದು ಧೈರ್ಯದಿಂದ ಮಹಾಸತಿಯಾಗಿ ಪೂಜೆಗೊಳ್ಳುತ್ತಾಳೆ.

ಜನಪದ ಕಥನಗೀತೆಗಳಲ್ಲಿ ಮಹಿಳೆಯೇ ಕೇಂದ್ರಬಿಂದುವಾಗಿದ್ದಾಳೆ. ಭಾರತೀಯ ಸಂಸ್ಕೃತಿಯಲ್ಲಿ ರೂಪುಗೊಂಡು ತ್ಯಾಗ, ಬಲಿದಾನಕ್ಕೆ ಸಂಬಂಧಿಸಿದಂತೆ ಅನೇಕ ಸ್ತ್ರೀಯರನ್ನು ಕಾಣಬಹುದು. ಕೆರೆಗಳಿಗೆ, ಬಾವಿಗಳಿಗೆ, ಕೋಟೆಗಳಿಗೆ ಅನೇಕ ಸ್ತ್ರೀಯರು ಸ್ವ ಇಚ್ಛೆಯಿಂದ ಅಥವಾ ಬಲವಂತದಿಂದ ಬಲಿಯಾಗಿದ್ದಾರೆ. ಊರಿನ ಹಿತಕ್ಕಾಗಿ ತನ್ನ ಬದುಕನ್ನೆ ತ್ಯಾಗ ಮಾಡಿದ ಹಲವಾರು ಸ್ತ್ರೀಯರನ್ನು ಇಲ್ಲಿ ಕಾಣಬಹುದು. ಅಂತವರಲ್ಲಿ "ಹುಳಿಯಾರು ಕೆಂಚಮ್ಮ" ಹುಳಿಯಾರಿನ ಕೆರೆಯ ಏರಿಕಟ್ಟಡ ಕುಸಿದು ಬಾಣಂತಿ ಕೆಂಚಮ್ಮ ಬಲಿಯಾಗುವಳು. ಇಲ್ಲಿ ಗರ್ಭಿಣಿ ಕೆಂಚವ್ವನ ಬಯಕೆಯನ್ನು ಅತ್ತೆ–ಮಾವ, ಗಂಡ ಎಲ್ಲರು ಒಂದೊಂದು ತಿಂಗಳಿಗೆ ಒಂದೊಂದು ಬಯಕೆಯನ್ನು ಪೂರೈಸುತ್ತಾರೆ. ಗಂಡುಮಗುವಿನ ತಾಯಿಯಾದ ಕೆಂಚಮ್ಮ ಗಂಗೆ ಪೂಜೆಗೆ ಕೆರೆಗೆ ಹೋದಾಗ ಪೂಜೆ ಮಾಡುವ ಸಮಯದಲ್ಲಿ ಏರಿಯ ಕಲ್ಲು ಸಡಿಲಗೊಂಡವು. ಇದರಿಂದಾಗಿ ಏರಿ ಬಲಿಯನ್ನು ಬಯಸುತ್ತಿದೆ ಎಂದು ಅವಳಿಗೆ ಅರಿವಾಗುತ್ತದೆ. ಇಲ್ಲಿ ಕೆಂಚವ್ವ ಕೆರೆಗೆ ಬಲಿಯಾಗುವ ವಿಷಯ ಮಾವ ಮತ್ತು ತವರಿನವರಿಗೆ ತಿಳಿದಿರುತ್ತದೆ. ಯಾರ ಬಲವಂತವು ಅವಳಿಗೆ ಇರುವುದಿಲ್ಲ. ಸ್ವಂತ ಇಚ್ಛೆಯಿಂದಲೇ ಕೆಂಚವ್ವ ಕೆರೆಗೆ ಬಲಿಯಾಗಲು ವೀಳ್ಯ ಪಡೆದು, ಮಾವನ ಅಪ್ಪಣೆ ಪಡೆದು ಬಲಿಯಾಗಲು ಹೋಗುವಳು. ಗಂಡನಿಗೆ ಸಮಾಧಾನ ಮಾಡುವ ಕೆಂಚವ್ವನ ಧೈರ್ಯ ಮೆಚ್ಚುವಂತದು. ಊರಿನ ಜನರ ಒಳಿತನ್ನು ಬಯಸಿ, ಗಂಡನಿಗೆ ಮರು ಮದುವೆ ಆಗಲು ಹೇಳಿ ತನ್ನ ಎಳೆಯ ಕಂದನೊಟ್ಟಿಗೆ ಎಲ್ಲರ ಎದುರಿನಲ್ಲಿಯೇ ತನ್ನ ಬದುಕನ್ನು ಕೊನೆಗಾಣಿಸಿದ ಕೆಂಚವ್ವನ ವ್ಯಕ್ತಿತ್ವ ತ್ಯಾಗದ ಮಹತ್ವವನ್ನು ತಿಳಿಸುತ್ತದೆ.

ಅಣಜಿ ಎಂಬ ಊರಿನ ಗೌಡನ ಸೊಸೆ, ಮಲ್ಲನಗೌಡನ ಹೆಂಡತಿ ಹೊನ್ನಮ್ಮ. ಇಲ್ಲಿ ಮಾವನ ಕನಸಿನಲ್ಲಿ ಮನೆದೇವತೆ ಉಚ್ಚಂಗಿ ಎಲ್ಲಮ್ಮ ಬಂದು ಕೆರೆಕಟ್ಟಿಸುವಂತೆ ಹೇಳಿದಾಗ ಗೌಡ ಕೆರೆ ಕಟ್ಟಿಸಿದ. ನೀರು ಬರದೆ, ಕೆರೆಯ ಏರಿಯು ನಿಲ್ಲದೆ ಕುಸಿಯುತ್ತದೆ. ಹೊತ್ತಿಗೆ ತೆಗೆಸಿ ಕೇಳಿದಾಗ ಬಲಿಯನ್ನು ಕೊಡಬೇಕೆಂದು ತಿಳಿಯುತ್ತದೆ. ಆಗ ಸೊಸೆಯಾದ ಹೊನ್ನಮ್ಮನನ್ನು

ಬಲಿಕೊಡಲು ಮಾವ ನಿರ್ಧರಿಸಿದನು. ಈ ನಿರ್ಧಾರಕ್ಕೆ ಹೊನ್ನಮ್ಮ ಪ್ರತಿಭಟಿಸದೆ ಒಪ್ಪುತ್ತಾಳೆ. ಅವಳು ಕೆರೆಗೆ ಹಾರವಾಗುವ ಸಮಯದಲ್ಲಿ ಅವಳ ಗಂಡ ಮನೆಯಲ್ಲಿ ಇರುವುದಿಲ್ಲ. ಗಂಡನನ್ನು ನೆನೆದು ದುಃಖಿಸುತ್ತಾ ನಾನು ಹೋಗುತಿನಿ ಮಾವಯ್ಯ ಎಂದು ಹೊನ್ನಮ್ಮ ಕೆರೆಯ ನೀರಲ್ಲಿ ಐಕ್ಯವಾಗುತ್ತಾಳೆ. ಈಗಲೂ ಸಹ ಆ ಊರಿನ ಕೆರೆಯ ಮೇಲಿನ ಗುಡಿ ಹೊನ್ನಮ್ಮನ ಗುಡಿಯೆಂದು ಕರೆಯುತ್ತಾರೆ.

**ಒಡ್ಡರ ಬೋಯಿ** ಹೊನ್ನಮ್ಮನಂತೆ ಕೆರೆಗೆ ಬಲಿಯಾದರೂ ಭಿನ್ನ ವ್ಯಕ್ತಿತ್ವವನ್ನು ಹೊಂದಿದ್ದಾಳೆ. ಊರ ಗೌಡ ಹಣತಿ ಕೆರೆಯನ್ನು ಕಟ್ಟಿಸಿರುತ್ತಾನೆ. ಆದರೆ ಕೆರೆಯಲ್ಲಿ ನೀರು ತುಂಬಿ ಕೋಡಿ ನಿಲ್ಲುವುದಿಲ್ಲ. ಆಗ ಗರ್ಭಿಣಿಯನ್ನು ಬಲಿಕೊಟ್ಟರೆ ಕೆರೆಯ ಕೋಡಿ ನಿಲ್ಲುತ್ತದೆ ಎನ್ನುತ್ತಾರೆ. ಗೌಡ ತನ್ನ ಸೊಸೆ ಒಡ್ಡರಬೋಯಿಯನ್ನು ಬಲಿ ಕೊಡಲು ಒತ್ತಾಯಪಡಿಸಿದಾಗ ಅವಳು ಪ್ರತಿಭಟಿಸುತ್ತಾಳೆ. ತನ್ನ ತಂದೆ–ತಾಯಿ, ಅಕ್ಕ–ತಂಗಿ ಹತ್ತಿರ ಹೇಳಿ ದುಃಖಿಸುತ್ತಾಳೆ. ಯಾರು ಸ್ಪಂದಿಸದಿದ್ದಾಗ ಅಸಹಾಯಕಳಾಗಿ ಒಡ್ಡರಬೋಯಿ ಕೆರೆಗೆ ಪೂಜೆ ಮಾಡಿ ಮೂರು ಬೊಗಸೆ ನೀರು ಕುಡಿದು ಹಿಂದಕ್ಕೆ ತಿರುಗಿದಾಗ ಅವಳ ಮಾವ ಅವಳನ್ನು ಮುಂದಕ್ಕೆ ನೂಕುತ್ತಾನೆ. ಆಗ "ನನ್ನಕ್ಕೆ ನನ್ನಕ್ಕೆ ಕಾಲುತುಂಬ ನೀರು ಬಂತು, ಕೊಳ್ಳವ್ವ ಕಂದಾನ ಎಂದು ಕಂದನನ್ನು ಗಂಗೆಯ ಕೈಯಲ್ಲಿ ಕೊಟ್ಟು ತಾನು ನೀರು ಪಾಲಾದಳು"(೫) ದಂಡಿಗೆ ಹೋಗಿದ್ದ ಅವಳ ಗಂಡ ಹಿಂತಿರುಗಿ ಹೆಂಡತಿಯನ್ನು ಕೇಳುತ್ತಾನೆ. ತನ್ನ ಹೆಂಡತಿ ಕೆರೆಗೆ ಬಲಿಯಾದ ವಿಷಯ ತಿಳಿಯುತ್ತದೆ. ಆಗ ಕೆರೆಯ ಹತ್ತಿರ ಬಂದು ನನ್ನ ಹೆಂಡತಿ ಪತಿವ್ರತೆಯಾಗಿದ್ದರೆ ನನ್ನ ಕಣ್ಣಿಗೆ ಕಾಣಿಸಲಿ ಎನ್ನುತ್ತಾನೆ. ಆಗ ಒಡ್ಡರ ಬೋಯಿ ನೀರಿನಿಂದ ಎದ್ದು ಬರುತ್ತಾಳೆ. ಅಂತ್ಯ ಸುಖಾಂತ್ಯವಾಗಿದೆ.

**ಮದಗದ ಕೆಂಚವ್ವನ** ಮಾವ ತನ್ನ ಮಗಳು ದೂರದಿಂದ ನೀರು ತರಲಾರಳು ಎಂಬ ಕಾರಣದಿಂದ ಕೆರೆಯನ್ನು ಕಟ್ಟಿಸುತ್ತಾನೆ. ಕೆರೆಯ ನೀರು ಬಹಳ ಕಾಲ ನಿಲ್ಲಲು ಯಜಮಾನ ಹೆಂಡತಿಯನ್ನು ಬಲಿ ಕೇಳುತ್ತಾಳೆ. ತನ್ನ ಮಗ ಗೂಳೇಸನಿಗೆ ಕೆಂಚವ್ವನನ್ನು ಮದುವೆ ಮಾಡಿಸಿ ಸೊಸೆಯನ್ನು ಬಲಿಕೊಡಲು ಮಗನನ್ನು ವ್ಯಾಪಾರಕ್ಕೆ ಕಳಿಸುತ್ತಾನೆ. ನಂತರ ಕೆರೆಯ ಪೂಜೆ ಮಾಡಿ ಕೆಂಚವ್ವ, ಅವಳ ಹಸುಗೂಸು ಕೆರೆಯ ನೀರಿನ ಪಾಲಾದರು.

ಈ ಕಥನಗೀತೆಯಲ್ಲಿ ಮಾವ ದೌರ್ಜನ್ಯದಿಂದ ಸೊಸೆಯನ್ನು ಕೆರೆಗೆ ಆಹುತಿ ಮಾಡುವುದು ಎದ್ದು ಕಾಣುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಒಬ್ಬ ಪುರುಷ ಹೆಣ್ಣನ್ನು ಬಲಿಕೊಡುವ ಕ್ರೂರಿಯಾಗಿ ಕಂಡರೆ, ಮೊತ್ತೊಬ್ಬ ಪುರುಷ ಹೆಂಡತಿಗಾಗಿ ದುಃಖಿಸುವುದು ಮನ ಮಿಡಿಯುವಂತಿದೆ. ಕೆರೆಗೆ ಬಲಿಯಾದ ಕೆಂಚವ್ವ ತನ್ನ ಗಂಡನ ದುಃಖವನ್ನು ಕಂಡು ಅವನನ್ನು ಅನಾಥನನ್ನಾಗಿ ಬಿಡದೆ ಮತ್ತೆ ಮರು ಮದುವೆ ಮಾಡಿಸಿ ತನ್ನ ಪ್ರೇಮ ಮತ್ತು ತ್ಯಾಗವನ್ನು ತೋರಿಸುತ್ತಾಳೆ.

ಕಲ್ಲನಕೇರಿ ಮಲ್ಲನಗೌಡ ಕಟ್ಟಿಸಿದಂತ ಕೆರೆಯಲ್ಲಿ ಸೆರೆಮುಕ್ಕು ನೀರು ಇರುವುದಿಲ್ಲ. ಆಗ ಹೊತ್ತಿಗೆ ತೆಗೆಸಿ ಕೇಳಿದಾಗ ಹಿರಿಯ ಸೊಸೆ ಮಲ್ಲವ್ವನನ್ನು ಬಲಿಕೊಡಬೇಕೆಂದು ಆಗ ನೀರು

ಬರುತ್ತದೆ ಎನ್ನುತ್ತಾರೆ. ಆಗ ಮಾವ ಹಿರಿಸೊಸೆಯನ್ನು ಮನೆಯ ಹಿರಿಯತನಕ್ಕೆ ಬಿಟ್ಟು ಚಿಕ್ಕ ಸೊಸೆ ಭಾಗೀರತಿಯನ್ನು ಹಾರ ಕೊಡಲು ತೀರ್ಮಾನಿಸುತ್ತಾನೆ. ಭಾಗೀರತಿ ತಾನು ಕೆರೆಗೆ ಹಾರವಾಗುವ ವಿಷಯವನ್ನು ತಂದೆ-ತಾಯಿಯಿಂದ ಮರೆಮಾಚಿ ತನ್ನ ಆತ್ಮೀಯ ಸ್ನೇಹಿತೆಯಲ್ಲಿ ನಿಜವನ್ನು ಹೇಳಿ ದುಃಖಿಸುತ್ತಾಳೆ. ಕೆರೆಗೆ ಪೂಜೆ ಮಾಡಿ ಮರೆತು ಬಂದ ಬಂಗಾರದ ಬಟ್ಟಲನ್ನು ತರಲು ಹೋಗಿ ಕೆರೆಯಲ್ಲಿ ಮುಳುಗಿ ಪ್ರಾಣಬಿಡುತ್ತಾಳೆ. ದಂಡಿಗೆ ಹೋಗಿದ್ದ ಗಂಡ ಮಾದೇವರಾಯ ಅರ್ಧದಲ್ಲೆ ಮರಳಿ ಬಂದು ಹೆಂಡತಿಯನ್ನು ಕೇಳುತ್ತಾನೆ. ಆದರೆ ಯಾರು ನಿಜವನ್ನು ಹೇಳುವುದಿಲ್ಲ. ಭಾಗೀರತಿಯ ಗೆಳತಿಯ ಮೂಲಕ ನಿಜ ವಿಷಯ ತಿಳಿದಾಗ ಮಾದೇವರಾಯ ದುಃಖಿಸುತ್ತಾ "ಸಾವಿರ ವರಹವನ್ನು ಕೊಟ್ಟರು ಸಿಗದಂತ ಸತಿ ನೀನು ನನ್ನ ಬಿಟ್ಟು ಎಲ್ಲಿಗೆ ಹೋದೆ" ಎಂದು ತಾನು ಕೆರೆಯಲ್ಲಿ ಮುಳುಗುತ್ತಾನೆ. ಹೆಂಡತಿಯನ್ನು ಅಗಲಿರಲಾರದೆ ತಾನು ಕೆರೆಗೆ ಬಿದ್ದು ಪ್ರಾಣ ಬಿಡುವ ಮಾದೇವರಾಯ ಭಿನ್ನವಾಗಿ ಕಾಣುತ್ತಾನೆ. ಇಲ್ಲಿ ಬಲಿಯಾದ ಸೊಸೆ ಮತ್ತೆ ಮೇಲೆ ಬರುವುದಿಲ್ಲ. ಗಂಡನಿಗೆ ಮರು ಮದುವೆ ಮಾಡಿಸುವುದಿಲ್ಲ.

ಶ್ರೀಮಂತನಾದ ಮಾದ ಮೇಸ್ತ್ರಿ ಜನರ ಉಪಯೋಗಕ್ಕೆ ಕಟ್ಟೆಬಾಳ(ಕೆರೆ)ನ್ನು ಕಟ್ಟಿಸಿರುತ್ತಾನೆ. ಅದರ ಏರಿ ನಿಲ್ಲದೆ ಬಿದ್ದು ಹೋಗುತ್ತಿರುತ್ತದೆ. ಮಾದ ಮೇಸ್ತ್ರಿಗೆ ಕನಸಲ್ಲಿ ಶಿವ ಕಾಣಿಸಿಕೊಂಡು "ರಾಮ-ಲಕ್ಷ್ಮಣ" ಎಂಬ ಎತ್ತುಗಳನ್ನು ಬಲಿಕೊಟ್ಟರೆ ಕಟ್ಟೆ ನಿಲ್ಲುತ್ತದೆ ಎನ್ನುತ್ತಾರೆ. ಅದರಂತೆ ಎತ್ತುಗಳನ್ನು ಬಲಿಕೊಟ್ಟರು ನಿಲ್ಲುವುದಿಲ್ಲ. ಮತ್ತೆ ಸ್ವಪ್ನದಲ್ಲಿ ಕಿರಿಯ ಸೊಸೆ ಬಾಣಂತಿಯನ್ನು ಬಲಿಗೊಟ್ಟರೆ ನಿಲ್ಲುತ್ತದೆ ಎಂದು ಶಿವ-ಪಾರ್ವತಿ ಹೇಳುವರು. ಆಗ ಮಾವ ಸೊಸೆಯನ್ನು ಬಲಿ ಕೊಡಲು ಒಪ್ಪದೆ ಹಿಂಜರಿದು ದುಃಖಿಸಿದಾಗ ಸೊಸೆಯೇ ಕಟ್ಟೆಯನ್ನು ಉಳಿಸಲು ಮಗುವಿನ ಸಹಿತ ಕೆರೆಗೆ ಬಂದು ಗಂಗೆಯ ಪೂಜೆ ಮಾಡಿ ದೃಢತೆಯಿಂದ ಕೆರೆಯಲ್ಲಿ ಲೀನವಾದಳು. ಈ ಕಥೆಯಲ್ಲಿ ಸೊಸೆಯ ಬಲಿಗಾಗಿ ಮಾವ ದುಃಖಿಸುವುದು ಮತ್ತು ಗಂಡನ ಸುಳಿವು ಇಲ್ಲದಿರುವುದು ಮುಖ್ಯವಾದ ಅಂಶವಾಗಿದೆ. ಇಲ್ಲಿ ಮಾವ ಹೆಣ್ಣಿನ ಬಗ್ಗೆ ಮಾನವೀಯತೆಯನ್ನು ಉಳಿಸಿಕೊಂಡುದರ ಪ್ರತೀಕವಾಗಿ ಕಾಣುತ್ತಾನೆ.

ಊರಿನ ಜನರ ಹಿತಸಂರಕ್ಷಣೆಗಾಗಿ ಮಲ್ಲೇಗೌಡ ಕೆರೆಯನ್ನು ಕಟ್ಟಿಸಿದ. ಆದರೆ ಕೆರೆಯಲ್ಲಿ ನೀರು ಬರದೆ ಕೆರೆಗೆ ಆಹುತಿ ಕೇಳುತ್ತದೆ. ಗೌಡ ಇದರಿಂದ ಊರನ್ನು ಬಿಟ್ಟು ಹೋಗುತ್ತಾನೆ. ಮಲ್ಲೆಗೌಡ ತನ್ನ ಹಿರಿಯ ಸೊಸೆ ಹೊನ್ನಮ್ಮನನ್ನು ಬಲಿಯಾಗುವಂತೆ ಹೇಳಿದಾಗ, ವಿಧಿಯಿಲ್ಲದೆ ಅವಳು ಒಪ್ಪುತ್ತಾಳೆ. ಕೆರೆಗೆ ಪೂಜೆಯನ್ನು ಮಾಡಿ ಮೂರು ತಿಂಗಳ ಮಗುವಿನೊಂದಿಗೆ ಕೆರೆಗೆ ಆಹುತಿಯಾಗುತ್ತಾಳೆ. ಘಟ್ಟಕ್ಕೆ ಹೋದ ಗಂಡ ಕನಸನ್ನು ಕಂಡು ಊರಿಗೆ ಬರುವನು. ಹೆಂಡತಿ ಬಲಿಯಾದ ವಿಚಾರ ತಿಳಿದು ಹೆಂಡತಿಯನ್ನು ಕರೆಯುತ್ತಾನೆ. ಹೊರಗೆ ಬಂದ ಹೆಂಡತಿಯ ಸೆರಗನ್ನು ಹಿಡಿದುಕೊಂಡು ತಾನು ಕೆರೆಯಲ್ಲಿ ಲೀನವಾಗುತ್ತಾನೆ. ಇದರಲ್ಲಿ ಮತ್ತೊಂದು ವಿಶೇಷತೆ ಎಂದರೆ ಹೊನ್ನಮ್ಮನ ಮೈದುನ ತಾನು ಕೂಡಾ ಕೆರೆಯಲ್ಲಿ ಮುಳುಗಲು ಪ್ರಯತ್ನಿಸಿ ಹೊನ್ನಮ್ಮಳಿಂದ ಕೆರೆಯ ದಡದಲ್ಲಿ ಬಸವಣ್ಣನಾಗಿ ಮೂಡುತ್ತಾನೆ. ಇಲ್ಲಿ ಎಲ್ಲ ಕಥನ ಗೀತೆಗಳಲ್ಲಿ ಊರಿನ

ಹಿತಕ್ಕಾಗಿ, ಜನರ ಒಳಿತಿಗಾಗಿ ಕೆಲವೊಂದು ಸ್ತ್ರೀಯರು ಮೌಲ್ಯ ಒಪ್ಪಿಕೊಂಡು ಬಲಿಯಾದರೆ ಕೆಲವರು ಮೌಲ್ಯದ ವಿರುದ್ಧ ಸಿಡಿದು ಅನಿವಾರ್ಯತೆಯಿಂದ, ಒತ್ತಾಯದಿಂದ ತಪ್ಪಿಸಿಕೊಳ್ಳಲಾಗದೆ ಬಲಿಯಾಗಿದ್ದಾರೆ. ಇಲ್ಲಿ ಹೆಣ್ಣಿನ ವೈಯಕ್ತಿಕ ಅಭಿಪ್ರಾಯಕ್ಕೆ ಬೆಲೆಯೇ ದೊರೆಯುವುದಿಲ್ಲ.

ಕೋಟೆಗೆ ಬಲಿಯಾದವರಲ್ಲಿ **ಧರಣಿಯಮ್ಮ** ಪ್ರಮುಖವಾದವಳು. ಧರಣಿಯಮ್ಮನ ಮಾವ ಹೇಮಾರೆಡ್ಡಿಯು ಊರ ಸುತ್ತ ಕೋಟೆ ಕಟ್ಟಿಸಲು ರಟ್ಟಿಹಳ್ಳಿಯಿಂದ ವಡ್ಡರ ದ್ಯಾಮಣ್ಣನನ್ನು ಕರೆಯಿಸಿ ಕೋಟೆ ಕಟ್ಟಿಸಿದಂತೆ ಗೋಡೆ ಕುಸಿಯುತ್ತಾ ಬಂದಿತು. ಆಗ ಹೊತ್ತಿಗೆ ತೆಗೆಸಿದಾಗ ಕೋಟೆ ಗೋಡೆಗೆ ಬಲಿ ಕೊಡಬೇಕೆಂದು ಹೇಳುತ್ತಾರೆ. ಮಾವ ತನ್ನ ಸೊಸೆ ಧರಣಿಯಮ್ಮನನ್ನು ಬಲಿಕೊಡಲು ನಿರ್ಧರಿಸಿದನು. ಇದನ್ನು ತಿಳಿದ ಸೊಸೆ ಬೇರೆ ದಾರಿಯಿಲ್ಲದೆ ಬಲಿಯಾಗಲು ಒಪ್ಪಿದಳು.

ದೈವಸಂಬಂಧಿ ಕಥನಗೀತೆಗಳಲ್ಲಿ ಬರುವ ಮಹಿಳೆ ಜನಪದರ ದೇವತೆಯಾಗಿ ಕಾಣುತ್ತಾಳೆ. ಜನಪದ ಕಾವ್ಯಗಳಲ್ಲಿ ಬರುವ ದೇವರು ತಮ್ಮಂತೆ ಬದುಕು ನಡೆಸುತ್ತಾರೆ. ದೇವರಿಗೂ ಅಪವಾದ ತಪ್ಪಿದ್ದಲ್ಲ, ಅವರಿಗೂ ತಮ್ಮಂತೆ ಇಬ್ಬರು ಹೆಂಡತಿಯರ ಗೋಳು, ಪ್ರೇಮ, ಸವತಿ ಮತ್ಸರ, ಜಗಳ ಇವೆಲ್ಲವೂ ಇವೆ. ಇದರಿಂದ ದೇವರು ಕೂಡ ತಪ್ಪಿಸಿಕೊಳ್ಳಲಾರರು ಎಂಬ ನಂಬಿಕೆ ಜನಪದರಲ್ಲಿದೆ. ಈ ನಂಬಿಕೆಗಳನ್ನು ಕೆಲವು ಕಥೆಗಳಲ್ಲಿ ನಿರೂಪಿಸಿರುವುದನ್ನು ಗುರುತಿಸಬಹುದು. ಶಿವನ ಕಥೆಗಳಲ್ಲಿ ಬರುವ ಮಹಿಳೆಯರ **ಗಂಗೆಗೌರಿ**. ಇವರು ಶಿವನ ಮಡದಿಯರು. ಗಿರಿಜೆ ಶಿವನ ಮೊದಲ ಪತ್ನಿ. ಗಂಗೆಯನ್ನು ಎರಡನೆಯ ಹೆಂಡತಿಯಾಗಿ ಮದುವೆ ಮಾಡಿಕೊಂಡು ಬರುತ್ತಾನೆ. ತನಗೆ ಮದುವೆ ಆಗಿಲ್ಲ ಎಂದು ಗಂಗೆಗೆ ಸುಳ್ಳು ಹೇಳಿ ಅವಳನ್ನು ತನ್ನ ಜಡೆಯಲ್ಲಿ ಕೂರಿಸಿಕೊಂಡು ಗಿರಿಜೆಯ ಮನೆಗೆ ಬರುತ್ತಾನೆ. ಗಿಳಿಗಳ ಮೂಲಕ ಶಿವನ ಎರಡನೆ ಮದುವೆ ವಿಷಯ ಗಿರಿಜೆಗೆ ತಿಳಿದು ಕೋಪಮಾಡಿಕೊಳ್ಳುತ್ತಾಳೆ. ಸವತಿ ಮಾತ್ಸರ್ಯ ಕೈಲಾಸದ ಶಾಂತ ಜೀವನನ್ನು ಗೊಂದಲಕ್ಕೀಡು ಮಾಡಿತು. ಗೌರಿ ಸೂತಕವಾದಾಗ ಇದೇ ಸಮಯವೆಂದು ತಿಳಿದು ಗಂಗೆ ಗೌರಿಗೆ ಸ್ನಾನ ಮಾಡಲು ನೀರಿಲ್ಲದೆ ಮಾಯವಾಗುತ್ತಾಳೆ. ಕೊನೆಗೆ ಗೌರಿಯೇ ಸೋತು ನೀರಿಗಾಗಿ ತನ್ನ ಸವತಿಯನ್ನು ಕೇಳಿದಾಗ ಗಂಗೆ ಒಪ್ಪುವುದಿಲ್ಲ. ಆಗ ಗೌರಿ "ನನ್ನ ಭಾಗದ ಗಂಡನ ನಿನಗೆ ಗುಟ್ಟಾಗಿ ಕೊಡತೀನಿ" ಎಂದಾಗ ಗಂಗೆ ಒಪ್ಪಿಕೊಂಡು ಗೌರಿಯ ಸೂತಕ ತೀರಿಸುವಳು. ಆದರೆ ಮಾತಿಗೆ ತಪ್ಪಿದ ಗೌರಿಯ ಜೊತೆ ಗಂಗೆ ಸೋಲೊಪ್ಪದೆ ಪಟ್ಟು ಹಿಡಿದು ಶಿವನನ್ನು ಪಡೆಯುತ್ತಾಳೆ. ಈ ಕಥನಗೀತೆಯಲ್ಲಿ ಗಂಗೆ-ಗೌರಿ ಸಾಮಾನ್ಯ ಮನುಷ್ಯರಂತೆ ಆಸೆ, ದ್ವೇಷ, ಅಸೂಯೆ, ಮತ್ಸರಗಳೆಲ್ಲವು ದೇವರುಗಳಲ್ಲಿವೆ ಎಂಬುದನ್ನು ತೋರಿಸುತ್ತವೆ. ಗೌರಿ ತನ್ನ ಗಂಡನನ್ನು ಬಿಟ್ಟುಕೊಡಲು ಒಪ್ಪದೆ ಸಾಕಷ್ಟು ಕಾಡಿದರೂ ಬಗ್ಗದೆ ಗಂಗೆ ಶಿವನನ್ನು ಪಡೆಯುತ್ತಾಳೆ. ಸುಂದರಿಯಾದ ಹೆಣ್ಣನ್ನು ಕಂಡಾಗ ಶಿವನು ಸಾಮಾನ್ಯ ಮನುಷ್ಯನಂತೆ ತಾಳಿಕಟ್ಟಿದ ಹೆಂಡತಿಯನ್ನು ಮರೆತು ಗಂಗೆಯ ಪ್ರೀತಿ ಪಡೆಯಲು ಸುಳ್ಳು ಹೇಳುವುದನ್ನು ಕಾಣಬಹುದು. ಸವತಿಯ ಮತ್ಸರ, ಗಿಳಿಗಳ ಉಪ್ಪಿನ ಋಣ ಇವೆರೆಡು ಅಂಶ ಮಾನವನ ಸ್ವಭಾವವನ್ನು ತೋರಿಸುತ್ತವೆ. ಗಂಗೆ-ಗೌರಿಯರಲ್ಲಿ ಸವತಿ ಮತ್ಸರವಿದ್ರು, ಗಂಗೆ,

ಗೌರಿಯ ಮಗನನ್ನು ತನ್ನ ಮಗನಂತೆ ಕಾಣುವುದರ ಮೂಲಕ ತಾಯಿಯ ಮಮತೆ-ವಾತ್ಸಲ್ಯವನ್ನು ತೋರಿಸುತ್ತಾಳೆ.

ಕನ್ನಡ ಜನಪದ ಕಾವ್ಯದಲ್ಲಿ **ಚಾಮುಂಡಿ-ನಂಜುಂಡರಿಗೆ** ಸಂಬಂಧಿಸಿದಂತೆ ಅನೇಕ ಘಟನೆಗಳನ್ನು ಗುರುತಿಸಬಹುದು. ಈ ಕಥನ ಗೀತೆಯಲ್ಲಿ ಬರುವ ದೇವಿರಿ-ಚಾಮುಂಡಿ ಸ್ತ್ರೀ ಪಾತ್ರಗಳು ಮಾನವ ಸಂಬಂಧದ ಹಾಗೆ ಬೇಕು-ಬೇಡಗಳನ್ನು, ಅವಮಾನ ತಿರಸ್ಕಾರಗಳನ್ನು ವ್ಯಕ್ತಪಡಿಸುತ್ತ ವೆಂಬುದನ್ನು ತಿಳಿಯಬಹುದು. ಕುಲದಲ್ಲಿ ಕಡಿಮೆಯಾದ ಚಾಮುಂಡಿ ಮನೆಗೆ ಹೋದ ನಂಜುಂಡನಿಗೆ ದೇವಿರಿ ಸೂತಕ ಶಿಕ್ಷೆ ಕೊಟ್ಟು, ಮತ್ತೆ ಗಂಡನನ್ನು ಒಳಗೆ ಕರೆದುಕೊಂಡು ಗೌರವಿಸುವುದು ತನ್ನ ಕರ್ತವ್ಯ ಎಂದು ದೇವರಾದ ಅವಳು ಸಾಮಾನ್ಯ ಮಾನವಳಂತೆ ತೋರಿಸಿದ್ದಾಳೆ. ಚಾಮುಂಡಿ-ದೇವಿರಿ ನೇರವಾಗಿ ಜಗಳ ಮಾಡುವುದಿಲ್ಲ. ಏಕೆಂದರೆ ನಂಜುಂಡ ಚಾಮುಂಡಿಯನ್ನು ದೇವಿರಿ ಮನೆಗೆ ಕರೆತರುವುದಿಲ್ಲ. ಮನುಷ್ಯರಿಗೆ ಇರುವಂತೆ ರಾಗ, ದ್ವೇಷ, ಆಸೆ-ಆಕಾಂಕ್ಷೆ, ಚಪಲತೆ, ಆತುರ-ಕಾತುರ ಎಲ್ಲವು ದೇವರಿಗೆ ಇರುತ್ತವೆ ಎಂಬುದನ್ನು ಜನಪದರು ತಾವು ನಂಬಿರುವ ದೇವರುಗಳ ಜೀವನದಿಂದ ವ್ಯಕ್ತಪಡಿಸುತ್ತಾರೆ. ಇಲ್ಲಿ ಚಾಮುಂಡಿಗೆ ನೈತಿಕ ಹೊಣೆಯ ಅರಿವು ಇರುತ್ತದೆ. ಚಾಮುಂಡಿಯ ಮನಸ್ಸು ನಂಜುಂಡನ ಪವಿತ್ರ ಪ್ರೇಮಕ್ಕೆ ಹಾತೊರೆಯುತ್ತದೆ.

ಆದಿಚುಂಚನಗಿರಿ **ಭೈರವ ಮಾಳವ್ವನ** ಪ್ರಣಯ ಪ್ರಸಂಗ ಪಾರ್ವತಿಗೆ ತಿಳಿದಾಗ ಮಾಳವ್ವನನ್ನು ಗಂಗಾಧರ ಹೇಗೆ ಕರೆತಂದನೆಂದು ದುಃಖ ತಪ್ತಳಾಗಿ ತನ್ನ ಗಂಡನನ್ನು ಒಲಿಸಿಕೊಂಡ ಮಾಳವ್ವ ಇರುವ ಕಡೆ ಬರುತ್ತಾಳೆ. ಮಾಳವ್ವನ ಸೌಂದರ್ಯವನ್ನು ಕಂಡು ಪಾರ್ವತಿಗೆ ಸಿಟ್ಟು, ಆವೇಶ ಬಂದರೂ ಅದನ್ನು ತಡೆದುಕೊಂಡು ತನ್ನ ಗಂಡನನ್ನು ತಿದ್ದಲು ಪ್ರಯತ್ನಮಾಡುತ್ತಾಳೆ. ಆದರೆ ಭೈರವ ಅವಳ ಮಾತನ್ನು ಧಿಕ್ಕರಿಸಿ ಕುರುಬರ ಮಾಳಿಯನ್ನು ಬಿಡಲು ಸಾಧ್ಯವಿಲ್ಲ ಎಂದು ಧೈರ್ಯದಿಂದ ನಿರ್ದಾಕ್ಷಿಣ್ಯವಾಗಿ ಹೇಳುತ್ತಾನೆ. ಗಂಡ ಮೊಂಡುತನ ಪಾರ್ವತಿಗೆ ಆಶ್ಚರ್ಯವಾದರು ನಿರಾಶಳಾಗದೆ ಮತ್ತೆ ಗಂಡನ ಮನವೊಲಿಸುವ ಪ್ರಯತ್ನ ಮಾಡುವುದನ್ನು ಕಾಣಬಹುದು. ಪಾರ್ವತಿ ಮಾಳವ್ವನಿಗೆ ನಿನ್ನ ಕೊರಳಿಗೆ ಹದಿನಾರು ಹಾವು ಸುತ್ತುವೆ ಎಂದು ಹೆದರಿಸಿದರು ಇಲ್ಲಿ ಭೈರವ-ಮಾಳವ್ವ ಜಗ್ಗುವುದಿಲ್ಲ. ಕೊನೆಗೆ ಪಾರ್ವತಿಯೇ ಸೋತು ಅವರಿಬ್ಬರ ಜೊತೆಯಲ್ಲಿ ಹೊಂದಿಕೊಂಡು ಹೋಗುವುದು ಅನಿವಾರ್ಯವಾಗುತ್ತದೆ. ಭೈರವ ಪಾರ್ವತಿಯ ಉದಾರ ಗುಣ ಕಂಡು ಇಬ್ಬರನ್ನು ಸಮನಾಗಿ ಪ್ರೀತಿಸುತ್ತಾನೆ. ಇಲ್ಲಿ ಭೈರವ ಹಟವಾದಿ, ಧೈರ್ಯವಂತನಾಗಿ ಕಾಣುತ್ತಾನೆ. ಗಂಡ ಏನೇ ತಪ್ಪು ಮಾಡಿದರು ಹೊಂದಿಕೊಂಡು ಹೋಗಬೇಕು ಎಂಬ ಮನೋಭಾವ ವನ್ನು ಜನಪದರು ತಾವು ಪೂಜಿಸುವ ದೇವರಲ್ಲೂ ಸಹ ಕಾಣುತ್ತಾರೆ.

**ಮೈಲಾರಲಿಂಗ-ಕೋಮಲೆಯರ** ಪ್ರಣಯಪ್ರಸಂಗ ವಿಚಿತ್ರವಾದಂತಹದು. ಇಲ್ಲಿ ಕೋಮಲೆ ಮದುವೆಯಾದ ಹೆಣ್ಣು ಅದರಲ್ಲೂ ಮಗುವಿನ ತಾಯಿ ಇಂಥ ಹೆಣ್ಣನ್ನು ಬಲವಂತವಾಗಿ ಮೈಲಾರಕ್ಕೆ ಕರೆದುಕೊಂಡು ಹೋಗುತ್ತಾನೆ. ಮೈಲಾರಲಿಂಗನ ಮೊದಲ ಹೆಂಡತಿ ಗಂಗೆಮಾಳಿಗೆ ನಿಜ ವಿಷಯ ತಿಳಿದು ಕೋಪಮಾಡಿಕೊಳ್ಳುತ್ತಾಳೆ. ಆಗ ಮೈಲಾರಲಿಂಗ ಬಲಗಡೆ ಅವಳು

ಎಡಗಡೆ ನೀನು ಇರುವಂತೆ ಹೇಳುತ್ತಾನೆ. ನೋವನ್ನು ನುಂಗಿಕೊಂಡು ಅನಿವಾರ್ಯವಾದ ಪರಿಸ್ಥಿತಿಗೆ ಹೊಂದಿಕೊಳ್ಳುವುದು ಮಹಿಳೆಯ ಸ್ವಭಾವ ಎಂಬ ಅಂಶವನ್ನು ಗಮನಿಸಬಹುದು. ಪುರುಷನಾದವನು ಇಬ್ಬರನ್ನು ಮೋಹಿಸಿ ಇಬ್ಬರನ್ನು ಪ್ರೀತಿಸಿ ತನ್ನಿಚ್ಛೆಯಂತೆ ಹೇಗೆ ನಡೆಸುವನು ಎನ್ನುವುದು ಒಂದು ವೈಶಿಷ್ಟ್ಯ. ಇಲ್ಲಿ ಗೊರವನ ವೇಷದಲ್ಲಿ ಬಂದು ಮೈಲಾರಲಿಂಗ ಕೋಮಲೆಯನ್ನು ಬಲವಂತವಾಗಿ ತನ್ನವಳನ್ನಾಗಿ ಮಾಡಿಕೊಳ್ಳುವುದು ರಸಿಕತೆಯಾಗಿದೆ. ಮಾನವ ಸಹಜವಾದ ಸ್ವಭಾವದಂತೆ ಸಮಾಜದ ರೀತಿ-ನೀತಿ, ನೈತಿಕ ಹೊಣೆಯನ್ನು ಮರೆತು ಹೆಣ್ಣನ್ನು ಬಲವಂತವಾಗಿ ಪಡೆಯುವ ವ್ಯಕ್ತಿತ್ವವನ್ನು ಮೈಲಾರಲಿಂಗ ದೇವರಲ್ಲಿ ಕಾಣಬಹುದು.

ಗಂಗಾಧರ-ಹೊನ್ನಾಲದೇವಿ ಕಥನಗೀತೆಯಲ್ಲಿಯು ಪುರುಷ ಪ್ರಧಾನ ಸಮಾಜದ ಧೋರಣೆ ಎದ್ದು ಕಾಣುತ್ತದೆ. ಹೊನ್ನಾಲದೇವಿ ಮದುವೆಯಾಗಿ ಒಂದು ಮಗುವಿನ ತಾಯಿ. ಬಾಣಂತಿಯಾದ ಹೊನ್ನಾಲದೇವಿಗೆ ಮಂಕುಬೂದಿ ಎರಚಿ ಜೂಲುನಾಯಿ ಮಾಡಿಕೊಂಡು ಗಂಗಾಧರ ಅಪಹರಣ ಮಾಡುತ್ತಾನೆ. ಹೊನ್ನಾಲದೇವಿಯ ಗಂಡ ವಸಂತರಾಯ ಗಂಗಾಧರನನ್ನು ಎಷ್ಟು ಬೇಡಿಕೊಂಡರು ಅವನ ಹೆಂಡತಿಯನ್ನು ಬಿಟ್ಟುಕೊಡದೆ ಗಂಗಾಧರ ಮಾಯವಾಗುತ್ತಾನೆ. ಮದುವೆಯಾಗಿ ಹೆಂಡತಿ ಇದ್ದಾಗಲು ಕಿರಿಯ ಹೆಂಡತಿಯನ್ನು ತರುವುದು ಸಮಾಜದ ನೈತಿಕತೆಗೆ ಪ್ರಶ್ನಾರ್ಹವಾದರೂ ಪುರುಷ ಪ್ರಧಾನ ಸಮಾಜವಾಗಿದ್ದರಿಂದ ಮಹಿಳೆಯರು ಸವತಿ ಮಾತ್ಸರ್ಯದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಸಾಮಾನ್ಯ ಹೆಣ್ಣು ಗಂಡನ ದರ್ಪ, ದೌರ್ಜನ್ಯಕ್ಕೆ ಒಳಗಾಗಿ ನಲುಗಿಹೋಗುತ್ತಾಳೋ, ಹಾಗೆ ದೇವತಾ ಮಹಿಳೆಯರಾದರು ಕೂಡ ಪುರುಷ ದೇವರುಗಳ ದರ್ಪ, ದೌರ್ಜನ್ಯ, ಕೋಪಕ್ಕೆ ಒಳಗಾಗಿ ಅನಿವಾರ್ಯತೆಯಿಂದ ತಮ್ಮ ಗಂಡ ಮತ್ತು ಗಂಡನ ಕಿರಿಯ ಹೆಂಡತಿ ಜೊತೆ ಹೊಂದಿಕೊಂಡು ಸಹಬಾಳ್ವೆ ನಡೆಸುತ್ತಾರೆ. ಗಂಗಾಧರನ ಹೆಣ್ಣಿನ ಮೋಹ ಸಾಮಾನ್ಯ ಮನುಷ್ಯನನ್ನು ಮೀರಿಸಿದ್ದು ಎಂದರೂ ತಪ್ಪಾಗಲಾರದು.

**ವರನಂದಿ-ಚೆಲುವರಾಯರ** ಪ್ರಸಂಗದಲ್ಲಿ ಅನ್ಯ ಜಾತಿಯ ಸಂಬಂಧಗಳ ಮದುವೆಯ ಪ್ರತಿಭಟನೆಯನ್ನು ಗುರುತಿಸಬಹುದು. ವರನಂದಿಯನ್ನು ಕೆಲವರು ತುರುಕರ ಹೆಣ್ಣೆಂದು, ಕೆಲವರು ಪಾಳೇಗಾರನ ಮಗಳೆಂದು ಊಹಿಸುವರು. ಇಲ್ಲಿ ಚೆಲುವಯ್ಯ ಹಗಲೆಲ್ಲ ಗೊಂಬೆಯಾಗಿದ್ದು, ಇರುಳೆಲ್ಲ ಪುರುಷನಾಗಿ ವರನಂದಿಯೊಡನೆ ನಲಿದಾಡುತ್ತಿದ್ದ. ದೇವರುಗಳಲ್ಲಿಯು ಜಾತಿಯ ಕಲಹ ಇಲ್ಲಿ ಕಂಡುಬರುತ್ತದೆ. ವರನಂದಿ ತುರುಕರ ಹೆಣ್ಣೆಂದು ಚೆಲವಯ್ಯನ ಸಂಬಂಧಿಕರಾದ ಭೈರವ, ನಂಜಯ್ಯ, ಬಿಳಿಗಿರರಂಗಯ್ಯ, ತಿಮ್ಮಪ್ಪ ಇವರ್‍ಯಾರು ಮದುವೆಗೆ ಬರದೆ ಹೀಯಾಳಿಸುತ್ತಾರೆ ಸಾಮಾನ್ಯ ಮನುಷ್ಯರು ಬೇರೆ ಜಾತಿಯಲ್ಲಿ ವಿವಾಹವಾಗುವುದನ್ನು ಹೇಗೆ ಖಂಡಿಸುವರೋ ಹಾಗೇ ದೈವಗಳಲ್ಲಿರುವ ದೇವರುಗಳಲ್ಲಿ ಕಾಣಬಹುದು. ಇಲ್ಲಿಯು ಚೆಲುವಯ್ಯನ ಮಡದಿ ತುಳಸಮ್ಮ ಗಂಡನನ್ನು ನಿಂದಿಸಿ ಮಾತಾಡುತ್ತಾಳೆ. ಸಾಮಾನ್ಯ ಜನರಲ್ಲಿ ನಡೆಯುವ ಜಾತಿಯ ಕಲಹ, ತಾರತಮ್ಯ ಜನಪದ ದೇವರುಗಳಲ್ಲಿ ನೋಡಬಹುದು.

ವಡ್ಡಗೇರಿ ನಾಗಮ್ಮ ಮತ್ತು ಈರಣ್ಣನ ಮದುವೆ ಬಹಳ ವೈಭವದಿಂದ ನೆರವೇರುತ್ತದೆ. ಸೊಸೆಯನ್ನು ಕರೆದುಕೊಂಡು ಅತ್ತೆ ಪದ್ಮವ್ವ ಬರುವಾಗ 'ನಿನ್ನ ಬಾಲಿಗ್ಹೆಚ್ಚಾಗಿ ಸಲವಮ್ಮ' ಎಂದು ತೌರಿನವರು ಮಗಳನ್ನು ಹರಸಿ ಕಳಿಸುತ್ತಾರೆ. ಮನೆಯಲ್ಲಿ ನಾಗಮ್ಮನನ್ನು ಎಲ್ಲರೂ ಪ್ರೀತಿಯಿಂದ ನಾಗಮ್ಮನನ್ನು ಕಾಣುತ್ತಿದ್ದರು. ಹೀಗಿರುವಾಗ ಒಂದು ದಿನ ಹೀರಣ್ಣ' ತೊತ್ತಿನ ಮಗನ ಜಗಳಕ್ಹೋಗ ಬೇಕು ಕತ್ತಿಗೆ ಅಪ್ಪಣೆ ಕೊಡೆತಾಯಿ' ಎಂದು ಈರಣ್ಣ ತಾಯಿಯನ್ನು ಬೇಡಿದನು. ನೋಡಿಕೊ ಎಂದು ತಾಯಿಗೆ ಹೇಳಿ ರಣರಂಗಕ್ಕೆ ಹೊರಟು ಹೋಗುತ್ತಾನೆ.

ಅತ್ತೆ ಸೊಸೆ ಇಬ್ಬರು ಅನ್ಯೋನ್ಯವಾಗಿ ಬಾಳುತ್ತಿದ್ದರು ಒಮ್ಮೆ ಇಬ್ಬರು ಸಾಲಿನ ಹೊಲದಲ್ಲಿ ಹತ್ತಿ ಬಿಡಿಸಲು ಹೋಗುತ್ತಾರೆ. ನಾಗಮ್ಮಗೆ ಬಾಯಾರಿಕೆಯಾಗುತ್ತದೆ. ನೀರನ್ನು ಹುಡುಕುತ್ತಾ ಮರಳಿನಲ್ಲಿ ನೀರಿಗಾಗಿ ಚಿಲುಮೆ ತೆಗೆದಾಗ ಗಂಡನ ಕತ್ತಿ ತಲೆಸಿಕ್ಕಿದ್ದು ಭಯಂಕರ ಚಿತ್ರ ಎದ್ದು ಕಾಣುತ್ತದೆ. ತನ್ನ ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ತವರಿನವರನ್ನು ಹೀಗೆ ಶಪಿಸುತ್ತಾಳೆ.

**ಅಡಿಟಿಪ್ಪಣಿಗಳು**

೧. ಎಂ.ಕೆ. ರುಕ್ಮಿಣಿ 'ಜನಪದ ಕಥನಗೀತೆಗಳಲ್ಲಿ ಮಹಿಳೆ ಒಂದು ಸಾಂಸ್ಕೃತಿಕ ಅಧ್ಯಯನ ಪುಟ ೭೫

೨. ಅದೇ ಪು. ೯೨

೩. ಅದೇ ಪು. ೧೦೩

೪. ಕಾಳೇಗೌಡ ನಾಗವಾರ; ಬಯಲು ಸೀಮೆಯ ಲಾವಣಿಗಳು ಜಾಗಲೆ ಪುಟ ೯೯

೪. ಕೃಷ್ಣಮೂರ್ತಿ ಹನೂರು (ಸಂ), ಕತ್ತಾಲದಾರಿ ದೂರ, ಪು. ೧೫೨-೧೫೩

೫. ಕ್ಯಾತನಹಳ್ಳಿ ರಾಮಣ್ಣ, ಬಿಜಾಪುರ ಜಿಲ್ಲೆಯ ಲಾವಣಿಗಳು, ಪು. ೮೨

೭. ಕೃಷ್ಣಮೂರ್ತಿ ಹನೂರು (ಸಂ), ಕತ್ತಾಲದಾರಿ ದೂರ, ಪು. ೧೯೨

೭. ಅದೇ ಪು. ೧೯೫

೮. ಎಂ.ಕೆ. ರುಕ್ಮಿಣಿ, ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೭೫

೯. ಅದೇ ಪು. ೯೨

೧೦. ದೇವೇಂದ್ರಕುಮಾರ ಹಕಾರಿ, ಜಾನಪದ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು. ೨೦೭

೧೧. ಕೃಷ್ಣಮೂರ್ತಿ ಹನೂರು (ಸಂ), ಕತ್ತಾಲದಾರಿ ದೂರ, ಪು. ೧೦

೧೨. ಅದೇ ಪು. ೨೯

೧೩. ಅದೇ, ಮಹಾಸತಿ ಕಾಟವ್ವ, ಪು. ೯೬

೧೪. ಜೀ.ಶಂ. ಪರಮಶಿವಯ್ಯ, ಜನಪದ ಖಂಡಕಾವ್ಯಗಳು, 'ಹಿರಿದಮ್ಮವ್ವ', ಪು. ೩೫

೧೫. ಕಾಳೇಗೌಡ ನಾಗವರ, ಬಯಲುಸೀಮೆಯ ಲಾವಣಿಗಳು, ವಡ್ಡಿಗೇರೆ ನಾಗಮ್ಮ, ಪ್ರಸ್ತಾವನೆ, ಪು. ೨೩

೧೬. ಎಂ.ಕೆ. ರುಕ್ಮಿಣಿ, ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೪೨

೧೭. ಕೃಷ್ಣಮೂರ್ತಿ ಹನೂರು (ಸಂ), ಕತ್ತಾಲದಾರಿ ದೂರ, ಸತಿ ಚೆನ್ನಮ್ಮ, ಪು. ೩೩೭

೧೮. ಅದೇ ಪು. ೩೩೮

೧೯. ಅದೇ ಪು. ೩೩೮

೨೦. ಎಂ.ಕೆ. ರುಕ್ಮಿಣಿ, ಜನಪದ ಕಥನಗೀತೆಗಳಲ್ಲಿ ಮಹಿಳೆ, ನೀಲಕಂಠ ರೂಪಾವತಿ. ಪು. ೫೬

೨೧. ಜೀ.ಶಂ. ಪರಮಶಿವಯ್ಯ, ಜನಪದ ಖಂಡಕಾವ್ಯಗಳು 'ನಾಗವ್ವ' ಪು. ೩೫

೨೨. ಎಂ.ಕೆ. ರುಕ್ಮಿಣಿ, ಜನಪದ ಕಥನಗೀತೆಗಳಲ್ಲಿ ಮಹಿಳೆ, ವಡ್ಡರಗೆರೆ ನಾಗಮ್ಮ ಪು.೧೩೬

೨೩. ಎಂ.ಕೆ. ರುಕ್ಮಿಣಿ, ಜನಪದ ಕಥನಗೀತೆಗಳಲ್ಲಿ ಮಹಿಳೆ, ಈರೋಬಿ ಪು. ೧೪೭

೨೪. ಎಂ.ಕೆ. ರುಕ್ಮಿಣಿ, ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೭೧

## ಅಧ್ಯಾಯ ಐದು

# ಜನಪದ ಕಥನಗೀತೆಗಳ ವರ್ಗೀಕರಣ ಮತ್ತು ಮಹಿಳಾ ಪ್ರತಿನಿಧೀಕರಣ

೫.೧. ಸಹಗಮನ ಕಥನಗೀತೆಗಳಲ್ಲಿ ಮಹಿಳೆ

೫.೨. ವಾಸ್ತವಿಕ ಕಥನಗೀತೆಗಳಲ್ಲಿ ಮಹಿಳೆ

೫.೩. ರಮ್ಯ ಕಥನಗೀತೆಗಳಲ್ಲಿ ಮಹಿಳೆ

೫.೪. ತ್ಯಾಗ ಬಲಿದಾನ ಕಥನಗೀತೆಗಳಲ್ಲಿ ಮಹಿಳೆ

೫.೫. ದೈವ ಸಂಬಂಧಿ ಕಥನಗೀತೆಗಳಲ್ಲಿ ಮಹಿಳೆ

೫.೬. ಪೌರಾಣಿಕ ಕಥನಗೀತೆಗಳಲ್ಲಿ ಮಹಿಳೆ

## ಅಧ್ಯಾಯ ಐದು

# ಜನಪದ ಕಥನಗೀತೆಗಳ ವರ್ಗೀಕರಣ ಮತ್ತು ಮಹಿಳಾ ಪ್ರತಿನಿಧೀಕರಣ

ಜನಪದ ಕಥನಗೀತೆಗಳ ದೀರ್ಘ ಪರಂಪರೆಯನ್ನುಳ್ಳ ಕಥೆಗಳನ್ನು ಒಳಗೊಂಡಿವೆ. ಮುಖ್ಯವಾಗಿ ಇವು ಹಾಡುವ ಪರಂಪರೆಯುಳ್ಳವು. ಜನಪದ ಕಥನಗೀತೆಗಳು ಜನಪದ ತ್ರಿಪದಿಗಳಿಗಿಂತ ದೀರ್ಘ ವಾಗಿಯೂ, ಜನಪದ ಮಹಾಕಾವ್ಯಗಳಿಗಿಂತ ಕಡಿಮೆ ಪ್ರಮಾಣದ ಕಥಾನಕಗಳನ್ನು ಒಳಗೊಂಡಿವೆ. ಜನಪದ ಖಂಡಕಾವ್ಯಗಳಲ್ಲಿ ಹೆಣ್ಣು ಪ್ರಧಾನವಾಗಿ ಕಂಡು ಬರುತ್ತಾಳೆ. ಈ ಎಲ್ಲಾ ಕಥಾನಕಗಳಲ್ಲಿ ಹೆಣ್ಣಿನ ಅಂತರಾಳದ ನೋವು, ಸಂಕಟ, ಅವಮಾನಗಳು ಅಭಿವ್ಯಕ್ತಗೊಂಡಿವೆ. ಪುರುಷ ಪ್ರಧಾನ ಸಮಾಜ ರೂಪಿಸಿಕೊಂಡು ಬಂದ ಮೌಲ್ಯ, ನಂಬಿಕೆ, ಸಿದ್ಧಾಂತಗಳಿಗೆ ವ್ಯತಿರಿಕ್ತವಾಗಿ ಬದುಕದೇ ಇರುವಂತಹ, ಪ್ರತಿಭಟಿಸದೇ ಇರುವಂತಹ ಸಂದರ್ಭ ಮತ್ತು ಆ ಕಾಲದ ಸಮಾಜ ರೂಪಿಸಿಕೊಂಡಿದ್ದು ದುರಂತವಾಗಿ ಕಾಣಿಸುತ್ತದೆ. ಇಷ್ಟಾದರೂ ಈ ಕಥನಗಳ ಸ್ತ್ರೀಯರು ಒಂದಲ್ಲ ಒಂದು ಬಗೆಯಲ್ಲಿ ತಮ್ಮ ದಿಟ್ಟತನವನ್ನು ತೋರಿಸುತ್ತಾರೆ. ಅದು ಸಾಧ್ಯವಾಗದೇ ಇರುವಾಗ ತಮ್ಮ ಬಲಿತ್ಯಾಗಗಳನ್ನು ತೋರ್ಪಡಿಸುತ್ತಾರೆ.

ಉತ್ತರೆ ಉತ್ತರ ಮಳೆಯಾಗುವುದು, ಈರೋಬಿ ಬೆಂಕಿಗೆ ಆಹುತಿಯಾದುದು. ಕೆರೆ ಹೊನ್ನಮ್ಮ ಕೆರೆಗೆ ಹಾರವಾದದ್ದು, ನಾಗವ್ವ ಕೆಂಡ ಹಾರಿದ್ದು, ಹುಳಿಯಾರ ಕೆಂಚಮ್ಮ ಕೆರೆಗೆ ಹಾರವಾದದ್ದು, ಸಂಪನ್ನೆ, ಹಿರಿದಿಮ್ಮವ್ವ ಮತ್ತು ಕೊಂತ್ಯಮ್ಮ ಇತ್ಯಾದಿ ಇವರೆಲ್ಲಾ ಸಾಮಾಜಿಕ ಕಟ್ಟುಪಾಡುಗಳಿಗೆ ಬಲಿಯಾದಂತವರೇ. ಈ ಬಗೆಯ ಬಲಿದಾನಗಳನ್ನು ನಮ್ಮ ಜನಪದ ಸಮಾಜದ ತನ್ನ ಕಣ್ಣೆದುರಿನ ಆದರ್ಶವೆಂಬಂತೆ ವೈಭವೀಕರಿಸುತ್ತಲೇ ಬಂದಿದೆ. ಊಳಿಗಮಾನ್ಯ ಕಾಲಘಟ್ಟದಲ್ಲಿ

ಪಾಳೇಗಾರಿಕೆಗಳಂತಹ ಸಾಮಂತಶಾಹಿ ವ್ಯವಸ್ಥೆಯಲ್ಲಿ ರೂಪಗೊಂಡ ಈ ಬಗೆಯ ಎಲ್ಲಾ ಕಥಾನಕಗಳು ಮಾತೃಪ್ರಧಾನ ವ್ಯವಸ್ಥೆಯನ್ನು (ತಾಯಿ ಮೂಲ ಸಂಸ್ಕೃತಿಯನ್ನು) ಕಣ್ಣಿಗೆ ನಮ್ಮೆದುರು ತೆರೆದಿಡುತ್ತವೆ. ಅಂತಹ ಕಥನಗೀತೆಗಳನ್ನು ನಾವು ಮುಖ್ಯವಾಗಿ ಈ ಕೆಳಗಿನ ಕಥನಗೀತೆಗಳಲ್ಲಿ ಮಹಿಳೆಯರನ್ನು ಯಾವ ರೀತಿಯಾಗಿ ತೊಡಗಿಸಿಕೊಂಡಿದ್ದಾರೆಂಬುದನ್ನು ಅವಲೋಕಿಸಬಹುದು.

ಜನಪದ ಕಥನಗೀತೆಗಳನ್ನು ಕುರಿತು ಹಲವಾರು ವಿದ್ವಾಂಸರು ವಿಭಿನ್ನ ನೆಲೆಯಲ್ಲಿ ವರ್ಗೀಕರಣ ಮಾಡಿರುವುದನ್ನು ಕಾಣಬಹುದು. ಅಂತಹ ವರ್ಗೀಕರಣಗಳಲ್ಲಿ ವಸ್ತು ಆಧಾರಿತ ಅಥವಾ ವಸ್ತು ಪ್ರಧಾನ ದೈವ ಪ್ರಧಾನ ಹಾಗೂ ಆಚರಣಾ ಪ್ರಧಾನ ವರ್ಗೀಕರಣಗಳನ್ನು ಕಾಣಬಹುದು. ಪ್ರಸ್ತುತ ಅಧ್ಯಯನದಲ್ಲಿ ಕಥನಗೀತೆಗಳು ಅನಾವರಣ ಮಾಡುವ ವಿವಿಧ ವಸ್ತುಗಳನ್ನು ಆಧರಿಸಿ ಈ ಕೆಳಗಿನಂತೆ ವರ್ಗೀಕರಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**೫.೧. ಸಹಗಮನ ಕಥನಗೀತೆಗಳಲ್ಲಿ ಮಹಿಳೆ**

ಜನಪದ ಕಾವ್ಯದಲ್ಲಿ ಬರುವ ಸ್ತ್ರೀ ಪಾತ್ರಗಳ ಸಂಖ್ಯೆ ಮತ್ತು ವ್ಯಾಪ್ತಿ, ವಿಶಾಲವಾದುದು. ಜನಪದ ಸ್ತ್ರೀ ಆದರ್ಶನಾರಿಯಾಗಿ, ತನ್ನ ಶೀಲ, ಚಾರಿತ್ರ್ಯದಿಂದ ಬೆಳೆದಿದ್ದಾಳೆ. ಹಾಗೆಯೇ ಸಮಾಜದಲ್ಲಿ ದೌರ್ಜನ್ಯ, ಶೋಷಣೆಗೆ ಬಲಿಯಾಗಿದ್ದಾಳೆ. ಇವುಗಳಲ್ಲದೆ ಮದುವೆಗೆ ಗೊತ್ತುಪಡಿಸಿದ ಗಂಡು ಮದುವೆಗೆ ಮುನ್ನ ಸಾವನ್ನಪ್ಪಿದರೆ ಅವನ ಚಿತೆಯಲ್ಲಿ ಬಲಿಯಾಗಿರುವುದು ಕಂಡುಬರುತ್ತದೆ. ಇಂದಿಗೂ ಇಂತಹ ಆದರ್ಶನಾರಿಯನ್ನು ಗುರುತಿಸಬಹುದು. ಉದಾಹರಣೆಗೆ ಮೊಳಕಾಲ್ಮೂರು ತಾಲೂಕು, ಚಿತ್ರದುರ್ಗ ಜಿಲ್ಲೆ, ರಾಯಾಪುರ ಗ್ರಾಮದಲ್ಲಿ ಗಂಡ ಆಕಸ್ಮಿಕವಾಗಿ ಸಾವನ್ನಪ್ಪಿದ. ಇದರ ನೋವು ತಡೆಯಲಾರದೇ ಹೆಂಡತಿ ನೇಣುಹಾಕಿಕೊಂಡ ಪ್ರಸಂಗ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ.



ಅಂತಹ ಆತ್ಮಾರ್ಪಣೆಯ ಕಾವ್ಯಗಳು ಜನಪದ ಸಾಹಿತ್ಯದಲ್ಲಿ ಸಾಕಷ್ಟು ದೊರಕುತ್ತವೆ. ಗಂಡ ಸತ್ತಮೇಲೆ ಬದುಕು ದುರ್ಭರವಾಗಿ ಸ್ವತಃ ಸಹಗಮನ ಮಾಡಿದ ಅನೇಕ ಸ್ತ್ರೀಯರನ್ನು ಕಾವ್ಯದಲ್ಲಿ ಗುರುತಿಸಬಹುದು. ನಿತ್ಯ ಜೀವನದಲ್ಲಿ ನಡೆದ ಸಹಗಮನದ ಘಟನೆಯನ್ನು ತೋರಿಸಿ ಸಂಪ್ರದಾಯದ ಮೂಲಕ ಹಾಡಿರುವ ಜನಪದ ಕಥನಗೀತೆಯನ್ನು ಅನೇಕ ಜನಪದ ಸಂಗ್ರಹಗಳಲ್ಲಿ ಗುರುತಿಸಬಹುದು. ಈ ಸಹಗಮನಕ್ಕೆ ಮುಖ್ಯ ಕಾರಣ ಸತ್ತು ಹೋದ ಗಂಡ ಸ್ವರ್ಗದಲ್ಲಿರುತ್ತಾನೆ. ಸ್ವರ್ಗದಲ್ಲಿರುವ ತನ್ನ ಗಂಡನನ್ನು ಸೇರಿಕೊಂಡು ಅವನ ಸೇವೆ ಮಾಡಬಹುದೆಂಬ ನಂಬಿಕೆಯು ಜನಪದ ಸಮಾಜದಲ್ಲಿ ಹಾಗೂ ಜನಪದ ಸ್ತ್ರೀಯರಲ್ಲಿ ಬೇರೂರಿತ್ತು. ಅದಕ್ಕಾಗಿ ಸಹಗಮನದ ಜೊತೆಗೆ ಅನುಗಮನ, ಕನ್ಯಾಗಮನ ಮಾಡಿರುವ ಸ್ತ್ರೀಯರನ್ನು ಕಾಣಬಹುದು. ಅದು ಜನಪದ ಸ್ತ್ರೀಯರಲ್ಲಿ ಬೇರೂರಿತ್ತು. ಜನಪದ ಸಾಹಿತ್ಯದಲ್ಲಿ ಸಹಗಮನ ಕುರಿತ ಕಥನಗೀತೆಗಳನ್ನು ಅನೇಕ ಜನಪದ

ವಿದ್ವಾಂಸರು ಸಂಗ್ರಹಿಸಿದ್ದಾರೆ. ಹಾಗೆಯೇ ಅನೇಕ ಸಂಶೋಧಕರು ತಮ್ಮ ಮಹಾ ಪ್ರಬಂಧಗಳಲ್ಲಿ ಸಹಗಮನವನ್ನು ಕುರಿತು ಚರ್ಚಿಸಿದ್ದಾರೆ. ಆ ಸಂಗ್ರಹಗಳನ್ನು ಹಾಗೂ ಮಹಾಪ್ರಬಂಧಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಇನ್ನೂ ಕೆಲವು ಹೊಸ ಆಲೋಚನೆಗಳ ಹಿನ್ನೆಲೆಯಲ್ಲಿ ಸಹಗಮನ ಕಥನಗೀತೆಗಳಲ್ಲಿ ಮಹಿಳೆಯ ಬಗ್ಗೆ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

೧. ನಾಗವ್ವ

ವಿವಾಹಕ್ಕೆ ಮೊದಲೇ ಎಳೆಯ ಹರಯದಲ್ಲೇ ಕೊಂಡವನ್ನು ಹಾರುವ ದಾರುಣ ಚಿತ್ರ ನಾಗವ್ವಳ ಜೀವನದಲ್ಲಿ ಜರುಗುತ್ತದೆ. ಕಾಡುಗೊಲ್ಲರಹಟ್ಟಿಯಲ್ಲಿ ಹುಟ್ಟಿದ ಚಿಕ್ಕವಳಾದ ನಾಗವ್ವಳನ್ನು ನವಲೂರಿನ ಮುತ್ತನ ಮಗ ಚಂದಯ್ಯನಿಗೆ ಮದುವೆಗೆ ಕೇಳುತ್ತಾರೆ. ಸೀರೆ ಉಡಲು ಬಾರದ ಮಗುವನ್ನು ಕೊಡಲು, ಮೊದಲು ಹಿರಿಯರು, ವಿರೋಧಿಸಿದರು. ನಂತರ ಮದುವೆಗೆ ಸಮ್ಮತಿಸುತ್ತಾರೆ. ಮದುವೆಯ ಸಿದ್ಧತೆಗಳಾಗುತ್ತವೆ. ಅತ್ತ, ಹೆಣ್ಣಿನ ಮನೆಯಲ್ಲಿ ಶಾಸ್ತ್ರದ ಬಳೆಗಳನ್ನು ತೋಡಿಸುವಾಗ ಅಪಶಕುನಗಳಾಗುತ್ತವೆ. ಆದರೂ ಒದಗಿದ ಲಗ್ನವನ್ನು ತಪ್ಪಿಸಲು ಸಾಧ್ಯವಾಗದೇ ಸಿದ್ಧತೆಗಳು ನಡೆಯುತ್ತವೆ.

ಮದುಮಗನಿಗೆ ಉಗುರೆಣ್ಣೆ ಮೀಯುವಾಗ ತಂಗಿ ಚೆಲುವಮ್ಮ ಬಂದು ಬೇಡರು ತಮ್ಮ ಆಡನ್ನೂ ಹೊಡೆದ ಸುದ್ಧಿಯನ್ನು ಅಣ್ಣನಿಗೆ ಹೇಳುತ್ತಾಳೆ. ತಂಗಿಯ ಮಾತನ್ನು ಕೇಳಿದ ಚೆಂದಯ್ಯ ಹಸಿಯ ಮೈಯಲ್ಲೇ ಕಾಡಿಗೆ ಹೋಗುತ್ತಾನೆ. ಅಲ್ಲಿ ಆಡುಗಳನ್ನು ಬೇಡರಿಂದ ಬಿಡಿಸಿಕೊಂಡು ಬರುತ್ತಾನೆ. ಆದರೆ ಮನೆಗೆ ಬರುವಾಗ ಕುಂಟ ಆಡೊಂದು ಕಾಣುವುದಿಲ್ಲ. ಮತ್ತೆ ಕಾಡಿನಲ್ಲಿ ಹುಡುಕುವಾಗ ಸೀಗೆಯ ಮಳೆಯಲ್ಲಿ ಅಡಗಿಕೊಂಡಿದ್ದ ಬೇಡರು ಅವನನ್ನು ಕೊಲೆಗೈಯುತ್ತಾರೆ. ಇತ್ತ ಮದುಮಗ ಕೊಲೆಯಾದ ವಿಚಾರ ತಿಳಿದಕೂಡಲೇ ಮದುವೆಯಾಗದಿದ್ದರೂ ನಾಗಮ್ಮ ಪತಿಯಾಗಿ ಸ್ವೀಕರಿಸಿದ್ದಳು. ಪತಿಯ ಸಾವಿನ ವಿಚಾರ ತಿಳಿದ ಅವಳು ಅವನ ಸಾವಿನ ಜೊತೆಯಲ್ಲೆ ತನ್ನ ಸಾವನ್ನು ಬಯಸಿದ ನಾಗಮ್ಮಳು ಹೊಂಡಕ್ಕೆ ಹೋಗಲು ಸಿದ್ಧಳಾಗುತ್ತಾಳೆ.

ಹೊಂಡಕ್ಕೆ ಬಲಿಯಾಗುವ ಹೃದಯಭೇದಕ ಸನ್ನಿವೇಶವನ್ನು ಜನಪದರು ಹೇಳಿರುವ ಈ ತ್ರಿಪದಿಯಲ್ಲಿ ಕಾಣಬಹುದು.

ಹೆಣ್ಣೀಗೆ ಮಣ್ಣು ಬಿದ್ದೊ ಕಣ್ಣಿಗೆ ಪತ್ತೆ ಬಿದ್ದು
ಸಣ್ಣ ಸೀರೆಮ್ಯಾಲೆ ಕಿಡಿ ಬಿದ್ದೊ ನಾಗವ್ವನ
ಗೆಣೆಗಂಟು ನಲುಗಿ ಉರಿದ್ಹೋದೋಣ[೧]

ನಾಗವ್ವ ಪತಿಯೊಡನೆ ಸುಂದರವಾದ ಬದುಕನ್ನು ನಡೆಯುವ ಬದಲು ಕೊಂಡದ ದುರಂತಕ್ಕೆ ಈಡಾದಳು.

ಆ ಹೆಣ್ಣಿನ ಬಾಳು ಮಣ್ಣು ಪಾಲಾಯಿತು. ಅವಳ ಮುತ್ತಿನಂಥ ಕಣ್ಣು ಸೆತ್ತೆ ಬಿದ್ದು ಕುರುಡಾಯಿತು. ಸಣ್ಣ ಸೀರೆಯ ಮೇಲೆ ಹೂಚೆಲ್ಲುವ ಬದಲಾಗಿ ಕಿಡಿಯನ್ನು ಚೆಲ್ಲಿದರು. ಅವಳ

ಹೆಣಗಂಟ ಬೆಂಕಿಯಲ್ಲಿ ನಲುಗಿ ಉರಿದು ಹೋಯಿತು. ಈ ಕತೆಯಲ್ಲಿ ಕೊಂಡ ಹೋಗುವುದು ಆಚರಣೆಯಾಗಿದ್ದರೂ. ಕೊಂಡ ಹೋಗುವುದು ಬಿಡುವುದು ನಾಗವ್ವನ ಮಾನಸಿಕ ಒಪ್ಪಿಗೆಗೆ ಸಂಬಂಧಿಸಿದೆ. ಬಲವಂತವಾಗಿ ಕೊಂಡಕ್ಕೆ ಧಾರೆಯೆರೆಯಲು ಯಾರು ಮುಂದಾಗುವುದಿಲ್ಲ. ಸ್ವತಃ ನಾಗವ್ವಳೇ ಒಪ್ಪಿಕೊಂಡು ಕೊಂಡಕ್ಕೆ ಹಾರುವುದು ಕಂಡುಬರುತ್ತದೆ. ಮುಗ್ಧತೆ ಹೇಗೆ ಮಾನವನ ಬಾಳಿನಲ್ಲಿ ದೊಡ್ಡ ಬಿರುಗಾಳಿಯನ್ನು ಎಬ್ಬಿಸುತ್ತದೆ ಎಂಬುದನ್ನು ನಾಗವ್ವಳ ವ್ಯಕ್ತಿತ್ವದಲ್ಲಿ ಗುರುತಿಸ ಬಹುದು.[೨]

ಕಥನಗೀತೆಗಳನ್ನು ಸಾಮಾನ್ಯವಾಗಿ ಹೆಣ್ಣುಮಕ್ಕಳು ಹಾಡುತ್ತಾರೆಂದು ಹೇಳಿದ ಜೀಶಂಪ ಅವರು ಇವುಗಳನ್ನು ಗಂಡುಮಕ್ಕಳು ಹಾಡುವುದನ್ನು ಗುರುತಿಸಿದ್ದಾರೆ. ನಾಗವ್ವ ಈ ಕಥನಗೀತೆ ಕಾಡುಗೊಲ್ಲರ ಸಮುದಾಯದಲ್ಲಿ ಜೀವಂತ ಪ್ರತಿಮೆಯಂತೆ ಕಂಡು ಬರುತ್ತದೆ. ಕಾಡುಗೊಲ್ಲರ ಹಟ್ಟಿ, ತುಮಕೂರು ನಾಗಮಂಗಲ ಮೊದಲಾದ ಕಡೆಗಳಲ್ಲಿ ನಾಗಮ್ಮನ ಈ ಕಥನ ಜೀವಂತವಾಗಿದೆ. ಇಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಕಾಡುಗೊಲ್ಲರ ಕಥನಗೀತೆಗಳೆಲ್ಲಾ ಹೆಚ್ಚು ದುರಂತಮಯವಾಗಿರುವುದು. ಅದಕ್ಕೆ ಕಾರಣ ಅವರು ಸ್ವತ್ತುಗಳ (ದನಕರುಗಳ) ಬಗೆಗೆ ಹೊಂದಿದ್ದ ಅನನ್ಯವಾದ ಪ್ರೀತಿ ಮತ್ತು ಹುಲ್ಲುಗಾವಲುಗಳ ಮೇಲಿದ್ದ ಅದರ ಒಡೆತನ ಇವೆಲ್ಲ ಕಾಡುಗೊಲ್ಲರ ಒಂದು ಉತ್ಪಾದಕ ವ್ಯವಸ್ಥೆಯ ಪಾಳೇಗಾರಿಕೆ ಸಂದರ್ಭವನ್ನು ತೋರಿಸುತ್ತದೆ. ಬಹುಶಃ ಪಾಳೆಯಗಾರಿಕೆಯು ಇದ್ದಂತಹ ಕಾಲಘಟ್ಟದಲ್ಲಿ ಇಂತಹ ಕಥೆಗಳು ಹುಟ್ಟಿಕೊಂಡಿರಬೇಕು. ನಿಸರ್ಗದೊಂದಿಗಿನ ಅವರ ಹೊಂದಾಣಿಕೆ, ಅವರಲ್ಲಿಯೇ ಇದ್ದ ಕಟ್ಟುನಿಟ್ಟಿನ ನಂಬಿಕೆಗಳು, ಕುಲ ಪಂಚಾಯಿತಿಗಳು ಬಾಲ್ಯವಿವಾಹ ಸಂದರ್ಭಗಳು ನಾಗವ್ವನ ಕಥೆಯನ್ನು ಓದಿದ ಮೇಲೆ ನಮ್ಮ ಅರಿವಿಗೆ ಬರುತ್ತವೆ. ತನ್ನ ಲಗ್ನದ ಮುನ್ನವೇ ಚಿಂದಯ್ಯ ತೀರಿಕೊಂಡದ್ದು ಅದಕ್ಕೆ ಬೇಕಾದ ಮದುವೆ ಶಾಸ್ತ್ರಗಳೆಲ್ಲ ಮುಗಿದು ನಾಗವ್ವ ಚಿಂದಯ್ಯನಿಗೆ ಒಪ್ಪಿಗೆ ಆಗುವ ಸಂದರ್ಭದಲ್ಲಿ ಬೇಡರಿಂದ ಅವನ ಕೊಲೆ ಆಗುವುದು ಎಲ್ಲಾ ಹೆಣ್ಣುಗಳ ಬದುಕಿನಂತೆಯೇ ಇವಳ ಅಂತಿಮ ಬದುಕು ಕೊಂಡದಲ್ಲಿಯೇ ಕರಗಿ ಹೋಗುವುದು. ಈ ಬಗೆಯ ಒಂದು ಮುಗ್ಧ ಹೆಣ್ಣಿನ ಮನಸ್ಸಿನ ಸ್ಥಿತಿ ಈ ಖಂಡಕಾವ್ಯ.

ಈಗಾಗಲೆ ಮೊದಲಿಗೆ ದಿಳ್ಳಿಯ ದೊರೆಗಳು ನಾಗವ್ವನನ್ನು ಕೇಳಲು ಬಂದಿದ್ದರು ಎನ್ನುವ ಮಾತು ಪದ್ಯದ ಆರಂಭದಲ್ಲಿಯೇ ತಿಳಿಯುತ್ತದೆ. ನವಿಲೂರ ಶ್ರೀಮಂತರ ಮಗನಿಗೆ ಕೊಡಿರೆಂದು ಬೇಡಿದಾಗ ನಾಗವ್ವನ ಅಣ್ಣ ಮೊದಮೊದಲಿಗೆ ಇನ್ನು ಸೀರೆ ಉಡಲು ಬಾರದ ಈ ಹಸುಳೆಯನ್ನು ಗೌಡರಿಗೆ ನಾವು ಕೊಡುವುದಿಲ್ಲ ಎಂದು ನಿರಾಕರಿಸುತ್ತಾನೆ. ಇಷ್ಟಾದರೂ ನವಿಲೂರಿನಿಂದ ನಾಗಪ್ಪನಿದ್ದ ಹಟ್ಟಿಯ ಮನೆಗೆ ಮುತ್ತಿನ ಬಳೆಗಳು ಬರುತ್ತವೆ. ಅದನ್ನು ತೊಟ್ಟುಕೊಳ್ಳುವಂತೆ ಒತ್ತಾಯಿಸುತ್ತಾರೆ. ಬಳೆಗಾರಶೆಟ್ಟಿ ಬಳೆಯ ತೊಡಿಸುವಂಥ ಸಂದರ್ಭದಲ್ಲಿ ಯಾರೋ ಬಲಗಡೆ ಸೀನುತ್ತಾರೆ. ಬೆಕ್ಕಗಳು ಸೀನುತ್ತವೆ. ನಾಗವ್ವನ ತವರಿನಲ್ಲಿ ಮದುವೆಗೆ ಅಣಿಗೊಳಿಸುತ್ತಿರುವಾಗಲೇ ಈ ಅಪಶಕುನಗಳು ಮುಂದಾಗುವ ಚಿಂದಯ್ಯನ ದುರಂತದ ಸಾವನ್ನು ನೆನಪಿಸುತ್ತವೆ. ಆದ್ದರಿಂದ

ಹತ್ತರ ಕಂದಲುತ್ತವನ್ನು ಅಣಿಗೊಳಿಸುತ್ತಿರುವಾಗಲೇ ಇನ್ನೊಂದಡೆ ಚಿಂದಯ್ಯನನ್ನು ಮದುಮಗನನ್ನಾಗಿಸಿ ಎಣ್ಣೆ ಅರಿಶಿಣ ಸಿಂಗಾರಗೊಳಿಸುವುದು. ಮತ್ತೊಂದು ಕಡೆ ಈ ಸಂದರ್ಭದಲ್ಲಿ ಚಿಂದಯ್ಯನ ತಂಗಿ ಚಿಂದಯ್ಯನಿಗೆ ಚೆಲುವಮ್ಮ ಬೇಡರು ಆಡು ಕದ್ದೊಯ್ಯುವ ಸುದ್ದಿಯನ್ನು ತರುತ್ತಾಳೆ. ತಂಗಿಯಿಂದ ಈ ಸುದ್ಧಿ ತಿಳಿದ ತಕ್ಷಣ...

ಎದ್ದನೆ ಚಿಂದಯ್ಯ ಬೆದರಿ ಬಿದ್ದೋನಂಗೆ
ಗೆಜ್ಜೆಯ ಬಿಲ್ಲ ಹಿಡಕೊಂಡು/ಮೂಡಲಗಿರಿಗೆ
ಹೋದಾನೋ ಸೀಗೆ ಮೆಳೆ ದಾಟಿ

ಮೂಡಲಗಿರಿಗೆ ಬೇಡರನ್ನು ಅಟ್ಟಿಸಿಕೊಂಡು ಹೋಗಿ ಹಸಿ ಹಸಿ ಮೈ, ಕಟ್ಟಿದ ಕಂಕಣದಲ್ಲಿಯೇ ಆ ಬೇಡರ ಗುಂಪನ್ನೆಲ್ಲ ಕಡಿದು ಹಾಕುತ್ತಾನೆ. ತುರುಕರ ಭಾಷೆಯಲ್ಲಿ ತಮ್ಮ ಗೊಲ್ಲರ ಭಾಷೆಯಲ್ಲಿ ಆಡು ಮರಿಗಳನ್ನು ಕರೆಯುತ್ತಾನೆ. ಇದರಲ್ಲಿ ಕುಂಟಾಡಿನ ಮರಿ ಮತ್ತೆ ಕಾಣಿಸುವುದಿಲ್ಲ. ಇದು ಅವನಿಗೆ ಅಘಾತ ತಲೆ ನೋವಾಗುತ್ತದೆ. ಈ ಮರಿಯನ್ನು ಹುಡುಕಿಸಿಕೊಂಡು ಅದು ಸಿಗದೇ ಹೋದಾಗ ವಿಶ್ರಾಂತಿಗೆಂದು ಸೀಗೆಯ ಮೇಳೆಯಲ್ಲಿ ಮಲಗಿರುತ್ತಾನೆ. ಈ ಸುಳಿವನ್ನು ಹೇಗೋ ಅರಿತ ಬೇಡರು ತಮ್ಮವರನ್ನು ಕಡಿದ ಸೇಡನ್ನು ಚಿಂದಯ್ಯನನ್ನು ಕಡಿಯುವ ಮೂಲಕ ತೀರಿಸಿಕೊಂಡು ಬಿಡುತ್ತಾರೆ. ಈ ದುರಂತದಿಂದ ನಾಗವ್ವನ ಎಳೆಯ ಮನಸ್ಸಿನ ಮೇಲೆ ಎಷ್ಟೊಂದು ಪರಿಣಾಮವಾಯಿತು ಎನ್ನುವುದನ್ನು ಈ ಕಾವ್ಯ ಮನ ಮುಟ್ಟುವಂತೆ ವಿವರಿಸುತ್ತದೆ. ಇಡೀ ನಾಗವ್ವನ ಬಳಗವೇ ಇಲ್ಲಿ ಬಂದು ಶೋಕಿಸುತ್ತದೆ. ಈ ಶೋಕಕ್ಕೆ ಬಾಳೆ, ನಿಂಬೆಗಳೇ ನೆರಳಿನ ಚಪ್ಪರವಾಗುತ್ತವೆ. ಲಗ್ನಕ್ಕೆ ಮೊದಲು ಚಿಂದಯ್ಯ ತೀರಿಕೊಂಡದ್ದು ನಾಗವ್ವನ ಮನಸ್ಸು ಆಗಲೇ ಚಿಂದಯ್ಯನಿಗೆ ಒಪ್ಪಿಸಿದ್ದು, ಎಲ್ಲ ಸತಿಪತಿಗಳ ಶಾಸ್ತ್ರವು ಮುಗಿದು ಹೋದದ್ದು ಅವಳ ಪಾತಿವ್ರತ್ಯಕ್ಕೆ ಇನ್ನಷ್ಟು ಆತಂಕವನ್ನುಂಟು ಮಾಡಿತು. ಇದನ್ನೆಲ್ಲ ತಿಳಿದ ಮೇಲೆ ಇನ್ನೂ ಅವನಿಲ್ಲದ ನಾನಾದರೂ ಯಾಕೆ ಬದುಕಿರಲಿ ಎಂದು ಕೊಂಡ ಏರುವುದಕ್ಕೆ ಸಿದ್ಧವಾಗುತ್ತಾಳೆ. ಅದೇ ಈರೋಬಿಗೆ ಆದ ಸ್ಥಿತಿಯೂ ಇವಳಿಗೂ ಆಗುತ್ತದೆ. ಕೊಂಡದ ಸಿದ್ಧತೆ, ಅದರ ಸಂಭ್ರಮ ಸಡಗರಿಗಳನ್ನೆಲ್ಲ ಕಲಾವಿದರು ಇಲ್ಲಿ ಪದಕಟ್ಟಿ ಹಾಡುತ್ತಾರೆ. ನಾಗವ್ವ ಕೊಂಡ ಏರುವ ವಿಷಯ ಮನೆಗೆ ತಿಳಿಯುತ್ತದೆ.

ಮಾವಿನ ಕೊನೆ ಬಂದು ಮೂಡ್ಲಾಗಿ ನಿಂತವೆ
ಮಾವ ನಿನ್ನೊಡಲು ಉರಿಯಾದೆ/ನೀನು ತಂದ
ಮಾಣಿಕವು ಕೊಂಡ ಹೋಗುವಾಗ
ನಿಮ್ಮ ಮನೆಯ ಮುತ್ತು ಮಾಣಿಕ್ಯ ಮುತ್ತೈದೆ

ತನ್ನ ಎಲ್ಲವೂ ಧಾರೆ ಹೋಗುತ್ತದೆ. ಎಂದು ನಾಗವ್ವ ಅವರ ಕಣ್ಣೆದುರಿಗಿರಿಸಿಕೊಂಡು ದುಃಖಿಸುತ್ತಾಳೆ. ಕೊನೆಗೆ ಎಲ್ಲರೂ ಸೇರಿ ಅನಿವಾರ್ಯವಾಗಿ

ಕೊಂಡದ ಸುತ್ತ ಕೆಂಡದ ಹಸೆ ಹುಯ್ದು
ಬಂಗಾರದ ಕಳಸ ನಡುವಿರಿಸಿ/ನಾಗವ್ವನ
ಕೊಂಡಕೆ ಧಾರೆ ಎರೆದಾರು

ಅವಳು ಹೀಗೆ ಕೊಂಡ ಏರಲು ಕಲ್ಲು ಹತ್ತಿ ನಿಂತಾಗ ಅವರಪ್ಪ ಆರನೂರು ಕೊಡುತ್ತವೆ ಇಳಿಯವ್ವ ಎಂದು ಬೇಡುತ್ತಾರೆ. ಆದರೆ ಅವಳು ಈ ನಿರ್ಧಾರವನ್ನು ಬದಲಾಯಿಸುವುದಿಲ್ಲ. ಈ ಒಡಲ ಕಿಚ್ಚಿಗೆ ಅವಳು ಹೋಗಬೇಕಾಗುತ್ತದೆ. ಬಂಧುಬಳಗದವರೆಲ್ಲ ಹೊನ್ನು ಕೊಡುತ್ತೇವೆ ಬಾರೆ ಮಗಳೆ ಎಂದರೂ ನಾಗವ್ವ ಈ ಲೌಕಿಕದ ಆಸೆಗಳನ್ನೆಲ್ಲ ತೊರೆದು ಗಂಡನಾಗಬೇಕಿದ್ದವನ ನೆನಪಲ್ಲೇ ಚಿತೆಯಾಗಿ ಹೋಗಿ ಬಿಡುತ್ತಾಳೆ. ಈ ಕರುಣಾ ಜನಕವಾದ ಅವಳ ಬದುಕು ಕೊನೆಯಾಗುತ್ತದೆ.

ಹೀಗೆ ನಾಗವ್ವ ಬದುಕಿ ಬಾಳಬೇಕಾದವಳು ಚಿಕ್ಕ ವಯಸ್ಸಿನಲ್ಲಿಯೇ ಅದು ಮದುವೇ ಪೂರ್ವದಲ್ಲಿಯೇ ಪತಿಯಾಗಬೇಕಿದ್ದವನ ಮರಣದ ಹಿನ್ನೆಲೆಯಲ್ಲಿ ಅವನ ನೆನಪಿನಲ್ಲಿ ಬೇರೊಂದು ಮದುವೆಯಾಗದೇ ಕೊಂಡವನ್ನೇರುವಂತಹ ಅಮಾನುಷ ಕೃತ್ಯ, ದುರಂತವನ್ನು ಈ ಕವನವು ಎಳೆ ಎಳೆಯಾಗಿ ಬಿಚ್ಚಿಡುವುದನ್ನು ಕಾಣಬಹುದಾಗಿದೆ. ಒಟ್ಟಾರೆ ಈ ಕಥಾನಕವು ಸತಿಸಹಗಮನ ಪದ್ಧತಿಯ ಆಧಾರವೆಂಬಂತೆ ರಚನೆಯಾಗುತ್ತದೆ.

೨. ಚಿಕ್ಕೋಳು ಹಿರಿದಿಮ್ಮವ್ವ

ಹಿರಿದಿಮ್ಮವ್ವನ ಮನೆಯಲ್ಲಿ ಅವಳ ತಂದೆ ತಾಯಿಗಳ ಆಶ್ರಯದಲ್ಲಿ ಬೆಳೆದ ಬೇಡರ ಹುಡುಗ ಬೊಮ್ಮಲಿಂಗ ಹಿರಿದಿಮ್ಮವ್ವನನ್ನು ಆಸೆ ಪಡುತ್ತಾನೆ. ಅವನ ಅಂತರಂಗದಲ್ಲಿ ಹಿರಿದಿಮ್ಮವ್ವನ ಮೇಲೆ ದುರ್ಭಾವನೆಯನ್ನೂ ಬೆಳೆಸಿಕೊಂಡಿರುತ್ತಾನೆ. ಮುಂದೆ ಹಿರಿದಿಮ್ಮವ್ವ ಬೇರೆ ಹುಡುಗನೊಂದಿಗೆ ಸಂಭ್ರಮದಿಂದ ವಿವಾಹವಾಗುತ್ತದೆ. ಹಿರಿದಿಮ್ಮವ್ವ ತವರಿನಿಂದ ಗಂಡನ ಮನೆಗೆ ಹೋಗುವ ದಾರಿಮಧ್ಯದಲ್ಲಿ ದುರ್ಭಾವನೆ ಬೆಳೆಸಿಕೊಂಡ ಬೇಡರ ಹುಡುಗ ಗಂಡನನ್ನು ಕೊಲೆಮಾಡುತ್ತಾನೆ. ಹಿರಿದಿಮ್ಮವ್ವಾ ಒಂದುಗಳಿಗೆ ಬೇಡರ ಹುಡುಗನ ಮಡದಿಯಂತೆ ನಟಿಸಿ, ಮರುಗಳಿಗೆಯಲ್ಲಿ ಅವನ ತಲೆಯನ್ನು ತಾನೇ ಕಡಿಯುತ್ತಾಳೆ. ಅವಳ ಸಾಕು ನಾಯಿಗಳಿಂದ ಅಣ್ಣಂದಿರಿಗೆ ನಡೆದ ಸುದ್ಧಿ ಹೋಗುತ್ತದೆ. ಅಣ್ಣಂದಿರು ತಂಗಿಯನ್ನು ಹುಡುಕಿಕೊಂಡು ಬರುವಾಗ ವಿಚಿತ್ರವಾದ ಭಯ ಭೀಕರವಾದ ದೃಶ್ಯವೊಂದನ್ನು ನೋಡುತ್ತಾರೆ. ಅದು ಈ ರೀತಿಯಿದೆ.

ಚಿಕ್ಕೋಳ್ ಹಿರಿದಿಮ್ಮವ್ವ ಸುವ್ವಾಲಾಲೆ
ಹಿಂದುರಿಗಿ ಬರುತ್ತಾಳೆ ಸುವ್ವಾಲಾಲೆ
ಗಂಡಾನ ತಲೆಯನ್ನು ಸುವ್ವಾಲಾಲೆ
ಮಡಲಾಗಿ ಕಟ್ಟಿಕೊಂಡು ಸುವ್ವಲಾಲಿ
ಬೊಮ್ಮಲಿಂಗನ ತಲೆಯ ಸುವ್ವಲಾಲೆ
ಕಾಲಾಗೆ ಒದ್ದುಕೊಂಡು ಸುವ್ವಲಾಲೆ
ಬರುತ್ತಾಳೆ ಬೇಗದಿಂದ ಸುವ್ವಲಾಲೆ[೩]

ಮೇಲಿನ ಕಥನಗೀತೆಯ ಸಾಲುಗಳಲ್ಲಿ ಹಿರಿದಿಮ್ಮವ್ವನ ಆಕ್ರೋಶದ ಪರಾಕಷ್ಟೆಯನ್ನು ಕಾಣಬಹುದು. ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ಬೇಡರ ಹುಡುಗನ ತಲೆಯನ್ನು ಕಾಲಿನಲ್ಲಿ ಒದೆದುಕೊಂಡು ಹಿರಿದಿಮವ್ವ ಬರುತ್ತಿದ್ದಳು. ಆ ಭಯಂಕರ ದೃಶ್ಯವನ್ನು ಕವಿ ಅತ್ಯಂತ ಭಯಾನಕವಾಗಿ ಹೇಳುತ್ತಾನೆ. ಇಲ್ಲಿ ಕೊಂಡವಾಗುವ ರೀತಿಯು ಬೇರೆಯಾಗಿದೆ. ಕೊಂಡವಾಗಲೂ ಸಹ ಗಂಡನ ತಲೆಯನ್ನು ತನ್ನ ಮೇಲಿಟ್ಟುಕೊಂಡು. ದುರ್ಭಾವನೆ ಇಟ್ಟುಕೊಂಡಿದ್ದ ಹುಡುಗನ ತಲೆಯನ್ನು ಕಾಲಲ್ಲಿ ಇಟ್ಟುಕೊಂಡು ಕೊಂಡವಾಗುತ್ತಾಳೆ.

ಹಿರಿದಿಮ್ಮವ್ವ ತನ್ನ ಬಾಳಿನ ದುರಂತಕ್ಕೆ ಕಾರಣವಾದ ವ್ಯಕ್ತಿಯ ಮೇಲಿನ ಸೇಡನ್ನು ತೀರಿಸಿಕೊಳ್ಳುವುದನ್ನು ಕಾಣಬಹುದು. ಈ ಕಥನಗೀತೆಯ ನಾಯಕಿಯ ಗಂಡ ದಂಡಿಗೆ ಹೋಗಿಲ್ಲ. ಬೇಡರ ಹುಡುಗನ ಬಲಿಗೆ ಆಹುತಿಯಾದವನು. ಅಂತಹ ದುರ್ಭಾವನೆಯನ್ನು ಬೆಳೆಸಿಕೊಂಡ ಬೇಡರ ಹುಡುಗನನ್ನು ಬದುಕಿಸಿದರೆ. ಮುಂದೆ ಎಷ್ಟೊ ಹೆಣ್ಣುಗಳಿಗೆ ಅನಾಹುತ ತಪ್ಪಿದಲ್ಲ ಎಂದು ಭಾವಿಸಿದ ಹಿರಿದಿಮ್ಮವ್ವ, ಬೇಡರ ಹುಡುಗನನ್ನು ಕೊಂದು ಪತಿಯ ಜೊತೆ ಸಹಗಮನ ಮಾಡುತ್ತಾಳೆ.

**೩. ವಡ್ಡಗೆರೆ ನಾಗಮ್ಮ**

ಈಕೆ ಈರಣ್ಣನ ಜೊತೆ ಬಹಳ ವೈಭವದಿಂದ ಮದುವೆ ನೆರವೇರುತ್ತದೆ. ಸೊಸೆಯನ್ನು ಕರೆದುಕೊಂಡು ಹೋಗುವಾಗ ತವರಿನವರು 'ನಿನ್ನ ಬಾಗಿಲಿಗ್ಹೆಚ್ಚಾಗಿ ಸಲವಮ್ಮ' ಎಂದು ಹಾರೈಸಿ ಕಳುಹಿಸುತ್ತಾರೆ. ಹೊಸದಾಗಿ ಬಂದ ನಾಗಮ್ಮನನ್ನು ಮನೆಯವರೆಲ್ಲಾ ಚೆನ್ನಾಗಿ ನೋಡಿಕೊಳ್ಳುತ್ತಾರೆ. ಹೀಗಿರುವಾಗ ಒಂದು ದಿನ ಈರಣ್ಣನು ಮದುವೆಯಾದ ಹೊಸದರಲ್ಲಿಯೇ ತನ್ನ ತಾಯಿಯ ಹತ್ತಿರ ಹೀಗೆಂದನು. 'ತೊತ್ತಿನ ಮಗನ ಜಗಳಕ್ಲೋಗಬೇಕು! ಕತ್ತಿಗಪ್ಪಾಣೆ ಕೊಡೆ ತಾಯಿ' ಎಂದು ಈರಣ್ಣ ತಾಯಿಯನ್ನು ಬೇಡುತ್ತಾನೆ. ಹಾಗೆಯೇ 'ನಿ ತಂದ ಗೌಡತಿ ಬಹಳ ಚಿಕ್ಕವಳು, ಚನ್ನಾಗಿ ನೋಡಿಕೋ' ಎಂದು ಹೇಳಿ ರಣರಂಗಕ್ಕೆ ಹೊರಡುತ್ತಾನೆ.

ಇತ್ತ ಅತ್ತೆ ಮನೆಯಲ್ಲಿ ನಾಗಮ್ಮ ತುಂಬಾ ಸುಖವಾಗಿರುತ್ತಾಳೆ. ಒಪ್ಪವಾದ ವೀಳ್ಯೆಯನ್ನು ಮಡಿಲಲ್ಲಿ ಕಟ್ಟಿಕೊಂಡು, ತೊರೆ ಸಾಲಿನ ಹೊಲದಲ್ಲಿ ಹತ್ತಿ ಬಿಡಿಸಲು ಹೋಗುತ್ತಾರೆ. ಒಮ್ಮೆ ಬಾಯಾರಿದ ಅಕ್ಕನಾಗು ತೊರೆಯ ಮರಳಿನಲ್ಲಿ ನೀರಿಗಾಗಿ ಚಿಲುಮೆ ತೆಗೆದಾಗ ಗಂಡನ ಕತ್ತಿ, ತಲೆಸಿಕ್ಕಿದ, ಭಯಂಕರ ಚಿತ್ರ ಎದ್ದು ಕಾಣುತ್ತದೆ. ಯಾರೆಷ್ಟೇ ತಡೆದರೂ ನಿಲ್ಲದೆ ಗಂಡನ ತಲೆ ಯನ್ನು ಮಡಿಲಲ್ಲಿ ಕಟ್ಟಿಕೊಂಡು 'ಚಿಕ್ಕವಯಸ್ಸಿನ ಅಕ್ಕನಾಗು ಕೊಟ್ಟು ಮನೆಗೆ ಶಾಪಹಾಕುತ್ತಾ ಅತ್ತೂಕರೆದು ಕೊಂಡು ಕೊಂಡವಾಗುತ್ತಾಳೆ.'[೪]

ಈ ಕಥನಗೀತೆಯ ಎಲ್ಲಾ ಕಥನಗೀತೆಯಂತೆ ಕಂಡರು ಭಿನ್ನವಾಗಿದೆ. ಏಕೆಂದರೆ ತೌರಿಗೆ ಶಾಪವನ್ನು ಕೊಡುವುದು ಇಲ್ಲಿ ಎದ್ದು ಕಾಣುತ್ತದೆ. ಇದರಿಂದ ಅವಳ ಆಕ್ರೋಶ, ಆವೇಶದ ಜೊತೆಗೆ ಗಂಡನಿಲ್ಲದ ಬಾಳು ವ್ಯರ್ಥ ಎನ್ನುವುದು ಅವಳ ಶಾಪದಿಂದ ವ್ಯಕ್ತವಾಗುತ್ತದೆ. ತೌರಿಗೆ ಶಾಪ ಹಾಕುವ ಹಿನ್ನೆಲೆಯೆಂದರೆ ಮದುವೆಯಾದ ಹೆಂಡತಿಯನ್ನು ಬಿಟ್ಟು, ಕತ್ತಿಗೆ ಬೆಲೆಕೊಟ್ಟುಹೋದ

ಗಂಡನ ಬಗ್ಗೆ ನೇರವಾಗಿ ಆಕ್ಷೇಪಿಸದೆ ಕತ್ತಿಗೆಧಾರೆ ಎರೆದವರೆ ಎನ್ನುತ್ತಾಳೆ. ಈ ಸಾಲಿನಲ್ಲಿ ನಾಗವ್ವನ ಮಾತಿನ ಮೊನಚು ಅರಿವಾಗುತ್ತದೆ. ಹೆಣ್ಣಾಗಿ ಹುಟ್ಟಿದ ತಪ್ಪಿಗೆ ಈ ಶಿಕ್ಷೆಯನ್ನು ಅನುಭವಿಸುತ್ತಿದ್ದೇನೆ ಎನ್ನುವುದರ ಹಿನ್ನೆಲೆಯಲ್ಲಿ ತನ್ನ ತೌರನ್ನು ಶಪಿಸುತ್ತಾಳೆ. ಅದರ ಜೊತೆಗೆ ಮಾವನ ಮನೆ ಬೆಳೆಯಲಿ ಎಂದು ಹರಸುತ್ತಾಳೆ. ಮುಂದೆ ಬರುವ ಯಾವ ಸೊಸೆಗೂ ತನ್ನಂಥ ಕಷ್ಟ ನಷ್ಟವಾಗುವುದು ಬೇಡ ಎನ್ನುವುದೇ ಅವಳ ಮನಸ್ಸಿನ ಭಾವನೆ.

ಸೊಸೆಗೆ ತಕ್ಕಂತೆ ಅತ್ತೆಯು ಹಾಗೆ ಇದ್ದಾಳೆ. ತನ್ನ ಸೊಸೆ ಕೊಂಡಕ್ಕೆ ಹೋಗುವಾಗ, ತಾನು ಬರುತ್ತೇನೆಂದು ಹಟಮಾಡುತ್ತಾಳೆ. ನಾಗವ್ವನ ಅತ್ತೆ, ಅದನ್ನು ಅತ್ತೆಯ ಮಾತಿನಿಂದಲೇ ತಿಳಿಯಬಹುದು.

ನನ್ನ ಸೊಸೆ ತಾನೇ ಹೋಗುವಾಗ! ಈಗಿನ್ನು
ನಾನಿದ್ದು ಈಗ ಫಲವೇನು! ನಾಗಮ್ಮ
ನಾವಿಬ್ಬರು ಕೆಂಡಕೊಂಡ ಆಗಬೇಕು.[೫]

ಹೀಗೆ ಅತ್ತೆಗೆ ಮರುತ್ತರ ನೀಡುತ್ತಾ ನಾನು ಹಾಲುಕಂದ ನಾ ಸತ್ತರೆ ಕೇಳುವರಿಲ್ಲ ನಿಮಗೆ ಬದುಕಿದೆ ಬೇಡ ಎಂದು ಹೇಳುತ್ತಾಳೆ.

**೪. ಮಹಾಸತಿ ವೀರ ತಿಮ್ಮವ್ವ**

ಈ ಕಥನ ಗೀತೆಯು ಹಿರಿಯೂರು ತಾಲೂಕಿನ ಹಿರಿಯಟ್ಟಿ, ಮದನಕುಂಟೆ ಮತ್ತು ಯರಬಳ್ಳಿ ಗ್ರಾಮಗಳಲ್ಲಿ ಪ್ರಚಲಿತವಾಗಿದೆ. ಈಗಲೂ ಈ ಸ್ಥಳದಲ್ಲಿ ಮಾಸ್ತಿಕಲ್ಲು ನಿಲ್ಲಿಸಲ್ಪಟ್ಟಿದೆ. ಆ ಕಲ್ಲನ್ನು ತಿಮ್ಮವ್ವ ಮತ್ತು ನಾಗಣ್ಣನವರು ಎಂದು ತಿಳಿಯುವುದಾದರೆ, ತಿಮ್ಮವ್ವ ಮಾಸ್ತಮ್ಮಳಾಗಿ ಕೊಂಡಕ್ಕೆ ನಡೆಯುತ್ತಿರುವ ಚಿತ್ರಣವನ್ನು ಸಾಕಷ್ಟು ಚೆನ್ನಾಗಿಯೇ ಬಿಡಿಸಲಾಗಿದೆ.[೬]

ವೀರನಾಗಣ್ಣನ ಹೆಂಡತಿ ವೀರ ತಿಮ್ಮವ್ವ, ಇವರ ಲಗ್ನವಾದ ಕೆಲವೇ ವರ್ಷಗಳಲ್ಲಿ ನಾಗಣ್ಣ ಸಾಣಕೆರೆಯ ಬಳಿ ಆದ 'ಲಡಾಯ'ದಲ್ಲಿ (ಗರಡಿ) ಭಾಗವಹಿಸಿ ತೀರಿಕೊಂಡ. ತಿಮ್ಮವ್ವ ತನ್ನ ಎರಡು ಮಕ್ಕಳನ್ನು ಬಿಟ್ಟು ಬಂಧು ಬಳಗ ತಂದೆ ತಾಯಂದಿರ ಮಾತನ್ನು ಲೆಕ್ಕಿಸದೆ ಕೊಂಡವೇರಿ ಮಹಾಸತಿಯಾದಳು. ವೀರ ತಿಮ್ಮವ್ವ ಎಲ್ಲರ ಕಣ್ಣಿನಲ್ಲಿ ದೇವತೆಯಾದಳು.

ಗಂಡನ ಮರಣದ ಸುದ್ಧಿ ತಿಳಿದ ವೀರ ತಿಮ್ಮವ್ವ ತನ್ನ ಮಕ್ಕಳೆರಡರಲ್ಲಿ ಒಂದನ್ನು ಎತ್ತಿಕೊಂಡು ಒಂದನ್ನು ನಡೆಸಿಕೊಂಡು ಹೊರಟಳು. ಈ ಕಥನ ಗೀತೆಯಲ್ಲಿ ಬರುವ ನಾಯಕಿ ಸ್ವ-ಇಚ್ಛೆಯಿಂದ ಸಹಗಮನಕ್ಕೆ ಒಪ್ಪಿಕೊಳ್ಳುತ್ತಾಳೆ. ಸಹಗಮನ ತನ್ನ ಪಾಲಿನ ಕರ್ತವ್ಯ ಇದು ತನ್ನಂಥ ಸ್ತ್ರೀಯರಿಗೆ ಸಹಜ. ಇದಕ್ಕೆ ಅಂಜಬೇಕಿಲ್ಲ, ಅಳಕಬೇಕಿಲ್ಲ, ತೌರನ್ನು ಶಪಿಸಬೇಕಿಲ್ಲ ಎಂದು ನಿರ್ಧಾರ ಮಾಡಿದಳು. ಇದಕ್ಕಾಗಿ ಅವಳನ್ನು ತಡೆಯಲು ಯಾರು ಬರುವುದಿಲ್ಲ. ಹಾಗೆಯೇ ಮಕ್ಕಳನ್ನು ಬಿಟ್ಟು ಹೋಗುವುದು ಸರಿಯಲ್ಲ ಎಂದು ಹೇಳುವವರು ಯಾರು ಇಲ್ಲ. ಇಂಥ ಸಹಗಮನ ಸರಿಯಾದದ್ದು ಎಂದು ಆ ಊರಿನ ಜನ ತಿಳಿದಿದ್ದಾರೆ. ಹಾಗೆಯೇ ಸಹಗಮನ ಮಾಡುವ ಹೆಣ್ಣು ಸಹ ತಿಳಿದಿದ್ದಾಳೆ. ಆದ್ದರಿಂದ ಇಲ್ಲಿ ಯಾವ ರೀತಿಯ ಬೇಕು ಬೇಡಗಳ

ಮಾತಿಲ್ಲ ಎನ್ನುವುದನ್ನು ಗಮನಿಸಬಹುದು. ಹಾಗೆ ಸಹಗಮನವಾದ ಹೆಣ್ಣು ದೇವತೆಯಾಗುತ್ತಾಳೆ. ಅವಳು ಬೇಡಿದ ವರವನ್ನು ನೀಡುತ್ತಾಳೆ ಎಂಬ ನಂಬಿಕೆ ಕಥನಗೀತೆಯಲ್ಲಿ ಹೆಚ್ಚಾಗಿದೆ.

ತನ್ನ ಗಂಡನ ಸಾವಿನ ಬಗ್ಗೆ ದಾರಿಯಲ್ಲಿ ಎಲ್ಲರನ್ನು ಕೇಳುತ್ತಾ ಬರುತ್ತಾಳೆ. ಗಂಡನ ಜೊತೆ ಸಹಗಮನ ಮಾಡಲಿಕ್ಕೆ ಸಿದ್ಧಳಾಗಿ ಬರುತ್ತಿದ್ದಾಳೆ. ಆಗ ಧೈರ್ಯದಿಂದ ಈ ರೀತಿ ಹೇಳುತ್ತಾಳೆ.

ಕಿಚ್ಚಗಂಜೋಳೆಂದು ಅಚ್ಚಡವಾಮರಿಗೊಂಡು
ಕಿಚ್ಚಿಗೆದರೋರ ಮಗಳಲ್ಲ
ಕಿಚ್ಚಿಗೆದರೋರ ಮಗಳಲ್ಲ ಕಾಟೇಗೌಡ
ಅಚ್ಚಡದ ತೆರೆಯಾ ತೆಗುಸಯ್ಯ[೭] ಎಂದಳು.

ಅವಳು ಹೇಳುವ ಮಾತಿನಲ್ಲಿ ಅವಳ ಧೈರ್ಯದ ಧ್ವನಿ ಎದ್ದು ಕಾಣುತ್ತದೆ. ವೀರತಿಮ್ಮವ್ವ ಸ್ವತಃ ಕಿಚ್ಚಿಗೆ ಅಂಜುವುದಿಲ್ಲ ಎನ್ನುತ್ತಾಳೆ. ತೆರೆಯ ಮರೆ ಮಾಡಬೇಡಿ ಎಂದು ಹೇಳುವ, ಅವಳ ಧ್ವನಿಯಲ್ಲಿ ಒಂದೆಡೆ ಧೈರ್ಯ ಇನ್ನೊಂದೆಡೆ ಭಯ ದುಮ್ಮಾನ ತುಂಬಿ ತುಳಕಿದೆ. ಕಿಚ್ಚಿಗೆ ಹೋಗುವಾಗ ಮಕ್ಕಳನ್ನು ಬೇರೆಯವರ ಕೈಗೆ ಒಪ್ಪಿಸಿ ಹೇಳುವ ಮಾತು ಎಂಥವರಿಗಾದರೂ ನೋವುಂಟು ಮಾಡುತ್ತದೆ.

ಉಪ್ಪಾಕೀದ ಸೊಪ್ಪ ಮತ್ತೀಟು ಕೊಡಿರಮ್ಮ
ತೊತ್ತಿನ ಮಕ್ಕಳೆನ್ನದಿರಿಯವ್ವ ಮರಿಯವ್ವ
ನಿಂಗೆ ಪುತ್ರಾನ ಕೊಡುತೀನಿ ಕಡುಸಾಗಿ[೮] ಎಂದಳು.

ತನ್ನ ಮಕ್ಕಳನ್ನು ನೋಡಿಕೊಂಡರೆ ಪುತ್ರಾನ ಭಾಗ್ಯ ಕೊಡತೀನಿ ಎಂದು ಆಶ್ವಾಸನೆ ಕೊಡುವುದರ ಮೂಲಕ ಜನಪದರಲ್ಲಿ ದೇವತೆಯಾಗಿ ತಿಮ್ಮವ್ವ ಪೂಜೆಗೆ ಒಳಪಡುತ್ತಾಳೆ. ಒಂದು ಕಡೆ ಧೈರ್ಯವಿದ್ದರೂ ಒಂದು ಕಡೆ ಭಯ ಆವರಿಸಿರುವುದು ಈ ಕಥನಗೀತೆಯಲ್ಲಿ ಎದ್ದು ಕಾಣುತ್ತದೆ.

**೫. ಮಹಾಸತಿ ತಾಡಿ ನಾಗಮ್ಮ**

ನಾಗಮ್ಮ ಓಬಳಾಪುರ ಗ್ರಾಮದ ಎಲಿಯೋರ ಕುಲದಲ್ಲಿ ಹುಟ್ಟಿದವಳು. ತಾಡಿಗೇರಿ ಸಿರಿವಂತ ಗೌಡರು. ಇವಳನ್ನು ಸೊಸೆ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿ ಆ ಊರಿಗೆ ಬಂದರು. ನಾಗಮ್ಮ ಚಿಕ್ಕವಳು ಎಂದು ಮನೆಮಂದಿಗೆಲ್ಲಾ ಗೊತ್ತಿದ್ದರೂ ಶ್ರೀಮಂತರ ಸಂಬಂಧ ಒಪ್ಪಿಗೆಯಾಗಿ ಮದುವೆಗೆ ತೀರ್ಮಾನಿಸಿದರು.

ಮದುವೆ ಸಿದ್ಧತೆ ಸಂದರ್ಭದಲ್ಲಿ ಅನೇಕ ಅಪಶಕುನಗಳು ಎದುರಾದರು ಧಾರೆಯೆರೆದರು. ನಾಗಮ್ಮ ಅತ್ತೆ ಮಾವ ಗಂಡನೊಡನೆ ವಡ್ಡಗೆರೆಗೆ ಸೊಸೆಯಾಗಿ ಬದುಕು ನಡೆಸಲು ನಡೆದಳು. ಮುಂದೆ ನಾಗಣ್ಣ ಮದುವೆಯಾದ ಹೊಸದರಲ್ಲಿ ಕೈಲಿ ಚಿಪ್ಪಗೊಡಲಿ ಹಿಡಿದು ನಡೆದ. ಮುಂದೆ ನಾಗಣ್ಣ ದಂಡಿನಲ್ಲಿ ಕಾರಣಾಂತರಗಳಿಂದ ಮಡಿದ. ಲಗ್ನವಾಗುವ ಮೊದಲೆ ಶೂರ ನಾಗಣ್ಣ 'ಕಾಳುಗದಲ್ಲಿ ಮಡಿವೋನು' ಎಂಬುದಾಗಿ ಶಕುನವಾಗಿತ್ತು. ಆದರೂ ಇಬ್ಬರಿಗೂ ಲಗ್ನ ಮಾಡಿದ್ದರು.

ತನ್ನ ಅಜ್ಜಿ ಜೊತೆಗೂಡಿ ನಾಗಮ್ಮ ಹೊಲಕ್ಕೆ ಹತ್ತಿ ಬಿಡಿಸಲು ಹೋದಳು. ಅಲ್ಲಿ ನೆತ್ತಿ ಕಾಯುತ್ತಿದ್ದ ಬಿಸಿಲಿನಿಂದಾಗಿ ನಾಗಮ್ಮನಿಗೆ ಬಾಯಾರಿಕೆಯಾಯಿತು. ನೀರಿನ ಸೆಲೆಯಿರುವಲ್ಲಿ ಮರಳು ಸರಿಸಿ ಚಿಲುಮೆ ತೆಗೆದಳು. ಅಲ್ಲಿ ರಕ್ತ ಕಾಣಿಸಿತು. ಕೆಟ್ಟಿನಲ್ಲೆ ಅಜ್ಜಮ್ಮ ಕೆಚ್ಚಿನಲ್ಲೆ ಅತ್ತಮ್ಮ ಎಂದು ಅರಚಿದಳು. ಅಷ್ಟರಲ್ಲಿ ವೀರನಾಗಣ್ಣನ ಜೂಲುನಾಯಿಯ ಮುಖದಲ್ಲಿ ರಕ್ತಮಾಡಿಕೊಂಡು ಅವಳ ಬಳಿಗೆ ಬಂದಿತು. ಅದನ್ನು ನೋಡಿದ ನಾಗಮ್ಮ ಗಂಡ ತೀರಿಕೊಂಡನೆಂದು ಖಚಿತಪಡಿಸಿಕೊಂಡಳು. ತನ್ನ ಸತ್ತ ಗಂಡನ ಜೊತೆಯಲ್ಲಿ ಸ್ವರ್ಗಕ್ಕೆ ಸೇರಬೇಕೆಂದು ತೀರ್ಮಾನಿಸಿದಳು. ಬಂಧು ಬಳಗದವರನ್ನು ಕುರಿತು 'ವಂಡಾಕೆ ಕಲ್ಲ ವಡೀರಣ್ಣ' ಎಂದು ಕೇಳಿಕೊಂಡಳು. ಆ ಮಾತು ಕೇಳಿದ ಅವಳ ಅತ್ತೆ–ಮಾವ, ತಾಯಿ–ತಂದೆ ಎಲ್ಲ ಸೇರಿಕೊಂಡು ಈ ರೀತಿ ಕೇಳಿಕೊಳ್ಳುತ್ತಾರೆ. "ರಾಜ್ಯೇವ ಕೊಟ್ಟೇವು ಇರು ಮಗಳೇ ತುಪ್ಪ ಬೋನಾವುಣ್ಣು ಮಗಳೇ" ಎಂದೆಲ್ಲಾ ಸಮಧಾನ ಹೇಳಿದರೂ, ಕೇಳದ ನಾಗಮ್ಮ 'ಕೊಂಡಾ ಕೊಡದಿದ್ದರೆ ಸುಟ್ಟ ಕಂಬೆ ನಾಲಿಗೆ'ಯ ಎಂದಳು. ಮುಂದೆ ನಾಗಮ್ಮ ಕೊಂಡ ಹೋಗುವುದು ಖಚಿತವಾದ ಕೂಡಲೇ ಊರಿನ ಜನರು ಸೇರಿ ಗುಂಪು ಹೆಚ್ಚಾಯಿತು. ಇವರಿಗೆಲ್ಲ ಅನ್ನಸಂತರ್ಪಣೆ ಮಾಡಿದಳು. ಲಗ್ನದ ವಧುವಿನಂತೆ ಶೃಂಗಾರ ಮಾಡಿಕೊಂಡಳು. ಅವಳು ಕೊಂಡದ ಬಳಿಗೆ ಬಂದು ಸುತ್ತ ಕಟ್ಟಿಸಿದ ತೆರೆಯನ್ನು ತೆಗೆಸಿ 'ತಾನು ಕಿಚ್ಚಿಗೆ ಅಂಜುವಳಲ್ಲ' ಎಂದಳು. ಅಲ್ಲಿ ಸೇರಿದ್ದ ತನ್ನ ಬಂಧು ಬಳಗದವರಿಗೆ, ಊರಿನವರೆಗೆ ಕೈ ಮುಗಿದು ಕೊಂಡವಾದಳು. ಆ ಗ್ರಾಮಸ್ಥರ ಕಣ್ಣಿನಲ್ಲಿ ಅವಳು ಬೇಡಿದ್ದನ್ನು ಕೊಡುವ, ಕರುಣಿಸುವ ದೇವತೆಯಾಗಿ ನಿಲ್ಲುತ್ತಾಳೆ.[೯]

ಕಿಚ್ಚಕೊಡದಿದ್ದರೆ ಸುಟ್ಟು ಕಂಚಿ ನಾಲಿಗೆಯ
ಕಿಚ್ಚು ಕೊಡದಿದ್ದರೆ ಕಿತ್ತು ಕಂಬೆನು ನಾಲಿಗೆಯ
ಪಚ್ಚೇದ ಕಲ್ಲಾಡೆ ಪ್ರಜೆಯಾಣೆ

ತೊಟ್ಟಿಲಾಗಾಡೋ ಮಗನಾಣೆ ಎಂದು ಹೇಳಿ ಗಂಡಾನ ತೋಳು ತಲದಿಂಬೆ! ನಾಗಮ್ಮ ಕೆಂಡ ಕುಸುದಂಗೆ ಕುಸುದಾಳೆ ಕೆಂಡವಾದಳು.[೧೦]

ಇಲ್ಲಿ ತೌರಿಗೆ ಶಾಪ ಹಾಕದೆಯಿರುವುದು ಕಂಡುಬರುತ್ತದೆ. ಸಹಗಮನ ತನ್ನ ಪಾಲಿನ ಕರ್ತವ್ಯ. ಅದನ್ನು ತಾನು ಮಾಡಲೇಬೇಕು. ಅದರಿಂದ ತನಗೆ ಸಿದ್ಧಿ ಲಭಿಸುತ್ತದೆ. ಎನ್ನುವ ನಿರ್ಧಾರ, ಹಟ, ಅವಳಲ್ಲಿ ಬೇರೂರಿ ಸಹಗಮನ ಮಾಡುತ್ತಾಳೆ. ಇಲ್ಲಿ ನಾಗಮ್ಮನೇ ಸ್ವತಃ ಸಹಗಮನವಾಗುತ್ತಾಳೆ.

**೬. ಮಹಾಸತಿ ಕಾಟವ್ವ**

ಈ ಕಥನ ಗೀತೆಯಲ್ಲಿ ಪತಿಯನ್ನು ಕಳೆದುಕೊಂಡ ನಂತರದಲ್ಲಿ ಆಕೆ ಕೊಂಡಕ್ಕೆ ನಡೆಯುವ ಚಿತ್ರಮಾತ್ರ ಗೀತೆಯಲ್ಲಿದೆ. ತಾಡಿಗೆರೆ ನಾಗಮ್ಮನ ಕಥನಗೀತೆಯಂತೆ ಇಲ್ಲಿ ಪೂರ್ಣ ಕಥೆ ಬರುವುದಿಲ್ಲ. ಹಿಂದೆ ಹೇಳಿದ ಎಲ್ಲಾ ಕಥನಗೀತೆಗಳಲ್ಲಿ ಕೊಂಡಕ್ಕೆ ಹೋಗುವುದು ಕೊನೆಯಲ್ಲಿ ಬಂದರೆ, ಈ ಕಥನಗೀತೆಯಲ್ಲಿ ಕೊಂಡಕ್ಕೆ ಹೋಗುವುದೇ ಬಹುಮುಖ್ಯವಾಗಿರುತ್ತದೆ. ಈ

ಕಥನಗೀತೆಯಲ್ಲಿ ಮದುವೆ ವಿಚಾರ ಯಾವುದು ಬರುವುದಿಲ್ಲ, ಆದರೆ ಬಂಧು ಬಳಗದವರು ಕೊಂಡಕ್ಕೆ ಹೋಗುವುದು ಬೇಡವೆನ್ನುತ್ತಾರೆ. ಆದರೂ ಕಾಟವ್ವ ಕೊಂಡವಾಗುತ್ತಾಳೆ. ಇದರಲ್ಲಿ ಕೊಂಡಕ್ಕೆ ಹೋಗುವ ಸಂಪೂರ್ಣ ಚಿತ್ರವನ್ನು ಕಾಣಬಹುದು.[೧೧]

ಹಾಗೆಯೇ ಕಾಟವ್ವ ಕೊಂಡಕ್ಕೆ ಹೋಗುವ ಸಂದರ್ಭದಲ್ಲಿ ನಿಡಗಲ್ಲು ಪಾಳೆಗಾರನ ಅಪ್ಪಣೆಯನ್ನು ಪದ್ಧತಿಯ ಪ್ರಕಾರ ಪಡೆಯುತ್ತಾಳೆ. ಈ ವಿಚಾರ ಈ ಕಥನಗೀತೆಯಲ್ಲಿ ಬರುತ್ತದೆ.

ಕಿಚ್ಚು ಕೊಡುವಾಕ ವೊಟ್ಯಾಪ್ಪ ನಾಯಕನಾಣೆ
ಪಚ್ಚೆ ಕಲ್ಲಾಮೆ ಪ್ರಜೆಯಾಣೇ
ಪಚ್ಚೆ ಕಲ್ಲಾಣೆ ಪ್ರಜೆಯಾಣೆ! ಮುಮ್ಮಡಿ ಬೂಪ್ನ
ರಟ್ಟೆ ಮ್ಯಾಲಾಡೋ ಮಗನಾಣೆ[೧೨] ಎಂದು ಸಹಗಮನಕ್ಕೆ ಮುಮ್ಮಡಿ ಬೂಪನಲ್ಲಿ ಅಪ್ಪಣೆ ಕೇಳುವುದನ್ನು ಗುರುತಿಸಬಹುದು.

ಎಲ್ಲಾ ಕಥನ ಗೀತೆಗಳಿಗಿಂತಲೂ ಭಿನ್ನವಾಗಿರುವ ಕಥನಗೀತೆಯಲ್ಲಿ ಸಹಗಮನ ಚಿತ್ರಣವನ್ನು ಸಂಪೂರ್ಣವಾಗಿ ಗುರುತಿಸಬಹುದು ಹಾಗೆಯೇ ಸಹಗಮನವಾಗುವುದು. ಒಂದು ಪದ್ಧತಿ ಅದಕ್ಕೆ ಮುಮ್ಮಡಿ ಬೂಪನ ಅಪ್ಪಣೆ ಪಡೆಯಬೇಕು ಎನ್ನುವ ಅಂಶವು ಎದ್ದು ಕಾಣುತ್ತದೆ. ಆದರೆ ಸಹಗಮನ ಕಡ್ಡಾಯ ಎಂದು ಆ ಊರಿನ ಜನರಾಗಲಿ, ಮುಮ್ಮಡಿ ಬೂಪರಾಗಲಿ ಹೇಳುವುದು ಕಂಡುಬಂದಿಲ್ಲ.

**೭. ಸತಿಚೆನ್ನಮ್ಮ**

ಸತಿ ಚೆನ್ನಮ್ಮಳ ಕಥನಗೀತೆಯು ಶಿಷ್ಟಸಾಹಿತ್ಯದಲ್ಲಿ ಬರುವ ಸತಿ ಸಾವಿತ್ರಿಯ ಕಥೆಯನ್ನು ಹೋಲುತ್ತದೆ. ಯಾಕೆಂದರೆ ಚೆನ್ನವ್ವ ಸತ್ತ ಗಂಡನನ್ನು ಲಗ್ನವಾಗುತ್ತಾಳೆ. ಹಾಗೆಯೇ ದೈವಭಕ್ತಿಯಿಂದ ಸತ್ತ ಗಂಡನನ್ನು ಬದುಕಿಸಿಕೊಂಡಳು. ಈ ಅಂಶಗಳು ಅಲ್ಲಿಯೂ ಕಂಡುಬರುತ್ತವೆ. ಈ ಚೆನ್ನವ್ವಳ ಕಥೆಗೆ ಕಾಳಿಂಗರಾಯ, ಕತ್ತಲರಾಯನ ಕತೆ ಎಂತಲೂ ಹೆಸರಿದೆ.

ಚೆನ್ನವ್ವನ ಕಾವ್ಯದಲ್ಲಿ ಬರುವ ಕತ್ತಲರಾಯನಿಗೆ ಹತ್ತು ಮಂದಿ ಹೆಂಡಿರು. ಆದರೆ ಅವರಿಗೆ ಮಕ್ಕಳಿಲ್ಲ. ಪಟ್ಟಣದ ರಾಣಿ ಪಾಪುಂಜಿಣೆಗೆ ಬಂಜೆ ಎಂಬ ಸೊಲ್ಲು ಬರಬಾರದೆಂದು ಪುತ್ರನ ಅನುಗ್ರಹಕ್ಕಾಗಿ ಶಿವನನ್ನು ಭಕ್ತಿಯಿಂದ ಪ್ರಾರ್ಥಿಸಿದಳು. ಭಕ್ತಿಗೆ ಮನಸೋತ ಶಿವ ಇವಳಿಗೆ ಪುತ್ರನನ್ನು ನೀಡಿ ಈಗೆ ಹೇಳಿದನು. ಈ ಮಗು ಬಹು ದಿನಗಳ ಕಾಲ ಬದುಕುವುದಿಲ್ಲ ಎಂದಾಗ ಪಾಪುಂಜಿಣೆಗೆ ಹೇಳುವ ರೀತಿ ಹೀಗಿದೆ. 'ಮುಂಜಾನೆ ಹುಟ್ಟಾಲಿ ಸಂಜೇಲಿ ಸಾಯಾಲಿ ಬಂಜೆಂಬ ಸೊಲ್ಲು ಮೊದಲು ಅಡಗಲಿ'[೧೩] ಎಂದು ಸಮಾಧಾನಗೊಂಡಳು. ಅವನಿಗೆ ಕಾಳಿಂಗರಾಯವೆಂದು ನಾಮಕರಣ ಮಾಡಿದಳು.

ಕಾಳಿಂಗರಾಯ ಬಹುಬೇಗ ದೊಡ್ಡವನಾದ. ಮುಂದೆ ಬೇಟೆಗೆಂದು ಕಾಡಿಗೆ ಹೊರಟಾಗ ಹಲವಾರು ಅಪಶಕುನಗಳು ಎದುರಾದವು. ಆದರೆ ಅವನ್ನೆಲ್ಲಾ ಗಮನಿಸದೆ ಬೇಟೆಗೆ ಹೋಗಿ ಮಾಯಾದ ಹುಲಿಯ ಆವಳಿಗೆ ಸಿಲುಕಿ ಮಡಿದನು.

ಕಾಡಿನಲ್ಲಿ ಸತ್ತವನನ್ನು ನಾಡಿಗೆ ತಂದರು. ಶವಸಂಸ್ಕಾರ ಏರ್ಪಟಾಯಿತು. ಅಂತಹ ಸಮಯದಲ್ಲಿ ಹೊತ್ತಿಗೆ ವೆಂಕಣ್ಣನನ್ನು ಕೇಳಿದಾಗ, ಶವಸಂಸ್ಕಾರದ ಮೊದಲು ಸಿಗಳಿ, ತಂಬಿಟ್ಟ ದಂಡೆಯಲ್ಲಿ ಒಂದು ಹೆಣ್ಣು ಗೊಂಬೆಯನ್ನು ಮಾಡಿ ಶವದ ಪಕ್ಕದಲ್ಲಿಡಬೇಕೆಂದನು. ಹೊತ್ತಿಗೆ ವೆಂಕಣ್ಣನ ಮಾತಿಗೆ ಕತ್ತಲರಾಯನು ಹೊನ್ನು ವರಹಕೊಟ್ಟು ಜೀವಂತ ಹೆಣ್ಣನ್ನೇ ಯಾಕೆ ತರಬಾರದೆಂದು ಯೋಚನೆ ಮಾಡಿದ.

ಪಟ್ಟಣದಲ್ಲೆಲ್ಲ ಡಂಗುರ ಹೊಡೆಸಲಾಯಿತು. ಆಲೂರಿನಲ್ಲಿ ಮೇಲು ಕೀಳು ಎಲ್ಲಾ ಜಾತಿಯವರು ಸೇರಿಕೊಂಡಂತೆ ಹೆಣ್ಣು ಕೊಡಲು ಯಾರು ಮುಂದುಬರುವುದಿಲ್ಲ. ಇಡೀ ದಿನ ಭಿಕ್ಷಾಟನೆ ಮಾಡಿ ಭಿಕ್ಷೆಸಿಗದ ಹಾರುವಯ್ಯನೊಬ್ಬ ತನ್ನ ಮಗಳನ್ನು ಕೊಡಲು ಮುಂದಾದ ಅವಳೇ ಚೆನ್ನವ್ವ. ಆಕೆ ಸತ್ತ ಗಂಡನನ್ನು ಪತಿಯಾಗಿ ಸ್ವೀಕರಿಸಿದಳು. ನಂತರ ಶವಸಂಸ್ಕಾರಕ್ಕೆ ಹೋದಾಗ ಚೆನ್ನವ್ವ ತಡೆದಳು. ಶವಸಂಸ್ಕಾರ ಮಾಡುವುದಾದರೆ ನಾನು ಸಹಗಮನ ಮಾಡುವೆ ಎಂದು ಸಿದ್ಧವಾದಳು. ಮುಂದೆ ಶಿವನನ್ನು ಭಕ್ತಿಯಿಂದ ಪೂಜಿಸಿ ತನ್ನ ಗಂಡನನ್ನು ಬದುಕಿಸುವಂತೆ ಬೇಡಿದಳು. ಅದಕ್ಕೆ ಶಿವ ಭಕ್ತಿಗೆ ಮೆಚ್ಚಿ ಗಂಡನಿಗೆ ಜೀವ ಕೊಟ್ಟನು. ಮುಂದೆ ಸುಖವಾಗಿ ಜೀವನ ನಡೆಸಿದರು.

ಚೆನ್ನವ್ವ ಬಾಲ್ಯದಿಂದಲೂ ಕಡುಬಡತನದಿಂದ ಬೆಳೆದವಳು. ಕೊನೆಗೆ ಸತ್ತ ಗಂಡನನ್ನು ಮದುವೆ ಯಾದಳು. ನಿಜಕ್ಕೂ ಇವು ನಂಬಲಾರ್ಹದ ಸಂಗತಿ. ಇದು ಎಷ್ಟರ ಮಟ್ಟಿಗೆ ಸಾಧ್ಯ ಎನ್ನುವುದು ಅನುಮಾನಕ್ಕೆ ಎಡೆಯಾಗುತ್ತದೆ. ಆದರೆ ಕೆಲವು ಸಾರಿ ನಿಜವೆನಿಸುತ್ತದೆ. ತಂದೆ ಮಗಳಿಗೆ 'ಸತ್ತಗಂಡ'ನನ್ನು ಮದುವೆಯಾಗು ಎಂದು ಹೇಳಿದಾಗ ಅವಳಿಗೆ ಆದಂತಹ ಆಘಾತ ಅಷ್ಟಿಷ್ಟಲ್ಲ. ಆದರೆ ಆ ನೋವನ್ನು ಎಲ್ಲೂ ವ್ಯಕ್ತಪಡಿಸುವುದಿಲ್ಲ. ಮದುವೆ ತಿರಸ್ಕರಿಸದೆ ಚೆನ್ನವ್ವ ಮದುವೆಯಾಗುತ್ತಾಳೆ. ದೇವರನ್ನು ಒಲಿಸಿಕೊಂಡು ಗಂಡನನ್ನು ಬದುಕಿಸಿಕೊಳ್ಳುತ್ತಾಳೆ.

**೮. ಈರೋಬಿ**

ಈ ಕಥನಗೀತೆಯಲ್ಲಿ 'ಈರೋಬಿ' ಪಾತ್ರ ವಿಶೇಷವಾಗಿದೆ. 'ಈರೋಬಿ' ಪದವು ಮೇಲುನೋಟಕ್ಕೆ ಕನ್ನಡಕ್ಕೆ ಹೊರತಾದ ಶಬ್ಧರೂಪವಾಗಿ ತೋರಿದರು ಸಹ ಅದು ಕನ್ನಡ ನಾಮಪದವೇ. ಈರೋಬಿ ಈಡಿಗರ ಸಮುದಾಯದಲ್ಲಿ ಹುಟ್ಟಿರುವಳು[೧೪]. ಅವಳ ಮೂಲ ಹೆಸರು ಓಬವ್ವ ಎಂದಿರಬೇಕು. 'ಈರೋಬಿ' ಶಬ್ಧದಲ್ಲಿ 'ವೀರ' ಮತ್ತು 'ಓಬಿ' ಎಂಬ ಎರಡು ಪದಗಳು ಸೇರಿಕೊಂಡಿರುವ ಸಾಧ್ಯತೆ. 'ಓಬಿ' ತನ್ನ ತ್ಯಾಗದಿಂದ ವೀರತನವನ್ನು ಮೆರೆದು ಈ ಸತಿ 'ವೀರೋಬಿ' ಈರೋಬಿ ಆಗಿರಬಹುದು. ಆದರೆ ಈ ಕಥನಗೀತೆಯ ಯಾವುದೇ ಪ್ರಸಂಗದಲ್ಲೂ, ಆರಂಭದಲ್ಲೂ ಕೂಡ ಜನಪದ ಕವಿ ವೀರ ಅಥವಾ ಈರ ವಿಶೇಷ ಪದವನ್ನೂ ಬಿಟ್ಟ ಓಬಿ ಅಥವಾ ಓಬವ್ವ ಎಂದು ಎಲ್ಲೂ ಕರೆಯುವುದಿಲ್ಲ.

ಈ ಕಥೆ ಮಂಡ್ಯ ಜಿಲ್ಲೆ ನಾಗಮಂಗಲ ತಾಲೂಕಿನ ತೀರ ಪ್ರದೇಶದಲ್ಲಿ ನಡೆದ, ಒಂದು ವಾಸ್ತವ ಘಟನೆ, ಈ ಕಥನಕವನವನ್ನು ಹಾಡಿದವರು ೮೦ ವರ್ಷದ ವಯೋವೃದ್ಧ ಸಿದ್ದೇಗೌಡರು. ಈ ಕಥನಗೀತೆಯನ್ನು ೪, ೮, ೧೯, ೬೧ರಲ್ಲಿ ಜೀಶಂಪ ಅವರು ಸಂಗ್ರಹಿಸಿದ್ದಾರೆ.[೧೫]

ಈರೋಬಿಯ ಕಥೆ ಪ್ರಾರಂಭವಾದದ್ದು ಮದುವೆಯಾದ ಮೇಲೆ. ಈರೋಬಿಯ ಪತಿ ಶೆಟ್ಟಿ ಶಂಕರರಾಯ ಮಡದಿಗೆ ಚಿನ್ನದ ಹರಿವಾಣವನ್ನು ತರಲೆಂದು ಗಟ್ಟದ ಕೆಳಗೆ ಹೋದವನು, ದುರ್ಮರಣಕ್ಕೆ ಈಡಾದನು. ತನ್ನ ಗಂಡ ಸತ್ತಿರಲಾರನು ಎಂದು ಭಾವಿಸಿದ ಈರೋಬಿ, ಸರಿಯಾದ ಗುರುತು ಬರುವವರೆಗೆ ಆ ಸುದ್ಧಿಯನ್ನು ನಂಬುವುದಿಲ್ಲ. ಕೊನೆಗೆ ಗುರುತುಗಳು ಬಂದಾಗ ತನ್ನ ಪತಿಯೊಡನೆ ಕೊಂಡವೇರಲು ಅಣಿಯಾದಳು. ಬಂಧು-ಬಳಗದವರು ಎಷ್ಟೇ ತಡೆದರೂ ಕೊಂಡವೇರಲು ಅಣಿಯಾದಳು. ಅವಳ ಮುತ್ತಿನಂಥ ಬಾಳು ಮಣ್ಣುಗೂಡಿ ಹೋಗುವಾಗ ಯಾರ ಒತ್ತಾಯಕ್ಕೂ ಮಣಿಯದೆ ಮಗುವನ್ನೂ ಬಿಟ್ಟು ಕೊಂಡವೇರಿದಳು. ಇದೊಂದು ಗಂಭೀರ ಸ್ವರೂಪದ ದುಃಖಾಂತ ಕಥನಗೀತೆ.[೧೬]

ತನ್ನ ಪತಿ ಚಿನ್ನದ ಹರಿವಾಣ ತರಲು ಹೋದವನು ಸತ್ತ ಸುದ್ದಿ ತಿಳಿದ ಈರೋಬಿ ಗಾಬರಿಗೊಂಡಳು. ಆದರೂ ಗುರುತು ಬರುವವರೆಗೂ ನಂಬಿಕೆಯಿರಲಿಲ್ಲ. ಈರೋಬಿಗೆ ಸತ್ತ ಸುದ್ದಿ ಬರುವ ಮೊದಲೇ ರಾತ್ರಿ ಸಮಯದಲ್ಲಿ ಕೆಟ್ಟ ಸ್ವಪ್ನ ಕಂಡಿದ್ದಾಳೆ. ಅಂದು ರಾತ್ರಿ ಪೂರ ನಿದ್ರೆ ಬರಲಿಲ್ಲ. ಅಂತು ಇಂತು ಬೆಳಕು ಹರಿಯಿತು. ಅದನ್ನು ಕಥನಗೀತೆಗಾರ ಔಚಿತ್ಯ ಪೂರ್ಣವಾಗಿ ಹೇಳಿರುವುದನ್ನು ಕಾಣಬಹುದು.

ಮುಂಗೋಳಿ ಕೂಗಿತು ಮೂಡು ಕೆಂಪೇರಿತು
ಏಳೆ ಈರೋಬಿ ಬೆಳಗಾದೋ- ನಿನ್ಹಟ್ಟಿ
ಕೀಲಾರ ದೆಮ್ಮೆ ಕರವುಂಡೊ'[೧೭]

ಈ ರೋಬಿ ಹಾಕಿಕೊಂಡಿದ್ದ ವಾಲೆ ಹೊಳಪಿನಿಂದ ಹೊಳೆಯುವುದನ್ನು ಅತ್ತೆ ಗುರುತಿಸುತ್ತಾಳೆ. ಅದರ ಹಿನ್ನೆಲೆಯನ್ನು 'ಈರೋಬಿಯ ವಾಲೆಯ ಹೊಳಪಿನಲ್ಲಿ ಜವರಾಯ ಕಾಣಿಸುವ ಹಾಗೆ, ಮುತ್ತೈದೆಯ ಸಂಕೇತವಾಗಿ ಬರುವ ವಾಲೆಯಲ್ಲಿನ ಹೊಳಪು ಎಂದಿಗಿಂತ ಅಂದು ಬಹಳ ಚೆನ್ನಾಗಿ ಕಾಣಿಸುತ್ತಿದೆ'.

ಮುಂದೆ ಈರೋಬಿ ಕೊಂಡ ಹೋಗುವುದಕ್ಕೆ ಮುಂಚೆ ತನ್ನ ಜೀವನದ ಬಗ್ಗೆ ಸ್ವಲ್ಪ ಯೋಚಿಸುತ್ತಾಳೆ. ತಾನು ಕುಳಿತ ಅರಮನೆ, ಅದರ ರತ್ನ ಖಚಿತವಾದ ಕಂಬ, ಕ್ಷಣದಲ್ಲಿ ಪುಡಿ ಪುಡಿಯಾದಂತೆ ಭಾಸವಾಗುತ್ತದೆ. ಕೊನೆಗೆ ತನ್ನ ಹೆಣ್ಣಿನ ಜನ್ಮವನ್ನು ಜರಿಯುತ್ತಾಳೆ.

ಪಾಪಿ ಹೆಣ್ಣು ಹುಟ್ಟಿ ತೋಪನ್ನೆ ಸೇರಿದೆ
ತೋಪೆ ನಿಂದುರುದು ಬೆಯ್ತಾದೆ
ಕರ್ಮಿ ಹೆಣ್ಣುಟ್ಟಿ ನೀ ವನವನೆ ಸೇರಿದೆ.
ವನವೇ ನಿಂದುರುದು ಬೇಯ್ತದೆ-ನನ್ನಂಥ
ಕರ್ಮಿ ಹೆಣ್ಣುಂಟೆ ಧರೆಯಲಿ'[೧೮]

ಎಂದು ತನ್ನನ್ನು ತಾನು ಜರಿದುಕೊಳ್ಳುತ್ತಾಳೆ. ಗಂಡನನ್ನು ಒಂದು ತೋಪಿಗೆ, ವನಕ್ಕೆ ಹೋಲಿಸುತ್ತಾಳೆ. ಆ ತೋಪು ತನ್ನಂಥ ಬಳ್ಳಿಗೆ ಆಶ್ರಯ ಕೊಡುತ್ತದೆಂದು ನಂಬಿ, ತೋಪನ್ನು ಸೇರಿದರೆ ಆ ತೋಪು ನನ್ನಂಥ ಪಾಪಿ ಹೆಣ್ಣಿನಿಂದ ಬೆಂದು ಹೋಯಿತು. ತಾನೆಂಥ ಪಾಪಮಾಡಿದವಳು, ಎಂದು ತನ್ನ ಹೆಣ್ತನವನ್ನು ಜರಿದುಕೊಳ್ಳುತ್ತಾಳೆ.

ಹುಣಿಸೆಯ ಕಾಯಿ ಹುಳಿಯೆಂದು, ಗೇರುಕಾಯಿಮರಕೆಂದು
ಈ ನಾಡಿನ್ಹೆಣ್ಣು ಕರಿದೆಂದು - ಶಂಕರಲಿಂಗರಾಯ
ಆನಾಡಿಗ್ಹೋಗಿ ಮಡಿದಾನೋ - ಕೋಲುಮಲ್ಲಿಗೆ ಕೋಲ್ಲಣ್ಣ

ಬಾಣತೀರೋಬಿ ಬಟ್ಟಲಲ್ಲುಣು ತಾಳೆಂದು
ಘಟ್ಟದ ಕೆಳಗಲ ಹರಿವಾಣಾ ತರಲ್ಹೋಗಿ
ಶೆಟ್ಟಿಶಂಕರರಾಯ ಮಡಿದಾನೋ ||ಕೋ||

ಗರ್ಭಧರಿಸಿದ ಈರೋಬಿಯ ಆಸೆ ಆಕಾಂಕ್ಷೆಗಳನ್ನು ಈಡೇರಿಸಲು ಹೋದ ಪತಿಯಾದ ಶಂಕರರಾಯ ಘಟ್ಟದ ಕೆಳಗಲ ಹರಿವಾಣ ತರಲೆಂದು ಹೋದವನು ಸಿಂಹದ ಬಾಯಿಗೆ ಸಿಕ್ಕಿಬಿದ್ದು ಮರಣವನ್ನು ಅಪ್ಪುತ್ತಾನೆ. ಈರೋಬಿ ಗರ್ಭಿಣಿಯಾದುದರಿಂದ ಅವಳ ಮನಸ್ಸಿಗೆ ಆಘಾತವಾಗುತ್ತದೆ. ಹುಟ್ಟುವ ಮಗು ಹಾಗೂ ನನ್ನ ಗತಿ ಇನ್ನು ಮುಂದೆ ಎಂತಹದ್ದು ಎಂದು ಆಲೋಚನೆ ಮಾಡುವ ಶಕ್ತಿಯು ಅವಳಿಗೆಯಿರುವ ಹಾಗೆ ಆಗುವಂತಹ ಸನ್ನಿವೇಶ.

ಕನ್ನೆ ಈರೋಬಿ ತಣಿಗೇಲುಣುತಾಳೆಂದು
ಕಣಿವೇಯ ಕೆಳಗಲ ಹರಿವಾಣ ತರಲ್ಹೋಗಿ
ರಾಯ ಶಂಕರರಾಯ ಮಡಿದಾನ ||ಕೋ||

ಕೀಲಾರದೆಮ್ಮೆಗೆ ಗಜಮುಟ್ಟ ಗೊಂಡ್ಹೇವು
ದಾವಣಿ ಮೆಟ್ಹಾಲ ಕರೆಯೋಳು ಈರೋಬಿ
ವಾಲೆ ಮೇಲಿದ್ದ ಜವರಾಯ

ಅತ್ಯಮ್ಮ ಅತ್ಯಮ್ಮ ಕೆಟ್ಟ ಸ್ವಪ್ನವ ಕಂಡೆ
ದಿತ್ತುಳ್ಳಿಕಾರ ನಿನಮಗ - ಮನಗೋಮಂಚ
ನಿಟ್ಟಿಲ್ಲ ಕತ್ತಿ ಕವಿಯಾದೋ

ಅತ್ತೆ ಅತ್ತೆ ದಿಟ್ಟನಾದ ನಿನ್ನ ಮಗ ಮಲಗೋ ಮಂಚದ ದಿಕ್ಕಿನಲ್ಲಿ ಕತ್ತಿ ಕವಿದು ನಿಂತಂತೆ ಕನಸಕಂಡೆ. ಹುತ್ತದ ಮೇಲಿನ ಕಾಗೆ ನೆತ್ತರ ಕಾರೋದನ್ನ ಕಂಡೆ, ಮೂಗುತಿ ಮುರಿಯೋದು, ಮುಂದಿನ ಹಲ್ಲು ಸಿಡಿಯೊದು, ಗಿಂಡಿ ತುಂಡಾಗಿ ಒಡಿಯೋದು, ಇದೆಲ್ಲ ಇದೀಗ ಮುಂಜಾನೆ ಕನಸಿನಲ್ಲಿ ಕಂಡೆ ಎಂದಳು.

ಮಾಗಿಯ ಸ್ವಪ್ನ ಮನೆಗೆ ಮುಗಂಡುಗ
ನಮಗೆಲ್ಲ ಕಾಣೆ ಪರರಿಗೆ ಈರೋಬಿ
ಏನು ಕಂಡ್ಡೇಳ ಸಪುನವ

ಉತ್ತದ ಮೇಗಲ ಕಾಗೆ ನೆತ್ತರ ಕಾರೋದ ಕಂಡೆ
ಶೆಟ್ಟಿ ಶಂಕರಾಯ ಬದುಕೋದ - ಸಪುನವ
ಕಂಡೆ ನಮ್ಮ ಕಾಲುಗಳಿಗೇಲಿ

ಮೂಗತಿ ಮುರಿಯೋದ ಕಂಡೆ ಮುಂಬಲ್ಲು ಸಿಡಿಯೋದ ಕಂಡೆ
ಗಿರಿಪಿ ತುಂಡಾಗಿ ಒಡೆಯೋದ - ಸಪುವನ
ಕಂಡೆ ನಮ್ಮ ಕಾಲುಗಳಿಗೇಲಿ

ಮೂಗತಿ ಎಂಬೋಳು ನೀನು ಮುಂಬಲ್ಲು ಅನ್ನೊಳು ನಾನು
ಚಿನ್ನದ ಗಿಂಡಿಯ ನಿನ್ನ ಪುರುಷ - ಈರೋಬಿ
ಏನು ಕಂಡ್ಡಳು ಸಪುನವ

ಕಟ್ಟೆಯ ಹಿಂದೆ ಎಂಟೆಮ್ಮೆ ಮೇಸೋಳೆ
ಒಂಟಂಚಿನ ಸೀರೆ ಸೆರೆಗೊಳೆ - ಈರೋಬಿ
ನಿನ್ನ ಪುರುಷ ಮಡಿದಾನೆ ರಣದಲ್ಲಿ

ದುಡ್ಡಿನ್ನಾದೀಲಿ ಹಿಂಡೆಮ್ಮಿ ಮೇಸೊಳೆ
ನಿನ್ನ ಗಂಡನ ಹೊಡೆದಾರೆ - ಈರೋಬಿ
ಹಿಂಡೆಮ್ಮಿ ಬಿಟ್ಟು ವರಯಾಗೆ

ಸತ್ತ ಸುದ್ದಿ ನೆತ್ತರದರಬಿ ಬರಲಿ
ಕಿತ್ತಳ್ಳಿ ಬರಲಿ ಗರುತೀಗೆ ಸೋಮವಾರದ
ಹೋತನಂತೆ ಕೊಂಡ ಹೋಗುತೀನಿ

ಸತ್ತ ಸುದ್ಧಿ ಬಂತು ನೆತ್ತರದರಬಿ ಬಂತು
ಕತ್ತಿ ಬಂತು ಅವನ ಗರುತೀಗೆ - ಈರೋಬಿ
ಹೊತ್ತೋರಿಗೇಳು ನಿಲುಭಾರ

ಸಣ್ಣ ಚಿತ್ತದ ಕೋಲು ಮಣ್ಣಾದೊ ಕಾಣಮ್ಮ
ಕನ್ನೆ ಕುಂಡುರವ ಅರಮಲ್ಲಿ - ಗಾಜಿನ ಕಂಬ
ಮಣ್ಣಾದೊ ಕಾಲುಗಳಿಗೇಲಿ

ಹಸುರು ಚಿತ್ತದ ಕೋಲು ಮನೆಯಾದೊ ಕಾಣಮ್ಮ
ಕನ್ನೆ ಕುಂಡರವ ಅರಮಲ್ಲಿ - ಗಾಜಿನ ಕಂಬ
ಮಣ್ಣಾದೊ ಕಾಲಗಳಿಗೇಲಿ

ಪಾಪಿ ಹೆಣ್ಣುಟ್ಟಿ ತೋಪನ್ನೆ ಸೇರಿದೆ
ತೋಪೆ ನಿಂದುರುದು ಬೆಯ್ತಾದೆ

ಕರ್ಮಿ ಹೆಣ್ಣುಟ್ಟಿ ನೀ ವನವನ ಸೇರಿದೆ
ವನವೇ ನಿಂದುರುದು ಬೇಚ್ತದೆ - ನನ್ನಂಥ
ಕರ್ಮಿ ಹೆಣ್ಣುಂಟೆ ಧರೆಯಲ್ಲಿ

ಕತ್ತಿ ಬರುವಾಗ ಹೆತ್ತೋರಿಗೆ ಹೆಚ್ಚಳ
ಕತ್ತಿ ಬಂದೂರ ಹೋಗುವಾಗ ಈರೋಬಿ
ಭಾವದಿರ ಗೋಳ ನಿಲುಭಾರ

ಸಾಲು ಬರುವಾಗ ತಾಯಮ್ಮಗೆ ಹೆಚ್ಚಳ
ಸಾಲು ಬಂದೂರ ಹೋಗುವಾಗ - ಈರೋಬಿ
ತಾಯಮ್ಮಗೋಳು ನಿಲುಭಾರ

ಹಚ್ಚಡ ಬರುವಾಗ ಅವರಪ್ಪಾಜಿಗೆ ಹೆಚ್ಚಳ
ಹಚ್ಚಡ ಬಂದೂರ ಹೋಗುವಾಗ - ಈರೋಬಿ
ಅವರಪ್ಪನಗೋಳು ನಿಲುಭಾರ

ಅಂಗಿ ಬರೋವಾಗ ತಂಗೋರಿಗೆ ಹೆಚ್ಚಳ
ಅಂಗಿ ಬಂದೂರ ಹೋಗುವಾಗ - ಈರೋಬಿ
ತಂಗ್ಯಮ್ಮನ ಗೋಳು ನಿಲುಭಾರ

ಉಂಗುರು ಬರುವಾಗ ಅವರಣ್ಣಯ್ಯಗೆ ಹೆಚ್ಚಳ
ಉಂಗುರ ಬಂದೂರ ಹೋಗುವಾಗ - ಈರೋಬಿ
ಅವರಣ್ಣನ ಗೋಳು ನಿಲುಭಾರ

ತುಪ್ಪ ಅನ್ನವುಂಡು ಒಪ್ಪಳ್ಳ ನಡುಕಟ್ಟು
ದಪ್ಪದೊಂದು ಕೊಡಲಿ ಹೆಗಲೊಡ್ಡಿ - ಈರೋಬಿ
ನಿಮ್ಮಪ್ಪದಿರ್ಹೊರಟಾರೆ ಕೊರಡೀಗೆ

ಆಲದ ಮರವ ಏರಿಕಡಿಯೊ ಅಣ್ಣದೀರ
ಮೇಲೊಂದು ಕೊರಡು ಮಿಗಿಲಾಗಿ - ಕಡಿದಾರೆ
ಬಾಳ ಸಂತಾನ ದೊರೆಯೋದು

ಕೊಂಡ ತಗಿಯೋರು ನೀವು ಚಂದಾಗಿ ತಗಿರಯ್ಯ
ಕೊಂಡದ ಮೇಲೆ ಗುಡಿಕಟ್ಟಿ - ತಗಿದಾರೆ
ನಿಮಗೆ ಪುತ್ರ ಸಂತಾನ ದೊರೆಯೋದು

ಕಿಚ್ಚ ತಗಿಯೋರು ನೀವು ಒಪ್ಪವಾಗಿ ತಗಿರಯ್ಯ
ಕಿಚ್ಚಿನ ಮೇಲೆ ಗುಡಿಕಟ್ಟಿ ತಗಿದಾರೆ
ನಿಮಗೆ ಪುತ್ರ ಸಂತಾನ ದೊರೆಯೋದು

ಕಿಚ್ಚಿಗೆ ಸೌದೆ ಹೊರುವ ಎತ್ತಿನ ಚೆಂದ ನೋಡಿ
ಕೊಂಬಿಗೆ ಮುತ್ತು ಕೊರಳಿಗೆ - ಹೂವಿನಮಾಲೆ
ಕಿಚ್ಚಿಗೆ ಸೌದೆ ಹೊರುತಾವೆ

ಕೊಂಡ ಕೂಡಿಸ್ಯಾಳೆ ಗಂಡನ ತರಿಸ್ಯಾಳೆ
ಗಂಡನ ಕಷ್ಟವ ಮಾಡ್ಯಾಳೆ - ಈರೋಬಿ
ಮುಂದಕೆ ಹೊರಟಳೆ ಈರೋಬಿ

ನೀರಮೀದಿರೋಬಿ ಹೋದಳಪ್ಪನ ಮನೆಗೆ
ಅಪ್ಪಾಜಿ ನನಗೆ ತರನ್ಹೇಳೊ - ಅನ್ನೋ ಹೊತ್ತಿಗೆ
ನಿನ್ನಂತ ಬಾಳು ತಪ್ಪಿದೋರಿಲ್ಲವಮ್ಮ

ಬಾಳು ತಪ್ಪಿದೋರಿಲ್ಲವೆ ಬಾಲನಾದವರು ಇಲ್ಲವೆ
ಯಾರ ಬಾಲನ ಕಂಡು ಇರಲಪ್ಪ - ಅಪ್ಪಾಜಿ
ಬೇಗನೆ ಕೊಡೊ ಒಡೆಗಿಚ್ಚ

ಸೀರೆನುಡುವಮ್ಮ ಕುಪ್ಪಸವನೆ ಕೊಡುವಮ್ಮ
ಮಲ್ಲಿಗೆ ಹೂವ ಮುಡಿಯಮ್ಮ - ಈರೋಬಿ
ತೆಪ್ಪನಿರಮ್ಮ ಅರಮಲ್ಲಿ

ಸೀರೆಯನುಡುವಲ್ಲೆ ಕುಪ್ಪಸವ ತೊಡುವಲ್ಲೆ
ಮಲ್ಲಿಗೆ ಹೂವ ಮುಡಿವಲ್ಲೆ - ಅಪ್ಪಾಜಿ
ಬೇಗನೆ ಕೊಡೊ ಒಡೆಗಿಚ್ಚ

ಕಿಚ್ಚು ಎಂಬುದು ಕಚ್ಚಾಟ ತರವಲ್ಲ
ಕತ್ತೋದು ಚೆನ್ನವಲುವೋದು - ಈರೋಬಿ
ತೆಪ್ಪಿನಿರಮ್ಮ ಅರಮಲ್ಲಿ

ಕಿಚ್ಚುಕೊಟ್ಟರೆ ಕೊಡು ಕೊಡಿದದ್ದರೆ ಬಿಡು
ಪಚ್ಚೆ ಕಾಲಾಣೆ ಪತಿಯಾಣೆ - ಕೆಂಪನರಸು
ತೊಟ್ಟಿಲೊಳಗಿರುವ ಶಿಸುವಾಣೆ

ನೀರಮೀದಿರೋಬಿ ಹೋದಳಣ್ಣನ ಮನೆಗೆ
ಅಣ್ಣ ನನಗೆ ತರನೇಳೊ - ಅನ್ನೊವತ್ತಿಗೆ
ನಿನ್ನಂಥ ಬಾಳುಕೊಟ್ಟೋರು ಇಲ್ಲವಮ್ಮ

ಬಾಳು ಕೊಟ್ಟೋರಾದರೂ ಇಲ್ಲವೆ ಬಾಲನದರು ಇಲ್ಲವೆ
ಯಾವ ಬಾಲನ ಕಂಡು ಇರಲಣ್ಣ - ಅಣ್ಣಾಜಿ
ಬೇಗನೆ ಕೊಡು ಒಡಗಿಚ್ಚು

ಸೀರೆಯನುಡುವಮ್ಮ ಕುಪ್ಪಸ ತೊಡವಮ್ಮ
ಮಲ್ಲಿಗೆ ಹೂವ ಮುಡಿಯಮ್ಮ - ಈರೋಬಿ
ತೆಪ್ಪನಿರಮ್ಮ ಅರಮಲ್ಲಿ

ಸೀರೆನುಡವಲ್ಲೆ ಕುಪ್ಪಸ ತೊಡುವಲ್ಲೆ
ಮಲ್ಲಿಗೆ ಹೂವ ಮುಡಿವಲ್ಲೆ - ಅಣ್ಣಾಜಿ
ಬೇಗನೆ ಕೊಡು ಒಡಗಿಚ್ಚ

ಕಿಚ್ಚೊ ಎಂಬೋದು ಕೆಟ್ಟದು ತರವಲ್ಲ
ಕತ್ತೋದು ಬೆನ್ನು ಒಲಿಯೋದು ಈರೋಬಿ
ತೆಪ್ಪನೆ ಇರಮ್ಮ ಅರಮಲ್ಲಿ

ಕಿಚ್ಚುಕೊಟ್ಟರೆ ಕೊಡು ಕೊಡದಿದ್ದೆ ಬಿಡು
ಪಚ್ಚೆಕಾಲಾವಣೆ ಪತಿಯಾದೆ ಕೆಂಡನರಸು
ತೊಟ್ಟಿಲೊಳಗಿರುವ ಶಿಶುವಾಣಿ

ಗಂಡ ಸಾಯೋಕಿಂತ ಮುಂಡ್ಯಾಗೋಕಿಂತ
ಕಂಡೋರ ಮನೆಯ ಕಸನ್ನಾಕ - ಸಾಯೋಕಿಂತ
ಕೊಂಡವನ್ನೋದೆ ಕಡುಲೇಸು

ರಾಗಿ ಮಾಡಿದ ಕಲ್ಲು ಬೀದಿಗೆ ಚೆಲ್ಲೋಳೆ
ನಾದಿನಿ ನಿನ್ನ ವಿಷವ ಬಿಡಲಿಲ್ಲ - ನಮ್ಮಿಬ್ಬರ
ಗುದ್ದಾಟವಿಲ್ಲಿಗೆ ಸವೆದ್ಹೋದೊ

ಅಕ್ಕ ಮಾಡಿದ ಕಲ್ಲ ಹಟ್ಟೀಗೆ ಚೆಲ್ಲೋಳೆ
ಅತ್ತಿಗೆ ನಿನ್ನ ವಿಷವ ಬಿಡಲಿಲ್ಲ - ನಮ್ಮಿಬ್ಬರ
ಕಿತ್ತಾಟ ಇಲ್ಲಿಗೆ ಸರಿಯಾದೊ

ಬತ್ತ ಮಾಡಿದ ಕಲ್ಲ ಬಚ್ಚಲಿಗೆ ಚೆಲ್ಲೋಳೆ
ಅತ್ತ್ಯಮ್ಮ ನಿನ್ನ ವಿಷವ ಬಿಡಲಿಲ್ಲ - ನಮ್ಮಿಬ್ಬರ
ಗುದ್ದಾಟ ಇಲ್ಲಿಗೆ ಸರಿಯಾದೊ

ಹಾಲ ತಕ್ಕಂಡು ನಮ್ಮ ತಾಯನ್ನು ಬರಹೇಳಿ
ತುಪ್ಪಕ್ಕಿಂತ ಮೇಲು ಜೇನುತುಪ್ಪ - ತಕ್ಕೊಂಡು
ನಮ್ಮಪ್ಪ ಮುದ್ದಯ್ಯ ಬರಹೇಳಿ

ಎಣ್ಣೆ ತಕ್ಕೊಂಡು ನಮ್ಮಣ್ಣಯ್ನ ಬರಹೇಳಿ
ಎಣ್ಣೆಗಿಂತ ಮೇಲೆ ಹರಳೆಣ್ಣೆ - ತಕ್ಕೊಂಡು
ಅಣ್ಣ ನಿಂಗಣ್ಣನ ಬರಹೇಳಿ

ಉಪ್ಪರಿಕೆ ಉಪ್ಪರಿಕೆ ಏಂತರುದುಪ್ಪರಿಗೆ
ಉಪ್ಪರಿಗೆ ಒಳಗೆ ಒಳಗಿರುವ - ಈರೋಬಿ
ನಿಮ್ಮ ತಾಯಿ ಬಂದವಳ ಮಕ ತೋರೆ

ತಾಯಿ ಬಂದರೆ ಬರಲಿ ಹಾಲು ತಂದರೆ ತರಲಿ
ನನ್ನ ಹಾಲಿನಂಥ ಬದುಕು ಅಡವೀರಿ - ಈಡಾಡುವಾಗ
ತಾಯಮ್ಮಗೊಡವೆ ನಮಗೇನು

ಮಾಳಿಗೆ ಮಾಳಿಗೆ ಏಳಂತರದ ಮಾಳಿಗೆ
ಮಾಳಿಗೆ ಒಳಗೆ ಒರಗಿರುವ - ಈರೋಬಿ
ನಿಮ್ಮಪ್ಪ ಬಂದವನೆ ಮಕತೋರೆ

ಅಪ್ಪ ಬಂದರೆ ಬರಲಿ ತುಪ್ಪ ತಂದರೆ ತರಲಿ
ತುಪ್ಪದಂತ ಬದುಕು ಅಡಿವೀರಿ - ಈಡಾಡುವಾಗ
ನಮ್ಮಪ್ಪನಗೊಡವೆ ನಮಗೇನು

ಮಂಚದ ಮೇಲಿ ಮಲಗಿರೊ ಈರೋಬಿ
ನಿಮ್ಮಣ್ಣ ಬಂದವ್ನೆ ಮಕ ತೋರೆ

ಅಣ್ಣ ಬಂದರೆ ಬರಲಿ ಎಣ್ಣೆ ತಂದರು ತಲಿ
ಎಣ್ಣೆಯಂಥ ಬದುಕು ಅಡವೀಲಿ - ಈಡಾಡುವಾಗ
ನಮ್ಮಣ್ಣನಗೊಡವೆ ನಮಗೇನು

ಕೊಂಡ ತೆಗೆಸ್ಯಾಳೆ ಕೊಂಡಾ ಕುಡಿಸ್ಯಾಳೆ
ಮುಂದಾಕೊಂಟಾಳೆ ಈರೋಬಿ

ಬಣ್ಣ ಇಟ್ಟುಗಂಡು ಬಂಗಾರ ತೊಟ್ಟುಗೊಂಡು
ಬೀದೀಲಿ ಹೊರಟಳೆ ಈರೋಬಿ

ಕೊಂಡಕೋಗೋಳ ಕೈಲಿ ಹನ್ನೆರಡು ನಿಂಬೆಹಣ್ಣು
ಹನ್ನೆರಡುದುರಬು ಕರುವಲ್ಲೆ ಈರೋಬಿ
ಕೊಂಡಕ್ಹೊಗೋದೆ ಸಡಗರ

ಕಿಚ್ಚಿಗ್ಹೋಗೋಳ ಕೈಲಿ ಮುಚ್ಚಳ ನಿಂಬೆಹಣ್ಣು
ಕಿಚ್ಚೇಳುದುರುಬ ಕರುವಲ್ಲೊ ಈರೋಬಿ
ಅವಳು ಕಿಚ್ಚಿಗ್ಹೋಗೋದೆ ಸಡಗರ

ನಿಂಬೆಹಣ್ಣು ಅಂಬರ ಕೀಡಾಡುತ
ರಂಚಿ ತನ್ನ ತೋಳ ತಿರುವ್ರತ - ಈರೋಬಿ
ಬಂದೋರ ಮುಂದೆ ಮೆರೆದಾಳೋ

ಬಾಳೆಹಣ್ಣು ಬಾನಿಗೀಡಾಡುತ್ತ
ಬಾಲೆ ತನ್ನ ತೋಳ ತಿರುವ್ರತ - ಈರೋಬಿ
ಅವರ ಭಾವದೀರ ಮುಂದೆ ಮೆರೆದಾಳೊ

ಅರಸಿಣ ಸೀಗೆಕಾಯಿ ಸರಸರ ನೀಡಾಡುತ್ತ
ಅವಳರಸಿ ಈರೋಬಿ ಬರಹೇಳಿ - ಸೀಗಕಾಯ
ಅವು ಇನವಂದನಾಡಿ ನಗುತಾವೆ

ಎಣ್ಣೆ ಸೀಗೆಕಾಯಿ ಇನವಂದನಾಡುತಾವೆ
ಕನ್ನೆ ಈರೋಬಿ ಬರಹೇಳಿ - ಸೀಗೆಕಾಯಿ
ಅವು ಇನವಂದನಾಡಿ ನಗುತಾವೆ

ಹುಟ್ಟಿದ್ದಳಿಸಂದ್ರ ಬೆಳೆದಿದ್ದು ನಾಗ್ತಿಹಳ್ಳಿ
ಕೊಟ್ಟ ಬಾಳಿದ್ದು ಬೆಳ್ಳೂರು - ಹೆಣ್ಣುಮಕ್ಕಳು
ನನ್ನಂಗೆ ನಿಂದು ಉರಿಯಾಲಿ

ಬೆಳ್ಳೂರಲ್ಲಿ ಒಬ್ಬ ಜೇಡರ ಹುಡುಗನ್ನ
ಬಾಗಿಲ ತೆಗಿಸೆ ಇವರೀಗೆ - ನಾನೀಗ
ಕಳಸಮುಂದಾಗಿ ಬರುತೀನಿ

ಕಳಸ ಹೊತ್ತುಕೊಂಡು ಬಂದಳು ಈರೋಬಿ
ಕೊಂಡ ಮೂರು ಸುತ್ತು ಬಳಸ್ಯಾಳು ಈರೋಬಿ

ಕಳಸವ ಮಡಗಿ ಕೈಯೆತ್ತಿ ಮುಗಿದಾಳು - ಈರೋಬಿ
ಕೊಂಡಕೆ ಮುಂದಾಗಿ ನಡೆದಾಳು

ಕೋಲುಮಲ್ಲಿಗೆ ಕೋಲಣ್ಣ - ಕೋಲು ಚಿನ್ನದ ಕೋಲಣ್ಣ
ಬೆಟ್ಟದ ಸುತ್ತುವ ಬಿಟ್ಟಿಮ್ಮೆ ಕಾಯೋಳೆ
ದುಂಡಿ ಕೈಬಲೆ ಹೊಡೆದವ್ರ ||ಸುವ್ವಿ||

ಕೊಂಡದ ಸುತ್ತುವ ಬಿಟ್ಟಿಮ್ಮಿ ಕಾಯೋಳೆ
ಭದ್ರ ಕೈಬಳೆ ಹೊಡೆದವು ||ಸುವ್ವಿ||

ಕಡುದ ಕತ್ತಿ ಬರಲಿ ಹಿರಿದ ಈಟಿ ಬರಲಿ
ಜೂಲು ನಾಯಿ ಬರಲಿ ಗುರುತೀಗೆ ||ಸುವ್ವಿ|| ಬೆಳ್ಳೂರ
ಜೊರೆ ಮೇಲೆ ನಾವು ನೆಲೆಗೊಂಡು ||ಸುವ್ವಿ||

ಕಡುದ ಕತ್ತಿ ಬಂದೋ ಹಿರಿದ ಈಟಿ ಬಂದೊ
ಜುಲನಾಯ ಬಂದೊ ಗುರುತೀಗೆ ||ಸುವ್ವಿ|| ಬೆಳ್ಳೂರು
ಬೋರೆ ಮೇಲ್ಯವೆ ನೆಲೆಗೊಂಡೊ

ಬಸುರಿ ಈರೋಬಿ ಬಟ್ಟಲಲ್ಲುಣುತಾಳೆಂದು
ಗಟ್ಟದ ಕೆಳಗಲ ತಣಗೇಯು ||ಸುವ್ವಿ|| ತರಲ್ಹೋಗಿ
ಸುಮ್ಮಿನಿದ್ದ್ಯಾಗುರವ ಕೆಣಕೀದ ||ಸುವ್ವಿ|| ಕಾರಣಕಾಗಿ
ಶೆಟ್ಟಿ ಶಂಕರರಾಯ ತಲೆ ಮಡಿದೋ ||ಸುವ್ವಿ||

ಗಂಡ ಸತ್ತೋರಿಲ್ಲವೆ ಮುಂಡೇರಾದೋರಿಲ್ಲವೆ
ಹೀನ ಬತ್ತಲ್ಲೆ ಕುಲಕ್ಕೆಲ್ಲ ||ಸುವ್ವಿ|| ಅತ್ತ್ಯಮ್ಮ

ವಾರಾರಾಗಿತ್ತೀರು ಅಡುಕಾಯ ||ಸುವ್ವಿ|| ಅತ್ತ್ಯಮ್ಮ
ಮೈದಯ್ಯ ಮಾವದೀರು ನಗುತಾರೆ

ಚೆನ್ನಪಟ್ಟಣದಿಂದ ಚೆನ್ನದುಂಗುರ ಬಂದೋ
ಕನ್ನೆ ಈರೋಬಿ ಹಿರಿಯೋಳೆ - ನಿಂಗನಗೌಡ
ಚೆನ್ನದುಂಗುರವ ಕಳಸ್ಯಾನೆ

ಹಟ್ಟಿಕಲ್ಲಡಗಲಿ ಕೊಟ್ಟಿಗೆ ಬರಿದಾಗಲಿ
ಹಿಂಡೆಮ್ಮ ಸಾಲು ಅಡಗಲಿ - ನಿಂಗನಗೌಡ
ನನಗೋಳು ನಿಮ್ಮೆಣ್ಣಿಗೆ ಮಡಗಿರಲಿ

ವಾಲೆಯಿಕ್ಕುವಾಗ ತಾಯವ್ವೆಗೆ ಹೆಚ್ಚಳ
ವಾಲಿಕ್ಕಿ ಈರೋಬಿ ಮೆರೆವಾಗ - ತಾಯಮ್ಮೆಗೆ
ಕಂಡುಗ ದುಃಖ ಎರಗಾವೊ

ಕಪ್ಪನಿಕ್ಕುವಾಗ ಅವರಪ್ಪಗೆ ಹೆಚ್ಚಳ
ಕಪ್ಪಿಕ್ಕೆ ಈರೋಬಿ ಮೆರೆವಾಗ - ಅವರಪ್ಪಗೆ
ಕಂಡುಗ ದುಃಖ ಎರಗವೊ

ಕೊಂಡಕ್ಹೋಗುವಾಗ ಮತ್ತೇನು ಸುಂಗಾರ
ಈಚಲಗರಿ ನಿಂಬೆಹಣ್ಣು - ಹಿಡಕೊಂಡು
ಕೊಂಡಕ್ಹೋಗೋದೆ ಬಾಳಲೇಸು

ಕೊಂಡಕ್ಹೋಗುವಾಗ ಇನ್ನೇನು ಸುಂಗಾರ
ನೀಲ ಪತ್ತಲುಟ್ಟುಕೊಂಡು ನಿಲುಗರಡಿ - ಹಿಡಕೊಂಡು
ಅವಳು ಕೊಂಡಾಕ್ಹೋಗೋದೆ ಬಾಳಲೇಸು

ಈ ಕಥನಗೀತೆಯ ಸಾರಾಂಶ ಈ ಕೆಳಗಿನಂತಿದೆ. ಮಂಡ್ಯ, ನಾಗಮಂಗಲ, ಸುತ್ತಮುತ್ತಲಿನ ಭಾಗದಲ್ಲಿ ತುಂಬಾ ಪ್ರಚಲಿತದಲ್ಲಿದೆ. ಮಡಿದ ಗಂಡನ ನೆನಪಿನಲ್ಲಿ ಕೊಂಡವನ್ನು ಏರುವ ವೀರಮಹಿಳೆ ಈರೋಬಿ ಕಥನವೇ ಈ ಕಾವ್ಯದ ಮುಖ್ಯ ಜೀವಾಳವಾಗಿದೆ ಮತ್ತು ಅದೇ ಅದರ ಕೇಂದ್ರಬಿಂದು ಎಂಬ ಅಂಶವನ್ನು "ಜನಪದ ಸಾಹಿತ್ಯದಲ್ಲಿ ಬಂಡಾಯದ ನೆಲೆಗಳು" ಎಂಬ ಕೃತಿಯಲ್ಲಿ ಡಾ. ಡಿ. ಶಿವನಂಜಯ್ಯರವರು ಹೇಳಿದ್ದಾರೆ.[೩೩] ಈರೋಬಿಯ ಪತಿ ಶೆಟ್ಟಿಶಂಕರಾಯ ಘಟ್ಟದ ಕೆಳಗೆ ಮಡದಿಗೆ ಚಿನ್ನದ ಹರಿವಾಣವನ್ನು ತರಲು ಹೋಗಿ ದುರ್ಮರಣಕ್ಕೀಡಾದ ಶೋಚನೀಯ ಸಂದರ್ಭವೇ ಈರೋಬಿಯ ಕಥನ. ಈ ಕಥನವನ್ನು ಹಾಡುಗಾರರು ತಮ್ಮ ಆರೋಪಿಸಿಕೊಡು ಅಂದರೆ ತಮ್ಮ ಸಮುದಾಯದ ಹೆಣ್ಣಿನ ಅಂತಃಕರಣಕ್ಕೆ ಈರೋಬಿಯ ಬದುಕನ್ನು ಸಮೀಕರಿಸುವುದು ಇಲ್ಲಿನ ವೈಶಿಷ್ಟ್ಯವೆನ್ನಿಸಿದೆ. ತುಂಬ ಅಪೂರ್ವವಾಗಿ ಅಷ್ಟೇ ಪರಿಣಾಮಕಾರಿಯಾಗಿ ಈ ಕಥನ ಮುಕ್ತಾಯಗೊಳ್ಳುತ್ತದೆ. ಬಾಣಂತಿ ಈರೋಬಿ ಸಂದರ್ಭದಲ್ಲಿ ಹಾಡುಗಾರರು ಮೊದಲೇ ಶೆಟ್ಟಿ ಶಂಕರರಾಯ ಮಡಿದ ಸಂದರ್ಭವನ್ನು ಕಟ್ಟಿಕೊಳ್ಳುತ್ತಾರೆ.



ಬಾಣತೀರೋಬಿ ಬಟ್ಟಲಲ್ಲುಣುತಾಳೆಂದು
ಘಟ್ಟದ ಕೆಳಗಲ ಹರಿವಾಣಾ - ತರಲ್ಹೋಗಿ
ಶೆಟ್ಟಿ ಶಂಕರರಾಯ ಮಡಿದಾನೆ ||ಕೋ||

ಕನ್ನೆ ಈ ರೋಬಿ ತಣೀಗೇಲುಣುತಾಳೆಂದು
ಕಣಿವೇಯ. ಕೆಳಗಲ ಹರಿವಾಣ ತರಲ್ಹೋಗಿ
ರಾಯ ಶಂಕರರಾಯ ಮಡಿದಾನೆ ||ಕೋ||[೩೪]

ಹೀಗೆ ಕಥೆಯು ಮುಂದುವರೆದು ಅತ್ತೆ ಈರೋಬಿಯನ್ನು ಬೆಳಗಾಯಿತು ಏಳು ಎಂದು ಎಚ್ಚರಿಸುವ ನಿತ್ಯದ ಕಾಯಕಕ್ಕೆ ಬಂದು ನಿಲ್ಲುತ್ತದೆ. ನಿನ್ನ ಹಟ್ಟಿಯ ಎಮ್ಮೆಯ ಹಾಲನ್ನು ಕರು ಉಣ್ಣುತ್ತದೆ ಏಳು ಎಂದು ಎಚ್ಚರಿಸುತ್ತಾಳೆ. ಅದೇ ಸಂದರ್ಭದಲ್ಲಿ ಈರೋಬಿಗೆ ಕೆಟ್ಟ ಸ್ವಪ್ನ ಬಿದ್ದಿರುತ್ತದೆ. ಈರೋಬಿ ಅತ್ತೆಗೆ ತನ್ನ ಗಂಡನ ಕನಸು ಬಿದ್ದ ಅಪಾಯದ ಸಂಗತಿಯನ್ನು ವಿವರಿಸಿದರೆ ಅತ್ತೆ ಅದು ಮಾಗಿಯ ಕನಸು ಎಂದು ತೇಲಿಸಿ ಬಿಡುತ್ತಾಳೆ. ಗಂಡ ಮಲಗುವಂತಹ ಮಂಚದ ಸುತ್ತಮುತ್ತೆಲ್ಲಾ ಕತ್ತಿ ಕಠಾರಿಗಳು ಮುತ್ತಿದಂತೆ, ಮುಂದಿನ ಹಲ್ಲು ಸಿಡಿದಂತೆ, ಗಿಂಡಿ ತುಂಡಾದಂತೆ ಹೀಗೆ ಬಗೆಬಗೆಯಲ್ಲಿ ಬಿದ್ದ ಕೆಟ್ಟ ಕನಸನ್ನು ಕಂಡು ಈರೋಬಿ ಭಯಗೊಳ್ಳುತ್ತಾಳೆ. ಅತ್ತೆ ಅದಕ್ಕೆ ಏನಿಲ್ಲ ಕೇವಲ ಮಾಗಿಯ ಕನಸೇ ನಮ್ಮಂತಹವರಿಗೆ ಅಂತಹ ಕನಸು ಬೀಳಲಾರವು ಎಂದು ಬಿಡುತ್ತಾಳೆ. ಏನು ಕಂಡೇಳೆ ಸಪನವ ಎಂದು ಸುಮ್ಮನಿಸುತ್ತಾಳೆ. ಆದರೆ ಈರೋಬಿಗೆ

ಬಿದ್ದ ಕನಸು ಮುಂದೆ ನಿಜವಾಗಿ ಬಿಡುತ್ತದೆ. ಗಂಡ ಘಟ್ಟದ ಕೆಳಗೆ ಚಿನ್ನದ ಹರಿವಾಣ ತರಲಿಕ್ಕೆಂದು ಹೋದಾಗ ಯಾರೋ ಅವನ ತಲೆಯನ್ನೇ ಕಡಿದು ಹಾಕಿ ಬಿಡುತ್ತಾರೆ. ಈ ಸುದ್ದಿ ಬಿರುಗಾಳಿಯಂತೆ ಎಮ್ಮೆ ಮೇಯಿಸುತ್ತಿದ್ದ ಈರೋಬಿಗೆ ಬಂದು ತಲುಪುತ್ತದೆ. ಹಿಂಡೆಮ್ಮೆ ಬಿಟ್ಟು ಬಾರಮ್ಮ ಎಂದು ಗೆಳತಿಯರು ಬೇಡಿದರೂ ತನ್ನ ಗಂಡ ಸತ್ತ ನಿಜವಾದ ಸುದ್ದಿ ಬರಲಿ, ಆತ ಮಡಿದ ಗುರುತಿಗೆ ನೆತ್ತರದ ಅರಿವೆಯಾದರೂ ಬರಲಿ ಬಂದಾಗ ನಾನೇ ಬಂದು ಸೋಮವಾರದ ದಿನ ಕೊಂಡ ಹಾರುತ್ತೇನೆಂದು (ಹೋಗುತ್ತೇನೆಂದು) ನಿರ್ಧರಿಸಿಬಿಡುತ್ತಾಳೆ.

ಕೊನೆಗೆ ಸತ್ತ ಸುದ್ದಿ, ನೆತ್ತರದ ಅರಿವೆ, ಅವನ ಕತ್ತಿ ಬಂದ ತಕ್ಷಣವೇ ಈರೋಬಿಗೆ ತನ್ನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಗುತ್ತದೆ. ಅವಳು ಅಲ್ಲಿಯೇ ಮರಗುತ್ತಾ ಕುಸಿದು ಬಿಡುತ್ತಾಳೆ. ಇಂತಹ ಸಂದರ್ಭದಲ್ಲಿ ಅವಳು ಎಷ್ಟೊಂದು ಮಮ್ಮಲ ಮರುಗುತ್ತಾಳೆಂದರೆ ಆ ಸಂಕಟದ ಸಾಲುಗಳು ಇಲ್ಲಿ ವ್ಯಕ್ತವಾಗಿದೆ.

ಸಣ್ಣ ಬೆತ್ತದ ಕೋಲು ಮಣ್ಣಾದೋ ಕಾಣಮ್ಮ
ಕನ್ನೆ ಬಂಡುರುವ ಅರಮಲ್ಲಿ - ಗಾಜಿನ ಕಂಬ
ಮಣ್ಣಾದೋ ಕಾಲುಗಳಿಗೇಲಿ
ಹಸುರು ಬೆತ್ತದ ಕೋಲು

"ಜನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ" ದೇವೇಂದ್ರಕುಮಾರ ಸಿ. ಹಕಾರಿಯವರು ಕೃತಿಯಲ್ಲಿ ಹೇಳಿದ್ದಾರೆ."[೨೪] ಹಸುರು ಬೆತ್ತದ ಕೋಲು, ತನ್ನ ಅಂತಸ್ತಿನ ಗಾಜಿನ ಮನೆ ಆ ಕ್ಷಣದಲ್ಲಿ ಮಣ್ಣಾಗುತ್ತದೆ. ಈ ತೋಪು, ವನವು ಕೂಡ ನನ್ನನ್ನು ಪಾಪಿ ಹೆಣ್ಣೆಂದು ಹೇಳುವಂತಹ ಪರಿಸ್ಥಿತಿ ಬಂದು ಬಿಟ್ಟಿದೆ. ಆದರೆ ಏನು ಮಾಡಲಿ ಎಂದು ಅಸಹಾಯಕಳಾಗಿ ನುಡಿಯುತ್ತಾಳೆ. ನನ್ನಂತಹ ದುರಾದೃಷ್ಟದ ಹೆಣ್ಣು ಯಾರಾದರೂ ಉಂಟೇ ಈ ಧರೆಯಲ್ಲಿ ಎಂದು ನುಡಿಯುತ್ತಾಳೆ.

ಕತ್ತಿ ಬಂದು ಹೋದಾಗ ಬಾಕು ಬಂದು ಹೋದಾಗ, ಶಾಲು, ಹಚ್ಚಡ, ಅಂಗಿ ಉಂಗುರ ಬಂದು ಹೋದಾಗಲಂತೂ ಹೆತ್ತವರಿಗೆ ಅವಳತಂಗಿ ಅಣ್ಣ ಭಾವಂದಿರಿಗೆ ಹೆಚ್ಚು ಸಂಕಟವಾಗುತ್ತದೆ. ಈ ಸಂಕಟದ ನಡುವೆಯೇ ಈರೋಬಿಯ ತಂದೆ ಮತ್ತು ಆತನ ಬಳಗದವರು ತುಪ್ಪದ ಅನ್ನವನ್ನುಂಡು ಒಪ್ಪವಾಗಿ ನಡುಕಟ್ಟಿ ಹೆಗಲಿಗೆ ಕೊಡಲಿ ಹಿಡಿದುಕೊಂಡದ ಕಿಚ್ಚಿಗೆ ಕಟ್ಟಿಗೆ ತರಲು ಹೊರಡುತ್ತಾರೆ. ಇದನ್ನು ಕಂಡ ಈರೋಬಿ ಹತ್ತಿಯ ಮರವನ್ನು ಹೇಗೋ ಕಡಿಯುತ್ತೀರಿ ಒಂದೆರಡು ಕೊರಡು(ಕೊಂಚಿ) ಹೆಚ್ಚಿಗೆ ಕಡೀರಿ ಎನ್ನುತ್ತಾಳೆ. ಅದೇ ರೀತಿ ಆಲದ ಮರ ಕಡಿಯುತ್ತಿದ್ದ ಅಣ್ಣಂದಿರಿಗೆ ಸಹ ಈ ಮಾತನ್ನು ಹೇಳುತ್ತಾಳೆ. ಇತ್ತ ಕೊಂಡ ತೆಗೆಯುವವರಿಗೆ, ಕಿಚ್ಚು ಮಾಡುವವರಿಗೆ ಚೆನ್ನಾಗಿ ಮಾಡಿ ಎಂದು ಪ್ರಚೋದಿಸುತ್ತಾಳೆ. ಕೊಂಡದ ಕಿಚ್ಚಿನ ಮೇಲೆ ಗುಡಿಕಟ್ಟಿದರೆ ನಿಮಗೆ ಗಂಡು ಸಂತಾನವಾಗುತ್ತದೆ ಎಂದು ಹರಸುತ್ತಾಳೆ. ಈರೋಬಿಗೆ ಕೊಂಡದ

ಸಿದ್ಧತೆಯಲ್ಲಿ ಹಬ್ಬದ ಸಡಗರ ಕಾಣಿಸುತ್ತದೆ. ಈ ಸಡಗರದ ನಡುವೆಯು ಅವಳು ಮನಸಿನಲ್ಲಿಯೇ ಪಡುವ ಗಂಡನಿಲ್ಲದ ವ್ಯಥೆ ಹಾದಿಬೀದಿಯ ಕಾಡಾಗಿರುತ್ತದೆ. ಸತ್ತಗಂಡನ ಮುಂದಿಟ್ಟುಕೊಂಡು, ಅವಳ ಕಡುಕಷ್ಟವನ್ನು ಅರಗಿಸಿಕೊಂಡು ಸಂಕಟ ಪಡುವ ಸನ್ನಿವೇಶವಂತೂ ಇಲ್ಲಿ ಹೆಪ್ಪುಗಟ್ಟಿಬಿಟ್ಟಿದೆ. ತಂದೆ ಬಂಧುಬಳಗದವರ ಹಾರೈಕೆ ಆರ್ಶೀವಾದ ಪಡೆದುಕೊಂಡಕ್ಕೆ ಹೋಗುವ ಈ ಸನ್ನಿವೇಶ ಮನ ಕಲಕುವಂತಿದೆ.

ಈ ಬಾಳು ಯಾರಿಗೂ ತಪ್ಪಿದ್ದಲ್ಲ ಎನ್ನುವ ಶೋಕ ಕ್ಷಣ ಅಂದಿನದು. ಯಾರಿಗಾಗಿ ಬದುಕಿರಲಿ, ಗಂಡನಿಲ್ಲದ ಬಾಳು ಹೇಗೆ ಸವಿಯಲಿ ಬೇಗ ನನಗೆ ಕಿಚ್ಚಕೊಡಿ ಎಂದು ಬೇಡಿಕೊಳ್ಳುತ್ತಾಳೆ. ಅದಕ್ಕೆ ಮೊದ ಮೊದಲು ನೀನು ಮಲ್ಲಿಗೆ ಹೂ ಮುಡಿ, ಮುತ್ತೈದೆಯಾಗು ಎಂದು ತಂದೆ ಅಣ್ಣಂದಿರು ಒತ್ತಾಯಿಸಿ ಅರಮನೆಯಲ್ಲಿರುವಂತೆ ಹೇಳುತ್ತಾರೆ. ಆದರೆ ಇವರ್‍ಯಾರ ಮಾತಿಗೆ ಹೂಗೊಡದೇ ಹಿರೋಬಿ ಹಿಡಿದ ಹಠ ಬಿಡುವುದಿಲ್ಲ. ಕೊನೆಯಲ್ಲಿ ಮಾತು ತಪ್ಪಿತ್ತೆಂದು ತನ್ನ ಪತಿ ಹಾಗೂ ಮಗನ ಮೇಲೆ ಆಣೆ ಮಾಡಿಸಿ ಬಿಡುತ್ತಾಳೆ. ಗಂಡ ಸಾಯುವುದು ಒಂದೇ ಮುಂಡೆ ಆಗುವುದು ಒಂದೇ. ಕಂಡ ಕಂಡವರ ಮನೆಯ ಚಾಕರಿ ಮಾಡಿ ಬದುಕುವುದಕ್ಕಿಂತ ಈಗ ಕೊಂಡ ಹಾಯುವುದೇ ಮೇಲೆಂದು ತಿಳಿಯುತ್ತಾಳೆ. ಇಲ್ಲಿ ಅವಳ ಒಳ ಮರ್ಮದ ನೋವೇನೆಂದರೆ ದುಡಿಯುವ ಪತಿಯೇ ಇಲ್ಲದ ಮೇಲೆ ಇದ್ದರೆಷ್ಟು ಬಿಟ್ಟರೆಷ್ಟು. ಹಾಗೆಯೇ ಬೇರೆಯವರ ಹಂಗಿನಲ್ಲಿ ಜೀವನ ಮಾಡುವುದು ಸರಿಯಲ್ಲ ಎಂಬ ಮನೋಭಾವನೆಯಿಂದ ಈ ನಿರ್ಧಾರವನ್ನು ಕೈಗೊಂಡಿದ್ದಾಳೆ.

ಕೊನೆಯಲ್ಲಿ ತನ್ನ ನಾದಿನಿ, ಅತ್ತಿಗೆ, ಅತ್ತೆ ಅವರಿಗೆಲ್ಲ ತನ್ನ ಮೇಲಿನ ವೈರತ್ವವನ್ನು ಬಿಡುವಂತೆ ನಮ್ಮ ನಿಮ್ಮ ಗುದ್ದಾಟಗಳನ್ನೆಲ್ಲಾ ಮರೆತು ಹೋಗಲಿ ನೀವು ಚೆನ್ನಾಗಿರಿ ಎಂದು ಆಶಿಸುತ್ತಾಳೆ. ಇಂತಹ ಮನೋಧರ್ಮವನ್ನು ಹೊಂದಿದ ಈರೋಬಿ ನಿಜಕ್ಕೂ ಜನಮೆಚ್ಚುವ ಐತಿಹಾಸಿಕವಾಗಿ ಉಳಿಯುವ ಮಹಾಸತಿ ಅಂತಲೂ ಸಹ ಹೇಳಬಹುದು.

ಕೊಂಡಕ್ಕೆ ಆಹುತಿಯಾಗುವ ಸಂದರ್ಭದಲ್ಲಿ ತನ್ನ ಹೆತ್ತ ತಾಯಿ ಬಂದಿದ್ದಾಳೆ. ನಿನ್ನ ಮುಖವನ್ನು ತೋರು ಎಂದು ಈಡಿ ಜನಸಮುದಾಯದ ಗುಂಪೆಲ್ಲಾ ಹೇಳಿದರು. ಈರೋಬಿ ಉಪ್ಪರಿಗೆಗೆ ವರಗಿಕೊಂಡೆ ಹೀಗೆನ್ನುತ್ತಾಳೆ. ತಾಯಿ, ಅಪ್ಪ, ಅಣ್ಣ ಯಾರೇ ಬರಲಿ ಅವರು ಹಾಲು ತುಪ್ಪ ಎಣ್ಣೆಯೇ ತಂದಿರಲಿ ಆದರೆ ಮುತ್ತಿನಂತಹ, ಹಾಲಿನಂತಹ ತುಪ್ಪದಂತಹ ತನ್ನ ಗಂಡನ ಬದುಕೇ ಅಡವಿಯಲ್ಲಿ ಕರಗಿ ಹೋಗಿದೆ. ನಾನ್ಹೇಗೆ ಅವರಿಗೆ ಮುಖ ತೋರಿಸಲಿ ಎಂದು ದುಃಖ ಪಡುತ್ತಾಳೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ತನ್ನ ಪತಿಯ ಮೇಲೆ ಇಟ್ಟಿರುವಂತಹ ಅಪಾರವಾದ ಪ್ರೀತಿ ಒಂದು ಕಡೆ ಅವಳನ್ನು ಈ ದುರಂತಕ್ಕೆ ತಳ್ಳುವ ಮನಸ್ಸು ಮಾಡಿದ್ದರೆ ಇನ್ನೊಂದಡೆ ತನ್ನ ವೈವಾಹಿಕ ಜೀವನದಲ್ಲಿ ಕಿರುಕುಳಕ್ಕೆ ಒಳಗಾಗಿ ಬೇಸತ್ತು ಈ ನಿರ್ಧಾರವನ್ನು ಕೈಗೊಂಡಿರಬಹುದೆಂಬ ಅಂಶ ಅನುಮಾನಾಸ್ಪದವಾಗಿದೆ ಎಂತಲೂ ಹೇಳಬಹುದು. ಕೊನೆಕೊನೆಗೆ ತುಂಬ ಸಡಗರದಿಂದ ಎಲ್ಲರ ಮನವೊಲಿಸಿ ನಿಂಬೆ, ಬಾಳೆ, ಅರಿಶಿಣ ಸೀಗೆಕಾಯಿಯ ಶೃಂಗರ

ಪಡೆದು ಆನಂದದಿಂದ ಕೊಂಡ ಹಾಯುತ್ತಾಳೆ. ಆ ಕೊಂಡದಲ್ಲಿ ಅವಳ ನಿರ್ಮಲ ಮನಸ್ಸು ಕರಗಿ ಹೋಗಿಬಿಡುತ್ತದೆ.

ಕಳಸ ಹೊತ್ತುಕೊಂಡು ಬಂದಳು ಈರೋಬಿ
ಕೊಂಡ ಮೂರು ಸುತ್ತು ಬಳಸ್ಯಾಳು ಈರೋಬಿ
ಕಳಸವ ಮಡಗಿ ಕೈಯತ್ತಿ ಮುಗಿದಾಳು ಈರೋಬಿ
ಕೊಂಡಕೆ ಮುಂದಾಗಿ ನಡಿದಾಳು

ಈ ರೀತಿಯಾಗಿ ಈರೋಬಿ ಕೊನೆಯಾದ ಬದುಕಿನ ಕಥೆಯನ್ನು ಹಾಡಿನ ಮೂಲಕ ಕಟ್ಟಿಕೊಡುವ ಗಾಯಕರು ತಮ್ಮ ಸಮುದಾಯದ ಸಂಕಟಗಳಿಗೂ ಇಲ್ಲಿ ಉತ್ತರ ಕಂಡುಕೊಂಡವರಂತೆ, ಒಂದು ಸಾಂತ್ವನವನ್ನು ತಂದು ಕೊಂಡವರಂತೆ ಹಾಡಿ ಬಿಡುತ್ತಾರೆ. ಇದೇ ಕಥೆಯ ಇನ್ನೊಂದು ಭಾಗದಲ್ಲಿ ಈರೋಬಿಯ ಪತಿ ಶಂಕರರಾಯ ಸಾಯುವುದು ಘಟ್ಟದ ಕೆಳಗೆ ಮಲಗಿರುವ ಹುಲಿಯನ್ನು ಕೆಣಕ್ಕಿದ್ದಕ್ಕಾಗಿ ಎಂದು ತಿಳಿದು ಬರುತ್ತದೆ.

### ೫.೨. ವಾಸ್ತವಿಕ ಕಥನ ಗೀತೆಗಳಲ್ಲಿ ಮಹಿಳೆ

ವಾಸ್ತವಿಕ ಬದುಕಿಗೆ ಸಂಬಂಧಿಸಿದಂತೆ ಕೆಲವು ಕಥನಗೀತೆಗಳನ್ನು ಗುರುತಿಸಬಹುದು. ಈ ಕಥನಗೀತೆಗಳಲ್ಲಿ ಹೆಣ್ಣು ದಿನನಿತ್ಯ ಬದುಕಿನಲ್ಲಿ ಸ್ತ್ರೀಯೊಬ್ಬಳು ಅನುಭವಿಸುತ್ತಿರುವ ಕಷ್ಟನಷ್ಟ, ಸುಖದುಃಖ, ಅಪಮಾನ, ಅನುಮಾನ, ಪ್ರೇಮಕಾಮ, ಬಂಜೆತನ ಹಾಗೂ ವರ್ಗವರ್ಣ ತಾರತಮ್ಯ ವನ್ನು ಕುರಿತದ್ದಾಗಿದೆ. ಇದಕ್ಕೆ ಗುಣಸಾಗರಿ, ಉತ್ತರದೇವಿ, ಬಂಜೆಹೊನ್ನಮ್ಮ, ಬಯಲುಸೀಮೆಯ ಗೌಡನ ಮಗಳು ಜಾಗಲೆ, ಕಲಿಯುಗದಬಾಲೆ, ಇಂಥಹ ಸ್ತ್ರೀಪಾತ್ರಗಳು ಪ್ರಮುಖವಾಗಿವೆ.

ಗುಣಸಾಗರಿ, ಜಾಗಲೆ ಕಥನಗೀತೆಗಳಲ್ಲಿನ ಸ್ತ್ರೀ ಪಾತ್ರಗಳು ತಮ್ಮ ತಮ್ಮ ಮುಗ್ಧತೆಯಿಂದಾಗಿ ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಗುಣಸಾಗರಿಯು ತನ್ನ ಗಂಡ ಮಾಡಿದ ತಪ್ಪಿನಿಂದಾಗಿ ಬದುಕಿನಲ್ಲಿ ಬಹು ಮುಖ್ಯ ಸಮಯವನ್ನು ನಾದಿನಿ ಮೈದುನರ ದ್ವೇಷಕ್ಕೆ ಒಳಗಾಗಿ ನೂಕಬೇಕಾಗುತ್ತದೆ. ಅವರಿಂದ ಅಪಮಾನ ಅನುಮಾನಕ್ಕೆ ಒಳಗಾಗಿ, ಕಥೆಯ ಕೊನೆಯಲ್ಲಿ ಸುಖವನ್ನು ಕಾಣುತ್ತಾಳೆ. ಹಾಗೆಯೇ ಜಾಗಲೆಯು ಅವಳ ಅತ್ತೆನಾದಿನಿಯು ಮಾತ್ಸರ್ಯಕ್ಕೆ ಒಳಗಾಗಿ ಸಂಕಟ ಪಡುತ್ತಾಳೆ. ಅಂತ್ಯದಲ್ಲಿ ಶಿವ ಪಾರ್ವತಿಯರ ದಯೆಯಿಂದ ಸುಖವನ್ನು ಕಾಣುತ್ತಾಳೆ.

ಉತ್ತರದೇವಿಯು ಸಾಕಷ್ಟು ಜಾಣೆಯಾಗಿದ್ದರೂ, ಅತ್ತೆಯ ದುಡುಕುತನ, ಮಾತ್ಸರ್ಯದಿಂದಾಗಿ ಕುಟುಂಬವನ್ನೇ ತ್ಯಾಗಮಾಡಬೇಕಾದ ಸಂದರ್ಭ ಒದಗುತ್ತದೆ. ಕೊಡ ಒಡೆದ ನೆಪದಿಂದ ಅತ್ತೆ ಸೊಸೆಯನ್ನು ಮನೆಯಿಂದ ಹೊರಹಾಕುವ ಸಂದರ್ಭ ಎಷ್ಟು ಕ್ಷುಲಕವಾದುದು ಎಂಬುದು ಅರಿವಾಗುತ್ತದೆ. ಉತ್ತರದೇವಿ ತನ್ನ ಅತ್ತೆಯನ್ನು ಪರಿಪರಿಯಾಗಿ ಬೇಡಿಕೊಂಡರು, ಅವಳನ್ನು ಅತ್ತೆಮನೆಯಿಂದ ಆಚೆಗೆ ಅಟ್ಟುವುದನ್ನು ಕಾಣಬಹುದು. ಕೊನೆಗೂ ಉತ್ತರದೇವಿ ತನ್ನ ಮಕ್ಕಳ ಸಮೇತ ಪ್ರಾಣ ಕಳೆದುಕೊಳ್ಳುವುದು ಕಂಡುಬರುತ್ತದೆ.

ಬಂಜೆಹೊನ್ನಮ್ಮನ ಕಥೆಯು ಬಂಜೆಯೊಬ್ಬಳು ತನ್ನ ಕುಟುಂಬದಿಂದ, ಸಮಾಜದಿಂದ, ಅನುಭವಿಸುವ ಅಪಮಾನ, ತೊಂದರೆಯನ್ನು ಕುರಿತದ್ದಾಗಿದೆ. ಕುಟುಂಬದಲ್ಲಿ ಮಕ್ಕಳ ಪ್ರಾಧಾನ್ಯತೆಯನ್ನು ಎತ್ತಿ ಹಿಡಿದಿರುವುದನ್ನು ಇಲ್ಲಿ ಕಾಣಬಹುದು. ಬಯಲು ಸೀಮೆಯ ಗೌಡನ ಮಗಳು ಕಥೆಯು ವರ್ಗವರ್ಣದ ನಡುವೆ ತಲೆದೋರುವ ತಾರತಮ್ಯವನ್ನು ಕುರಿತದ್ದಾಗಿದೆ. ಮೇಲುವರ್ಗ ಕೆಳವರ್ಗದವರನ್ನು ಹೇಗೆ ಶೋಷಣೆ ಮಾಡುತ್ತಾರೆ. ಅದರಲ್ಲೂ ಹೆಣ್ಣೊಬ್ಬಳ ಹಟಸಾಧನೆಯಿಂದಾಗಿ, ಮುಗ್ಧ ಗಂಡಸು ಹೇಗೆ ಕಷ್ಟವನ್ನು ಅನುಭವಿಸುತ್ತಾನೆ ಎಂಬುದನ್ನು ಇಲ್ಲಿ ಕಾಣಬಹುದು.

ಕಲಿಯುಗ ಬಾಲೆಯು ತನ್ನ ಪ್ರಿಯತಮನಿಗಾಗಿ ತನ್ನ ಗಂಡ ಮಕ್ಕಳನ್ನು ಕೊಲ್ಲುವ ಹೀನಸ್ಥಿತಿಗೆ ಬರುವುದನ್ನು ಇಲ್ಲಿ ಗುರುತಿಸಬಹುದು.

ಒಟ್ಟಾರೆ ಈ ಎಲ್ಲಾ ಸ್ತ್ರೀ ಪಾತ್ರಗಳನ್ನು ಪರಿಶೀಲಿಸಿದರೆ ಅವು ಕೇವಲ ಕಥನಗೀತೆಗಳಲ್ಲಿ ಬರುವ ಪಾತ್ರವಾಗಿರದೆ, ಇಂದಿಗೂ ನಮ್ಮ ಸುತ್ತಮುತ್ತಲಿನ ಸ್ತ್ರೀಯರು ಇಂಥ ನೋವನ್ನು ಅನುಭವಿಸುತ್ತಿರುವುದು ಕಾಣಬಹುದು. ಗುಣಸಾಗರಿಯ ಹಾಗೆ ಅಪಮಾನ ಅನುಮಾನಕ್ಕೆ ಒಳಗಾಗಿರುವ ಹೆಣ್ಣನ್ನು ಕಾಣಬಹುದು. ಉತ್ತರದೇವಿ, ಜಾಗಲೆಯ ಹಾಗೆ ಅತ್ತೆನಾದಿನಿಯ ಕಾಟಕ್ಕೆ ಒಳಗಾಗಿ ಕಷ್ಟಪಡುವ ಹೆಣ್ಣನ್ನು ಕಾಣಬಹುದು. ಬಂಜೆ ಹೊನ್ನಮ್ಮನ ಹಾಗೆ ಮಕ್ಕಳಿಗಾಗಿ ವ್ಯಥೆ ಪಡುವ ಸ್ತ್ರೀಯರನ್ನು ನೋಡಬಹುದು. ಬಯಲುಸೀಮೆಯ ಗೌಡನ ಮಗಳ ಹಾಗೆ ದರ್ಪ ದೌರ್ಜನ್ಯದಿಂದ ಇರುವ ಹೆಣ್ಣನ್ನು ಗುರುತಿಸಬಹುದು. ಹಾಗೆಯೇ ಕಲಿಯುಗ ಬಾಲೆಯಂಥ ಸ್ತ್ರೀಯರು ಇಂದು ಹೆಚ್ಚಾಗಿ ಇರದಿದ್ದರೂ ಇಲ್ಲವೆ ಇಲ್ಲ ಎನ್ನುವಂತಿಲ್ಲ.

ಹೀಗಾಗಿ ಈ ಕಥನಗೀತೆಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಊಹೆಯಾಗಿರದೆ, ಕಟ್ಟು ಕಥೆಯಾಗಿರದೆ ನಿತ್ಯ ಬದುಕಿನಲ್ಲಿ ಮಾನವನ ರಾಗ ದ್ವೇಷಗಳಿಗೆ ಒಳಗಾಗಿ, ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಕಾಣಬಹುದು. ಅತ್ತೆ ಸೊಸೆ ಮಾತ್ಸರ್ಯ ಅತ್ತಿಗೆ ನಾದಿನಿ ಮೈದುನರ ನಡುವೆ ಇರುವ ದ್ವೇಷ ಅಸೂಯೆ, ಮಕ್ಕಳಿಲ್ಲ ಎಂದು ಹೆಣ್ಣೊಬ್ಬಳನ್ನು ಬಂಜೆ ಎಂದು ಗುರುತಿಸುವ ಪರಿಪಾಟ ಇಂದಿಗೂ ಸತ್ಯವಾಗಿದೆ. ಇಲ್ಲಿ ಬರುವ ಪಾತ್ರಗಳು ಇತಿಹಾಸವಾಗಿರದೆ, ಪುರಾಣವಾಗಿರದೆ, ವಾಸ್ತವಿಕವಾಗದೆ. ವಾಸ್ತವಿಕ ಬದುಕಿನಲ್ಲಿ ಬರುವ ಸ್ತ್ರೀ ಪಾತ್ರಗಳಾಗಿವೆ ಎನ್ನಬಹುದು. ಈ ಸ್ತ್ರೀ ಪಾತ್ರಗಳನ್ನು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

**೧. ಗುಣಸಾಗರಿ**

ಕೌಟುಂಬಿಕ ಕಷ್ಟ ಪರಂಪರೆಗಳನ್ನು ಹೊತ್ತು ಸಾಗುವ ಗುಣಸಾಗರಿ ಕಥೆಯು ವಾಸ್ತವಿಕ ಜೀವನಕ್ಕೆ ಸಂಬಂಧಿಸಿದ ನೈಜತೆಯ ಅಂಶವನ್ನು ಒಳಗೊಂಡಿದೆ. ಮುಗ್ಧ ಹೆಣ್ಣೊಬ್ಬಳ ಅಸಾಯಕ ಪರಿಸ್ಥಿತಿಯಿಂದಾಗಿ, ಅವಳು ಎದುರಿಸುವ ಅಪಮಾನವನ್ನು ಈ ಕಥನ ಗೀತೆಯಲ್ಲಿ ಗುರುತಿಸಬಹುದು.

ಮಲ್ಲಿಗಮ್ಮ ಮಲ್ಲಶೆಟ್ಟಿಯ ಮಗ ಸಂಪನ್ನ. ಹತ್ತು ವರ್ಷದವನಿರುವಾಗಲೇ ತಾಯಿ ಮಲ್ಲಿಗಮ್ಮ ತನ್ನ ಸೋದರ ಸೊಸೆಯಾದ ಆರು ವರ್ಷದ ಗುಣಸಾಗರಿಯನ್ನು ಸಂಪನ್ನನಿಗೆ ಮದುವೆ

ಮಾಡಿಸುತ್ತಾಳೆ. ಇವಳು ಒಬ್ಬಳೇ ಮಗಳು ಸುಖದಿಂದ ಬೆಳೆದಿರುವಂತವಳು. ಸಂಪನ್ನನ ತಮ್ಮ ನಿರ್ವಾಣಿ, ಗುಣಸಾಗರಿಯನ್ನು ನೋಡಿ "ನಮ್ಮಣ್ಣಂಗೆ ತಕ್ಕಾದ ಮಡದ್ಯಲ್ಲ ಗುಣಸಾಗ್ರಿ ನನಗೆ ತಕ್ಕಾದ ಮಡದ್ಯಂದ" ಈ ಮಾತಿನಿಂದ ಗೊತ್ತಾಗುತ್ತದೆ. ಗುಣಸಾಗರಿ ಅದ್ಭುತ ಸುಂದರಿ ಎಂಬುದು. ಅಲ್ಲದೆ ತನ್ನ ಅತ್ತಿಗೆಯ ಮೇಲೆ ಕಾಮದ ಕಣ್ಣು ಬೀರಿದೆ ಎಂಬುದು ಸಹ ಈ ಹೇಳಿಕೆಯಿಂದ ತಿಳಿದುಬರುತ್ತದೆ.



ಮದುವೆಯಾದ ಮೂರು ದಿನಕ್ಕೆ ಸಂಪನ್ನ ಮುತ್ತಿನ ವ್ಯಾಪಾರಕ್ಕೆ ಹೋಗುವಾಗ ತಾಯಿ "ಮುತ್ತಿನಂಥ ಮಡದಿ ಮನೆಯಲ್ಲಿರುವಾಗ ಮುತ್ತಿನ ವ್ಯಾಪಾರ ಏಕೆಬೇಕು" ಎಂದು ವ್ಯಾಪಾರಕ್ಕೆ ಹೋಗದಂತೆ ಮಗನನ್ನು ತಡೆಯುತ್ತಾಳೆ. ಆದರೂ ಹಟ ಬಿಡದ ಸಂಪನ್ನ. ವ್ಯಾಪಾರಕ್ಕೆ ಹೋಗಲು ಸಿದ್ದನಾಗುತ್ತಾನೆ. ಅದಕ್ಕಿಂತ ಮುಂಚಿತವಾಗಿ

ಆಚೀಗೆ ಹೋಗಬ್ಯಾಡ ಈಚೀಗೆ ಬರಬ್ಯಾಡ
ಒಬ್ಬಾರ ಕುಟ್ಟ ಮಾತನಾಡಬ್ಯಾಡ ನನ್ನ ರಾಣಿ
ಗಿಣಿ ಕೂಟ ಮಾತನಾಡಿಕೊಂಡಿರು[39] ಎಂದರು

ಗುಣಸಾಗರಿ ಒಂಟಿಯಾಗಿರುತ್ತಾಳೆಂದೇ ಮಾತನಾಡುವ ಎರಡು ಗಿಳಿಗಳನ್ನು ಅವಳ ತೌರಿನಿಂದ ತರಸಿ ಕೊಡುತ್ತಾನೆ. ಆಗತಾನೆ ಮದುವೆಯಾದ ಗುಣಸಾಗರಿ ಬೇಗನೆ ಆಗಲಿ ಮುತ್ತಿನ ವ್ಯಾಪಾರಕ್ಕೆ ಹೋಗುವುದು ಅವಳಿಗೆ ಎಲ್ಲಿಲ್ಲದ ದುಃಖವಾಗುತ್ತದೆ. ಅಲ್ಲದೆ ತನ್ನ ಮೈದುನನ ಮಾತಿನಿಂದ ಅಪಾರ ದುಃಖಪಡುತ್ತಾಳೆ. ಅವಳ ಆಸೆ ಆಕಾಂಕ್ಷೆಗಳು ಮಣ್ಣುಪಾಲು ಆದವು ಎಂದುಕೊಂಡು ಮನದಲ್ಲೇ ಕೊರಗು. ಒಂಟಿಯಾಗಿ ಗುಣಸಾಗರಿ ಮಂಚದ ಮೇಲೆ ಮಲಗಿರುತ್ತಾಳೆ. ಹೀಗಿರುವಾಗ ಒಂದು ದಿನ ಗುಣಸಾಗರಿ ಮೈನೆರೆಯುತ್ತಾಳೆ. ಈ ವಿಷಯ ಅತ್ತೆ ಮಲ್ಲಿಗಮ್ಮಗೆ ತಿಳಿದಕೂಡಲೇ ಒಂದುಕಡೆ ಸಂತೋಷ, ಒಂದುಕಡೆ ದುಃಖ, ಮಗ ತನ್ನ ಮಾತು ಕೇಳದೆ ವ್ಯಾಪಾರಕ್ಕೆ ಹೊರಟು ಹೋದ ವಿಚಾರದಲ್ಲಿ ಸಾಕಷ್ಟು ವ್ಯಥೆ ಪಡುತ್ತಾಳೆ. ತನ್ನ ಹೆಣ್ಣು ಮಕ್ಕಳಾದ ಅಲ್ಲಕ್ಕ, ಮಲ್ಲಕ್ಕ ಇಬ್ಬರನ್ನು ಗುಣಸಾಗರಿಯ ರಕ್ಷಣೆಗಾಗಿ ಕಾವಲು ಇಟ್ಟಳು.

ನಾದಿನಿಯರು ಗುಣಸಾಗರಿಗೆ ಅಲಂಕಾರ ಮಾಡುವಾಗ ದಾರಿಯಲ್ಲಿ ಹೋಗುತ್ತಿದ್ದ ಬುಡಬುಡಕೆಯವನು ಈ ರೀತಿ ಹೇಳುತ್ತಾನೆ. ಆ ನಾರಿಗೇನು ಸುಂಗಾರ ಮಾಡತೀರಾ! ಬುಡಿರಮ್ಮ ಅವಳ್ಹಣೆಯಾಗ ಬರಿದಾದೆ ವನವಾಸ ಎಂದನು. ಈ ಮಾತುಕೇಳಿ ಅತ್ತೆ ಮಲ್ಲಿಗಮ್ಮಳಗೆ ಎಲ್ಲಿಲ್ಲದ ಭಯ ಆತಂಕ ಸೊಸೆಯ ವಿಷಯದಲ್ಲಿ ಉಂಟಾಗುತ್ತದೆ. ಆಗ ಸೊಸೆಗೆ "ಅರಮನೆಯನ್ನು ಬಿಟ್ಟು ಹೊರಗೆ ಬರಬ್ಯಾಡ" ಎಂದು ಹೇಳುವ ಮಾತು ಆತಂಕದ ಮಾತಾಗಿದೆ. ಗುಣಸಾಗರಿ ಸಂಪನ್ನನಿಗೆ ಹಿರಿಯರೇ ಒಪ್ಪಿ ಬಾಲ್ಯದಲ್ಲೇ ವಿವಾಹ ಮಾಡುತ್ತಾರೆ. ದಾಂಪತ್ಯ ಸುಖ ಅರಿಯುವ ಮೊದಲೇ ದಂಪತಿಗಳಿಬ್ಬರು ಬೇರೆ ಬೇರೆಯಾಗುತ್ತಾರೆ.

ಈ ಕಥನ ಗೀತೆಯಲ್ಲಿ "ಗೀಜುಗ ದಂಪತಿಗಳೆರಡರ ಸರಸ ಸಲ್ಲಾಪ' ಕೇಳಿಬರುತ್ತದೆ. ಇದರಿಂದ ಪ್ರಭಾವಿತನಾಗಿ ಸಂಪನ್ನ ಗುಣಸಾಗರಿಯನ್ನು ವ್ಯಾಪಾರದ ಮಧ್ಯೆ ಸೇರುವುದು ಕಥೆಯ ತಿರುವಿಗೆ ಹಾಗೂ ಗುಣಸಾಗರಿ ಬದುಕಿನಲ್ಲಿ ನಡೆಯುವ ದುರಂತಕ್ಕೆ ಈ ಗೀಜುಗ ದಂಪತಿಗಳ ಸಂಭಾಷಣೆ ಒಂದು ವಿಧದಲ್ಲಿ ಕಾರಣ ವಾಗಿದೆ. ಸಂಪನ್ನ ಮತ್ತು ಗುಣಸಾಗರಿಯು ಸಂದಿಗ್ಧ ಸಮಯದಲ್ಲಿ ಅವರಿಬ್ಬರು ಒಂದಾಗಿದ್ದ ಸಂದರ್ಭಕ್ಕೆ ಬಸುರಿಯಾಗುತ್ತಾಳೆ. ಇದನ್ನು ಕಳ್ಳಬಸುರಿನ ಆರೋಪ ಹೊರಿಸಿ ಅತ್ತಿಗೆ ಗುಣಸಾಗರಿಯ ಶೀಲವನ್ನು ಶಂಕಿಸಿದ ಮೈದುನ ನಿರ್ವಾಣಿ ದೆಸೆಯಿಂದ ಗುಣಸಾಗರಿಗೆ ಅತ್ತೆ, ನಾದಿನಿಯರು ಕೊಡುವಂತಹ ಕಷ್ಟಗಳು ಅಪಾರ. ಇಲ್ಲಿ ಹೆಣ್ಣು ಹೆಣ್ಣಿನಲ್ಲಿ ಶೋಷಿಸುವುದು ಒಂದು ವಿಪರ್ಯಾಸವೇ ಸರಿ.



ಇವರು ಕಳ್ಳಬಸುರಿ ಧರಿಸಿದ್ದೀಯಾ ಎಂದು ಆರೋಪಿಸಿ ಅವಳನ್ನು ಮನೆಯಿಂದ ಹೊರ ದೂಡುತ್ತಾರೆ. ಹೀಗೆ ಹೊರಬಂದ ಗುಣಸಾಗರಿಯನ್ನು ಹೊರಜಗತ್ತಿನಲ್ಲಿ ಹಲವು ಕಾಮುಕ ಪುರುಷರು ಚುಚ್ಚುಮಾತುಗಳನ್ನು ಆಡುತ್ತಾರೆ. ಇದರಿಂದ ಇವಳು ಈ ಭೂಮಿಮೇಲೆ ಬದುಕಬಾರದು ಎನ್ನುವಷ್ಟು ಆತಂಕ ಅವಳಲ್ಲಿದೆ. ಒಂದುಕಡೆ ಅತ್ತೆಮನೆಯಿಂದ ಹೊರಬಂದು ತವರುಮನೆ ಆಸರೆ ಪಡೆಯಲು ಹೋದ ಗುಣಸಾಗರಿ ತವರುಮನೆ ಆಸರೆಸಿಗದೆ ಮುದ್ದಣ್ಣನ ತೋಟಕ್ಕೆ ಬಂದಾಗ ಒಣಗಿದ್ದ ತೋಟವೆಲ್ಲಾ ಚಿಗುರುತ್ತದೆ. ಇದನ್ನು ಮನಗಂಡ ಮುದ್ದಣ್ಣ ಹುಡುಕಿಕೊಂಡು ಗುಣಸಾಗರಿ ಹತ್ತಿರ ಬಂದು ಅವಳಿಗೆ ಆಶ್ರಯ ನೀಡುತ್ತಾನೆ. ಹೀಗೆ ಮುದ್ದಣ್ಣನ ಆಶ್ರಯದಲ್ಲಿ ಒಂದು ಗಂಡುಮಗುವಿಗೆ ಜನ್ಮನೀಡುತ್ತಾಳೆ. ಸೂಲಗಿತ್ತಿ ಸಂಗಮ್ಮ ನಿಷ್ಠಾವಂತಳು ಗುಣಸಾಗರಿಯ ಕಷ್ಟಸುಖಕ್ಕೆ ಭಾಗಿಯಾಗುತ್ತಾಳೆ. ಕಾಡುಸಿದ್ಧಮ್ಮನ ಸೂಲಗಿತ್ತಿಯಂತೆ ಸಂಗಮ್ಮನಿಲ್ಲ. ಆಕೆ ಸೊಗಸುಗಾತಿ. ಹೆರಿಗೆ ಸಂದರ್ಭದಲ್ಲಿ ಪಟ್ಟಸೀರೆಧರಿಸಿಕೊಂಡು, ಮುತ್ತಿನ ಬಟ್ಟಕ್ಕಿ, ಮುತ್ತಿನ ಕೊಡೆಯ ಹಿಡಕೊಂಡು ಮುದ್ದಣ್ಣನ ಮನೆಗೆ ಬಂದು ನೋವಿಲ್ಲದ ಹೆರಿಗೆ ಮಾಡುತ್ತಾಳೆ.

ಸಂಪನ್ನ ಮುಂದೆ ವ್ಯಾಪಾರದಿಂದ ಹಿಂತಿರುಗಿದಾಗ ಮನೆಯಲ್ಲಿ ಗುಣಸಾಗರಿ ಕಾಣುವುದಿಲ್ಲ. ಮನೆಯವರ ಕಳ್ಳಬಸುರಿಯ ಮಾತನ್ನು ಕೇಳಿ ದಿಗ್ಭ್ರಮೆಯಾಗುತ್ತಾನೆ. ಇತ್ತ ಮಗ ಬೆಳೆದು ದೊಡ್ಡವನಾಗಿ ತನ್ನ ತಾಯಿಗಾಗಿ ತಂದೆ ಅಲೆದಾಡುವುದು ಮನಗಂಡು ತಂದೆ-ತಾಯಿಯನ್ನು ಹೊಂದುಮಾಡುತ್ತಾನೆ. ಗುಣಸಾಗರಿಯ ಪತಿವ್ರತೆ, ಅವಳ ಪತಿವ್ರತೆಯ ಫಲದಿಂದ ಅವಳಿಗೆ ಬಂದೊದಗಿದ ಕಷ್ಟನಷ್ಟಗಳೆಲ್ಲಾ ಪರಿಹಾರವಾಗುತ್ತದೆ. ಅವಳನ್ನು ಕಾಪಾಡುವುದು ಅವಳ ಪಾತಿವ್ರತ್ಯ ಎಂದೇ ಹೇಳಬಹುದು. ಅವಳ ಪಾತಿವ್ರತ್ಯ ಫಲದಿಂದ ನಾಗೇಂದ್ರ ನಾಯಿ ಕಚ್ಚುವುದಿಲ್ಲ. ಪ್ರಧಾನಿ ಕೊಲ್ಲುವುದಿಲ್ಲ. ಮುದ್ದಣ್ಣನ ಆಶ್ರಯ ದೊರಕುತ್ತದೆ. ಮತ್ತೆ ತನ್ನ ಗಂಡ ಸಂಪನ್ನನ್ನು ಸೇರುತ್ತಾಳೆ.

೨. ಉತ್ತರದೇವಿ

"ಉತ್ತರೆಯ ಮಳೆಯಾಗಿ ಹೊಂಡವ್ವ

ಬೆಳ್ಳಿ ಬೆಳಕಿನಲ್ಲಿ......."



ಉತ್ತರದೇವಿ ಎಂಬ ಜನಪದ ಖಂಡಕಾವ್ಯ ದಕ್ಷಿಣ ಕರ್ನಾಟಕ ಭಾಗದ ಜನಪ್ರಿಯ ಕಥನಗೀತೆ. ಈ ಕಥನ ಗೀತೆಯನ್ನು ಶಿವಮೊಗ್ಗ, ತುಮಕೂರು, ಮಂಡ್ಯ, ಮೈಸೂರು, ಹಾಸನ ಜಿಲ್ಲೆಗಳಿಂದ ಸಂಗ್ರಹಿಸಿ ಪ್ರಕಟಿಸಲಾದ ಒಂದು ಸಾಂಸ್ಕೃತಿಕ ವಿಶ್ಲೇಷಣೆ ಎಂಬ ಅಂಶವನ್ನು "ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ" ಎಂಬ ಲೇಖನದಲ್ಲಿ ಕಾಣಬಹುದಾಗಿದೆ. ಈ ಬಗೆಯ ಕಥೆ ಉತ್ತರ ಕರ್ನಾಟಕದ ಹಲವು ಕಡೆಗಳಲ್ಲಿ ಭಿನ್ನ ಸ್ವರೂಪದಲ್ಲಿ ಕಾಣಿಸುತ್ತಿದ್ದರೂ ಅದರ ಮೂಲ ಪಾಠ ದೊರಕುವುದು ದಕ್ಷಿಣ ಕರ್ನಾಟಕದಲ್ಲಿ. ಉತ್ತರದೇವಿ ಜಾನಪದರ ಸ್ತ್ರೀ ಲೋಕದ ಅನ್ಯೋನ್ಯತೆಯನ್ನು ಅಂತಃಕರಣವನ್ನು ಕಟ್ಟಿಕೊಡುವ ವಿಶಿಷ್ಟ ಬಗೆಯ ಖಂಡಕಾವ್ಯ. ಒಂದು ಸಣ್ಣ ಘಟನೆ. ಉತ್ತರದೇವಿಯನ್ನು ಇಡೀ ಸ್ತ್ರೀ ಸಮಾಜವು ನಿರಾಕರಿಸುವ ಹಂತಕ್ಕೆ ಕೊಂಡೊಯ್ಯುತ್ತದೆ. ಮುಖ್ಯವಾಗಿ ಉತ್ತರದೇವಿಯ ಕುಟುಂಬದಲ್ಲಿಯೇ ಈ ಬಗೆಯ ನಿರಾಕರಣೆಗಳು ಕಾಣಿಸುತ್ತದೆ. ಅದಕ್ಕೆ ಕಾರಣ ಅವಳ ಶೀಲದ ಬಗ್ಗೆ ಎದ್ದಿರುವ ಪ್ರಶ್ನೆ ಆ ಕಾಲದ, ಸಮಾಜದ ಹೆಣ್ಣಿನ ಪಾತಿವ್ರತ್ಯದ ಬಗ್ಗೆ ತಾಳುವ ಧೋರಣೆ ಎಷ್ಟೊಂದು ಕಠಿಣ ಎನ್ನುವುದನ್ನು ಈ ಕಥೆ ಬಿಂಬಿಸುತ್ತದೆ.

ಉತ್ತರದೇವಿಯ ಆಶಯದ ಕಥನಗೀತೆಗಳು ಕರ್ನಾಟಕದ ಅನೇಕ ಕಡೆಗಳಲ್ಲಿ ದೊರಕುತ್ತವೆ. ಈ ಮಾದರಿಯ ಸುಮಾರು ಹತ್ತಾರು ಕಥೆಗಳು ಲಭ್ಯವಾಗಿವೆ. ಕನ್ನಡ ಜನಪದ ಕಥನಗೀತೆಗಳಲ್ಲಿ ಉತ್ತರದೇವಿಯಷ್ಟು ಜನಪ್ರಿಯವಾದುದು ಇನ್ನೊಂದಿಲ್ಲ. ಪರಿಸ್ಥಿತಿಯ ಕ್ರೂರ ಕಪಿಮುಷ್ಟಿಗೆ ಸಿಕ್ಕಿ ಸೊಸೆಯೊಬ್ಬಳ ದುರಂತದ ಉತ್ತರದೇವಿಯ ಕಥನಗೀತೆ. ಕೌಟುಂಬಿಕ ಸಮಸ್ಯೆಗಳಲ್ಲಿ ಹಾಗೂ ಮಾನವನ ರಾಗ ದ್ವೇಷಗಳಲ್ಲಿ ಒಂದಾದ 'ಜಗಳ' ಅದರಲ್ಲೂ ಅತ್ತೆ ಸೊಸೆಯರ ಜಗಳ ಎಲ್ಲಾ ಕಾಲದಲ್ಲೂ ಇರುವಂಥದ್ದು. ಕೆಟ್ಟ ಅತ್ತೆ, ಸೊಸೆ, ನಾದಿನಿ, ಮೈದುನ, ಅತ್ತಿಗೆ, ಮಲತಾಯಿ ಇವರೆಲ್ಲಾ ಜನಪದ ಸಾಹಿತ್ಯದಲ್ಲಿ ಆಶಯವಾಗಿ ಕಂಡುಬರುತ್ತಾರೆ. ಅದರಂತೆ ಕೆಟ್ಟ ಅತ್ತೆಯಿಂದ ಉತ್ತರದೇವಿ ಮನೆಬಿಡುತ್ತಾಳೆ.

ಉತ್ತರದೇವಿಯ ಕಥನಗೀತೆಯಲ್ಲಿ ಉತ್ತರದೇವಿಯ ಪಾತ್ರ ಬಹುಮುಖ್ಯವಾದುದು. ಉತ್ತರದೇವಿ ನೀರಿಗೆ ಹೋದವಳು ಬೇಗ ಏಕೆ ಬರಲಿಲ್ಲ ಎಂದು ಪ್ರಶ್ನಿಸಿದಾಗ.

ಉತ್ತರದೇಶದ ಮಳೆ ಹೂದು ಕೆರೆತುಂಬಿ

ಬಸುಳೆ ಮುಳ್ಳಡಿ ಅಡಗಿದ್ದೆ ಎಂದಳು ಉತ್ತರದೇವಿ.

ಮಳೆಬಂದಿದ್ದ ಕಾರಣ ಉತ್ತರೆ ಬಸುಳೆ ಮರದ ಕೆಳಗೆ ಕುಳಿತು ಮಳೆನಿಂತಾಗ ಬರುವಾಗ ಕಂಟಿ ಸೀರೆಯನ್ನು ಹಿಡಿದು ಹರಿದಿತ್ತು. ಕೊಡ ಬಿದ್ದು ಒಡೆದಿತ್ತು. ಮಳೆ ಬರುವ ಕಾರಣ ಮನೆಗೆ ತಡವಾಗಿ ಬಂದಿದ್ದಳು. ಈ ಎಲ್ಲಾ ಕಾರಣಗಳಿಂದ ಅತ್ತೆ ಅವಳ ಶೀಲವನ್ನು ಶಂಕಿಸಿ ಅನುಮಾನ ಪಡುತ್ತಾಳೆ. ಇದರಿಂದ ಬೇಸತ್ತು ಉತ್ತರದೇವಿ ಕೆಟ್ಟ ಅತ್ತೆಯಿಂದ ಮನೆ ಬಿಡುತ್ತಾಳೆ. ಇವಳು ಮನೆ ಬಿಡಲು ಸರಿಯಾದ ಕಾರಣವೇ ಇಲ್ಲ. ಮೇಲು ನೋಟಕ್ಕೆ ಸೊಸೆ ನೀರಿಗೆ ಹೋಗಿ ತಡವಾಗಿ ಬಂದುದದೇ ಆದರೂ, ಕೊಡ ಒಡೆದದ್ದು ಒಳಾರ್ಥದಲ್ಲಿ ಅತ್ತೆ ಸೊಸೆಯ ಶೀಲದ ಬಗ್ಗೆ ಶಂಕಿಸಿ ದಂತಿದೆ. ಬಹುಶಃ ಉತ್ತರದೇವಿಯ ಗಂಡ ಪಡಲೇಬೇಕಾದ ಅನುಮಾನವನ್ನು ಹೆಣ್ಣಾದ ಅತ್ತೆ ಸೊಸೆಯ ಮೇಲೆ ಪಡುತ್ತಾಳೆ. ಉತ್ತರದೇವಿಯ ಅತ್ತೆ ಅವಳ ಅತ್ತೆಯ ಮನೆಯಲ್ಲಿರುವುದರಿಂದ ಇಂಥ ಸಂದರ್ಭ, ಉತ್ತರದೇವಿಯ ಅತ್ತೆಗೆ ಒದಗಿರಲಾರದು. ಅದರಿಂದಾಗಿ ಅತ್ತೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿರುವುದನ್ನು ಇಲ್ಲಿ ಕಾಣಬಹುದು. ತಾನು ಹಿಂದೆ ಸೊಸೆಯಾಗಿದ್ದೆ ಎಂಬುದನ್ನು ಮರೆತು ಸೊಸೆಯನ್ನೂ ದಂಡಿಸುವುದು ಅಲ್ಲಲ್ಲಿ ಕಂಡುಬರುತ್ತದೆ.

ಈ ಅತ್ತೆ ಸೊಸೆಯ ಜಗಳಕ್ಕೆ ಅವಿಭಕ್ತ ಕುಟುಂಬ ಪದ್ಧತಿಯು ಒಂದು ಕಾರಣವೆನ್ನಬಹುದು. ಸೊಸೆಯಾದವಳ ಭಾವನೆಗೆ ಅತ್ತೆ ಸ್ಪಂದಿಸದೆ ಇರುವುದು ಇಲ್ಲಿ ಹೆಚ್ಚು ಕಂಡುಬರುತ್ತದೆ. ನೀರಿಗೆ ಹೋಗಿದ್ದ ಉತ್ತರದೇವಿ ಗಾಳಿ ಮಳೆಗೆ ಸಿಕ್ಕಿಕೊಡವನ್ನು ಒಡೆದುಕೊಂಡು ತಡವಾಗಿ ಮನೆಗೆ ಬಂದುದರಿಂದ ಅತ್ತೆ ಸೊಸೆಯರ ನಡುವೆ ಜಗಳ ಹುಟ್ಟಿಕೊಳ್ಳುತ್ತದೆ. ಉತ್ತು ಬಂದ ಮಗನಿಗೆ ತಾಯಿ ದೂರು ಹೇಳಿ ಉತ್ತರಕ್ಕೆ ಉತ್ತರ ಕೊಡುವ ಅವಳನ್ನು ಬಿಟ್ಟು ಬಿಡುವಂತೆ ಹೇಳುತ್ತಾಳೆ. ಕೂಡಿದ ಹೆಂಡತಿಯನ್ನು ಬಿಡುವುದು ತರವಲ್ಲ ಎಂದು ಮಗ ಹೇಳಿದರೂ ಮತ್ತೊಬ್ಬಳನ್ನು ತಂದು ಲಗ್ನ ಮಾಡುವುದಾಗಿ ತಾಯಿ ಹಟ ಹಿಡಿಯುತ್ತಾಳೆ. ಮಗ ಮೌನವಹಿಸುತ್ತಾನೆ. ಉತ್ತರದೇವಿ ತಾನು ತೌರಿನಿಂದ ತಂದಿದ್ದ ಬಳುವಳಿಯನ್ನೆಲ್ಲಾ ತನ್ನ ಜೊತೆಯಲ್ಲಿ ತೆಗೆದುಕೊಂಡೇ ಹೊರಡುತ್ತಾಳೆ. ತಾನು ಬೆಳೆಸಿದ್ದ ಗಿಡ, ಸಾಕಿದ ಪ್ರಾಣಿ ಎಲ್ಲವನ್ನು ಸಂತೈಸಿ ತೌರ ದಾರಿ ಹಿಡಿಯುತ್ತಾಳೆ. ತೌರಿಗೆ ಹೊರಟು ನಿಂತ ಸೊಸೆಯ ನೋಡಿ ಅತ್ತೆ, 'ಅಟ್ಟುಂಡು' ಹೋಗುವಂತೆ, ಒಡವೆ ವಸ್ತುಗಳನ್ನು ಧರಿಸಿ ಹೋಗುವಂತೆ ತಿಳಿಸುತ್ತಾಳೆ. ಮುಂದೆ ಬರುವ ಸೊಸೆಗೆ ಎಲ್ಲವನ್ನೂ ಮಡಗಿಡು ಎಂದು ಮಾರ್ಮಿಕವಾಗಿ ನುಡಿದು ಉತ್ತರದೇವಿ ಹೊರಟು ಹೋಗುತ್ತಾಳೆ. ತೌರದಾರಿಯಲ್ಲಿ ಅನೇಕರು ಉತ್ತರ ದೇವಿಯನ್ನು ತಡೆದು, ತಮ್ಮನ್ನು ಕೂಡಿ ಸುಖವಾಗಿರುವಂತೆ ಕೇಳುತ್ತಾರೆ. ಅವಳು ನಿರಾಕರಿಸಿ ಮುಂದೆ ಹೋಗುತ್ತಾಳೆ.

ತೌರಿನಲ್ಲಿ ತನ್ನವರ ಮನೆಗಳ ಹೊಸ್ತಿಲಿಗೆ ಹೋಗಿ ಬಾಗಿಲು ತೆರೆಯುವಂತೆ ಬೇಡುತ್ತಾಳೆ. ಉತ್ತರ ದೇವಿಯ ತಾಯಿಯನ್ನು ಬಿಟ್ಟು ಬೇರೊಬ್ಬಳೊಡನೆ ತಂದೆ ಬಾಳುತಿದ್ದನು. ಯಾರು ಬಾಗಿಲು ತೆರೆಯಲಿಲ್ಲ, ಉತ್ತರದೇವಿ ತನ್ನ ತಾಯಿಯ ತೌರಿಗೆ ಹೋಗಿ ಅಲ್ಲಿ ತನ್ನಂತೆಯೇ ಅನಾಥವಾಗಿ ಬದುಕುತಿದ್ದ ತಾಯಿಯನ್ನು ನೋಡುತ್ತಾಳೆ. ಇತ್ತ ಅತ್ತೆ ಮೊಮ್ಮಕ್ಕಳ ಮುಖವ ನೋಡದೆ ಮೊಮ್ಮಕ್ಕಳನ್ನು ತನ್ನ ತಾಯಿ ಜೊತೆಗೆ ಹೊರ ಅಟ್ಟುವುದನ್ನು ಗಮನಿಸಿದರೆ ಇಲ್ಲಿ

ಮಾತೃಪ್ರಧಾನ ವ್ಯವಸ್ಥೆ ಕಂಡುಬರುತ್ತದೆ. ಉತ್ತರೆಯು ತಾಯಿಯ ಆದೇಶವನ್ನು ಪಡೆದೋ ಅಥವಾ ಅವಳಿಗೆ ತಿಳಿಸಿದಂತೆಯೇ ತನ್ನ ದಾರುಣವಾದ ಬದುಕಿಗೆ ಹೇಸಿ ಹೊಳೆಗೆ ಹಾರಿ ಪ್ರಾಣ ಕಳೆದುಕೊಳ್ಳುತ್ತಾಳೆ. ಎರಡು ಮಕ್ಕಳನ್ನು ಕರೆದುಕೊಂಡು ಹೊಳೆ ದಡದಲ್ಲಿಳಿಸಿ, ಗಂಗೆಗೆ ನಮಸ್ಕರಿಸಿ ಮಕ್ಕಳ ಕಣ್ಣಿಗೆ ಬಟ್ಟೆ ಕಟ್ಟುವುದು ಉತ್ತರದೇವಿಯ ಸಂಕಟ ಶಿಖರವು ಆಗಿದೆ.

ಇನ್ನೊಂದು ಬಹು ಮುಖ್ಯ ಅಂಶವೆಂದರೆ ಉತ್ತರದೇವಿಯ ಗಂಡ ಹೆಂಡತಿಯ ಪರಿಸ್ಥಿತಿಯನ್ನು ನೋಡಿ ಮರುಗುತ್ತಾನೆ. ಸಾಧ್ಯವಾದಷ್ಟು ತನ್ನ ತಾಯಿಯ ಹತ್ತಿರ ಪ್ರತಿಭಟಿಸಿದರೂ ಪ್ರಯೋಜನ ವಾಗುವುದಿಲ್ಲ. ಅದೇ ರೀತಿ ಉತ್ತರದೇವಿಯ ಮಾವ ಸಹ ತನ್ನ ಹೆಂಡತಿಯನ್ನು ಪ್ರತಿಭಟಿಸಲು ಸಾಧ್ಯವಾಗದೆ ಅಸಹಾಯನಾಗುತ್ತಾನೆ. ಮೇಲು ನೋಟಕ್ಕೆ ಪುರುಷ ಪ್ರಧಾನ ವ್ಯವಸ್ಥೆ ಕಂಡು ಬಂದರೂ, ಮಾತೃ ಪ್ರಧಾನ ವ್ಯವಸ್ಥೆಯನ್ನು ಉತ್ತರದೇವಿಯ ಅತ್ತೆ ಹಾಗೂ ಅವಳ ಮಲತಾಯಿಯಿಂದ ಗುರುತಿಸಬಹುದು. ಕೊನೆಯವರೆಗೂ ಕಷ್ಟಕ್ಕೆ ಸ್ಪಂದಿಸುವ ವ್ಯಕ್ತಿಗಳು ಯಾರೂ ಕಥನ ಗೀತೆಯಲ್ಲಿ ಕಂಡುಬರುವುದಿಲ್ಲ. ಹೆತ್ತ ತಾಯಿಯು ಸಹ ಬದುಕುವ ದಾರಿಯನ್ನು ಹೇಳುವುದಿಲ್ಲ. ಅವಳು ಸಹ 'ಹೆಣ್ಣಿನ ಬದುಕಿನ ದೌರ್ಬಲ್ಯ'ವನ್ನು ಎತ್ತಿ ಹೇಳುತ್ತಾಳೆ. ಈ ಎಲ್ಲಾ ಕಾರಣಗಳಿಂದ ಹೆಣ್ಣಿನ ಅನಂತ ದುಃಖಕ್ಕೆ ಪ್ರತಿಕ್ರಿಯಿಸುವ ಒಂದು ಸುಂದರ ಪ್ರತೀಕವಾಗಿ ಉತ್ತರದೇವಿ ಬರುತ್ತಾಳೆ. ಪ್ರಾರಂಭದಲ್ಲಿ ಉತ್ತರೆ ತನ್ನ ಅತ್ತೆಗೆ ಕೊಡುವ ಉತ್ತರ ಹೀಗಿದೆ.

ಉತ್ತರೆ ನೀರಿಗಾಗಿ ಮತ್ತೇಕೆ ಬರಲಿಲ್ಲ
ಉತ್ತರ ದೇಸೆಂಬೂ ಮಳೆಹುಯ್ದು ಕೆರೆ ತುಂಬಿ
ಹನಿ ಬಿದ್ದು ಹರಬಿ ಒಡೆದಾವು.

ಅಳ್ಳಡಸಗಾರೆಣ್ಣೆ ಮೇಲಕ್ಕೆ ನೀರಿಗೋಗಿ
ಮುಳ್ಳು ಸಿಕ್ಕಿ ಸೀರೆ ಸೆರಗಿರಿದೊ - ದಾಳಿಂಬೆ
ಹನಿಬಿದ್ದು ಹರಬಿ ಒಡದಾವು
ನೀರೇಕೆ ಕಲಕಿದವು ನರಿಗೇಕೆ ಮಾಸಿದವು
ಮಾವನ ತೋಟಾದ ಮರುಗಾವು ಕುಯ್ಯುಕೋಗಿ
ಬಾಳೆಯ ಮುಳ್ಳು ಸೆಣೆದಾವು.[3]

ಈ ಮೇಲಿನ ಪದ್ಯಗಳು ತ್ರಿಪದಿಯಲ್ಲಿ ಆಡುಮಾತಿನಲ್ಲಿ ಅರ್ಥಗರ್ಭಿತವಾಗಿ ರೂಪಿತವಾಗಿದ್ದು 'ಉತ್ತರೆ' ನೀರಿಗೆ ಹೋದವಳು ಮತ್ತೇ ಏಕೆ ಬರಲಿಲ್ಲ ಎಂಬ ಸಂಶಯದ ಮಾತಿನಿಂದ ಮನೆಯ ಅತ್ತೆಯು ಸಂಶಯ ಪಡುತ್ತಿರುವುದು ಗೊತ್ತಾಗುತ್ತದೆ. ಹಾಗೆಯೇ ನೀರಿಗೆ ಹೋದ ಉತ್ತರೆ ವಾಪಸ್ಸು ಬರುವಾಗ ಮಳೆ ಬಂದು ಮರಗಿಡಗಳ ಮೇಲೆ ಮಳೆ ಹನಿ ಬಿದ್ದುದರಿಂದ ಕೊಡದ ಮೇಲೆ ಎಲೆಯ ಮೇಲಿನ ಹನಿಯ ನೀರು ಕೊಡದ ಮೇಲೆ ಬಿದ್ದಿದ್ದು, ಮುಳ್ಳಿನ ಗಿಡಕ್ಕೆ ಸೀರೆಯ ಸೆರಗು ಸಿಕ್ಕಿ ಹಾಕಿಕೊಂಡು ಹರಿದಿರುವುದು ವಾಸ್ತವತೆಯಾದರೆ ಇದನ್ನು ಆಧಾರವಾಗಿಟ್ಟು ಕೊಂಡು ಸಂಶಯದ ಮಾತುಗಳಾದ ನೀರೇಕೆ ಕುಲಕಿದವು ನರಿಗೇಕೆ ಮಾಸಿದವು ಎಂಬಂತಹ ನುಡಿಗಳನ್ನು ಆಡಿರುವುದು ಗೊತ್ತಾಗುತ್ತದೆ.

ಬಾಳೇಗೆ ಮುಳ್ಳುಂಟಿ ಬದನೀಗೆ ಚಪ್ಪರುಂಟಿ
ಹಸಿನಾಲಿಗೆ ಇಸವುಂಟೀ - ಸೊಸೆಬಾಲೆ
ಸೊಸಿ ಬಾಲೆ ನಿನ ಮಾತು ನಿಜವೇನೆ

ಎತ್ತಿಗೆ ಮಾತುಂಟಿ ಕತ್ತೇಗೆ ಕೋಡುಂಟಿ
ಋಷಿ ಮಾಡಿದ ಮಾತಿಗೆ ಹುಸಿಯುಂಟ ಅತ್ಯಮ್ಮ
ಅತ್ಯಮ್ಮ ನಿಮ ಮಾತು ನಿವುಂಟೇ.[೨೭]

ಸೊಸೆಯನ್ನು ಹೀನಾಯವಾಗಿ ತಾತ್ಸರದ ಮಾತುಗಳನ್ನು ಆಡುವುದನ್ನು ಈ ಮೇಲಿನ ಪದ್ಯದಲ್ಲಿ ಗೊತ್ತಾಗುತ್ತದೆ. ಬಾಳೇಗೆ ಮುಳ್ಳು ಇರುವುದುಂಟು. ಈ ನಿನ್ನ ನಾಲಿಗೆಗೆ ಅಥವಾ ಮಾತನಾಡುವ ನಾಲಿಗೆಗೆ ವಿಷವೇನಾದರೂ ವಿಷಯಿರುತ್ತಾ? ಎಂಬಂತ ಮಾತುಗಳನ್ನು ಅತ್ತೆಯ ಆಡಿದ್ದರಿಂದ ಸೊಸೆಯು ಮರು ಉತ್ತರವಾಗಿ ಜವಾಬು ನೀಡುವಂತಹ ಪರಿ ಈ ರೀತಿಯಿದೆ. ಎತ್ತಿಗೆ ಮಾತನಾಡಲು ಬರುವುದುಂಟ ದೋಬಿಯ ಬಟ್ಟೆ ಹೋರುವ ಕತ್ತೆಗೇನಾದರೂ ಕೊಂಬು ಯಿರುವುದುಂಟು, ಋಷಿಮುನಿ ಹೇಳಿದ ಮಾತುಗಳು ಯಾವತ್ತಾದರೂ ಸುಳ್ಳ ಇರಬಹುದು. ಹಾಗೆಯೇ ನಿಮ್ಮ ಮಾತುಗಳು ಸಹ ಅದೇ ರೀತಿಯಾಗಿ ನೀವು ಕೇಳುವ ಪ್ರಶ್ನೆಗಳಿಗೆ ಸರಿಯಾದ ಮರುಉತ್ತರ ಕೊಟ್ಟಿದ್ದರಿಂದ ಅತ್ತೆ-ಸೊಸೆಗೂ ಕಾಳಗ ಪ್ರಾರಂಭವಾಗಲು ಅನುವಾಯಿತೆಂದು ಹೇಳಬಹುದಾಗಿದೆ.

ಉತ್ತು ಬಂದ ಮಗನಿಗೆ ತುಪ್ಪ ಅನ್ನ ಇಕ್ಕ್ಯವಳೆ
ಉತ್ತರದೇವೆಂಬ ಸೊಸೆಬ್ಯಾಡ ಕಂದಯ್ಯ
ಬಿಟ್ಟು ಬಿಡವಳ ತವರೀಗೆ

ಬಿಟ್ಟು ಬಿಡಲಿಕ್ಕೆ ಎತ್ತಲ್ಲ ಎಮ್ಮೆಲ್ಲ
ಹತ್ತು ವರ ಮುಟ್ಟಿ ತೆರೆಮುಟ್ಟಿ - ಬಂದವಳ
ಬಿಟ್ಟುರುಲಾಕಿ ಹಡದವ್ವಾ

ಅವಳ ಕೊರಳಲ್ಲಿರುವ ಸಲಿಕೆ ಸರಪಳಿ ಮಾರಿ
ನಿನ್ನ ಮಂಚಾಕೆ ರಾಣಿಯ ತರಬಲ್ಲೆ ಕಂದಯ್ಯ
ಉತ್ತರದೇವೆಂಬ ಸೊಸಿ ಬ್ಯಾಡಾ

ತವರೀಗೆ ಬಿಡುವಾಕೆ ಎತ್ತಲ್ಲ ಎಮ್ಮೆಲ್ಲ
ಆರು ವರ ಮುಟ್ಟಿ - ಬಂದವಳ
ನೋಡದಿರುಲಾರೆ ಹಡದವ್ವಾ[೨೮]

ಬೇಸಾಯ ಮಾಡಿ ಉಣಲಿಕ್ಕೆ ಅಂತ ಬಂದ ಮಗನಿಗೆ ತನ್ನ ಸೊಸೆಯ ದ್ವೇಷವನ್ನು ಮನಸಲ್ಲಿಟ್ಟುಕೊಂಡು ನಿನ್ನ ಹೆಂಡತಿ ತುಪ್ಪ ಅನ್ನ ಇಟ್ಟಿದ್ದಾಳೆ. ಅಂದರೆ ಇಲ್ಲಸಲ್ಲದನ್ನು ಮನಸ್ಸಿನಲ್ಲಿಟ್ಟು ಸಂಶಯವನ್ನು ಪಡುತ್ತಾ ನೇರವಾಗಿ ಹೇಳಲಾಗದೆ ತುಪ್ಪ ಅನ್ನದ ಅರ್ಥವನ್ನು ಕಲ್ಪಿಸಿ

ಉತ್ತರದೇವಿಯೆಂಬ ಸೊಸೆ ನಿನಗೆ ಬ್ಯಾಡ ಬಿಟ್ಟುಬಿಡು ಎನ್ನುವಂತಹ ಮಾತುಗಳನ್ನು ಹಾಡುತ್ತಾಳೆ. ಆದರೆ ಮಗನಿಗೆ ಇವರಿಬ್ಬರ ಮಧ್ಯೆ ಸಂಘರ್ಷ ನಡೆದಿರುವುದು ಗೊತ್ತಾಗದೆ ತನ್ನ ಹೆಂಡತಿಯ ಮೇಲಿನ ಪ್ರೀತಿಯಿಂದ ಅವಳನ್ನು ಬಿಟ್ಟುಬಿಡಲಿಕ್ಕೆ ಎತ್ತು ಅಲ್ಲ, ಎಮ್ಮೆ ಅಲ್ಲ, ಎಲ್ಲರ ಸಮ್ಮತಿ ಪಡೆದು ತೆರಮುಟ್ಟಿ ವಿವಾಹವಾಗಿ ಬಂದಿರುವಳು ಎನ್ನುವಂತಹ ಮಾತನ್ನು ಸಹ ಹೇಳುತ್ತಾನೆ. ಆದರೆ ತಾಯಿ ಅವಳ ಕುತ್ತಿಗೆಯಲ್ಲಿರುವ

ಮೂಗುತಿ ಮುರಿದಾರೆ ಮಾಡಸಬಹುದು
ಮಡದಿ ಸತ್ತಾರೆ ತರಬಹುದು - ಕಂದಯ್ಯ
ನಿನ್ನ ಹೆತ್ತವ್ವನೆಲ್ಲ ಪಡೆದಿಯೇ

ಅವಳ ಕಾಲಲ್ಲಿರುವ ಪಿಲ್ಲಿ ಸರಪಣಿ ಮಾರಿ
ನಿನ್ನ ಮಂಚಾಕೆ ರಾಣಿಯ ತರಬಲ್ಲೆ - ಕಂದಯ್ಯ
ಬಿಟ್ಟು ಬಿಡವಳ ತವರೀಗೆ

ಮಡದೀಯ ಕರದವನು ಮತ್ತೇನು ಹೇಳ್ಯಾನು
ಇತ್ತ ಕೇಳೆ ಮಡದಿ ನನ್ನ ಮಾತಾ
ಆಗ ತಂದವನಲ್ಲ ಈಗ ಕಳವವನಲ್ಲ
ಹೋಗಿರು ನಿನ್ನ ತವರೀಗೆ.[೨೯]

ಹೆತ್ತ ತಾಯಿಯ ಮಹತ್ವವನ್ನು ಕುರಿತು ಹೇಳಿರುವುದು ಗಮನಾರ್ಹವಾಗಿದೆ. ತಾಯಿ ತನ್ನ ಮಗನಿಗೆ ಎಷ್ಟಾದರೂ ಖರ್ಚನ್ನು ತೆತ್ತು ಮತ್ತೊಬ್ಬ ಸೊಸೆಯನ್ನು ತರುವೆ ಎಂದು ಮನವೊಲಿಸುವ ಪ್ರಯತ್ನದಲ್ಲಿ ಸೋಲುವ ಅಥವಾ ಮಗನು ಕೇಳದೇ ಇರುವ ಸಂದರ್ಭದಲ್ಲಿ ಸೊಸೆ ಹೆಚ್ಚೊ ನಾನು ಹೆಚ್ಚೊ ಎಂಬರ್ಥದಲ್ಲಿ ಪ್ರಸ್ತಾಪವಾಗಿದೆ. ತಾಯಿಯ ಮಮತೆಗೆ ಸೋತು ತಾಯಿ ಪದಕ್ಕೆ ಮನ್ನಣೆ ನೀಡಿ ತನ್ನ ಮಡದಿಯನ್ನು ಕರೆದು ನಿನ್ನನ್ನು ತರುವಾಗಲು ನಾನಿಲ್ಲ ಈಗ ಹೋಗು ಅಂತ ಹೇಳುವುದು ಇಲ್ಲ. ಹಾಗಾಗಿ ನೀನೇ ನಿನ್ನ ತವರುಮನೆಗೆ ಸುಮ್ಮನೆ ಹೋಗು ಎಂದೇಳಿರುವುದು ವಿಪರ್ಯಾಸವೇ ಸರಿ.

ತಂದ ರಾಯರಿಗೆ ಘಟ್ಟದ ಮಡದೊಪ್ಪಿಲ್ಲದ
ನಾ ಹೋತಿನಿ ರಾಯ ತವರೀಗೆ
ನಾ ಹೋದಳು ಎಂದು ಚಿಂತಿ ಮಾಡಲು ಬ್ಯಾಡ
ನೀ ನನಗಿಂತ ಚೆಲುವೇ ತರಬೇಕು.[೩೦]

ಪತಿರಾಯನಿಂದ ತವರೀಗೆ ಹೋಗುವ ಮಾತನ್ನು ಕೇಳಿದ ಉತ್ತರದೇವಿ ಗಂಡನಿಗೆ ನಾನು ಹೋದೆನೆಂದು ಚಿಂತಿ ಮಾಡಬೇಡ, ನೀನು ಇನ್ನೊಂದು ಮದುವೆಯಾದರೆ ನನಗಿಂತ ಚೆಲುವೆಯನ್ನು ಮಾಡಿಕೊಂಡು ಬಾ ಎಂದು ಅಂತರಾಳದಲ್ಲಿ ಎಷ್ಟೇ ದುಃಖವಿದ್ದರೂ ಪತಿಯ ಸೌಖ್ಯವನ್ನು

ಬಯಸುವ ಉತ್ತರದೇವಿಯ ಮಡದಿಯ ಸ್ಥಾನ ತ್ಯಾಗದ ಸ್ಥಿತಿ ಎಂತಹದ್ದು ಎಂದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. ಹಾಗೆಯೇ ಗಂಡನ ಮೇಲಿಟ್ಟಿರುವ ಪ್ರೀತಿಯು ತಿಳಿಯುತ್ತದೆ.

ಕಿತ್ತಲಿ ನೀವು ಕೇಳಿ ಕಿತ್ತಲಿಯ ವನಕೇಳಿ
ನಾನು ಬಂದಾಗ ಸಸಿಗೋಳು
ಗೊಬ್ಬರವಾ ಹಾಕಿ ಸಲುವಿದೇನು ವನಗಳಿರಾ
ಹೋತೀನಿ ನನ್ನ ತವರೀಗೆ.

ನೀರು ಹುಯ್ಯವರ್‍ಯಾರೆಗೊಬ್ಬರೆ ಹಾಕುವರ್‍ಯಾರೆ
ಹಣ್ಣಾದರೆ ಮೆಲ್ಲವರೂ
ಅತ್ತ್ಯೆ ನೀರು ಹುಯ್ಯುತಾರೆ
ಅತ್ತೆಮ್ಮ ಗೊಬ್ಬರ ಹಾಕುತಾರೆ
ಹಣ್ಣಾದರೆ ಮೆಲುತಾರೆ.[೩೧]

ಕೊನೆಯಲ್ಲಿ ತವರೀಗೆ ಹೊರಡುವ ವೇಳೆಯಲ್ಲಿ ತಾನು ಸಲಹಿ ಸಾಕಿದ ವನಗಳ ಕಡೆ ಹೋದಾಗ ನಾನು ಈ ಮನೆಗೆ ಸೊಸೆಯಾಗಿ ಬಂದಾಗ ನೀವು ಇನ್ನು ಸಸಿಗಳು ನಿಮಗೆ ಗೊಬ್ಬರ, ನೀರು ಹಾಕಿ ಬೆಳೆಸಿದಿನಿ ಹೋಗಿ ಬರ್ತಿನಿ ಎಂದು ಹೇಳಿದಾಗ ಜನಪದರು ಅವುಗಳಿಂದ ಮಾತನಾಡಿಸುವ, ಮನುಷ್ಯರಿಗಿಂತ ಪರಿಸರದಲ್ಲಿರುವ ಗಿಡ ಮರಗಳೇ ಲೇಸೆಂಬ ಭಾವನೆ ಮೂಡಿಸುವ ಸನ್ನಿವೇಶವನ್ನು ಸೃಷ್ಟಿಸಿದ್ದಾರೆ. ಮುಂದೆ ನೀರು ಹಾಕುವರು ಯಾರು ಹಣ್ಣಾದ ಮೇಲೆ ತಿನ್ನೋರು ಯಾರು ಎಂಬ ಪ್ರಶ್ನೆ ಅವುಗಳಿಂದಲೇ ಕೇಳಿಸುತ್ತಾರೆ. ಅದಕ್ಕೆ ಅವಳು ಮರು ಉತ್ತರ ನೀಡುತ್ತಾ ಅತ್ತೆ ಹಾಕುತ್ತಾಳೆ. ಅವರೇ ತಿನ್ನುತ್ತಾರೆ. ಎನ್ನುವ ಮಾತು ಹೇಳುತ್ತಾಳೆ. ಇಲ್ಲಿ ಪರಿಸರದೊಂದಿಗೆ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿರುವುದು ಅಂತರಂಗದ ದುಃಖವನ್ನು ಅವುಗಳ ಮುಂದೆ ಹೇಳಿಕೊಂಡಿರುವುದು ಸೋಜಿಗದ ಹಾಗೂ ಜನಪದ ಕಲೆ ಶೈಲಿಯಾಗಿದೆ.

ಮಾಳಿಗೆಯ ಮೇಲೆ ಮಲಗಿರುವ ಮಾವಯ್ಯ
ಊಟಕ್ಕಪ್ಪಣೆ ದಯಮಾಡಿ
ನಿನ್ನೆ ಉಂಡಾ ಊಟ ಇನ್ನು ನಂಗೆ ಅರಗಿಲ್ಲಾ
ನಿನ್ನಾಣೆಗೂ ನಂಗೆ ಹಸಿವಿಲ್ಲಾ.[೩೨]

ಮಾವನ ಸ್ಥಾನ ಅಧಿಕಾರವೆಲ್ಲವೂ ಗೌಣವಾಗಿದೆ ಹಾಗೂ ನಿನ್ನೆ ಉಂಡ ಊಟ ಇನ್ನೂ ಅರಗಿಲ್ಲಾ ಎಂದಿರುವುದು ನಿನ್ನೆ ಅತ್ತೆ ಸೊಸೆಯರ ಮಧ್ಯೆ ನಡೆದಿರುವ ಕಲಹವನ್ನು ಕೇಳಿದ್ದರಿಂದ ಆ ಮಾತನ್ನು ಹೇಳಿರಬಹುದು. ಹಾಗೆಯೇ ಬುಧವಾರ ಬಾರಮ್ಮ ಎಂದಿರುವುದು ಅವಳ ಮೇಲಿನ ಪ್ರೀತಿಯಿಂದ ಎಂತಲೂ ಸಹ ಭಾವಿಸಬಹುದು.

ಅತ್ತಿಗೆಗೆ ಶರಣೆಂದಾಳು ಮತ್ತೇನ ಹೇಳ್ಯಾಳು
ಹೋತಿನತ್ತಿಗ್ಯಮ್ಮ ತವರೀಗೆ

ಹೋಗಿ ಬನ್ನಿ ಹೋಗಿ ಬನ್ನಿ ಹೊನ್ನೊಲೆ ಕಿವಿಯವಳೆ
ನಾಗಭೂಷಣದ ನರಿಗ್ಯವರೆ - ಅತ್ತಿಗ್ಯಮ್ಮ
ನೀವು ಮುಳ್ಳ ಮುಗಚಿ ಮನೆಗೆ ಬರಬ್ಯಾಡಿ.[೩೩]

ಈ ಮೇಲಿನ ಕವನ ಅಥವಾ ಗೀತೆಯ ಸಾಲುಗಳನ್ನು ಅವಲೋಕಿಸಿದಾಗ ಅತ್ತಿಗೆ ಸಹ ವಿರಹ ಭಾವನೆಯಿರುವುದು ಮನದಟ್ಟಾಗುತ್ತದೆ. ಅಂದರೆ ಇವಳ ಸ್ಥಾನಮಾನವು ನನಗೆ ಸಿಗಬಹುದೆಂಬ ಮಹದಾಸೆಯಿಂದ ಅವಳನ್ನು ತವರಿಗೆ ಕಳಿಸುವುದು ತುಂಬಾ ಖುಷಿಯ ಸಂಕೇತನವೂ ಆಗಿರಬಹುದು. ಹೆಣ್ಣು ಹೆಣ್ಣಿಗೆ ಶತ್ರು ಎಂಬ ಅಂಶವೂ ಸಹ ವ್ಯಕ್ತವಾಗುತ್ತದೆ.

ಎಮ್ಮೆ ಎಮ್ಮೆ ನೂರು ಎಮ್ಮೆಯ ಕರು ನೂರು
ನಮ್ಮಪ್ಪ ಕೊಟ್ಟ ಐನೂರು - ಎಮ್ಮೆಯ
ಬಿಟ್ಟೊಡೆಯತ್ತಮ್ಮ ನನ್ನ ಕುಟ

ಆಡು ಆಡೇ ನೂರು ಆಡಿನ ಮರಿ ನೂರು
ನಮ್ಮಪ್ಪ ಕೊಟ್ಟ ಐನೂರು - ಹಸುಗಳು
ಬಿಟ್ಟೊಡೆಯತ್ತಮ್ಮ ನನ್ನ ಕುಟಿ.[೩೪]

ತಾನು ವಿವಾಹವಾಗಿ ಮನೆಯ ಸೊಸೆಯಾದಾಗ ಅವರಿಗೆ ಕೊಟ್ಟಿರುವಂತಹ ತೆರವನ್ನು ನಾನೇ ಅವರ ಮನೆಯಲ್ಲಿಲ್ಲದಾಗ, ಸೊಸೆಯಲ್ಲದಾಗ ಕೊಟ್ಟಿರುವಂತಹ ತೆರವನ್ನು ನಾನೇ ಬಿಡುವುದು ಏತಕ್ಕೆ ಎಂಬುದನ್ನು ಅರಿತು ವಾಪಸ್ಸು ಕೇಳುವುದು. ಅದು ಅಲ್ಲದೆ ಅವಳ ಅಂತರಂಗದ ದುಃಖವನ್ನು ಕೋಪದ ಮುಖಾಂತರವಾಗಿ ತೋರ್ಪಡಿಸಿರುವುದು ತಿಳಿಯುತ್ತದೆ. ಇಲ್ಲಿ ಅವರ ವಿರುದ್ಧವಾಗಿಯೂ ಸಹ ಹೋರಾಟವನ್ನು ಮಾಡುವಂತಹದ್ದು. ಆದರೂ ಸಹ ಅವಳು ತಮ್ಮ ಪತಿಯ ಮಡದಿ ಸ್ಥಾನವನ್ನು ಕಳೆದುಕೊಂಡು ಅಪ್ಪ ಕೊಟ್ಟ ಹಸು, ಎಮ್ಮೆ, ಹಾಡುಗಳನ್ನಾ ಹೊಡೆದುಕೊಂಡು ಮಗುವನ್ನು ಎತ್ತಿಕೊಂಡು ಇನ್ನೊಂದು ಮಗುವನ್ನು ಕೈಯಲ್ಲಿ ಹಿಡಿದುಕೊಂಡು ತಿರುಗಿ ನೋಡುತ್ತಾ ನಡೆದುಕೊಂಡು ಹೋಗುತ್ತಿರುವುದು ಎಂತವರಿಗೂ ಮನಕಲಕಿಸುವಂತಹ ಸನ್ನಿವೇಶವಾಗಿದೆ. ಇಲ್ಲಿನ ಹೆಣ್ಣಿನ ದುಃಖ, ತ್ಯಾಗ, ಅಸಹಾಯಕತೆ, ಪುರುಷಾಧಿಕಾರ, ಹೆಣ್ಣಿನ ದೌರ್ಜನ್ಯವೆಲ್ಲವೂ ತೋರ್ಪಡಿತವಾಗುತ್ತದೆ.

ತಾಯಿ ಬಾಗಿಲಾ ತೆಗೆ ತಾಯವ್ವ ಬಾಗಿಲಾ ತೆಗೆಯೇ
ನಾ ಬಂದನೇ ತಾಯಿ ತೆಗಿ ಬಾಗಿಲವಾ
ಬಾಗಿಲಾ ತೆಗೆಯುವುದಕ್ಕೆ ನಾ ಹೆಂಗೆ ತೆಗೆಯಾಲ
ನಿಮ್ಮಪ್ಪ ತೋಳಲ್ಲಿ ವರಗವರೇ - ಉತ್ತರದೇವಿ
ಹೋಗೆ ಅಣ್ಣಯ್ಯನವರ ಮನೆಗೇ

ಅಣ್ಣ ಬಾಗಿಲ ತೆಗೆ ಅಣ್ಣಯ್ಯ ಬಾಗಿಲಾ ತೆರೆ
ನನ್ನ ಮಕ್ಕಳು ಬಾಯಾರಿ ಬಳಲಿದೋ ಅಣ್ಣಯ್ಯ
ನಾ ಬಂದೇನು ಕದಾವ ತೆಗೆರಣ್ಣ

ಕದವಾ ತೆಗೆಯಾಕೆ ತಂಗಿ ನಾ ಹೆಂಗೆತೆಗೆಯಾಲಿ
ನಿಮ್ಮತ್ತಿಗೆ ತೋಳಲ್ಲಿ ವರಗವಳೆ - ಉತ್ತರದೇವಿ
ಹೋಗೆ ತಮ್ಮಯ್ಯರ ಮನೆಗೆ.[೩೫]

ಹೀಗೆ ಅವಳ ಅಸಹಾಯಕತೆ, ಅವಳು ನೊಂದು, ಬೆಂದು, ಕಿರುಕುಳ ತಾಳಲಾರದೆ ಕಂದಮ್ಮಗಳ ಹಸಿವಿನಿಂದ ಅತ್ತೆ ಕೋಪದಿಂದ ತನ್ನ ಅಂತರಂಗದ ದುಃಖವನ್ನು ಹೇಳಿಕೊಳ್ಳಲು ಬಂದ ಉತ್ತರದೇವಿಯ ಹೀನಾಯ ಸ್ಥಿತಿ ಶೋಚನೀಯ. ತಾಯಿ, ತಂಗಿ, ತಮ್ಮ, ಅಣ್ಣಂದಿರುಗಳು ಅವಳು ಬಂದಿರುವ ಸಮಯ ಸಂದರ್ಭವನ್ನು ಅರಿತು ಹಾರಿಕೆಯ ಉತ್ತರವನ್ನು ನೀಡುತ್ತಾರೆ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂಬಂತೆ ಅವಳ ಸ್ಥಿತಿ ಡೋಲಾಯಮಾನ ಸ್ಥಿತಿಯಾಗಿರುವುದು ಮೇಲಿನ ಕಥನಗೀತೆಯ ಸಾಲುಗಳಿಂದ ಅಭಿವ್ಯಕ್ತವಾಗುತ್ತದೆ. ಅತ್ತೆಯ ಮನೆಯ ಕಿರುಕುಳ ತಾಳಲಾರದೆ ಬಾಂಧವ್ಯವನ್ನೇ ಕಿತ್ತೊಗೆದು ಬಂದಿದ್ದ ಉತ್ತರದೇವಿ ಆಶಾಭಾವನೆ, ನೆರಳನ್ನೇ ಆಶ್ರಯಿಸಿ ಬಂದವಳಿಗೆ ತನ್ನ ತವರು ಮನೆಯಿಂದ ಬಂದ ಉತ್ತರ ಅತ್ತೆ ಮನೆಯ ಕಿರುಕುಳಕ್ಕಿಂತ ಹೀನಾಯವಾದುದು.

ಹತ್ತೂರು ತಿರುಗಿದರೂ ನೆತ್ತೀಗೆ ಎಣ್ಣೆಯಿಲ್ಲಾ
ಒಬ್ಬಾರು ಕದವಾ ತೆಗಿನಿಲ್ಲಾ

ಮಗಳ ಸಂಕಟ ನೋಡಿ ತಾಯಿ ಏನು ಹೇಳುತಾರೆ
ಇತ್ತಾ ಕೇಳೆ ಕಂದಾ ನನ್ನ ಮಾತು

ಹಿಂದಾಲ ಕಾಲದಲ್ಲಿ ನನಗೂ ಈ ಸಾಗಿತ್ತು
ನಿಮ್ಮಪ್ಪಾ ನನ್ನ ಉರಿಸಿದಾರು - ಉತ್ತರದೇವಿ
ನನ್ನ ಸಾಗು ನಿನಗೆ ಒದಗೀತು - ಉತ್ತರದೇವಿ
ಹೋಗವ್ವ ಹಂಪೆ ಹೊಳೆಗಾಗಿ

ಮಗಳ ಸ್ಥಿತಿಯನ್ನು ಅವಲೋಕಿಸಿದ ಮಮತೆಯ ತಾಯಿ ಕದ ತೆಗೆದು ನನಗೂ ಹಿಂದಿನ ದಿನದಲ್ಲಿ ಇದೇ ಗತಿ ನಿಮ್ಮಪ್ಪನೂ ಒಂದು ದಿನ ಕೈಬಿಟ್ಟಾಗ, ನನ್ನ ಬದುಕು ಹೀಗೆ ಹಾಗಿತ್ತು. ಹಾಗಾಗಿ ನಿನ್ನ ಬದುಕು ಈಗಾಗಬಾರದು ಹೋಗು ನೀನು ಹಂಪೆ ಹೊಳೆಗೆ ಬಿದ್ದು ಸಾಯಿ ಎನ್ನುವಂತಹ ಕ್ರೂರ ಮಾತುಗಳನ್ನು ಆಡುತ್ತಾಳೆ. ಇತ್ತ ತಾಯಿಯ ಸ್ಥಿತಿಯು ಸಹ ಅಸಹಾಯಕತೆ ಯಿಂದ ಕೂಡಿದ್ದರಿಂದ ಮಾತುಗಳನ್ನು ಹೇಳಿದ್ದಾಳೆ.

ಹಂಗಾಂತಾವ ಹೇಳುತಾಳೆ ಮಕ್ಕಳಾ ಕಂಕುಳಲ್ಲಿ ಎತ್ತಿ
ಒಂದೊಂದು ಮೆಟ್ಟಿಗಿ ಇಳಿದಾಳು ಉತ್ತರದೇವಿ
ಗಂಗಮ್ಮ ತಾಯಿ ಒಳ್ಕಂಡರು

ಅತ್ತ ಹರಿಯಾಗಂಗೆ ಇತ್ತ ಹರಿಯವ್ವ
ಒತ್ತಿ ಹರಿಯವ್ವ ಸಿವಗಂಗೆ

ಎತ್ತ ಹರಿಯಾ ಗಂಗೆ ಇತ್ತ ಹರಿಯವ್ವ
ದಿಡ ಸೂಸಿ ಹರಿಯವ್ವ ಸಿವಗರಿಗೆ

ಅತ್ತ ಹರಿಯಾ ಗಂಗೆ ಇತ್ತಾವು ಹರಿದಾಳು
ತುಂಬಿ ಹರಿದಾಳು ಸಿವಗಂಗೆ

ಹೀಗೆ ಉತ್ತರದೆವಿಯು ತನ್ನ ಮಕ್ಕಳ ಸಮೇತವಾಗಿ ಗಂಗೆಗೆ ನಮಸ್ಕರಿಸಿ ಒಂದೊಂದೇ ಮೆಟ್ಟಿಲು ಇಳಿಯುತ್ತ ಗಂಗೆಯ ಮಡಿಲಿಗೆ ಸೇರಿಕೊಳ್ಳುತ್ತಾಳೆ. ಇದರ ಸಂಪೂರ್ಣ ವಿವರವನ್ನು ಸಹ ಕೊಡಬಹುದು.

ಉತ್ತರೆ ನೀರು ತರಲು ಹೋಗಿ ತಡವಾಗಿ ಬಂದದ್ದಕ್ಕೆ ಅತ್ತೆಯಿಂದ ಅಪಮಾನಕ್ಕೆ ಒಳಗಾಗುತ್ತಾಳೆ. ಸೊಸೆಯ ಶೀಲದ ಬಗ್ಗೆ ಮೂಡಿದ ಅವಮಾನವೇ ಅತ್ತೆ ಹಾಗೂ ಸೊಸೆಯ ನಡುವೆ ಜಗಳಕ್ಕೆ ಕಾರಣವಾಗುತ್ತದೆ. ಆದರೆ ಇದೊಂದೇ ಕಾರಣವಲ್ಲದೆ ವರದಕ್ಷಿಣೆ ಅಥವಾ ಉತ್ತರೆಯನ್ನು ತಮ್ಮ ಮನೆಗೆ ತಂದುಕೊಳ್ಳುವುದು ಇಷ್ಟ ಇಲ್ಲದೇ ಇರುವುದು ಸಹ ಕಾರಣವಾಗುತ್ತದೆಯೋ ಏನೋ? ಇಂತಹ ಒಂದು ಕ್ಷುಲ್ಲಕ ಕಾರಣದ ಈ ಜಗಳ ಕೊನೆಗೆ ತನ್ನ ಮಗನಿಗೆ ಹೆಂಡತಿ ಅತ್ತೆಯನ್ನು ನಿರಾಕರಿಸುವ ಅವಳಿಗೆ ದಿಟ್ಟತನದ ಉತ್ತರ ಕೊಡುವ ಉತ್ತರೆಯ ಮಾತು ಇಲ್ಲಿ ಗಂಡನನ್ನು ಮೌನವಾಗಿಸುತ್ತದೆ. ಈ ಬಗೆಯ ಮೌನಕ್ಕೆ ಅತ್ತೆ ತಾಳುವ ನಿಲುವೆಂದರೆ ಉತ್ತರದೇವಿ ಎಂಬ ಸೊಸೆ ಬೇಡ ಆ ಬಸವಿಯನ್ನು ಬಿಟ್ಟುಬಿಡು ಎನ್ನುವುದು. ಇದಕ್ಕೆ ಕೊನೆಗೂ ಆ ಮಗ ಕೊಡುವ ಉತ್ತರ ತೆರಕೊಟ್ಟು ಬಂದವಳ ಹೇಗೆ ಬಿಡುವುದು, ಅವಳೇನು ಹಸು, ಕರು, ಎಮ್ಮೆಯಲ್ಲ, ಅವಳು ಮನುಷ್ಯಳು ಎಂಬ ಕಾಳಜಿಯನ್ನು ಹೀಗೆ ತೋರಿಸುತ್ತಾನೆ. ಆದರೆ ಅದಕ್ಕೆ ಅತ್ತೆ ನನ್ನ ಓಲೆ, ಬುಗುಡಿ, ಮುರ, ಒಡವೆಗಳೆಲ್ಲವನ್ನು ಮಾರಿ ಅವಳ ತೆರ ತೀರಿಸುತ್ತೇನೆ. ಮೊದಲು ಬಿಟ್ಟುಬಿಡು ಎಂದು ಒತ್ತಾಯಿಸುತ್ತಾಳೆ. ಈ ಬಗೆಯ ಒತ್ತಾಯಕ್ಕೆಲ್ಲ ಮಗ ಮಣಿಯದಿದ್ದಾಗ ತಾಯಿಗೆ ಇರಿಸು ಮುರಿಸಾಗುತ್ತದೆ (ಅವಮಾನವಾಗುತ್ತದೆ). ಹೆಂಡತಿಯ ಪರವಾದ ಅವನ ಮನಸ್ಸು 'ಅತ್ತೆ' ಎನ್ನುವ ಅಧಿಕಾರವನ್ನೇ ಪ್ರಶ್ನಿಸುವ ಸಂದರ್ಭವಾಗಿ ಕಂಡಿರಬೇಕು. ಹೀಗೆ ಕಥೆ ಬೆಳೆಯುತ್ತ ಮುಂದಿನ ಅವಳ ನಿರ್ಧಾರದ ಕಡೆ ಈ ಪಾಠ ಮುಂದುವರೆಯುತ್ತದೆ. ಈ ಭಾಗವಂತೂ ಉತ್ತರೆಯ ಕರುಣಾಜನಕವಾದ ಮನಸ್ಸಿನ ತೊಳಲಾಟವನ್ನು ತಿಳಿಸುತ್ತದೆ. ಈ ತೊಳಲಾಟ ಹೇಗಿದೆ ಎಂದರೆ ಅಕ್ಕಮಹಾದೇವಿಯ ಸ್ವಾಗತದಂತೆಯೇ ಉತ್ತರೆಯ ಸ್ವಾಗತವು ಕೂಡ ಅದಕ್ಕೊಂದು ಉದಾಹರಣೆ.

ನಾನು ಬರುವಾಗ ತೆಂಗೆಲ್ಲ ಕಿರುಸೊಸೆ
ನೀರೋದು ನಾನು ಸಲವಿದ್ದೆ-ಸೊಸೆಗಳಿರ

ನಾನು ಹೋಯ್ತಿನಿ ವನದೇಶ-ಸೊಸೆಗಳಿರ
ನೀವು ಉರುದಾರ ಹೋಗಿ ಸೊಸಿಗಳಿರ

(ಜನಪದ ಕಥನ ಗೀತೆಗಳು, ಪಿ.ಕೆ. ಖಂಡೋಬಾ, ಪು. ೧೦).

ಹೀಗೆ ಅವಳು ಬೆಳೆಸಿದ್ದ, ಅಕ್ಕರೆಯಿಂದ ಸಲುಹಿದ್ದ ತೆಂಗು, ಬಾಳೆ, ಅಡಿಕೆ ನಿಂಬೆ, ಎಲೆ ಇವುಗಳೊಂದಿಗೆ ಅವಳು ಮಾತನಾಡುತ್ತಾಳೆ. ನಾನು ನನ್ನ ವನ ಪ್ರದೇಶಕ್ಕೆ ಹೋಗುತ್ತೇನೆ. ನೀವಾದರೂ ಚೆನ್ನಾಗಿರಿ ಎಂದು ತನ್ನ ಸಂಕಟವನ್ನು ಇವುಗಳೊಂದಿಗೆ ಹಂಚಿಕೊಳ್ಳುತ್ತಾಳೆ. ಇದಕ್ಕೆ ಕಾರಣ ಅತ್ತೆ ಮತ್ತು ಮಗನು ತೋರಿದ ಒಂದು ಬಗೆಯ ನಿರಾಕರಣೆ. ಕೊನೆ ಕೊನೆಗೆ ಅವಳು ಎಮ್ಮೆ, ಕುರಿ ಆಡುಗಳೊಂದಿಗೂ ತನ್ನ ನೋವನ್ನು ಹಂಚಿಕೊಳ್ಳುತ್ತಾಳೆ. ಇಷ್ಟೆಲ್ಲ ಕಂಡ ಅತ್ತೆ ಸೊಸೆಯ ಮೇಲೆ ಕರುಣೆ ಎಂಬಂತೆ ಅವಳನ್ನು ಉಣ್ಣಲಿಕ್ಕೆ ಕರೆಯುತ್ತಾಳೆ. ಅದಕ್ಕೆ ಸೊಸೆಯ ಉತ್ತರ ನಾನು ನಿಮಗೆ ಮುಖ್ಯವಲ್ಲ, ನಿನಗೆ ನಿನ್ನ ಮಗ ಮುಖ್ಯ ಇಲ್ಲವೆ ಹಾದಿ ಬೀದಿಯಲ್ಲಿ ಹೋಗುವ ಜನರು ಮುಖ್ಯ. ಅವರನ್ನೇ ಕರೆದುಣ್ಣಿಸು ಅವರಿಗೆ ಹೊಸ ಬಟ್ಟೆ ತೊಡಿಸು ಎನ್ನುವ ತಿರಸ್ಕಾರದ ದುಃಖದ ಮಾತು ಅವಳ ಮನಸ್ಸಿನ ಮಡುಗಟ್ಟಿದ ವ್ಯಥೆಯನ್ನು ನಮ್ಮ ಮುಂದೆ ಕಾಣಿಸುತ್ತದೆ. ಕೊನೆಗೆ ಮಗನು ನನ್ನವ್ವ ನನ್ನ ವೈರಿಯಾದಳು ಎಂಬ ಚಿಂತೆಯಲ್ಲಿ ತನ್ನ ಅಸಹಾಯಕತೆಯನ್ನು ಬಳೆಗಾರಶೆಟ್ಟಿಯ ಮುಂದೆಯೂ, ವಾಜಾರಶೆಟ್ಟಿಯ ಮುಂದೆಯೂ ತೋಡಿಕೊಳ್ಳುತ್ತಾನೆ. ನನ್ನವಳೇ ನನ್ನ ಬಳಿ ಇಲ್ಲದಾಗ ನನ್ನವ್ವನೇ ನನಗೆ ವೈರಿಯಾದಾಗ ಈ ಬಳೆ, ಸೀರೆ, ಮಾಲೆ, ಗುಂಡು, ಮುರವು, ಪಿಲ್ಲೆ ಯಾರಿಗೆ ಬೇಕು ನೀವು ತೆಗೆದುಕೊಂಡು ಹೋಗಿ ಎನ್ನುತ್ತಾನೆ.

ಉತ್ತರದೇವಿ ಕೊನೆಗೂ ಗಂಡನ ಮನೆಯಲ್ಲಿ ತಮ್ಮ ಸ್ಥಾನವಿಲ್ಲವೆಂದು ತಿಳಿದಾಗ ಅಪ್ಪ ಕೊಟ್ಟ ಎಮ್ಮೆಯನ್ನು ಹೊಡಕೊಂಡು ಮುಂದಲ ಚುಕ್ಕಿ ಬೆಳಕಲ್ಲಿ ತವರ ಹಾದಿಯನ್ನು ಹಿಡಿಯುತ್ತಾಳೆ. ನಮ್ಮ ಜನಪದ ಗರತಿಯಂತೆ ಅಪ್ಪ ಕೊಟ್ಟಮ್ಮೆ ಹೊಡಕೊಂಡು ತವರೂರು ದಿಟ್ಟಿಸ್ತಿ ತಿರುಗಿ ನೋಡುವ, ಗಂಡನ ಮನೆಗೆ ಹೋಗುವ ಹೆಣ್ಣು ಒಂದು ಕಡೆ ಇಲ್ಲಿ ಅಪ್ಪಕೊಟ್ಟ ತೆರದ ರೂಪದ ಎಮ್ಮೆಯ ವಾಪಸ್ಸು ಪಡಕೊಂಡು ಅಸಹಾಯಕಳಾಗಿ ತವರ ಹಾದಿ ಹಿಡಿಯುವ ಸಂದರ್ಭ ಇಲ್ಲದೆ ಈ ಎರಡು ಸಂದರ್ಭಗಳು ಹೆಣ್ಣಿನ ಸೋಲು-ಗೆಲುವಿನ ಸಂಗತಿಯನ್ನು ಕಟ್ಟಿಕೊಡುತ್ತದೆ. ಉತ್ತರದೇವಿ ತವರಿಗೆ ಬರುವ ಅನಿವಾರ್ಯತೆ, ನನ್ನಪ್ಪ ನನ್ನವ್ವ ಕದ ತೆಗೆಯ್ಯೋ ಎನ್ನುವ ಆದ್ರತೆಯ ಮನೋಭಾವ ಈ ಕಥೆಯನ್ನು ಬೆಳೆಸುತ್ತ ಹೋಗುತ್ತದೆ. ಯಾಕೆ ಈ ತರಹದ ಹೆಣ್ಣುಗಳು ಮುಂದಾದ ಚುಕ್ಕಿ ಬೆಳಕಿನಲ್ಲಿಯೇ ದಾರಿ ಮಾಡಿಕೊಳ್ಳಬೇಕು? ಎಂಬ ಪ್ರಶ್ನೆ ಇಲ್ಲಿ ಕಾಡುತ್ತದೆ. ಹಗಲಿನಲ್ಲಿ ಈ ಜನ ಸಮಾಜ ನಮ್ಮನ್ನು ನೋಡಿದರೆ ಅದು ನಮಗೆ ಅಪಮಾನವೆಂದು, ತವರಿಗೆ ಅಪಮಾನ ಎಂದು ಭಾವಿಸಿ ಈ ಹೆಣ್ಣುಗಳು ಬೆಳಂದಿಗಳು ಚುಕ್ಕಿ ಬೆಳಕಿನಲ್ಲಿಯೇ ತಮ್ಮ ದಾರಿಯನ್ನು ಕಂಡುಕೊಳ್ಳುತ್ತಾರೆ. ಹೀಗೆ ದಾರಿ ಮಾಡಿಕೊಂಡು ಬಂದ ಉತ್ತರೆಗೆ ತವರಿನಲ್ಲಿಯೂ ಒಂದು ನೆಮ್ಮದಿಯ ಸ್ವಾಗತ ದೊರಕುವುದಿಲ್ಲ. ಅಲ್ಲಿ ಅವಳ ಅಪ್ಪ ದೊಡ್ಡಪ್ಪ ಎಲ್ಲರೂ ಅವಳನ್ನು

ನಿರಾಕರಿಸುತ್ತಾರೆ. ತನಗೆ ಉಳಿದಿರುವುದು ಒಂದೇ ಮಾರ್ಗ. ತನ್ನ ಹಡೆದವ್ವನ ಬಳಿ ಬಂದು ಗಂಡನ ಮನೆಯ ಎಲ್ಲ ಅಪಮಾನವನ್ನು ಹಂಚಿಕೊಳ್ಳುತ್ತಾಳೆ. ಆದರೆ ಇಲ್ಲಿ ಆ ತಾಯಿಯ ಸ್ಥಿತಿಯು ಮಗಳ ಸ್ಥಿತಿಗಿಂತ ಭಿನ್ನವೇನಲ್ಲ. ಅವಳು ಕೂಡ ಗಂಡನಿಂದ ಹೊರಬಂದವಳೇ ಇಷ್ಟಾದರೂ ಉತ್ತರೆಯನ್ನು ಸಾಕಿ ಸಲುಹಿದ್ದ ತನ್ನ ಕಷ್ಟವನ್ನೆಲ್ಲ ತಾಯಿ ಇಲ್ಲಿ ನೆನಪು ಮಾಡಿಕೊಳ್ಳುತ್ತಾಳೆ. ನನ್ನ ಕಷ್ಟವೇ ಈಗ ಉತ್ತರೆಗೆ ಬಂತಲ್ಲ ಎಂದು ಮರಗುತ್ತಾಳೆ. ತಡೆಯಲಾಗದೆ 'ನೀನು ಹೆಣ್ಣಾಗಿ ಈ ಭೂಮಿಯಲ್ಲಿ ನೋವು ಪಡುವುದಕ್ಕಿಂತ ಉತ್ತರೆಯ ಮಳೆಯಾಗಿ ಹೋಗವ್ವ' ಎಂದು ಹಾರೈಸುತ್ತಾಳೆ. ಈ ಇಳೆಯ (ಭೂಮಿಯ) ನೋವಿನ ಎದೆಯ ಮೇಲೆ ಉತ್ತರೆಯ ಮಳೆ ತಂಪು ತರಲಿ ಎಂಬುದೇ ಆ ತಾಯಿಯ ಬಹುದೊಡ್ಡ ಆಸೆ. ಬಹುಶಃ ಈ ಬಗೆಯ ತಾಯಿತನದ ಆಶಯಗಳೇ ನಮ್ಮ ಇಡೀ ಜನಪದ ಲೋಕವನ್ನು ಅನನ್ಯವಾಗಿ ಇಟ್ಟಿದೆ ಎನ್ನಿಸುತ್ತದೆ. ಈ ಬಗೆಯ ಹೆಣ್ಣುಗಳು ಬದುಕಿನ ಪರೀಕ್ಷೆಗಳಲ್ಲಿ ಗೆದ್ದು ಉಡಿಯಲ್ಲಿ ಕೆಂಡಕಟ್ಟಿಕೊಂಡು ಮಲ್ಲಿಗೆಯಂತೆ ಬದುಕಿದ್ದ ಉತ್ತರೆಯಂಥವರು ನಮ್ಮ ಜನಪದ ಜೀವನದಲ್ಲಿ ಹಾಸುಹೊಕ್ಕಾಗಿದ್ದಾರೆ. ಈ ಬಗೆಯಲ್ಲಿ ನಿಜವಾಗಿ ಇತಿಹಾಸವಾಗಿದ್ದಾರೆ.

### ೩. ಬಂಜೆ ಹೊನ್ನಮ್ಮ

ಜನಪದ ಕಥನಗೀತೆಗಳಲ್ಲಿ ಬಂಜೆಹೊನ್ನಮ್ಮ ಕಥೆಯು ವಾಸ್ತವಿಕ ಕಥನಗೀತೆಗಳಲ್ಲಿ ಚಿರಪರಿಚಿತ ವಾಗಿದೆ. ಬಂಜೆತನದ ನೋವನನು ಹೃದಯಂಗಮವಾಗಿ ಚಿತ್ರಿಸಿರುವುದನ್ನು ಜನಪದ ಕಾವ್ಯದಲ್ಲಿ ಕಾಣಬಹುದು. ಹೊನ್ನಮ್ಮ ಏಳು ಜನ ಅಕ್ಕತಂಗಿಯರಲ್ಲಿ ಒಬ್ಬಳು ಹಾಗೂ ಕೊನೆಯವಳು. ಏಳು ಜನಕ್ಕೂ ಲಗ್ನವಾಗಿ ಆರು ಜನ ಅಕ್ಕಂದಿರೂ ಮಕ್ಕಳ ಭಾಗ್ಯವನ್ನು ಪಡೆದರು. ಇವಳು ಮಾತ್ರ ಬಂಜೆಯಾಗಿ ಉಳಿದಳು. ಅಕ್ಕಂದಿರು ಮಕ್ಕಳನ್ನು ತಿಂಡಿ, ತಿನಿಸು, ಒಡವೆ ವಸ್ತುಗಳಿಂದ ಮುದ್ದಾಡಿ ತನ್ನ ನೋವನ್ನು ಮರೆಯುತ್ತಿದ್ದಳು. ಆದರೂ ಅವಳಿಗೆ ಮಕ್ಕಳಿಲ್ಲ ಎಂಬ ಭಾದೆ ಸದಾ ಭಾದಿಸುತ್ತಿರುತ್ತದೆ.



ಬಂಜೆತನ ಹೋಗಲಾಡಿಸಲು ಅನೇಕ ಪುಣ್ಯ ಕಾರ್ಯ ಗಳನ್ನು ಮಾಡುತ್ತಾಳೆ. ಬಾವಿಯನ್ನು ತೆಗೆಸುತ್ತಾಳೆ. ಕಿತ್ತಲೆ, ಸೀಬೆ, ನಿಂಬೆ, ತೋಟವನ್ನೂ ಬೆಳೆಸುತ್ತಾಳೆ. ಮೂಡಲ ಸೀಮೆಯಿಂದ ಬಂದ ಯಾವ ಹಕ್ಕಿ ಪಕ್ಕಿಗಳು ಬಂಜೆ ತೆಗೆಸಿದ ಬಾವಿ, ಬಂಜೆ ಬೆಳೆಸಿದ ತೋಟನೋಡಿ, ನೀರನ್ನು ಕುಡಿದರೆ, ಹಣ್ಣನ್ನು ತಿಂದರೆ ನಾವು ನಮ್ಮ ಮಕ್ಕಳು ಬಂಜೆರಾಗುವೆವು ಎಂದು ಹೊರಟು ಹೋಗುತ್ತವೆ. ಇದರಿಂದ ಮಕ್ಕಳ ಫಲ ದೊರೆಯುವುದಿಲ್ಲ. ಮಕ್ಕಳಿಗಾಗಿ ಗಂಗೆ ಪೂಜೆಯನ್ನೂ ಮಾಡಬೇಕೆಂದು ಬಾವಿಗೆ, ಹೊಳೆಗೆ ಹೋದರೆ ಗಂಗೆಯೇ ಬತ್ತಿ ಹೋಗುತ್ತಾಳೆ. ಪ್ರಕೃತಿಯು ಸಹ ಬಂಜೆಯ ಬಗ್ಗೆ ಮರುಕು

ತೋರಿದಂತೆ ಕಾಣುವುದಿಲ್ಲ. ಅಕ್ಕ ತಂಗಿಯರು ಸಹ ಬಂಜೆ ಎಂದು ಹಿಯ್ಯಾಳಿಸಿ ಅವಳಿಗೆ ತಮ್ಮ ಮಕ್ಕಳನ್ನು ಕೊಡದೆ. ಅವಳನ್ನು ಚೆನ್ನಾಗಿ ಹೊಡೆದು ಕೊರಕಲ್ಲಿಗೆ ಎಸೆಯುತ್ತಾರೆ. ಆಗ ಕೋಪಗೊಂಡ ಹೊನ್ನಮ್ಮ ಅತೀವ ದುಃಖದಿಂದ 'ವಾಡೆ ಮೂಲೆಯಲ್ಲಿ ಮುಚ್ಚಿಟ್ಟ ಅಕ್ಕಂದಿರ ಮಕ್ಕಳು ಹುಳಿತು ಹೋಗಲಿ' ಎಂದು ಶಾಪ ಹಾಕುತ್ತಾಳೆ. ಹೊನ್ನಮ್ಮನ ಶಾಪ ನಿಜವಾಗುತ್ತದೆ. ಅವಳ ಊರಿನ ನಾರಿಯರೆಲ್ಲ ಅವಳನ್ನು ಹಂಗಿಸುವ ನುಡಿ ಕೇಳಿದರೆ, ಹೊನ್ನಮ್ಮನಿಗೆ ಮಾತ್ರವಲ್ಲ ಹೊನ್ನಮ್ಮನಂತಹ ಎಷ್ಟೋ ಸ್ತ್ರೀಯರಿಗೆ ದುಃಖವಾಗದೆ ಇರುವುದಿಲ್ಲ.

ಊರ ಒಳಗೆ ನಾರಿಯರೆಲ್ಲ
ಬಾರೆ ಬಂಜಿ ಎಂತ ಕರೆಯುವರು
ಬಂಜಿ ಎಂಬೊ ಸೊಲ್ಲಹರನೇ
ಬಿಡಿಸಯ್ಯ ಪರಮೇಶ್ವರನೆ
ಏನು ಪಾಪ ನಾ ಮಾಡಿ ಬಂದೆ
ಏನು ಕರ್ಮನಾ ಮಾಡಿ ಬಂದೆ
ನಾನು ಮಾಡಿದ ಕರ್ಮಕೆ
ನನಗೀಗ ಮಕ್ಕಳೇ ಇಲ್ಲ
ಬಂಜಿ ಬಂಜಿ ಬಾಗಿಲ ಮುಂದೆ
ಅಂಜುರದ ಗಜನಿಂಬೆ ಮರವು
ಅಂತ ಮರಕೆ ಮಕ್ಕಳೆ ಎಂಟು
ಎನಗಿಲ್ಲವು ಸಾಂಬ ಶಿವನೆ[೩೫]

ಹೀಗೆ ಮಕ್ಕಳಿಗಾಗಿ ಹಂಬಲಿಸುವ ಹೊನ್ನಮ್ಮ ಬೇಡದ ದೇವರಿಲ್ಲ ಮಾಡದ ಕಾರ್ಯವಿಲ್ಲ. ಆದರೂ ಬಂಜೆಯೆಂಬ ನುಡಿ ತಪ್ಪಿದ್ದಲ್ಲ.

ಬಂಜೆತನಕ್ಕೆ ಬೇಸತ್ತ ಹೊನ್ನಮ್ಮ ಸಾಯಲು ಮುಂದಾಗುತ್ತಾಳೆ. ಆದರೆ ದೈವದ ನೆರವಿನಿಂದ ಉಳಿದು, ಗಂಡು ಮಗುವಿನ ಫಲವನ್ನು ಪಡೆಯುತ್ತಾಳೆ. ಮಗುವಿನ ವರಕೊಟ್ಟು ದೇವರು 'ಮಗುವಿಗೆ ಹನ್ನೆರಡು ವರ್ಷವಾದಾಗ ಆ ಮಗುವನ್ನು ಕಡಿದು ತಮಗೆ ಅಡುಗೆ ಮಾಡಬೇಕೆಂದು ಹೇಳುತ್ತಾರೆ. ಅವರಿಚ್ಚೆಗೆ ಅವಳು ಸಮ್ಮತಿಸುತ್ತಾಳೆ. ಶಿವ ಪಾರ್ವತಿಯರ ಕೋರಿಕೆಯಂತೆ ಅವಳು ತನ್ನ ಮಗುವನ್ನು ಬಲಿ ಕೊಡುತ್ತಾಳೆ. ಅವಳ ಭಕ್ತಿಗೆ ಮೆಚ್ಚಿ ಮತ್ತೆ ಹೊನ್ನಮ್ಮನಿಗೆ ಮಗುವಿನ ಭಾಗ್ಯ ಕರುಣಿಸುತ್ತಾರೆ. ಅವಳು ಹೊನ್ನಕ್ಕಲಾಗಿ ಬದುಕುತ್ತಾಳೆ.[೩೬]

**೪. ಬಯಲು ಸೀಮೆಯ ಗೌಡನ ಮಗಳು**

ಈ ಕಥನಗೀತೆಯಲ್ಲಿ ಬರುವ ಗೌಡನ ಮಗಳ ಹಮ್ಮು ಬಿಮ್ಮು ಪ್ರತಿಷ್ಠೆಯನ್ನು ಕುರಿತ ಕಥೆಯಾಗಿದೆ. ಹಳ್ಳಿಗಳಲ್ಲಿ ಅಂದಿನಿಂದ ಇಂದಿನವರೆಗೂ ವರ್ಗ, ವರ್ಣ ವೈಷಮ್ಯಗಳು ಹೇಗೆ ತನ್ನ ಸತ್ವವನ್ನು ಕಳೆದುಕೊಳ್ಳದೆ ಉಳಿದುಕೊಂಡು ಬಂದಿವೆ ಎಂಬುದನ್ನು ಈ ಕಥನ ಕಾವ್ಯದಲ್ಲಿ ಕಾಣಬಹುದು.

ಮೇಲುವರ್ಗದವರು, ಕೆಳವರ್ಗದವರನ್ನೂ ಶೋಷಣೆ ಮಾಡುತ್ತಾ ಬಂದಿರುವುದು ಹಾಗೆಯೇ ಶ್ರೀಮಂತರು ಬಡವರನ್ನು ಶೋಷಣೆ ಮಾಡುತ್ತಾ ಬಂದಿರುವುದು ಹೊಸ ವಿಚಾರವೇನಲ್ಲ. ಬಂಡವಾಳ ಶಾಹಿಯ ಆರ್ಭಟ ಸರ್ವಕಾಲಕ್ಕೂ ಬೆಳೆಯುತ್ತಾ ಬಂದಿರುವಂತಹ ವಿಚಾರವಾಗಿದೆ. ಅದರಲ್ಲೂ ಹಳ್ಳಿಗಳಲ್ಲಿ ಇದರ ಬಗ್ಗೆ ಹೇಳುವವರು ಇಲ್ಲ, ಕೇಳುವವರು ಇಲ್ಲ. ಆದರೆ ಇತ್ತೀಚೆಗೆ ಸಾಕ್ಷರತೆಯ ಪ್ರಭಾವದಿಂದಾಗಿ ಶೋಷಣೆ ಅಲ್ಪಸ್ವಲ್ಪ ಕಡಿಮೆಯಾಗಿದೆ ಎನ್ನಬಹುದು.

ಗೌಡನ ಮಗಳು ಕೆಳವರ್ಗದ, ಬಡವನಾದ ಹುಡುಗನನ್ನು 'ಇನವಂದ' ಆಡಲು ಕರೆಯುತ್ತಾಳೆ. ಇನವಂದ ಎಂದರೆ ವಿನೋದ, ಚೆಲ್ಲಾಟ ಎಂದರ್ಥ.

ಈ ಕಥನಗೀತೆಯ ಆದಿ ಮತ್ತು ಅಂತ್ಯ ತಿರುವುಗಳಿಗೆ ಗೌಡನ ಮಗಳ ಪ್ರತಿಷ್ಠೆಯೇ ಕಾರಣವಾಗಿದೆ ಎಂದು ತಿಳಿದುಬರುತ್ತದೆ. ದನಕಾಯುವ ಗೊಲ್ಲರ ಹುಡುಗ 'ಇನವಂದ'ಕ್ಕೆ ಬಾರದಿದ್ದಾಗ ಕೋಪಗೊಂಡು ಮನೆಗೆ ಬಂದು ತಂದೆಗೆ ದೂರು ನೀಡುತ್ತಾಳೆ. ದನಕಾಯುವ ಹುಡುಗ ತನ್ನನ್ನು ಹಿಡಿದುಕೊಳ್ಳಲು ಬಂದ ಎಂದು ಸುಳ್ಳು ಹೇಳಿದಳು. ಶ್ರೀಮಂತಿಕೆಯ ಅಮಲಿನಲ್ಲಿ ಬೆಳೆದು ಸೊಕ್ಕಿದ ಮಗಳ ಮಾತನ್ನು ಕೇಳಿದ ಗೌಡತಿ, ಹಿಂದೆ ಮುಂದೆ ಆಲೋಚಿಸದೆ ಅವಳ ಮಾತನ್ನು ನಿಜವೆಂದು ನಂಬುತ್ತಾರೆ. ಗೊಲ್ಲರ ಹುಡುಗನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ತನ್ನ ತಂದೆಯ ಹತ್ತಿರ ಹೀಗೆ ಹೇಳುತ್ತಾಳೆ. ಗೊಲ್ಲರ ಹುಡುಗನ ಶಿರವ ಮೆಟ್ಟಿಕೊಂಡು ನಾ ತಣ್ಣೀರು ಮೀಯಾಬೇಕು' ಎಂದು ತಿಳಿಸುತ್ತಾಳೆ. ಗೌಡ ತನ್ನ ಮಗಳಿಗಾದ ಅವಮಾನವನ್ನು ಸಹಿಸಿಕೊಳ್ಳದೆ, ಹಿಂದೆ ಮುಂದೆ ಆಲೋಚಿಸದೆ ದಂಡನ್ನು ಕಟ್ಟಿಕೊಂಡು ಗೊಲ್ಲರ ಹುಡುಗನ ಹತ್ತಿರ ಹೋದ. ಸುರಹೊನ್ನೆ ಮರದಡಿಯಲ್ಲಿ ಕುಳಿತಿರುವ ಗೊಲ್ಲರ ಹುಡುಗನ ಶಿರವನ್ನು ಕಡಿಯುತ್ತಾನೆ. ಅವನ ಶಿರವನ್ನು ತನ್ನ ಮಗಳಿಗೆ ತಂದುಕೊಡುತ್ತಾನೆ. ಮಗಳು ಆನಂದದಿಂದ 'ಗೊಲ್ಲರ ಹುಡುಗನ ಶಿರವನ್ನು ಮೆಟ್ಟಿಕೊಂಡು ತಣ್ಣೀರು ಮಿಯುತ್ತಾಳೆ.

ಗಂಡು ಆಡಬೇಕಾದ ಚೆಲ್ಲಾಟವನ್ನು ಹೆಣ್ಣೊಬ್ಬಳು ಗಂಡಿನಿಂದ ನಿರೀಕ್ಷಿಸಿ ಪರಾಜಿತೆಯಾದಾಗ ಅವಳ ಹಟ, ದ್ವೇಷದಿಂದ ಗಂಡಿನ ಪ್ರಾಣದ ಜೊತೆ ಇನವಂದ ಆಡುತ್ತಾಳೆ. ಅಂದರೆ ಪುರುಷನ ಪ್ರಾಣದ ಜೊತೆ ಸ್ತ್ರೀಯೊಬ್ಬಳು ಇನವಂದವಾಡುವುದು ಕಂಡುಬರುತ್ತದೆ.

**೫. ಜಾಗಲೆ**

ಜಾಗಲೆ ಕಥೆಯಲ್ಲಿ ಮುಗ್ಧ ಸೊಸೆಯೊಬ್ಬಳು, ಕ್ರೂರ ಅತ್ತೆಯಿಂದ ಪಡುವ ಕಷ್ಟ-ನಷ್ಟಗಳನ್ನು ಎತ್ತಿ ಹೇಳುತ್ತದೆ. ನಿತ್ಯ ಜೀವನದಲ್ಲಿ ಅಂದಿನಿಂದ ಇಂದಿನವರೆಗೂ ಕೌಟುಂಬಿಕ ಸಮಸ್ಯೆಗಳು, ಮಾನವನ ರಾಗದ್ವೇಷಗಳು, ಇಡೀ ಕುಟುಂಬದ ನಾಶಕ್ಕೆ ಹೇಗೆ ಕಾರಣವಾಗುತ್ತದೆ ಎಂಬುದನ್ನು ಜನಪದರು ಕೆಲವು ಕಥನಗೀತೆಗಳಲ್ಲಿ ಸೆರೆಹಿಡಿದಿದ್ದಾರೆ. ಜಾಗಲೆಗೆ ಮೂರು ತಿಂಗಳು ಇರುವಾಗ ರಂಗಯ್ಯನಿಗೆ ಆರು ತಿಂಗಳು ಇದ್ದಂತೆ ಇಬ್ಬರಿಗೂ ದೇವಮ್ಮ ಮದುವೆ ಮಾಡುತ್ತಾಳೆ. ಜಾಗಲೆ ಅತ್ತೆ ಮನೆಯಲ್ಲಿ ಇರದೇ ತೌರಮನೆಯಲ್ಲಿ ಇರುತ್ತಾಳೆ.

ಒಮ್ಮೆ ರಂಗಯ್ಯನ ಸೋದರ ಮಾವಂದಿರು ಆನೆಯ ಮೇಲೆ 'ಆರು ಸಾವಿರ ಕಾಜುಗ ಕೊಟ್ಟು, ದಂಡಿನ ಓಲೆ ಕಳುಹಿಸುತ್ತಾರೆ'. ಮಂಚದ ಮೇಲೆ ರಂಗಯ್ಯ ಕೂತು ಓದುತ್ತಾನೆ. ಕಣ್ಣೀರು ಹರಿಸುತ್ತಾನೆ. ತನ್ನ ಹೆಂಡತಿ ತೌರಿನಲ್ಲಿದ್ದಾಳೆ. ಮದುವೆಯಾದ ದಿನದಿಂದ ಒಂದು ದಿನವೂ ಜೊತೆಯಲ್ಲಿ ಇಲ್ಲ. ಈಗ ಅವಳನ್ನು ಬಿಟ್ಟು ದಂಡಿಗೆ ಹೋಗಬೇಕಲ್ಲ ಎಂದು ದುಃಖಪಡುತ್ತಾನೆ. ಅಷ್ಟರಲ್ಲಿ ಅವನ ತಾಯಿ ಬಂದು ವಿಚಾರಿಸಿದಾಗ ರಂಗಯ್ಯ ಹೇಳಿದ. 'ನೀನು ತಂದ ಗೌಡತಿಯ ಈಗ ಕರೆಕೊಂಡು ನೀನು ಬಾರವ್ವ ಎಂದನು. ಮಗನ ಮಾತನ್ನು ಕೇಳಿದ ತಾಯಿ ದೇವಮ್ಮ ಹೊಟ್ಟೆ ಕಿಚ್ಚಿನಿಂದ, ನೊರನೊರನ ಹಲ್ಲ ಕಡಿದಾಳು. ತಾಯಿ ಕಡುಕಣ್ಣ ಕೋಪ ಮಾಡಾಳ[೨೬] ತಾಯಿಯ ಸ್ಥಾನದಲ್ಲಿ ದೇವಮ್ಮನಿದ್ದರೂ, ಮಗನ ಹಿತೈಷಿಯಾಗಿಲ್ಲ. ಮಗ ಸೊಸೆ ಚೆನ್ನಾಗಿರುವುದು ಅವಳಿಗೆ ಇಷ್ಟವಿದ್ದಂತೆ ಕಾಣುತ್ತಿಲ್ಲ. ಇಲ್ಲಿ ಹೆಣ್ಣಿಗೆ ಹೆಣ್ಣೆ ಶತ್ರು' ಎನ್ನುವ ನಾಣ್ನುಡಿಯಂತೆ, ಜೊತೆಗೆ ಅತ್ತೆಯ ಮಾತ್ಸರ್ಯ ದೇವಮ್ಮಳಲ್ಲಿ ಎದ್ದು ಕಾಣುತ್ತದೆ.

ಮಗನ ಇಚ್ಛೆಯಂತೆ ತನ್ನ ತಾಯಿ ಸೊಸೆಯನ್ನು ಕರೆತರಲು ಸಿದ್ಧವಾಗುತ್ತಾಳೆ. ಆಗ ಅವಳ ಶೃಂಗಾರ ಹೇಳತೀರದು.

ತನಗೆ ತಕ್ಕದಂಥ ಸೀರೆಯ ರವಕೆ
ತೊಟ್ಟಳಲ್ಲೇ ದೇವಮ್ಮ
ತಕ್ಕದಂಥ ಒಡವೆ ವಸ್ತ್ರ
ಇಟ್ಟಳಲ್ಲೇ ದೇವಮ್ಮ[೨೭]

ತನ್ನ ಸೊಸೆಯಿರುವ ಪಟ್ಟಣಕ್ಕೆ ದೇವಮ್ಮ ಹೋಗುತ್ತಾಳೆ. ಆ ಪಟ್ಟಣ ತುಂಬಾ ದೂರ ನಡೆದು ಬಸವಳಿದಿರುತ್ತಾಳೆ. ಬಾಯಾರಿಕೆಯಾಗಿರುತ್ತದೆ. ಇದರ ಕೋಪದಿಂದ ಸೊಸೆಯನ್ನು ಬೈಯುತ್ತಾ ನಡೆಯುತ್ತಾಳೆ. ಮಗನಿಗೆ ಮದುವೆ ಮಾಡಿದಾಗ ನೋಡಿದ ಊರಿಗೆ ಬಹಳ ವರ್ಷದ ನಂತರ ಹೋಗುತ್ತಾಳೆ. ಎಲ್ಲವೂ ಅಪರಿಚಿತವೆನಿಸುತ್ತದೆ. 'ಜೋಗಯ್ಯ'ನಿಂದ ದಾರಿ ಮಾಹಿತಿ ಪಡೆದು ಪ್ರಯಾಣ ಬೆಳೆಸುತ್ತಾಳೆ.

ಅತ್ತೆ ಮನೆಗೆ ಬಂದಿರುವುದನ್ನು ಕಂಡು ಸೊಸೆ ಜಾಗಲೆ ಅತ್ಯಂತ ಪ್ರೀತಿ ಆದರದಿಂದ, ಅತ್ತೆಯ ಕಾಲಿಗೆ ಮುತ್ತಿನಾರತಿ, ಮಾಡಲು ತರುತ್ತಾಳೆ. ಹವಳದ ಆರತಿ ತಂದಾಗ ಮುಖ ತಿರುಗಿಸಿ ನಿಲ್ಲುತ್ತಾಳೆ. ಕಡು ಕಣ್ಣ ಕೋಪದಲ್ಲಿಯೇ ಮಂಚದ ಮೇಲೆ ಕೂರುತ್ತಾಳೆ. ಬಹುಶಃ ಇವಳ ಅತ್ತೆಯು ಇವಳಿಗೆ ಇದೇ ರೀತಿ ಮಾಡಿದ್ದಳೇನೋ. ಅದನ್ನು ತನ್ನ ಸೊಸೆಯ ಮೇಲೆ ಪ್ರಯೋಗಿಸುತ್ತಾಳೆ. ಏಕೆಂದರೆ ಹೆಣ್ಣು ತನಗೆ ಸಿಗದಿದ್ದ ಸುಖ ಮತ್ತೊಂದು ಹೆಣ್ಣಿಗೆ ಸಿಕ್ಕರೆ ಸಹಿಸುವುದಿಲ್ಲ ಎನ್ನುವ ಮಾತಿನಂತೆ ಹೋದರೆ ದೇವಮ್ಮನಿಗೆ ಇದು ಅನ್ವಯಿಸುತ್ತದೆ. ಅಲ್ಲಿಂದ ತನ್ನ ಗಂಡನ ಮನೆಗೆ ಬರುವಾಗ ತವರುಮನೆ ಕಡೆಗೆ ತಿರುಗಿ ತಿರುಗಿ ನೋಡುವ ಆಸೆಯಾಗುತ್ತದೆ. ಇದನ್ನು ಮನಗಂಡ ಅತ್ತೆ ಬೈಯುತ್ತಾಳೆ.

ನಿಮ್ಮಪ್ಪ ತಿನ್ನುವ ಜಾಗಲೆ ಹಿಂದಕ್ಕೇನ ನೋಡಿಯೆ' ಎಂದು ಸೊಸೆಯನ್ನು ನಿಂದಿಸಿ ಕೊನೆಗೆ ಅವರ ಅಣ್ಣ ತಮ್ಮಂದಿರನ್ನು ನಿಂದಿಸಿ ಬಯ್ಯುತ್ತಾಳೆ. ಆದರೂ ಜಾಗಲೆ ಏನು ಪ್ರತಿಕ್ರಿಯೆ ವ್ಯಕ್ತಪಡಿಸುವುದಿಲ್ಲ. ಅತ್ತೆಯ ಕೈಯಲ್ಲಿ ಬೈಸಿಕೊಂಡು ಊರು ತಲುಪುತ್ತಾಳೆ. ಮನೆಗೆ ಸೊಸೆಯನ್ನೂ ಕರೆತಂದ ದೇವಮ್ಮ ಆ ಕ್ಷಣವೇ ಜಾಗಲೆಯ ಮುಂದಲೆ ಹಿಡಿದು, ಮಗ ರಂಗಣ್ಣನ ಮುಂದೆ ಜಾಡಿಸಿ ಒದೆಯುತ್ತಾಳೆ. ಅಲ್ಲಿಗೆ ಅತ್ತೆಯ ಕಾಟ ಶುರುವಾಗುತ್ತದೆ. ಸಾಮಾನ್ಯವಾಗಿ ಜನಪದರಲ್ಲಿ ಬರುವ ಅತ್ತೆ ಕೆಟ್ಟವಳಾಗಿರುತ್ತಾಳೆ. ಒಳ್ಳೆಯ ಅತ್ತೆ ಬರುವುದು ಅಪರೂಪ. ಸೊಸೆಯಾದ ಜಾಗಲೆಯ ಕಷ್ಟ ಹೇಳತೀರದು. ಜಾಗಲೆಯು ಮೈಮೇಲಿನ ಒಡವೆ ವಸ್ತ್ರವನ್ನು ಅತ್ತೆ ಬಿಚ್ಚಿಸಿಕೊಂಡು, ಅವಳ ಮಗಳಿಗೆ ತೊಡಿಸುತ್ತಾಳೆ. ಇದನ್ನು ನೋಡಿದ ಮಗ ಮಾತನಾಡುವುದಿಲ್ಲ. ನಂತರ ತನ್ನ ಮಗನಿರುವ ಕೊಠಡಿಗೆ ಸೊಸೆಯನ್ನೂ ನೂಕುತ್ತಾಳೆ. ಅಲ್ಲಿ ಗಂಡ ಹೆಂಡತಿ ಪರಸ್ಪರ ದುಃಖವನ್ನು ವ್ಯಕ್ತಪಡಿಸಿಕೊಂಡು ತಮ್ಮ ಸ್ಥಿತಿಯ ಬಗ್ಗೆ ವ್ಯಥೆಪಡುತ್ತಾರೆ ವಿನಾ ಮಗ–ಸೊಸೆ ಇಬ್ಬರು ದೇವಮ್ಮಳನ್ನು ಎದುರಿಸಿ ನಿಲ್ಲಲು ಅಶಕ್ತರಾಗುತ್ತಾರೆ.

ಮುಂದೆ ಗಂಡ ಹೆಂಡತಿ ಪರಸ್ಪರ ನೀರು ಮಿಂದು, ಮಡಿಯುಟ್ಟು, ಊಟಮಾಡಿ ಅಂದವಾಗಿ ಪಗಡೆಯಾಡುತ್ತಾರೆ. ಆನಂದ ಪಡುತ್ತಾರೆ. ನಂತರ ಜಾಗಲೆಯನ್ನು ಅವಳ ಗಂಡ ರಂಗಯ್ಯ ಉದ್ದೇಶಿಸಿ ಈ ರೀತಿ ಹೇಳುತ್ತಾನೆ.

ಕೇಳಾಲ ಎಲೆ ಹೆಣ್ಣೆ
ದಂಡೀಗೆ ನಾನು ಹೋಯ್ತೀನಿ ಹೆಣ್ಣೆ
ಬಾಳ ಸುಖದಲ್ಲಿರಬೇಕು![೭೯] ಎಂದನು.

ಗಂಡನ ಮಾತಿಗೆ ಜಾಗಲೆ ಈ ರೀತಿ ಉತ್ತರ ಕೊಟ್ಟಳು. 'ನೀವೇನೂ ಹೋಯ್ತಿರೀಗ ನಾನು ಎಲ್ಲಿ ಇರಬೇಕು ಗುರುತು ಏನು ಕೊಡುತ್ತೀರಿ'[೮೦] ಎಂದು ಕೇಳಿದಾಗ ತನ್ನ ಕೈಲಿದ್ದ ಮುದ್ರೆ ಉಂಗುರವನ್ನು ಜಾಗಲೆಯ ಕೈಗೆ ತೊಡಿಸುತ್ತಾನೆ. ತೊಡಿಸುವಾಗ ಈ ರೀತಿ ಹೇಳುತ್ತಾನೆ. ಈ ಉಂಗುರ ಬಿದ್ದು ಹೋದರೆ; ನಿನ್ನ ಗಂಡ ಸತ್ತ ಅಂತ ತಿಳಿ; ನಿನ್ನ ಬೆರಳಿನಲ್ಲಿದ್ರೆ ಬದುಕಿದ್ದಾನೆ ಅಂತ ತಿಳಿ ಹೆಣ್ಣೆ ಎಂದು ಹೇಳಿ ಸುಖವಾಗಿರು ಎಂದು ಹಾರೈಸಿ, ದಂಡಿಗೆ ರಂಗಯ್ಯ ಹೋಗುತ್ತಾನೆ.

ತನ್ನ ತಾಯಿಯ ಬುದ್ದಿ ತಿಳಿದ ರಂಗಯ್ಯ ದಂಡಿಗೆ ಹೋಗುವಾಗ ತಾಯಿಗೆ ಬುದ್ಧಿ ಹೇಳುತ್ತಾನೆ. "ಕೇಳವ್ವ ನೀನು ದಂಡೀಗಾದರೆ ನಾನು ಹೋಯ್ತಿನಿ ನೀನು ತಂದ ಗೌಡತಿಯ ಬಾಳ ಸುಖದಲ್ಲಿ ಮಡಗವ್ವ" ಎಂದು ಕಳಕಳಿಯಿಂದ ತಾಯಿಯನ್ನು ಬೇಡಿಕೊಳ್ಳುತ್ತಾನೆ. ತಾಯಿ ದೇವಮ್ಮ ಮಗ ರಂಗಯ್ಯ ಅತ್ತ ದಂಡಿಗೆ ಹೋದ ಕೂಡಲೆ ತನ್ನ ಸೊಸೆ ಜಾಗಲೆಗೆ ಕೊಡುವ ಕಷ್ಟ ಹೇಳತೀರದು. ಜನಪದ ಶೈಲಿಯಲ್ಲಿಯೇ ನೋಡಿದರೆ ಆ ಕಷ್ಟ ಅರಿವಾಗುತ್ತದೆ.

ಒಂದು ಒಕ್ಕಳರಾಗಿಯ ನೀನು
ಒಂದೇ ವಬ್ಬೆಗೆ ಮಾಡ್ಹೆಣ್ಣೆ

ಒಂದು ಕೊಳಗ ಬತ್ತನಾದರೆ
ಒಂದೇ ವಚ್ಚೆಗೆ ಕುಟ್ಟಣ್ಣೆ.
ಏಳು ಹಟ್ಟಿ ಕಸವ ನೀನು
ಒಂದೇ ಬೊಗ್ಗಿಗೆ ಗುಡಿಸೆ ಹೆಣ್ಣೆ
ಏಳು ಹಟ್ಟಿ ಕಸವನಾದರೆ
ಒಂದೇ ಮಂಕ್ರಿಗೆ ತುಂಬ್ಹೆಣ್ಣೇ[೧೮] ಎಂದಳು

ಜಾಗಲೆ ಏಳು ಹಟ್ಟಿಯ ಕಸವನ್ನು ಗೂಡಿಸಿ, ಒಂದೇ ಮಂಕ್ರಿಗೆ ತುಂಬಿ ಮಂಕ್ರಿಯನ್ನು ಎತ್ತಲು ನಾದಿನಿಯನ್ನು ಕರೆಯುತ್ತಾಳೆ. ಇದಕ್ಕೆ ನಾದಿನಿ 'ನಿಮ್ಮಪ್ಪನ ಮನೆ ಹಾಳಾಗ್ಹೋಗ, ನಿಮ್ಮಪ್ಪನ ಹಟ್ಟಿ ಆಳೇನೆ? ಎನ್ನುತ್ತಾಳೆ. ಅಷ್ಟೇ ಅಲ್ಲದೆ ಅತ್ತೆ ತೂತು ಹರಬಿಯನ್ನು ಕೊಟ್ಟು ನೀರು ತರಬೇಕೆಂದು ಹೊಳೆಗೆ ಕಳಿಸುತ್ತಾಳೆ. ಆಗ ಶಿವಪಾರ್ವತಿಯರು ಪ್ರತ್ಯಕ್ಷವಾಗಿ ಗೋಳು ಕೇಳಿ ಅವಳನ್ನೂ ಸಂತೈಸಿ ಅವಳ ತೊಂದರೆಯನ್ನೂ ಪರಿಹರಿಸಿ ನೀರು ತುಂಬಿಸಿ ಮನೆಗೆ ಕಳಿಸುತ್ತಾರೆ.

ಹೊಳೆಯಿಂದ ನೀರುತೆಗೆದುಕೊಂಡು ಬಂದ ಜಾಗಲೆ ಭಾರವಾದ ಹರಬಿಯನ್ನು ಇಳಿಸಲಿಕ್ಕೆ ನಾದಿನಿಯನ್ನು ಕರೆಯುತ್ತಾಳೆ. ಆದರೆ ನಾದಿನಿ ಬಂದು ಇಳಿಸುವುದಿಲ್ಲ. ಅಲ್ಲೇ ಇದ್ದ ಮೈದನು ಹರಬಿಯನ್ನು ಇಳಿಸುತ್ತಾನೆ. ಇದನ್ನು ಕಂಡ ನಾದಿನಿ 'ಅತ್ತಿಗೆಯು ಅವಳ ಮೈದುನನಿಗೆ ಬಸುರಾಗಿದ್ದಾಳೆಂದು ಹಬ್ಬಿಸುತ್ತಾಳೆ.

ದಂಡಿಗ್ಹೋದ ರಂಗಯ್ಯ ಹೆಡ್ತಿ
ಮಯ್ದುನ್ನಾಗದರೆ ಬಸರಂತೆ!
ಅಂದು ಊರಲೆಲ್ಲಾ ಸಾರಳ್[೧೯]



ಹಸಿದ ಜಾಗಲೆಗೆ ಊಟಕ್ಕೂ ಸಹ ನೀಡುವುದಿಲ್ಲ. ಅಪರಾಧವನ್ನೂ ಹೊತ್ತ ಜಾಗಲೆ ಮನೆ ಬಿಟ್ಟು ಹೊಳೆ ದಂಡೆಗೆ ಹೋಗುತ್ತಾಳೆ. ಅಲ್ಲಿ ಶಿವ ಪಾರ್ವತಿಯರು ಪ್ರತ್ಯಕ್ಷಗೊಂಡು ಅವಳನ್ನು ಮುತ್ತಿನ ಅರಮನೆಯಲ್ಲಿ ಬಿಡುತ್ತಾರೆ. ಹೀಗೆಯೇ ಕಾಲಕಳೆದಂತೆ ಅವಳಿಗೆ ಗಂಡುಮಗು ಜನನವಾಗುತ್ತದೆ. ಹೀಗೆ ಕಥನಗೀತೆಯಲ್ಲಿ ಜಾಗಲೆ ಪಾತ್ರ ತುಂಬ ಕಷ್ಟನೋವುಗಳನ್ನು ಅನುಭವಿಸಿ ಅಂತ್ಯದಲ್ಲಿ ಸುಖವನ್ನು ಕಾಣುತ್ತಾಳೆ.

**೬. ಕಲಿಯುಗದ ಬಾಲೆ**

ಈ ಕಥನಗೀತೆಯಲ್ಲಿ 'ಕಲಿಯುಗದ ಬಾಲೆ' ಚಾರಿತ್ರ್ಯಹೀನವಾಗಿ ಬದುಕುವ ಹೆಣ್ಣೊಬ್ಬಳನ್ನು ಕುರಿತ ಕಥೆಯಾಗಿದೆ. ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಚಾರಿತ್ರ್ಯಹೀನರಾಗಿ ಬದುಕುವ ಹೆಣ್ಣನ್ನು ಇಂದಿನ ವಾಸ್ತವ ಜಗತ್ತಿನಲ್ಲಿ ಕಾಣಬಹುದು. ಕಥನಗೀತೆಯ ಪ್ರಾರಂಭದಲ್ಲಿ ತ್ರಿಪದಿಯೊಂದಿಗೆ ಜಾತಿಯ ಪರಿಚಯವನ್ನು ಜನಪದರು ಪರಿಚಯಿಸುತ್ತಾರೆ.

ಕಲಿಯುಗದೊಳಗೆ ಕರ್ಮ ಹೆಚ್ಚಿತು ತಿಳಿದು ನೋಡಿರಣ್ಣಾ
ಇಂತಹ ನೆಲೆಯಿಲ್ಲದ ನಾರಿಯ ನೆಚ್ಚಿದರೆ ಬಾಯಲ್ಲಿ ಮಣ್ಣಾಣ್ಣಾ
ಶಿವ! ಶಿವ! ತಲೆ ಮೇಲೆ ಕಲ್ಲಣ್ಣಾ[೪೩]

ತೇತ್ರಾ, ದ್ವಾಪರ ಯುಗದ ನಂತರ ಕಲಿಯುಗ. ಈ ಕಲಿಯುಗದಲ್ಲಿ ಅನರ್ಥಗಳು ಉದ್ಭವಿಸಿವೆ. ಒಂದು ಕಾಲದಲ್ಲಿ ಪಾತಿವ್ರತ್ಯ ಧರ್ಮವೇ ತನ್ನ ಸರ್ವಸ್ವವೆಂದು ಪಾಲಿಸುತ್ತಾ ಬಂದಿರುವ ಸ್ತ್ರೀಯರನ್ನು ಕಾಣಬಹುದು. ಆದರೆ ಕಲಿಗಾಲಕ್ಕೆ ತಕ್ಕಂತೆ ಅಲ್ಲೊಬ್ಬ ಇಲ್ಲೊಬ್ಬ ಸ್ತ್ರೀಯರು, ವ್ಯವಸ್ಥೆಯಿಂದ ಕೂಡಿದ ನೆಲೆಯಲ್ಲಿದ್ದರೂ, ತನ್ನದೆ ಆದ ವಿಕೃತಕಾಮದ ನೆಲೆಯಿಂದ, ರೀತಿ, ನೀತಿಯಿಲ್ಲದೆ ಬಾಳುತ್ತಿರುವುದನ್ನು ಕಂಡ ಕವಿ ಇಂತಹ ಕುಟಿಲತೆ ಹೆಂಗಸನ್ನು ನಂಬಿದರೆ 'ಬಾಯಲ್ಲಿ ಮಣ್ಣಾಣ್ಣಾ ತಲೆ ಮೇಲೆ ಕಲ್ಲಾಣ್ಣಾ' ಎಂದು ಎಚ್ಚರಿಸುತ್ತಾನೆ.

ಕಲಿಯುಗದ ಬಾಲೆ ಆರುಮಂದಿ ಅಕ್ಕತಂಗಿಯರಲ್ಲಿ ಇವಳೇ ಕಿರಿಯವಳು. ಇವಳಿಗೆ ದೇವರ ವರ ಪ್ರಸಾದದಿಂದ ಮುದ್ದಾದ ಎರಡು ಗಂಡುಮಕ್ಕಳು. ಒಳ್ಳೆಯಗಂಡ. ಮನೆ, ಸಂಸಾರ ಎಲ್ಲವು ಇತ್ತು. ಗಂಡ ಸಿಪಾಯಿ ಒಮ್ಮೆ ದಂಡಿಗೆ ಹೋಗಬೇಕಾದ ಪ್ರಸಂಗ ಬಂದಿತು. ದಂಡಿಗೆ ಹೋದ ಮೇಲೆ. ಇತ್ತ ಕಲಿಯುಗದ ಬಾಲೆ ತನ್ನ ಗಂಡ ಮಕ್ಕಳ ಬಗ್ಗೆ ಕಿಂಚಿತೂ ಯೋಚಿಸದೆ ಬೇರೊಬ್ಬನನ್ನು ಸೇರಲು ಬಾಲೆ ಇಷ್ಟಪಡುತ್ತಾಳೆ. ಸುಂದರವಾಗಿ ಶೃಂಗರಿಸಿಕೊಂಡು ಆನಂದವಾಗಿ ಇರುತ್ತಾಳೆ. ಈ ಗಂಧ, ಕಸ್ತೂರಿ, ಪುನುಗು, ಜವ್ವಾಜಿ, ಲೇಪುಮಾಡಿಕೊಂಡು ನೀರಿಗೆ ಹೋಗುತ್ತಾಳೆ. ಹೋಗುವ ದಾರಿಯಲ್ಲಿ ರಾಮನು ಇವಳನ್ನು ಮಾತನಾಡಿಸುತ್ತಾನೆ. ಮಾತನಾಡಿಸಿದ ಕೂಡಲೆ ಬಾಲೆ ನನ್ನ ಗಂಡ ದಂಡಿಗೆ ಹೋಗಿದ್ದಾನೆ. ಸಂಜೆಗೆ ಬಾ ಗೆಣೆಯಾ ಸಂಜೆ ಮನೆಗೆ ಬಾ ಗೆಣೆಯಾ ಎಂದು ಹೇಳುವಂತಹ ರೀತಿ ನಿಜವಾಗಿಯೂ ಕಲಿಯುಗಕ್ಕೆ ಪೂರಕವಾದಂತಿದೆ ಎನ್ನಬಹುದು.

ಹೆಣ್ಣೆ ಮನೆಗೆ ಕರೆದ ಮೇಲೆ ಗಂಡು ಹಿಂದೆ ಮುಂದೆ ಆಲೋಚಿಸದೆ ಬಂದ. ಬಂದವನಿಗೆ ಸ್ನಾನಮಾಡಿಸಿ. ಹಲವಾರು ಸಿಹಿ ಅಡುಗೆಮಾಡಿ ಉಣಬಡಿಸುತ್ತಾಳೆ. ಮಂಚದ ಮೇಲೆ ಕುಳಿತು ಸರಸವಾಡುತ್ತಾಳೆ. ಅದೇ ಸಮಯಕ್ಕೆ ಸೂರ್ಯಚಂದ್ರ, ಹರಿಶ್ಚಂದ್ರ ಮಕ್ಕಳು ತಾಯಿ ಇನ್ನೊಬ್ಬನ ಜೊತೆ ಸರಸವಾಡುತ್ತಿರುವುದನ್ನು ಕಂಡು ಮಕ್ಕಳು ತಾಯಿಗೆ ಹೇಳುತ್ತಾರೆ. ಅಪ್ಪ ಬಂದು ಮೇಲೆ ವಿಷಯವನ್ನು ತಿಳಿಸುತ್ತೇವೆ ಎಂದು. ಈ ರೀತಿ ಪ್ರಶ್ನಿಸಿದ್ದಕ್ಕಾಗಿ ಅವರಿಬ್ಬರನ್ನು ನೂಲಿನಿಂದ ಕಟ್ಟಿಹಾಕಿ ಕುತ್ತಿಗೆ ಹಿಸುಕಿ ಸಾಯಿಸುತ್ತಾಳೆ. ನಂತರ ಅವರನ್ನು ಬುಟ್ಟಿಯಲ್ಲಿ ತುಂಬಿ ಕೊಟ್ಟಿಗೆಗೆ ಹಾಕುತ್ತಾಳೆ. ತಾಯಿಗೆ ಕನಿಕರ ಬರುವುದಿಲ್ಲ. ಎಷ್ಟಾದರು ಕಲಿಯುಗದ ಬಾಲೆ ಅಲ್ಲವೇ. ಗೆಳೆಯನ ಜೊತೆ ಸರಸವಾಡುತ್ತಾಳೆ. ಮುಂದೆ ಸತ್ತ ಮಕ್ಕಳು ಅಪ್ಪನ ಸ್ವಪ್ನಕ್ಕೆ ಹೋಗಿ ನಡೆದ ವಿಚಾರವನ್ನೆಲ್ಲಾ ಹೇಳುತ್ತಾರೆ. ಸಿಪಾಯಿ ದಂಡು ಮುಗಿಸಿ ಮನೆಗೆ ಹಿಂತಿರುಗುತ್ತಾನೆ. ತನ್ನ ಮಕ್ಕಳು ಎಲ್ಲಿ ಎಂದು ಪ್ರಶ್ನಿಸಿದ್ದಕ್ಕಾಗಿ.

ಆರು ಕಾಸಿನ ಪಾಷಾಣ ತಂದು–ಅನ್ನಕ್ಕೆ ಬೆರಸಿ ಗಂಡನಿಗೆ ಊಟ ಮಾಡಿಸುತ್ತಾಳೆ. ಕೆಲವೇ ನಿಮಿಷದಲ್ಲಿ ಗಂಡನಿಗೆ ಕಣ್ಣುಕಾಣದೆ, ಮಾತು ತೊದಲುತ್ತವೆ. ಚಳಿಜ್ವರ ಬರುತ್ತವೆ. ಈಗೆ ಸತ್ತಮಕ್ಕಳ ವಿಷಯವನ್ನು ಕೇಳುತ್ತಾನೆ. ಮಕ್ಕಳ ಸತ್ತ ವಿಷಯ ಗೊತ್ತಾಗಿದೆ ಎಂದು ಆ ಮಕ್ಕಳನ್ನು ನಾನುಕೊಂದ ಎಂದು ಮನವರಿಕೆಯಾದ ಕೂಡಲೆ ಇವನನ್ನು ಕೊಟ್ಟಿಗೆಗೆ ಹಾಕಿ ಬೆಂಕಿ ತಂದು ಹಾಕುತ್ತಾಳೆ. ಬೆಂಕಿಗೆ ಆಹುತಿ ಆದರು ಎಂದು ಜನರನ್ನು ನಂಬಿಸುತ್ತಾಳೆ. ಆದರೆ ಜನ ನಂಬಿದರೂ ಕೂಡ ಸತ್ಯಾನುಸತ್ಯತೆಯನ್ನೂ ಆ ದೇವರು ಬಿಡಲು ಸಾಧ್ಯವಿಲ್ಲ.

ಕಲಿಯುಗದ ಬಾಲೆಯ ದುರ್ವವರ್ತನೆಯನ್ನು ಕಂಡ ಶಿವ, ಸತ್ಯವಂತ ಸಿಪಾಯಿಯನ್ನು ಅವನ ಮಕ್ಕಳನ್ನೂ ಬದುಕಿಸಿದ. ಕರ್ಮಿನಾರಿ ಇರಬಾರದೆಂದು ಸುಣ್ಣದ ಗುಂಡಿಗೆ ಹಾಕಿ ಜೀವ ಸಹಿತ ಸುಟ್ಟುಹಾಕಿದ. ಜನಪದ ಕವಿಯ ಮಾತು ನಿಜ ಕಲಿಯುಗವೆಂದರೆ ಎಲ್ಲ ಪಾಪ ಕರ್ಮಗಳಿಗೂ ತಾಣವಾಗಿದೆ. ಕಲಿಯುಗದ ಬಾಲೆಯಾದ ಸ್ತ್ರೀಯರು ಇದ್ದೆ ಇರುತ್ತಾರೆ. ಅದರಲ್ಲೂ ಕಾಮಕ್ಕೆ ಬಲಿಯಾದ ಹೆಂಗಸು ಅಥವಾ ಗಂಡಸು ಏನನ್ನಾದರೂ ಮಾಡಿದರೆ, ಅವನನ್ನು ನಮ್ಮ ಸಮಾಜ ಗುರುತಿಸುವುದಿಲ್ಲ. ಆದರೆ ಸ್ತ್ರೀ ಎಂದಾದರೂ ಇಂಥ ಅಪವಿತ್ರ ಕೆಲಸ ಮಾಡಿದರೆ ಮುಗಿಯಿತು. ಅವಳು ಜಾನಪದ, ಶಿಷ್ಟಕಾವ್ಯ, ಕಥೆ ಕಾದಂಬರಿ, ಪತ್ರಿಕೆ, ಟಿ.ವಿ.ಗಳಲ್ಲಿ ಹೆಚ್ಚಾಗಿ ಪ್ರಸಾರವಾಗಿಬಿಡುತ್ತಾಳೆ. ಇದಕ್ಕೆ ಕಾರಣ ನಮ್ಮ ಸಂಸ್ಕೃತಿಯ ಪರಂಪರೆಯಲ್ಲಿ ಇಂಥ ಕಲಿಯುಗ ಬಾಲೆಯಂಥ ಸ್ತ್ರೀಯರು ಬಹಳ ಅಪರೂಪವಾಗಿರುತ್ತಾರೆ. ನಮ್ಮ ಜನಪದ ಗರತಿಯರಲ್ಲಿ ಬಹುಮಟ್ಟಿಗೆ ತ್ಯಾಗವನ್ನು ಹೆಚ್ಚು ಕಾಣುತ್ತೇವೆ. ಜನಪದರು ಹೇಳುವ 'ಕಲಿಯುಗದಲ್ಲಿ ಕರ್ಮ ಹೆಚ್ಚಿತು; ಇಂತಹ ನೆಲೆಯಿಲ್ಲದ ನಾರಿಯ ನೆಚ್ಚಿದರೆ ಬಾಯಲ್ಲಿ ಮಣ್ಣಾಣ್ಣಾ'[೪೪] ಎನ್ನುತ್ತಾರೆ. ಇಲ್ಲಿ ಲೈಂಗಿಕ ಅತೃಪ್ತಿಯನ್ನು ಹಾಗೂ ವಿಕೃತ ಕಾಮವನ್ನು ಹೆಣ್ಣೊಬ್ಬಳಲ್ಲಿ ಕಾಣಬಹುದು.

### ೫.೩. ರಮ್ಯ ಕಥನಗೀತೆಗಳಲ್ಲಿ ಮಹಿಳೆ

#### ೧. ಕಾಡಸಿದ್ದಮ್ಮ

ಕಾಡಸಿದ್ದಮ್ಮ ಕಥನಗೀತೆಯು ಕೆರೆಪಾಲಾದವರಲ್ಲಿ ಅತ್ಯಂತ ಜನಪ್ರಿಯದ ಕಥೆಯಾಗಿದೆ. ಈ ಕಥೆ ಹಾಡುವುದರಿಂದ ಪುಣ್ಯಪ್ರಾಪ್ತವಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಕಥೆ ವಿಸ್ತಾರವಾಗಿ ರುವುದರಿಂದ ಇಡೀದಿನ ರಾತ್ರಿ ಹಾಡುತ್ತಾರೆ. ಈ ಕಥನಕದಲ್ಲಿ ಸೊಟಗಕ್ಕೆ ಪುಣ್ಯದ ಲಕ್ಷ್ಮೀಯಾಗಿ ಪರಿಣಮಿಸಿದ್ದಾಳೆ. ಇಲ್ಲಿ ಮುರಿದ ಸೌಟಿನಿಂದ ಕಥೆ ಪ್ರಾರಂಭಗೊಂಡು ಮುರಿದ ಸೌಟನ್ನು ತಿಪ್ಪಿಗೆ ಎಸೆದಿರುತ್ತಾರೆ. ಅದು ದುಃಖ ಮಾಡುತ್ತಾ ಶಿವ ಪಾರ್ವತಿಯರನ್ನು ಬೇಡಿಕೊಳ್ಳುತ್ತದೆ. ದೇವರ ದಯೆಯಿಂದ ಆ ಮುರಿದ ಸೌಟು ಒಂದು ಹೆಣ್ಣಾಗುತ್ತದೆ. ರಾಜನೊಬ್ಬ ಆ ಹೆಣ್ಣನ್ನು ವಿವಾಹ ವಾಗುತ್ತಾನೆ. ಆ ರಾಜನಿಗೆ ಈಗಾಗಲೆ ಮೂವರು ಹಿರಿಯರಾಣಿಯರಿರುತ್ತಾರೆ. ಕಾಲಾಂತರದಲ್ಲಿ ಸೊಟಗಕ್ಕ ಗರ್ಭವತಿಯಾಗಿ ಮೂರು ಮಕ್ಕಳ ತಾಯಿಯಾಗುತ್ತಾಳೆ. ಇದನ್ನು ನೋಡಿದ ಹಿರಿಯ ರಾಣಿಯರು ಆ ಮೂರು ಮಕ್ಕಳನ್ನು ಹಗೇವಿಗೆ ಹಾಕಿ ಕಲ್ಲು ಮುಚ್ಚಿಬಿಡುತ್ತಾರೆ. ಸೊಟಗಕ್ಕ ಮೂರು ಇಟ್ಟಿಗೆಯನ್ನು ಹೆತ್ತಳು ಎಂದು ಇಟ್ಟಿಗೆ ತೋರಿಸಿ ರಾಜನಿಗೆ ಸುಳ್ಳು ಹೇಳುತ್ತಾರೆ. ಇಲ್ಲಿ

ಗಮನಿಸಬಹುದಾದ ಮುಖ್ಯ ಅಂಶವೆಂದರೆ ಹೆಣ್ಣಿಗೆ ಹೆಣ್ಣು ಶತ್ರುವೆಂಬುದು ಈ ಕಥನಗೀತೆಯ ಪಾತ್ರಗಳೇ ಸಾಕ್ಷಿಯಾಗಿವೆ.

ಹೀಗೆ ಕಾಲ ಕಳೆದ ನಂತರ ಹಿರಿಯ ರಾಣಿಯರು ಹಗೇವು ಬಳಿಬಂದು ನಿಂತಾಗ ಹಗೇವಿನಿಂದ ಮಕ್ಕಳ ಕಿಲಕಿಲ ಕಲರವ ಶಬ್ಧಕೇಳಿ ಮಕ್ಕಳು ಇನ್ನೂ ಬದುಕಿದ್ದಾರೆ ಎಂದು ಆಶ್ಚರ್ಯಪಡುತ್ತಾರೆ. ಮೂಗುನೋವು ಎಂದು ಕುಂಟುನೆಪ ಒಡ್ಡಿ ರಾಜನಿಗೆ ತಮ್ಮ ಕಾಯಿಲೆ ವಾಸಿಯಾಗಬೇಕಾದರೆ ಹಗೇವನ್ನು ಕಡಿಸಬೇಕೆಂದು ರಾಜನಲ್ಲಿ ಪರಿಪರಿಯಾಗಿ ಬೇಡಿಕೊಳ್ಳುತ್ತಾರೆ. ರಾಜ ಅವರ ಬೇಡಿಕೆಗೆ ಮನಸೋತು ಆ ಹಗೇವನ್ನು ಕಡಿಸುತ್ತಾನೆ. ಆಗ ಹಗೇವು ಮಕ್ಕಳನ್ನು ಪಟ್ಟಣದ ಆನೆಗೆ ಕೊಟ್ಟಿತು. ಅದು ಕೆಲದಿನ ಮಕ್ಕಳನ್ನು ಸಾಕಿತು.

ಹೇಗೋ ಆನೆಯ ಹತ್ತಿರ ಇರುವ ಮಕ್ಕಳ ವಿಷಯ ರಾಣಿಯರಿಗೆ ಗೊತ್ತಾಗುತ್ತದೆ. ನಂತರ ಆ ಆನೆಯನ್ನು ಕೊಲ್ಲಿಸುತ್ತಾರೆ. ಮುಂದೆ ಆನೆಯು ಹಸುವಿಗೆ ಮಕ್ಕಳನ್ನು ನೀಡಿತು. ಹಸುವು ಕೆಲವುದಿನ ಮಕ್ಕಳನ್ನು ಸಾಕಿ ತಾನೂ ಬಲಿಯಾಯಿತು. ಮುಂದೆ ತಿಪ್ಪೆಸಾಕಿ, ಹೂ ಮಾರುವವನಬಳಿ ಕೊಟ್ಟಿತು. ಮಕ್ಕಳಿಲ್ಲದ ಹೂ ಮಾರುವವನು ಚೆನ್ನಾಗಿ ಸಾಕಿ ದೊಡ್ಡವರನ್ನು ಮಾಡಿದ. ಅವರಲ್ಲಿ ಕೊನೆಯ ಮಗು ಹೆಣ್ಣು ಮಗುವಾಗಿತ್ತು. ಮುಂದೆ ಆ ಹೆಣ್ಣು ಮಗುವಿನ ಕೈಯಲ್ಲಿ ಈಶ್ವರ ನಿಂಬೆಹಣ್ಣನ್ನು ಕೊಟ್ಟನು. ಆ ನಿಂಬೆಹಣ್ಣನ್ನು ಕುರಿತು ನೋಡುತ್ತಾ ಹೆಣ್ಣಮಗು ತಮ್ಮ ಕತೆಯನ್ನೆಲ್ಲಾ ರಾಜನಿಗೆ ಹೇಳಿತು. ಆ ಕತೆಯನ್ನು ಕೇಳಿದ ರಾಜನಿಗೆ ಎಲ್ಲಾ ವಿಷಯ ತಿಳಿದು, ಅವಳೇ ತಾಯಿ ಇವರೇ ಮಕ್ಕಳಾದರೆ, ಮಕ್ಕಳು ಕುಡಿವ ಎದೆಹಾಲು ಹೊಟ್ಟೆಮೇಲಾಗಿ ಹರಿಯಲಿ ಎಂದ ರಾಜ. ಅದರಂತೆ ಹಾಲು ಹರಿಯಿತು, ಆಗ ರಾಜನಿಗೆ ಹಿರಿಯ ರಾಣಿಯರ ಕುತಂತ್ರ ಗೊತ್ತಾಗಿ, ಅವರ ಮೇಲೆ ಬೇಸರವಾಗಿ ಅವರ ತಲೆ ಕಡಿಸಿದ. ಮುಂದೆ ಸೊಟಗಕ್ಕ ಮತ್ತು ತನ್ನ ಮೂರು ಮಕ್ಕಳೊಡನೆ ಸುಖವಾಗಿ ಬಾಳಿದಳು.

ಇದೇ ಕಥಾವಸ್ತುವನ್ನು ಒಳಗೊಂಡ ಕಾಡುಸಿದ್ಧಮ್ಮನ ಕಥೆಯ ಇನ್ನೊಂದು ರೂಪ ಪುಣ್ಯದಲಕ್ಷ್ಮಿ ಎಂಬ ಕಥೆ. ಈ ಕಥೆಯಲ್ಲಿ ಆರಂಭದ ಘಟನೆ ಬದಲಾಗಿದೆ. ಈ ತರಹದ ಕಥೆಯು ತೆಲುಗು, ಜಂಗಮರ ಕಾವ್ಯಗಳಲ್ಲಿ ಸಾಕಷ್ಟು ದೀರ್ಘವಾಗಿಯೇ ಇದೆ. ಹಾಗೆಯೇ ತಂಬೂರಿಯವರಲ್ಲಿಯೂ ಈ ಕಥೆ ಸಾಕಷ್ಟು ಪರಿಣಾಮಕಾರಿಯಾಗಿ ಮೂಡಿಬಂದಿದೆ. ಆದರೆ ಕಥೆಯಲ್ಲಿ ಸಾಕಷ್ಟು ಬದಲಾವಣೆಯನ್ನು ಮಾಡಿಕೊಂಡಿದ್ದಾರೆ. ಹೀಗೆ ಕಾಡಸಿದ್ಧಮ್ಮ ಸಾಕಷ್ಟು ಹಿರಿಯ ರಾಣಿಯರಿಂದ ನೋವು ಕಷ್ಟ ಅನುಭವಿಸಿ, ದೇವರ ಸಂಕಲ್ಪದಿಂದ ಕೊನೆಯಲ್ಲಿ ಸುಖಾಂತ್ಯ ಹೊಂದಿದ್ದಾಳೆ.

ಕಾಡಸಿದ್ಧಮ್ಮಳ ಕಥೆಯನ್ನು ಡಾ. ಜೀಶಂಪ ಅವರು 'ಜನಪದ ಕಾವ್ಯ ಕಥೆಗಳು' ಕೃತಿಯಲ್ಲಿ ತಂದಿದ್ದಾರೆ. ಅತ್ಯಂತ ಚಿಕ್ಕ ಕಾವ್ಯವಾದರೂ ಅದು ಒಂದು ಪೂರ್ಣ ಪಾಠವಾಗಿದೆ. ರಾಜನ ಹಿರಿಯ ರಾಣಿಯರಿಗೆ ಮಕ್ಕಳಾಗದೇ ಇರುವಾಗ ಬೇರೊಂದು ಹೆಣ್ಣು ತರುವಾಗ ಹೋಗುವಾಗ ರಾಣಿಯರು ಅವನಿಗೆ ಸಹಕರಿಸುವುದಿಲ್ಲ. ಬಂಜೆಯಾಗಿದ್ದರೂ ಸರಿಯೇ ಸವತಿ ಬೇಡ ಎಂದರು. ಆದರೂ ರಾಜ ವಂಶಾಭಿವೃದ್ಧಿಗಾಗಿ ಮದುವೆಯಾಗುವ ಹಠಮಾತ್ರ ಬಿಡಲಿಲ್ಲ. ವಿವಾಹವಾಗುತ್ತಾನೆ.

ಇಲ್ಲಿ ರಾಜ ಚದುರಂಗರಾಯನಾಗಿರುತ್ತಾನೆ. ಮುಂದೆ ಮೂರು ಮಕ್ಕಳಾಗುತ್ತದೆ. ಸೂಲಗಿತ್ತಿ ಹಣದ ಆಸೆಗಾಗಿ ಮಕ್ಕಳ ಬದಲಾಗಿ ಇಟ್ಟಿಗೆ ತೋರಿಸುವಂತದ್ದು. ಹೀಗೆ ಕಥೆ ಮುಂದೆಸಾಗಿ ಕೊನೆಯಲ್ಲಿ ಸುಖಾಂತ್ಯ ಕಾಣುತ್ತದೆ.

ಕಥನಗೀತೆಯ ಚೌಕಟ್ಟಿನಲ್ಲಿ ಪ್ರಧಾನವಾಗಿ ಮೂರು ಮುಖ್ಯ ವಾಸ್ತವಿಕ ಅಂಶಗಳನ್ನು ಗುರುತಿಸಬಹುದು. ಸವತಿ ಮಾತ್ಸರ್ಯ, ಬಂಜೆತನ, ಕೌಟುಂಬಿಕ ಕಷ್ಟ ಪರಂಪರೆಗಳು.

**೨. ಬಾಲನಾಗಮ್ಮ ಅಥವಾ ನಾಗರಗನ್ನೆ**

ಈ ಕಥನಗೀತೆಯು ಕರ್ನಾಟಕ ಹಾಗೂ ಆಂಧ್ರಪ್ರದೇಶದಲ್ಲೂ ಸಾಕಷ್ಟು ಪ್ರಸಿದ್ಧಿಯಾಗಿದೆ. ಈ ಕಥೆ ವೃತ್ತಿಗಾಯಕರಲ್ಲಿ ದೊಡ್ಡಕಾವ್ಯವಾಗಿ ರೂಪುಗೊಂಡಿದ್ದರೆ, ಸಾಮಾನ್ಯ ಗಾಯಕರಲ್ಲಿ ಕಿರು ಕಾವ್ಯವಾಗಿ ಉಳಿದಿದೆ. ಅನೇಕ ಸಂಗ್ರಹಕಾರರು ಈ ಕಥೆಯನ್ನು ಸಂಗ್ರಹಿಸಿದ್ದಾರೆ. ಕಥಾಂಶವೆಲ್ಲಾ ಒಂದೇಯಾಗಿದ್ದು, ಕಥೆಯ ಪ್ರಾರಂಭ ಹಾಗೂ ಬೆಳವಣಿಗೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವನ್ನು ಕಾಣಬಹುದು.

ಬಾಲನಾಗಮ್ಮ ನಾಗೇಂದ್ರನ ವರಪ್ರಸಾದದಿಂದ ಹುಟ್ಟುವುದು. ಬಾಲನಾಗಮ್ಮನ ಮಗ ನಾಗೇಂದ್ರನ ವರಪ್ರಸಾದಿಂದ ಹುಟ್ಟುವುದು ಮುಂದೆ ಜೋಗಿ ಮಾಯಾದ ಬೂದಿ ಎರಚಿ, ಮಾಯಾದ ಕಪ್ಪುಸವರಿ ಬಾಲನಾಗಮ್ಮನನ್ನು ನಾಯಿಯನ್ನಾಗಿ ಮಾಡಿ ಕೊಂಡು ಹೋಗುವುದು. ಈ ಕಥನಕದಲ್ಲಿ ಕಂಡು ಬರುತ್ತದೆ. ಬಾಲನಾಗಮ್ಮನ ಮಗ ಬಾಲರಾಮಣನಿಗೆ ಸಮುದ್ರ ಭಾಗವಾಗಿ ದಾರಿತೋರುವುದು. ಆಲದಮರ ಭಾಗವಾಗಿ ಕರಬಾನದಲ್ಲಿರುವ ಗಿಣಿಯನ್ನು ಕೊಡುವುದು. ಅಂತಹ ಗಿಣಿಯಲ್ಲಿ ಜೋಗಿಯ ಜೀವ ಅಡಗಿರುವುದು ಒಂದು ಅದ್ಭುತವಾಗಿದೆ. ನಾಗರಗನ್ನೆ ಅಗ್ನಿ ದಿವ್ಯೆ ಯಾದಾಗ ಅವಳನ್ನು ಅಗ್ನಿ ಸುಡದಿರುವುದು ಮತ್ತೊಂದು ಪವಾಡವೇ ಸರಿ. ಕಲ್ಲಾಗಿದ್ದ ಅವನ ತಂದೆ ದೊಡ್ಡ ಅಪ್ಪಂದಿರನ್ನು ಬಾಲರಾಮಣ್ಣ ಬದುಕಿಸುವುದು. ಹೀಗೆ ಹತ್ತಾರು ಅತಿಮಾನುಷ ಘಟನೆಗಳು ಬಾಲನಾಗಮ್ಮಳ ಕಾವ್ಯದಲ್ಲಿ ಗುರುತಿಸಬಹುದು.



**೩. ನೀಲವೇಣಿ**

ನೀಲವೇಣಿ ಕಥನಗೀತೆಯು ಚಂಪೂರೂಪದಲ್ಲಿ ರಚಿತವಾಗಿರುವ ನೀಲವೇಣಿಯ ಕಥೆ ಗದ್ಯಕ್ಕಿಂತ ಪದ್ಯದ ಪ್ರಚಾರವೇ ಹೆಚ್ಚಾಗಿ ಪಡೆದಿದೆ. ಪದ್ಯದ ಪ್ರಾರಂಭದ ಗೀತೆ ಅಲ್ಲಿಯ ರಾಜ, ರಾಣಿ, ಮಗನ ವಿಚಾರ. ಮಗನಿಗೆ ಒಡಹುಟ್ಟಿಲ್ಲ ಎಂಬ ತವಕ ಕೇಳಿಬರುತ್ತದೆ ಎಂಬುದನ್ನು ಈ ಕೆಳಗಿನ ಸಾಲಿನಲ್ಲಿ ಕಾಣಬಹುದು.

ಕಮಲಾವತಿ ಎಂಬುದು ಪಟ್ಟಣ
ಅಯ್ಯ ಕಂಪಿಲ ದೊರೆರಾಯನೆ

ಮಡದಿ ಹೆಸರು ಹರಿಯಾಲ ದೇವಮ್ಮ
ಮಗನ ಹೆಸರು ಸೀತಾಳ ರಾಮಯ್ಯ
ಮಗನ ಒಡಹುಟ್ಟಿಲ್ಲ ಎನುತಂದು
ಅತ್ತುತ್ತು ದುಃಖ ಮಾಡುತ್ತಾಳಲ್ಲ"

ಹೀಗೆ ನೇರವಾಗಿ ಕಥೆಯನ್ನು ಆರಂಭಿಸುವ ಕತೆಗಾರರು, ಕತೆಯ ಬೆಳವಣಿಗೆಗೆ ಯಾವ ಸಮಸ್ಯೆಯನ್ನೂ ಪ್ರಧಾನವಾಗಿ ಎತ್ತಿಕೊಳ್ಳುತ್ತಾರೆ ಎಂಬುದು ಆರಂಭದ ಸಾಲುಗಳಲ್ಲಿ ಗೊತ್ತಾಗುತ್ತದೆ.

'ಮಗನಿಗೆ ಒಡಹುಟ್ಟಿಲ್ಲ' ಎಂದು ದುಃಖ ಮಾಡುವರಾಣಿ ಹರಿಯಾಲ ದೇವಮ್ಮ ಪಾರ್ವತಿ ದೇವಿಯನ್ನು ಕುರಿತು 'ಹೆಣ್ಣು ಮಗಳ ವರವ ಪಾಲಿಸು' ಎಂದು ಕಾಡಿನಲ್ಲಿ ಉಗ್ರವಾದ ತಪಸ್ಸು ಮಾಡುತ್ತಾಳೆ. ಇದನ್ನು ಗಮನಿಸಿದಾಗ ಹೆಣ್ಣಿನ ವೇದನೆ ಏನು ಎಂಬುದು ಗೊತ್ತಾಗುತ್ತದೆ. ಗಂಡು ಹಡೆಯುವುದರ ಜೊತೆಗೆ ಹೆಣ್ಣು ಹಡೆಯುವುದು ಮುಖ್ಯ ಎಂಬುದನ್ನು ಇಲ್ಲಿ ಜನಪದರು ಎತ್ತಿಹೇಳಿದ್ದಾರೆ ಅವಳ ತಪಸ್ಸಿನ ಪ್ರತಿಫಲವಾಗಿ ಪ್ರಸನ್ನಳಾದ ಪಾರ್ವತಿದೇವಿ ಈ ರೀತಿ ಹೇಳಿದಳು.

ಹೆಣ್ಣು ಮಗಳವರವ ಕೊಟ್ಟರೆ
ಅಮ್ಮ ಮಂಡೆ ಕಟ್ಟಿದರೆ ತಂದೆ ಮರಣವು
ಸೀರೆ ಉಟ್ಟರೆ ತಾಯಿಗೆ ಮರಣವು
ನಿನಗೆ ಹೆಣ್ಣು ಬೇಕೋ ಗಂಡ ಬೇಕಮ್ಮ" ಎಂದಳು

ಪಾರ್ವತಿದೇವಿ ಹೇಳಿದ ಮಾತಿಗೆ ಹರಿಯಾಲ ದೇವಮ್ಮ ತನ್ನ ಹಠಬಿಡದೆ ನಾನು ಮಡಿದರೂ ಸರಿಯೇ ನನ್ನ ಗಂಡ ಮಡಿದರು ಸರಿಯೇ ನನ್ನ ಮಗನಿಗೆ ಒಡಹುಟ್ಟುಬೇಕಮ್ಮ ದಯಪಾಲಿಸಿ ಎಂದು ಬೇಡಿದಳು. ಆ ಪಾರ್ವತಿಯ ವರಪ್ರಸಾದದಿಂದ ನೀಲವೇಣಿಯ ಜನನ ವಾಗುತ್ತದೆ. ನೀಲವೇಣಿಯು ಬಾಲ್ಯದಲ್ಲಿ ಬೆಳೆದು ದೊಡ್ಡವ ಳಾಗುತ್ತಾಳೆ. ಆದರೆ ಉಪಧ್ಯಾಯನೊಬ್ಬನ ಕುತಂತ್ರಕ್ಕೆ ಒಳಗಾಗಿ ಕಾಡುಪಾಲಾಗಿ ಪಡಬಾರದಕಷ್ಟ ಪಡುತ್ತಾಳೆ. ನಂತರದಲ್ಲಿ ರಾಜನೊಬ್ಬನನ್ನು ಕೈಹಿಡಿದು ಸುಖ ವಾಗಿರುವುದು ಸೋಜಿಗದ ಸಂಗತಿ. ಅದಾದ ಮೇಲೆ ಮಂತ್ರಿ ಕುಮಾರನೊಬ್ಬನ ಕಾಮುಕ ದೃಷ್ಠಿ ಅವಳಮೇಲೆ ಬಿದ್ದು, ಮತ್ತಷ್ಟು ಕಷ್ಟ ಅನುಭವಿಸುವುದು, ಪತಿಯಿಂದ ಬೇರೆಯಾಗಿ ನೀಲವೇಣಿ ಹಡೆದ ಶಿಶುವನ್ನು ಕಳೆದುಕೊಳ್ಳುತ್ತಾಳೆ. ಇಲ್ಲಿ ಅನುಮಾನದ ಸಂಗತಿ ಪ್ರಾಪ್ತವಾಗುತ್ತದೆ. ಆ ಕಾರಣಕ್ಕೆ ಮಗನನ್ನು ಕಳೆದುಕೊಳ್ಳುವ ಪರಿಸ್ಥಿತಿ ಎದುರಾಗುತ್ತದೆ.



ನೀಲವೇಣಿಗೆ ಆಶ್ರಯದಾತನೊಬ್ಬನು ದೊರೆತರೂ ಮತ್ತೆ ಕಳ್ಳರ ಪಾಲಾಗಬೇಕಾಗುತ್ತದೆ. ಮುಂದೆ ಅವಳ ಬುದ್ಧವಂತಿಕೆಯಿಂದ ಎಲ್ಲಾ ಪರೀಕ್ಷೆಗಳಲ್ಲಿ ಗೆಲ್ಲುತ್ತಾ ಬರುತ್ತಾಳೆ. ಮುಂದೆ

ಗಂಡುವೇಷದಲ್ಲಿ ಹೋಗಿ ರಾಜಕುಮಾರಿಯೊಬ್ಬಳನ್ನು ವರಸಿ ರಾಜ್ಯವನ್ನು ಪಡೆದುಕೊಳ್ಳುವ ಬಗೆ ನಿಜಕ್ಕೂ ರಮ್ಯವಾಗಿದೆ. ಹೆಣ್ಣಿಗೆ ಯಾವುದೇ ಸ್ಥಾನಮಾನವಿಲ್ಲವೆಂದು ಅರಿತು ಗಂಡುವೇಷ ಧರಿಸುವುದು ತುಂಬಾ ವಿಶೇಷ. ಇಲ್ಲಿ ಯಾರೊಬ್ಬ ವಿರೋಧಿ ಕಂಡುಬರದೇ ಅನೇಕ ವಿರೋಧಿಗಳು ಕಾಣಿಸಿಕೊಳ್ಳುವುದು ಇಲ್ಲಿನ ವಿಶೇಷ.

೪. ನೀಲಕಂಠ ರೂಪಾವತಿ

ಕರಪಾಲ ಮೇಳದಲ್ಲಿರುವ 'ನೀಲಕಂಠ ರೂಪಾವತಿ' ಕಥನಗೀತೆಯು 'ನೀಲವೇಣಿ'ಗೀತೆಯ ಸ್ವರೂಪ ಹೋಲುವಂಥದ್ದು. ಭಾಮಶೇಖರನೆಂಬ ಅರಸನಿಗೆ ನೀಲಕಂಠರಾಯನೆಂಬ ಮಗನಿದ್ದ ಅವನು ತಂದೆಯಷ್ಟೇ ಬಲಿಷ್ಠ. ಇವನಿಗೆ 'ರೂಪಾವತಿ' ಎಂಬ ಕನ್ನೆಯೊಂದಿಗೆ ವಿವಾಹವಾಗಿತ್ತು. ಆದರೆ ಸಂತಾನವಿರಲಿಲ್ಲ. ನೀಲಕಂಠರಾಯ ತನ್ನ ತಂದೆ-ತಾಯಿಯರ ಬಳಿ ಪತ್ನಿಯನ್ನು ಬಿಟ್ಟು ದಂಡಿಗೆ ಹೋಗುತ್ತಾನೆ. ಹೀಗೆ ದಂಡಿಗೆ ಹೋಗುವ ದಾರಿಯ ಮಧ್ಯದಲ್ಲಿ ವಿಶ್ರಾಂತಿಗೆಂದು ತಂಗುತ್ತಾನೆ. ಅವನು ತಂಗಿದ ಆಲದಮರದ ಮೇಲಾದ ದೇವಲೋಕದ ಪಕ್ಷಿಗಳು ಮಾತನಾಡಿದವು. ಅದರಲ್ಲಿ ಗಂಡು ಪಕ್ಷಿ ಮಾನವರಂತೆ 'ಇದೆ ಶುಭದಿನ, ಶುಭಗಳಿಗೆಯಲ್ಲಿ ರತಿಕ್ರೀಡೆ ಆಡಿದರೆ ಪುತ್ರ ಸಂತಾನ ವಾಗುವುದು ಖಂಡಿತ' ನಕ್ಕರೆ ನವರತ್ನ ಸುರಿಯುವ, ಅತ್ತರೆ ಮುತ್ತು ಸುರಿಯುವ ಮಗನಾಗುತ್ತಾನೆ ಎಂದು ಮಾತಾಡಿ ಕೊಂಡವು.[೪೭]



ಮಕ್ಕಳ ಸಂತಾನವಿಲ್ಲದ ರಾಜ ಮಕ್ಕಳು ಪಡೆಯಬೇಕೆಂದು ನಿರ್ಧರಿಸಿದನು. ತನ್ನ ಹೆಂಡತಿಯನ್ನು ಆ ಶುಭರಾತ್ರಿಯೇ ಸೇರಬೇಕೆಂಬ ಹಂಬಲದಿಂದ ದೇವಲೋಕದ ಪಕ್ಷಿಗಳ ನೆರವಿನಿಂದ ತನ್ನ ರಾಜ್ಯವಾದ ನೀಲವತಿ ಪಟ್ಟಣಕ್ಕೆ ಹಿಂತಿರುಗಿ ಬಂದನು. ಅತ್ತ ನೀಲವತಿ ಪಟ್ಟಣದಲ್ಲಿ ಆಗತಾನೆ ಗೌರಿಪೂಜೆಯನ್ನು ಮುಗಿಸಿ ಮಲಗಿಕೊಳ್ಳುವ ಸಮಯಕ್ಕೆ ಸರಿಯಾಗಿ ನೀಲಕಂಠರಾಜ ಕದತಟ್ಟುತ್ತಾನೆ. ಕುರುಹು ಒಪ್ಪಿಸಿ ರಾಜ ಮನೆಸೇರಿ ದೇವಲೋಕದ ಪಕ್ಷಿಗಳ ಹಿತನುಡಿಯನ್ನು ವಿವರವಾಗಿ ಹೇಳುತ್ತಾನೆ. ಅದೇ ರೀತಿಯಾಗಿ ತಾನು ಮಧ್ಯರಾತ್ರಿ ವಾಪಸ್ಸು ಬಂದು ಹೋದ ವಿಚಾರವನ್ನು ಸ್ವತಃ ತಂದೆ-ತಾಯಿಗಳಿಗೆ ಹೇಳದಂತೆ ಮಾತುಪಡೆದುಕೊಂಡು ಪುನಃ ದಂಡಿಗೆ ಹೊರಟುಹೋದನು. ಇತ್ತ ರೂಪವತಿ ಗರ್ಭವತಿಯಾಗುತ್ತಾಳೆ. ಆದರೆ ಇದನ್ನು ತಿಳಿದ ಅತ್ತೆ-ಮಾವರು ಮಗನಿಲ್ಲದ ಇವಳು ಹೇಗೆ ಗರ್ಭಿಣಿಯಾದಳು ಎಂಬ ಅನುಮಾನ ಕಾಡುವುದಲ್ಲದೆ ಅವಳನ್ನು ಶಂಕಿಸಿದರು. ಅವಳಿಗೆ ಪರಿಪರಿಯಾಗಿ ಎಷ್ಟೇ ಬೇಡಿಕೊಂಡು ಸತ್ಯಾಂಶವನ್ನು ಹೇಳಿದರು ಅವರು ಒಪ್ಪುವುದಿಲ್ಲ.

ಮಾವನ ದೃಷ್ಟಿಯಲ್ಲಿ ಸೊಸೆ ರೂಪವತಿ ಕಳಂಕಿತಳಾದಳು. ತನ್ನ ಕುಲಕ್ಕೆ ಬರುವ ಕಳಂಕಕ್ಕೆ ಹೆದರಿದ ಮಾವ, ಗರ್ಭವತಿಯಾದ ಸೊಸೆಯನ್ನು ಕಾಡಿಗೆ ಅಟ್ಟುತ್ತಾನೆ. ರಾಜಸೇವಕರು

ರೂಪವತಿಯನ್ನು ಕಾಡಿಗೆ ಕರೆದೊಯ್ಯುತ್ತಾರೆ. ರೂಪವತಿಯ ಬಗ್ಗೆ ಸೇವಕರಲ್ಲೂ ತಾತ್ಸರ, ತಿರಸ್ಕಾರ. ಅವರ ಕ್ರೂರ ನುಡಿಗಳು ಅವಳೆದೆಯನ್ನು ಈಟಿಯಂತೆ ತಿವಿಯುತ್ತವೆ.(ಷಂಡಿ, ಕಳ್ಳತಾಡಿ ಮಗಳ ಎಂದು ಬೈದರು). ಮರಕ್ಕೆ ಕಟ್ಟಿ ಏಟಿನ ಮೇಲೆ ಏಟುಗಳ ಹೊಡೆದರು.[೪೮] ರೂಪವತಿಗೆ ಅನೇಕ ರೀತಿಯ ಶಿಕ್ಷೆಯನ್ನು ಕೊಟ್ಟು ಕಾಡಿನಲ್ಲಿ ಬಿಟ್ಟು ಹೋದರು. ಆ ಘೋರ ಕಾನನದಲ್ಲಿ ರೂಪವತಿಯ ಕಷ್ಟವನ್ನು ಹೇಳತೀರದು.

ಅಡವಿಗಿಡ, ಮರ, ಕಲ್ಲು ಎಡವಿ ಮುಗ್ಗರಿಸುತ
ಕಳವಳಸಿ ಹೊರಟಾಳೋ ರೂಪಾವತಿಯಾಗ
ಘೋರ ಕಾನನದೊಳಗೆ ನೀರಿಲ್ಲ, ನೆರಳಿಲ್ಲ
ಹಾರುವ ಪಕ್ಷಿಗಳ ಸುಳಿವಿಲ್ಲ ದೇವ ದೇವ.[೪೯]

ನೀಲವೇಣಿ ಬೆಂದು ಬಸವಳಿದು ಬೇಸತ್ತು ತಡವರಿಸುತ್ತಾ ದುಃಖಿಸುತ್ತಾಳೆ. ಅವಳ ಎಲ್ಲಾ ಕಷ್ಟನಷ್ಟಗಳಿಗೆ ಕೈ ಹಿಡಿದ ಪತಿಯೇ ಕಾರಣವಾದರೂ, ತನ್ನ ಪತಿ ಬಂದು ತನ್ನನ್ನು ಉದ್ಧರಿಸುವ ದಿನಕ್ಕಾಗಿ ಹಂಬಲಿಸಿ ಹಲುಬುತ್ತಾಳೆ. ತನ್ನ ಗರ್ಭದಲ್ಲಿರುವ ಶಿಶುವಿಗಾಗಿ ತಾನು ಬದುಕಲೇಬೇಕೆಂದು ನಿರ್ಧರಿಸುತ್ತಾಳೆ.

ಅತ್ತ ವಜ್ರಾವತಿ ಪಟ್ಟಣದ ಭುಜಗೇಂದ್ರನ ಮೇಲೆ ದಂಡೆತ್ತಿ ಹೋದ ನೀಲಕಂಠರಾಜ ಶತ್ರುಗಳನ್ನು ಸೋಲಿಸಿ ತನ್ನ ಪಟ್ಟಣಕ್ಕೆ ಹಿಂತಿರುಗಿದನು. ತನ್ನ ಮುದ್ದು ಮಡದಿಯ ಮುಖವನ್ನು ನೋಡುವ ತವಕದಲ್ಲಿ ಮನೆಗೆ ಬಂದಾಗ ಮನೆಯಲ್ಲಿ ಮಡದಿಯಿಲ್ಲದಿರುವುದನ್ನು ಮನಗಂಡು ತಾನು ಕಾಡೆಲ್ಲಾ ಸಂಚರಿಸಿದನು.

ಅತ್ತ ರೂಪಾವತಿ ಕಾಡಿನಲ್ಲಿ ನಿಲ್ಲಲಾರದೆ ತಳಮಳಗೊಂಡಳು. ಅವಳು ಆಶ್ರಯಕ್ಕಾಗಿ ತನ್ನ ತೌರಿಗೆ ಹೊರಟಳು. ಅವಳ ತಂದೆ ನಂದಿರಾಜನು ಮಗಳನ್ನು ಕಳಂಕಿನಿ ಎಂದು ದೋಷಿಸಿ, ಅವಳಿಗೆ ಆಶ್ರಯ ಕೊಡುವುದಿಲ್ಲ. ಅಂತೂ ರೂಪಾವತಿಯ ಪಾಲಿಗೆ ತೌರಿನ ಬಾಗಿಲು ಮುಚ್ಚಿತ್ತು. ಅವಳ ದುಃಖದ ದಾರುಣತೆಯ ಚಿತ್ರ ಎಂಥವರಿಗಾದರೂ ಮನಕರಗುವಂತಿದೆ. ಅಂತಹ ಸಂದರ್ಭದಲ್ಲಿ ತೌರಿನ ಆಶ್ರಯವೂ ತಪ್ಪಿದ ರೂಪಾವತಿಗೆ ಬದುಕಲು ಇನ್ನೆಲ್ಲಿಗೆ ಹೋಗಬೇಕು ಎಂಬ ಪ್ರಶ್ನೆಕಾಡಿತು. ಆ ಪರಿಸ್ಥಿತಿಯಲ್ಲಿ ಪತಿಯನ್ನು ನೆನೆಯುತ್ತಾ ಅಲ್ಲಲ್ಲಿ ಕುಸಿದು ಹಂಬಲಿಸುತ್ತಾಳೆ. ಅವಳ ಮಾತು ಎಂಥಹ ನೋವಿನಿಂದ ಕೂಡಿದೆ ಎಂಬುದು ಈ ಕೆಳಗಿನ ಸಾಲುಗಳಿಂದ ಅರಿವಾಗುತ್ತದೆ.

ಪತಿಯಗಲಿದ ಮೇಲೆ ದಿಟದಿ ಬಾಳುವುದ್ಹೆಂಗೆ
ಎಂಥ ಕಷ್ಟು ನಮಗೆ ಬಂದಿತೊ ಶಿವನೇ ಶಿವನೇ

ಎಂದು ಹಲುಬಿದಳು. ಎಂಥ ದುಃಸ್ಥಿತಿ ಅವಳಿಗೆ ಒದಗಿದೆ. ನೆರವಿಲ್ಲದೆ ನೆರಳಿಲ್ಲದೆ; ಗೊತ್ತಿಲ್ಲದೆ ಗುರಿಯಿಲ್ಲದೆ ಮುಂದೆ ಯಾವುದೋ ದಾರಿಯಲ್ಲಿ ನಡೆದು ಹೋದಳು.

ರೂಪಾವತಿ ಅತೀವ ದುಃಖದಿಂದ, ಆಯಾಸದಿಂದ ಸ್ಮಶಾನ ಒಂದರಲ್ಲಿ ಹೋಗಿ ಗೋರಿಯ ಮೇಲೆ ಬಿದ್ದುಬಿಡುತ್ತಾಳೆ. ಆ ಗೋರಿ ಆ ಊರಿನ ಚಂಪಕನಗರದ ರಂಗಸಾನಿಯ ಮಗಳ

ಸಮಾಧಿಯಾಗಿರುತ್ತದೆ. ಅರಿಯದ ರೂಪಾವತಿ ಗುದ್ದಿನಮೇಲೆ ಕಾಲಿಟ್ಟಾಗ, ಕುತ್ತಿಗೆಯವರೆಗೆ ಅದರಲ್ಲಿ ಕುಸಿದುಹೋದಳು. ಬೆಳಗಿನವರೆಗೂ ಆ ಮಸಣದ 'ಗುದ್ದಿನಲ್ಲೆ' ಅವಳು ಉಳಿಯಬೇಕಾಯಿತು. ಮರುದಿನ ಗುಡ್ಡೆಯ ಶಾಸ್ತ್ರಕ್ಕೆಂದು ಬಂದ ರಂಗಸಾನಿ, ಅಪಾರ ರೂಪ ಸಂಪತ್ತಿನಿಂದ ಶೋಭಿಸುತ್ತಿದ್ದ ರೂಪಾವತಿಯನ್ನು ನೋಡಿದಳು. ಅವಳನ್ನು ದೇವರೆ ತನಗೆ ಕರುಣಿಸಿದನೆಂದು ತನ್ನ ಮನೆಗೆ ಕರೆದುಕೊಂಡು ಹೋದಳು.

ವೇಶ್ಯೆ ನಾಯಕಿ ಸಾನಿಯ ಮನೆಯಲ್ಲಿ ರೂಪಾವತಿಗೆ ನವಮಾಸಗಳು ತುಂಬಿತು. 'ಹೊತ್ತುಹೊತ್ತಿಗೆ ಹೆರಿಗೆ ಬೇನೆ ಕಡಿದಂಗೆ ಬರುತಿದೆ' ಬಹು ದುಃಖವನ್ನು ರೂಪಾವತಿ ಅನುಭವಿಸುತ್ತಾಳೆ. ನಾಯಕ ಸಾನಿಗೆ ರೂಪಾವತಿಯ ಹೊಟ್ಟೆಯಲ್ಲಿ ಹೆಣ್ಣೊಂದು ಹುಟ್ಟಿದರೆ ತನ್ನ ಸೌಭಾಗ್ಯ ಹೆಚ್ಚುತ್ತದೆ ಎಂಬ ಆಸೆಯಿರುತ್ತದೆ. ಆದರೆ ದೈವವಶಾತ್ ಗಂಡು ಮಗುವಿಗೆ ಜನ್ಮನೀಡುತ್ತಾಳೆ. ಇದನ್ನು ಮನಗಂಡು ಮಗವನ್ನು ರೂಪಾವತಿಗೆ ಗೊತ್ತಿಲ್ಲದ ಹಾಗೆ ಆ ಮಗುವನ್ನು ಬಿಲ್ವವೃಕ್ಷದ ಕೆಳಗೆ ಇಟ್ಟು ಬಂದಳು. ಚಂಪನಗರದ ಧರ್ಮಶೇಖರನ ರಾಣಿ ನೀಲಾದೇವಿ ಮಕ್ಕಳ ಭಾಗ್ಯಕ್ಕಾಗಿ ಹಲವು ದಿನಗಳಿಂದ ಹಂಬಲಿಸುತ್ತಿದ್ದಳು. ಅವಳು ನಿತ್ಯವೂ ಸುಮಾರು ೪೮ ದಿನಗಳಕಾಲ ಬಿಲ್ವವೃಕ್ಷದ ಪೂಜೆಮಾಡುತ್ತಿದ್ದಳು. ಕೊನೆಯದಿನ ಪೂಜೆಗೆಂದು ಹೋದಾಗ ಆ ಮಗುವನ್ನು ಕಂಡು ಅನಾಥವಾಗಿದ್ದ ಮಗುವನ್ನು ಮನೆಗೆತಂದು ಸಾಕಿ ಪಟ್ಟ ಕಟ್ಟಿದರು.

ಹಲವು ವರ್ಷಗಳು ಉರುಳಿದವು. ಒಮ್ಮೆ ಪರಿವಾರ ಸಮೇತ ನಗರ ಸಂಚಾರಕ್ಕೆ ಬಿಲ್ವಶೇಖರನು ಹೊರಟನು. ನಗರದ ಬೀದಿಬೀದಿಗಳನ್ನು ನೋಡುತ್ತಾ ಬಂದಾಗ ರೂಪಾವತಿಯ ಸೌಂದರ್ಯಕ್ಕೆ ಮನಸೋತನು. ತನ್ನ ಇಂಗಿತವನ್ನು ಪೂರೈಸಿಕೊಳ್ಳಲು ರಂಗಸಾನಿ ಮನೆಗೆ ಹೋದನು. ವಿಧಿಯಿಲ್ಲದೆ ಅವನ ಆಸೆ ಪೂರೈಸಲು ಒಲ್ಲದ ಮನಸ್ಸಿನಿಂದ ಸಿದ್ಧಳಾದಳು. ಎಂಥ ವಿಪರ್ಯಾಸ ಬಿಲ್ವಶೇಖರನು ಗೊತ್ತಿಲ್ಲದೆ ತನ್ನ ಹೆತ್ತ ತಾಯಿಯನ್ನು ಬಯಸಿ ಬರುತ್ತಾನೆ.

ಮಗ ಬಿಲ್ವಶೇಖರನು ತನ್ನ ತಾಯಿ ರೂಪಾವತಿಯನ್ನು ಬಯಸಿ ವೇಶ್ಯೆಯ ಮನೆಗೆ ಬಂದನು. ಆಗ ನಾಯಕಿ ಸಾನಿಯ ಹಸು-ಕರು ಜಗಲಿಯ ಕಟ್ಟೆಯನೊರಗಿ ಅಲ್ಲಿಯೇ ಮಲಗಿತ್ತು. "ಅಮ್ಮ ಯಾರೋ ನನ್ನ ಕಾಲನ್ನು ತುಳಿದರು" ಎಂದಿತು. ಅದಕ್ಕೆ ಹಸು ವ್ಯಂಗ್ಯವಾಗಿ ನಕ್ಕು ಹೇಳಿತು. 'ಹೆತ್ತ ತಾಯ ಗುರುತು ಅರಿಯದಂಥ ಮೂರ್ಖನಪ್ಪ' ಅವನು ಎಂದಿತು. ಬಿಲ್ವಶೇಖರನು ಹಸುವಿನ ತಾಯಿಯ ಮಾತಿಗೆ ಬೆಚ್ಚಿದ. ರೂಪಾವತಿಯನ್ನು ಹಲವು ಪರೀಕ್ಷೆಗೆ ಒಡ್ಡಿ ತಾಯಿಯಾಗಿ ಸ್ವೀಕರಿಸಿ ನಂತರ ತಂದೆಯನ್ನು ಹುಡುಕಿ ಕೊನೆಯಲ್ಲಿ ಎಲ್ಲರೂ ಒಂದಾಗುತ್ತಾರೆ.

### ೫.೪. ತ್ಯಾಗ ಬಲಿದಾನ ಕಥನಗೀತೆಗಳಲ್ಲಿ ಮಹಿಳೆ

ಜನಪದ ಕಥನಗೀತೆಗಳಲ್ಲಿ ತ್ಯಾಗ ಬಲಿದಾನಕ್ಕೆ ಸಂಬಂಧಪಟ್ಟಂತೆ ಅನೇಕ ಸ್ತ್ರೀ ಪಾತ್ರಗಳನ್ನು ಕಾಣಬಹುದು. ಆ ಸ್ತ್ರೀ ಪಾತ್ರಗಳಲ್ಲಿ ಕೆರೆಹೊನ್ನಮ್ಮ, ಒಡ್ಡರಬೋಯಿ, ಅಣಜಿ ಹೊನ್ನಮ್ಮ, ಹುಳಿಯಾರು ಕೆಂಚಮ್ಮ, ಮಲ್ಲಿಗೆ ಮಾದೇವಿ, ಮದಗದ ಕೆಂಚಮ್ಮ, ಧರಣೆಯಮ್ಮ ಹೀಗೆ ಅನೇಕ

ಸ್ತ್ರೀ ಪಾತ್ರಗಳನ್ನು ಗುರುತಿಸಬಹುದು. ಈ ಸ್ತ್ರೀಯರು ಊರಿನ ಹಿತಕ್ಕಾಗಿ ಕೆರೆ-ಕಟ್ಟೆ, ಬಾವಿ, ಕೋಟೆ-ಕೊತ್ತಲಗಳಿಗೆ ಬಲಿಯಾಗಿದ್ದಾರೆ. ಇಂದಿಗೂ ಕೆಲವು ಕೆರೆಯ ಏರಿಯಮೇಲೆ ಗುಡಿ ಹಾಗೂ ಮಂಟಪಗಳು ಸಮಾಧಿ ಇರುವುದನ್ನು ನೋಡಬಹುದು. ಊರಿನ ಜನ ಅವುಗಳಿಗೆ ದೇವತೆಯೆಂದು ಇಂದಿಗೂ ಪೂಜಿಸುತ್ತಾರೆ. ಹಿಂದಿನ ಕಾಲದಲ್ಲಿ ಮಹಾಸತಿಯರು ಸ್ವ-ಸಂತೋಷ ದಿಂದಲೂ ಅಥವಾ ಯಾರ ಬಲವಂತಕ್ಕೆ ಒಳಗಾಗಿ ತಮ್ಮ ಊರಿನ ಕೆರೆಯ ನೀರಿಗಾಗಿ ಬಲಿ ಯಾಗುತ್ತಿದ್ದರು.

ಈ ಸ್ತ್ರೀಯರು ಬಲಿಯಾಗುತ್ತಿದ್ದ ಸಂದರ್ಭವೆಂದರೆ, ಕೆರೆಯ ನೀರು ಉಕ್ಕಿ ಹರಿದಾಗ, ಕೆರೆಯ ನೀರು ಬತ್ತಿದಾಗ ಹಾಗೂ ಕೆರೆಯ ಏರಿಯು ಸಡಿಲವಾದಾಗ. ಆಗ ಅದು ಗಂಗಾದೇವಿಯ ಅತೃಪ್ತಿ ಎಂದು ಭಾವಿಸುತ್ತಿದ್ದರು. ಅಂತಹ ಸಂದರ್ಭದಲ್ಲಿ ಬಲಿರೂಪದಲ್ಲಿ ಆಹಾರವಾಗಬೇಕಿತ್ತು. ಅದು ಜೀವಂತ ಬಲಿ ಕೊಡಬೇಕಿತ್ತು. ಜನಪದರ ದೃಷ್ಟಿಯಲ್ಲಿ ನೀರು ಒಂದು ದೇವತೆ ಎಂದು ಪರಿಗಣಿಸಿದ್ದರು. ನೀರಿನ ನಾಲೆಯಲ್ಲಿ ಕೆಲವು ಅತಿಮಾನುಷ ಶಕ್ತಿಗಳು ವಾಸವಾಗಿರುತ್ತವೆ. ಅವುಗಳನ್ನು ತೃಪ್ತಿಪಡಿಸದಿದ್ದರೆ ನೀರು ಪ್ರಳಯಕಾರಿಯಾಗುತ್ತದೆ. ಅದು ನೀರಿನ ರಭಸವೂ ಇಲ್ಲದೇ ನೀರು ಬತ್ತಿ ಜನರು ಕಂಗಾಲಾಗಬಹುದು. ಇದರಿಂದಾಗಿ ಊರಿನ ಜನಕ್ಕೆ, ಪ್ರಾಣಿಗಳಿಗೆ ತೊಂದರೆಯಾಗುತ್ತದೆ ಎಂದು ಭಾವಿಸಿ, ಸ್ತ್ರೀಯೊಬ್ಬಳನ್ನು ಕೆರೆ ಕಟ್ಟೆಗೆ ಬಲಿಕೊಡುತ್ತಿದ್ದರು. ಮುಂದೆ ಇದು ಪದ್ಧತಿಯಾಯಿತು.

ಕುಟುಂಬದ ಹಿರಿಯ ಯಜಮಾನ ತನ್ನ ಮನೆಯ ಹಿರಿಯ ಸೊಸೆಯನ್ನು ಬಲಿಕೊಡುತ್ತಿದ್ದ. ಅದು ಅವಳಿಗೆ ಇಷ್ಟವಿರಲಿಲ್ಲ. ಇಷ್ಟವಿಲ್ಲದಿದ್ದರು ಸಮಾಜದ ಒತ್ತಡಕ್ಕೆ ಇಲ್ಲವೆ ಸ್ವ ಇಚ್ಛೆಯಿಂದ ಸಮಾಜದ ಒಳತಿಗಾಗಿ ತಾನೇ ಬಲಿಯಾಗುತ್ತಿದ್ದಳು. ಈ ರೀತಿ ತ್ಯಾಗವಾಗುವ ಮಹಿಳೆಯರ ಮನೋ ಇಂಗಿತವನ್ನು ಅರಿಯುವುದು ಸೂಕ್ತವಾದುದು.

**೧. ಹುಳಿಯಾರು ಕೆಂಚಮ್ಮ**

ತುಮಕೂರು ಜಿಲ್ಲೆ ಹುಳಿಯಾರು ಗ್ರಾಮ. ಈ ಗ್ರಾಮಕ್ಕೆ ಸೇರಿದ ಕೆಂಚಮ್ಮನನ್ನು 'ಹುಳಿಯಾರು ಕೆಂಚಮ್ಮ' ಎಂದು ಕರೆಯಲಾಗಿದೆ. ಹುಳಿಯಾರಿನ 'ಕೆರೆಯ ಏರಿಕಟ್ಟಡ ಕುಸಿದಾಗ' ಬಾಣಂತಿಯಾದ ಕೆಂಚಮ್ಮ ಬಲಿಯಾಗುತ್ತಾಳೆ. ಕಥೆಯು ಕೆಂಚಮ್ಮ ಗರ್ಭಿಣಿಯಾದ ಪ್ರಸಂಗದಿಂದ ಪ್ರಾರಂಭವಾಗುತ್ತದೆ. ಒಂದರಿಂದ ಎಂಟು ತಿಂಗಳವರೆಗೂ ಅವಳ ಬಸುರಿ ಬಯಕೆಯನ್ನು ಹೇಳುವ ಕಥನಗೀತೆಯು ಬಹಳ ಸೊಗಸಾಗಿದೆ.

ಕೆಂಚಮ್ಮಳ ಎಂಟು ತಿಂಗಳಿನ ಬಸರಿ ಬಯಕೆಯನ್ನು ಅತ್ತೆ, ಮಾವಂದಿರು ಪೂರೈಸುತ್ತಾರೆ. ಒಂದೊಂದು ತಿಂಗಳಿಗೂ ಒಂದೊಂದು ಬಯಕೆ, ಮೂರನೆ ತಿಂಗಳಲ್ಲಿ ಜಾಜಿಮಲ್ಲಿಗೆಯನ್ನು, ನಾಲ್ಕನೆ ತಿಂಗಳಲ್ಲಿ ಎಳೆಹುಣಸೆಯನ್ನು, ಐದನೇ ತಿಂಗಳಲ್ಲಿ ಕೆನೆಮೊಸರನ್ನು, ಆರನೆ ತಿಂಗಳಿನಲ್ಲಿ ಸಂಪಿಗೆ ಹೂವನ್ನು, ಏಳನೇ ತಿಂಗಳಲ್ಲಿ ಕೆಮ್ಮಣ್ಣನ್ನು, ಎಂಟನೆ ತಿಂಗಳಿನಲ್ಲಿ ಮಾವಿನಹಣ್ಣನ್ನು ಬಯಸುತ್ತಾಳೆ. ಕೆಂಚಮ್ಮನ ಎಲ್ಲಾ ಬಯಕೆಯನ್ನು ಅತ್ತೆ, ಮಾವ, ಗಂಡ ಇವರೆಲ್ಲರೂ ಸೇರಿ

ಪೂರೈಸುತ್ತಾರೆ. ಅವಳಿಗೆ ಒಂಭತ್ತು ತಿಂಗಳು ತುಂಬಿ ಗಂಡುಮಗುವಿಗೆ ಜನ್ಮ ನೀಡುತ್ತಾಳೆ. ಇದರಿಂದ ಎಲ್ಲರಿಗೂ ಸಂತೋಷವಾಗುತ್ತದೆ. ಮುಂದೆ ಗಂಗೆಪೂಜೆಗೆ ಕೆಂಚಮ್ಮ ಸಿದ್ಧಳಾಗುತ್ತಾಳೆ.

ಪೂಜಾ ಸಾಮಾಗ್ರಿಗಳನ್ನು ತೆಗೆದುಕೊಂಡು ನೆರೆಯ ಗರತಿಜೊತೆ ಕೆರೆಗೆ ಹೋಗಿ ಪೂಜೆ ಮಾಡುವಾಗ ಕೆರೆಯ ಏರಿಯ ಕಲ್ಲು ಸಡಿಲವಾದವು. ಇದನ್ನು ಅರಿತ ಕೆಂಚಮ್ಮಗೆ ಏರಿ ಏನು ಬಯಸುತ್ತದೆ ಎಂದು ಅರಿತಳು. ಅಷ್ಟರಲ್ಲಿ ಮಾವ ಸೊಸೆಯ ಮನಸ್ಸನ್ನು ಅರಿತು ಬಾಲನ ನೆಪದಲ್ಲಿ ಮನೆಗೆ ಕಳುಹಿಸುತ್ತಾನೆ. ಮನೆಗೆ ಬಂದ ಕೆಂಚವ್ವ ಗಂಡನಿದ್ದ ಬಳಿಗೆ ಬಂದು ಅವನ ಗಾಢವಾದ ನಿದ್ರೆಯನ್ನು ಕಂಡು ಇದೆಂಥಹ ಕೇಡಿನ ನಿದ್ರೆ ಎಂದು ಗಂಡನನ್ನು ಎಬ್ಬಿಸುತ್ತಾಳೆ. 'ಇಂಥ ಸೋಗಿನ ನಿದ್ರೆ ಮುಂದಿನ ಕೆಡಕಿಗೆ ಕಾರಣ' ಎಂದು ಹೇಳಿ ತೌರಿಗೆ ಪತ್ರ ಬರೆಯಿರಿ ಎಂದಳು. ಆದರೆ ಅವಳ ಮಾತನ್ನು ಲೆಕ್ಕಿಸದ ಗಂಡ ಅವಳ ಸನಿಹವನ್ನು ಬಯಸಿ ಮಂಚಕ್ಕೆ ಕರೆಯುತ್ತಾನೆ.

ಈ ಕಥನದಲ್ಲಿ ಗಂಡ ದಂಡಿಗಾಗಲಿ ಘಟ್ಟಕ್ಕಾಗಲಿ ಹೋಗಿರುವುದಿಲ್ಲ. ಬಲಿಗೆ ಸಂಬಂಧಿಸಿದ ಕಥನಗೀತೆಗಳಲ್ಲಿ ಹೆಂಡತಿ ಕೆರೆ ಕಟ್ಟೆಗೆ ಬಲಿಯಾಗುವ ಸಂದರ್ಭದಲ್ಲಿ ಅವಳ ಗಂಡ ದಂಡಿಗೂ ಇಲ್ಲವೇ ಘಟ್ಟಕ್ಕೋ ಹೋಗಿರುತ್ತಾನೆ. ಕೆಂಚಮ್ಮ ಬಲಿಯಾಗುವಾಗ ಗಂಡ ಮನೆಯಲ್ಲಿಯೇ ಇರುತ್ತಾನೆ. ಅಲ್ಲದೆ ತವರು ಮನೆಯವರಿಗೂ ತಾನು ಬಲಿಯಾಗುವ ವಿಚಾರ ತಿಳಿದಿತ್ತು. ಹಾಗಾಗಿ ತಾನೇ ಸ್ವತಃ ಬಲಿಯಾಗಲು ಮುಂದಾಗುತ್ತಾಳೆ ಹೊರತು ಯಾರ ಒತ್ತಡಕ್ಕೂ ಅಲ್ಲ.

ಕಲ್ಲನಕೇರಿಯ ಕೆರೆಗೆಹಾರುವ ಭಾಗೀರಥಿ ಕೆರೆಗೆ ಬಲಿಯಾದ ಹೊನ್ನಮ್ಮ, ವಡ್ಡರಬೋಯಿ ಮೊದಲಾದ ಸ್ತ್ರೀಯರಂತೆಯೇ ಹುಳಿಯಾರು ಕೆಂಚಮ್ಮ ಕೂಡ ಕೆರೆಗೆ ಹಾರವಾದ ಒಂದು ಹೆಣ್ಣು. ಮುಖ್ಯವಾಗಿ ಕೆಂಚಮ್ಮನ ಈ ಕಥನ ಹಾಸನ ಜಿಲ್ಲೆಯ ಸುತ್ತಮುತ್ತಲ ಪ್ರದೇಶಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಕರ್ನಾಟಕದಲ್ಲಿ ಈ ಬಗೆಯ ತ್ಯಾಗಕ್ಕೆ ಬಲಿದಾನಕ್ಕೆ ಒಳಗಾದವರ ಚರಿತ್ರೆ ದೊಡ್ಡದಿದೆ. ಅದಕ್ಕೆ ಸಾಕ್ಷಿ ನಮ್ಮ ವೀರಗಲ್ಲುಗಳು ಮತ್ತು ಮಹಾಸತಿ ಕಲ್ಲುಗಳು. ಊರಿನ ಹಿತರಕ್ಷಣೆಗೆ ದನಕರುಗಳ ಯೋಗಕ್ಷೇಮಕ್ಕೆ ಅನ್ನ ನೀರಿನ ಬವಣೆಗೆ ಒಳಿತಾಗಲೆಂಬ ಆಶಯಕ್ಕಾಗಿ ಇಂತಹ ಹೆಣ್ಣುಗಳು ಬಲಿಯಾಗುತ್ತಲೇ ಬಂದಿವೆ. ಇದಕ್ಕೆ ಕಾರಣ ಆ ಕಾಲದಲ್ಲಿ ಒಂದು ಮೌಲ್ಯ ಎಂಬಂತೆ ಸ್ಥಾಪಿತಗೊಂಡು ಬಂದಂತಹ ಒಂದು ಸಾಮಾಜಿಕ ವ್ಯವಸ್ಥೆ. ಈ ವ್ಯವಸ್ಥೆಗೆ ಯಾಕೆ ಹೆಣ್ಣುಗಳು ಬಲಿಯಾಗುತ್ತಾರೆ? ಅದರಲ್ಲೂ ಗ್ರಾಮೀಣ ಕೆಳಸಮುದಾಯಗಳ ಹೆಣ್ಣಗಳೇ ಇಲ್ಲಿ ಹೆಚ್ಚು ಬಲಿಯಾಗುತ್ತಿರುವುದು ನಾವೆಲ್ಲ ಯೋಚಿಸುವ ವಿಚಾರ.

ಹುಳಿಯಾರ ಕೆಂಚಮ್ಮನದು ಒಂದು ತ್ಯಾಗಮಯಿಯಾದ ಚರಿತ್ರೆ. ಹೊಸದಾಗಿ ಕೆರೆಯ ಕಟ್ಟಿದಾಗ ಆ ಕೆರೆಯ ಕಟ್ಟಡ ಕುಸಿಯುವಂಥ ಸಂದರ್ಭದಲ್ಲಿ ಆ ಊರಿನ ಗೌಡನ ಸೊಸೆಯಾದಂತಹ ಬಾಣಂತಿ ಕೆಂಚಮ್ಮ ಬಲಿಯಾಗಬೇಕಾಗುತ್ತದೆ. ಮುಖ್ಯವಾಗಿ ತನ್ನ ಮಗನೊಂದಿಗೆ ಅವಳು ಕೆರೆಗೆ ಹಾರವಾಗುತ್ತಾಳೆ. ಒಂದು ಕಡೆ ಸೊಸೆಗೆ ಗಂಡು ಮಗುವಾದ ಸಡಗರ. ಇನ್ನೊಂದು ಕಡೆ ಅವಳ

ಹರಕೆಯ ಅಭಿಲಾಷೆಯಂತೆ ಮಗನೊಂದಿಗೆ ಕೆರೆಗೆ ಬಲಿಯಾಗಬೇಕಾದಂತಹ ಸಂದರ್ಭ. ಈ ಸಂಕೀರ್ಣ ಸ್ಥಿತಿಯಲ್ಲಿ ಈ ಖಂಡಕಾವ್ಯ ಬೆಳೆಯುತ್ತಾ ಹೋಗುತ್ತದೆ. ಹುಳಿಯಾರ ದೇವಗನ್ನೆಯರು ತನಗೆ ವಲಿದ ಪರಿಯನ್ನು ಹೇಳುತ್ತಾ ಕೆಂಚವ್ವ ಕೊನೆಗೆ ತನ್ನ ಗಂಡನ ಮೂಲಕ ಕೆರೆಗೆ ಹಾರವಾಗಬೇಕಾದ ವಿಷಯವನ್ನು ತಮಗೆ ತಿಳಿಸುತ್ತಾಳೆ. ಇಂತಹ ಸಂದರ್ಭದಲ್ಲಿ ತವರು ಮನೆಯವರಿಗೆ ದಿಗ್ಭ್ರಮೆಯಾಗುತ್ತದೆ. ಅವರು ಕತ್ತಿ ಕಠಾರೆಗಳ ಸಮೇತ ಇವಳ ಅತ್ತೆಯ ಮನೆಯ ಮೇಲೆ ಆಕ್ರೋಶ ವ್ಯಕ್ತಪಡಿಸುತ್ತಾರೆ. ಇದಕ್ಕೆ ಮೂಲ ಕಾರಣವೆಂದರೆ ಹೆಣ್ಣಿಗೆ ಹೆಣ್ಣೇ ಶತ್ರು ಎಂಬಂತೆ ಅತ್ತೆಯಾದವಳು ಸೊಸೆಗೆ ಸಾಕಷ್ಟು ಕಿರುಕುಳ ಕೊಟ್ಟಿರಬಹುದೆಂಬ ಶಂಕೆ ಈ ಮೇಲಿನ ವಾಕ್ಯದಿಂದ ತಿಳಿದುಬರುತ್ತದೆ. ಇಂತಹ ಸಂದರ್ಭದಲ್ಲಿ ಕೆಂಚಮ್ಮ ತಾಳುವ ನಿಲುವು ಧೈರ್ಯ ಸಾಹಸಗಳು ಹೆಣ್ಣಿನ ಆ ಕಾಲದ ಆತ್ಮಾಭಿಮಾನವನ್ನು ಪ್ರಕಟಿಸುವುದಲ್ಲದೆ ಇಲ್ಲಿ ಕೆಂಚಮ್ಮಳ ಸಾವು ಹೀನಾಯವಾಗಿರುತ್ತದೆ.

ಒಂದು ಗರ್ಭಿಣಿ ಹೆಣ್ಣು ಕೆರೆಗೆಹಾರವಾಗುವುದೆಂದರೆ ಎಂಥವರು ಕರಳು ಕಿತ್ತುಬರುವ ಸಂಗತಿ. ಅವಳಿಗೆ ಒಂದು ಮಾತು ಇಲ್ಲಿ ಸ್ಪಷ್ಟವಾಗಿದೆ. 'ನನ್ನ ಮಾತು ಅಂದರೆ ನನ್ನ ಸಂಕಟ ಬಲ್ಲವರಿಗಷ್ಟೇ ತಿಳಿಯುತ್ತದೆ' ಎಂದು ಈ ಕಥನದ ಆರಂಭದಲ್ಲಿಯೇ ಹಾಡುಗಾರರ ಮೂಲಕ ತಿಳಿಯುತ್ತಾಳೆ ಅಥವಾ ವ್ಯಕ್ತಪಡಿಸುತ್ತಾಳೆ. ಹಾಗೆ ನೋಡಿದರೆ ಈ ಕಥನ ಆರಂಭವಾಗುವುದು ಅವಳ ೯ ತಿಂಗಳ ಬಯಕೆಯ ಇಚ್ಛೆಗಳಿಂದ. ಬಸುರಿ ಕೆಂಚಮ್ಮನಿಗೆ ಏರಿಯ ಹಿಂದಿರುವ, ಎಲೆ ತೋಟದ ತಾವರೆ ಹೂವು, ಸೂಜಿಮಲ್ಲಿಗೆ, ಸಂಪಿಗೆ ಹೂ ಮುಡಿಯಬೇಕೆಂಬ ಆಸೆ ಆಗುತ್ತದೆ. ಅದರಂತೆಯೇ ಎಳೆಹುಣಸೆ, ನೆಲುವಿನ ಮೇಗಾಳ ಕೆನೆ ಮೊಸರು, ಕೆಮ್ಮಣ್ಣು ತಿನ್ನಬೇಕೆನಿಸುತ್ತದೆ. ಮಗಿಮಾವಿನಹಣ್ಣು ತಿನ್ನಬೇಕೆಂಬ ಆಸೆ ಆಗುತ್ತದೆ. ಈ ಎಲ್ಲಾ ಆಸೆಗಳೊಂದಿಗೆ ಅವಳು ಬಯಕೆಗಳನ್ನು ಈಡೇರಿಸಿಕೊಳ್ಳುತ್ತಾ ತನ್ನ ಹೆರಿಗೆಗೆ ಸೂಲಗಿತ್ತಿಯನ್ನು ಕರಿಸವ್ವ ಎಂದು ತನ್ನ ಅತ್ತೆ ಬೊಮ್ಮವ್ವಗೆ ಆದೇಶ ಮಾಡುತ್ತಾಳೆ. ಇಲ್ಲಿ ಬಳೆಗಾರನ ಹಾಡು ನೆನಪಾಗುತ್ತದೆ. ಸೂಲಗಿತ್ತಿ ಸಂಗಮ್ಮನ ಅರಮನೆಯನ್ನು ಹುಡುಕುವಾಗ 'ಹಾದಿ ಹಾದಿಗೆಲ್ಲ ಕಲ್ಲು ಹೊಂದಿಸ್ಯಾವೆ, ಕಂಬ ಸಾಲಾಗಿ ಮುತ್ತು ಬಾಗಿಸ್ಯಾವೆ, ಬೊಮ್ಮವ್ವ ಅದೇ ಕಾಣೆ ಸಂಗಮ್ಮನ ಅರಮನೆ' ಎಂದು ತೋರಿಸುತ್ತಾಳೆ. ಕೊನೆಗೆ ಸಂಗಮ್ಮ ಪರಿಚಯವಾಗಿ ನಾನು ಹಾಗೆಯೇ ನಿಮ್ಮ ಮನೆಗೆ ಬರುವುದಿಲ್ಲ. ನನಗಾಗಿ ಒಂದು ಪಲ್ಲಕ್ಕಿ ಹೊರಡಲಿ ಎನ್ನುತ್ತಾಳೆ. ಅವಳು ಬರುವ ಸಂದರ್ಭವನ್ನು ಕಲಾವಿದರು ಹೀಗೆ ಹಾಡಿದ್ದಾರೆ.

ಬಾಳೆಯ ಬಲಕಿಟ್ಟು ಸೀಗೆಯ ಎಡಕಿಟ್ಟು
ಗಂಧ ಸಾಲಲ್ಲಿ ಹೋಗುತ್ತಾಳೆ ಎಂದು ವರ್ಣಿಸುತ್ತಾರೆ

ಮುಂದೆ ಹೆರಿಗೆಗೆ ಬೇಕಾದ ಸಾಮಾಗ್ರಿಯನ್ನು ಕೇಳಲೆಂದು ಬಡಿಗೇರ ಮನೆಗೆ ಹೋದರೆ ಅವರು ಕೂಡ ಉಂಬಳಿಯನ್ನು ಕೇಳುತ್ತಾರೆ. ಇಷ್ಟೇ ಮುಗಿದ ಮೇಲೆ ಸೂರ್ಯ ಹುಟ್ಟುವ

ಒಂದು ಶುಕ್ರವಾರ ದಿನ ಕೆಂಚಮ್ಮನಿಗೆ ಗಂಡು ಮಗು ಆಗುತ್ತದೆ. ಆ ಹುಟ್ಟಿದ ಸಂಭ್ರಮಕ್ಕೆ ಸಕ್ಕರೆ ಹಂಚುವ ಕಾಯಕವು ನಡೆಯುತ್ತದೆ.

ಹೀಗೆ ಮಗ ಹುಟ್ಟಿದ ಮೇಲೆ ಒಂದು ವಿಶ್ರಾಂತಿದಾಯಕವಾದ ಆನಂದವನ್ನು ಕೆಂಚಮ್ಮ ಅನುಭವಿಸುತ್ತಾಳೆ. ತನ್ನ ಅತ್ತೆಗೆ ಅದನ್ನೆಲ್ಲಾ ಹೇಳಿಕೊಳ್ಳುತ್ತಾಳೆ. ಅದಕ್ಕೆ ಅತ್ತೆಯು ಚಿಗಳಿ, ತಂಬಿಟ್ಟು ಮಾಡಿ ಪಟ್ಟೆಯಸೀರೆ ಉಡಿಸಿ ಗಂಗೆಯ ಪೂಜೆಗೆ ಅಣಿ ಮಾಡುತ್ತಾಳೆ. ಈ ಸಂದರ್ಭವಂತೂ ಇಡೀ ಆ ಮನೆಯಲ್ಲಿ ಒಂದು ಹಬ್ಬದ ವಾತಾವರಣವನ್ನು ಮೂಡಿಸುತ್ತದೆ. ಹೀಗೊಮ್ಮೆ ಕೆರೆಯ ಗಂಗಮ್ಮನ ಪೂಜೆ ಮಾಡುವ ಸಂದರ್ಭದಲ್ಲಿ ಏರಿಯ ಕಲ್ಲು ಸಡಿಲಗೊಳ್ಳುವುದನ್ನು ಮನಗಂಡು ಸ್ವ ಇಚ್ಛೆಯಿಂದ ಕೆರೆಗೆ ಹಾರವಾಗಲು ನಿರ್ಧರಿಸುತ್ತಾಳೆ.

### ೨. ಕೆರೆ ಹೊನ್ನಮ್ಮ

ಹೊನ್ನಮ್ಮನ ಕಥೆ ಜನಪದ ಸಾಹಿತ್ಯದಲ್ಲಿ ಚಿರಪರಿಚಿತವಾಗಿ ಕಾಣಿಸುತ್ತದೆ. ಇದು ಮುಖ್ಯವಾಗಿ ಕಂಡು ಬರುವುದು ಹಾಸನ ಜಿಲ್ಲೆಯ ಅರಿಸೀಕೆರೆಯ ಸುತ್ತಮುತ್ತ. ಆದರೂ ಈ ಹೊನ್ನಮ್ಮನ ಕಥೆ ಹೆಣ್ಣಿನ ಬಂಜೆಯ ಬದುಕಿಗೆ ವ್ಯಾಪಕವಾಗಿ ಉದಾಹರಿಸುವ ನಾಡಿನ ಕಥೆಯಾಗಿದೆ. ಹೊನ್ನಮ್ಮನ ಹೆಸರಿಗೆ ಈ ಬಂಜೆಯೆನ್ನುವ ಪದ ಅಂಟಿಕೊಂಡು ಬಂದಿರುವುದೇ ಒಂದು ಚರಿತ್ರೆ. ತಾಯಿತನದಿಂದ ನರಳುವ ಪ್ರತಿಯೊಂದು ಹೆಣ್ಣಿನ ಸಂಕಟಭಾವ ಈ ಹೊನ್ನಮ್ಮ. ಅವಳನ್ನು ಸಾಮಾಜಿಕ ವ್ಯವಸ್ಥೆ ನಡೆಸಿಕೊಳ್ಳುವ ರೀತಿ ಕುಟುಂಬದಲ್ಲಿ ಸಿಗಬಹುದಾದ ಮಾನಸಿಕ ಯಾತನೆ, ಅವಳ ಸ್ತ್ರೀತನವನ್ನೇ ನಿರಾಕರಿಸುವ ಪುರುಷನ ಅಂಧಾನುಕರಣೆ, ಅವನ ದೌರ್ಬಲ್ಯಗಳು, ಹೆಣ್ಣಿನ ಈ ಸ್ಥಿತಿಯಲ್ಲಿ ಪ್ರಕಟಗೊಳ್ಳವ ಬಗೆ ಇಲ್ಲಿ ವ್ಯಾಪಕವಾಗಿ ಸ್ತ್ರೀಲೋಕವನ್ನು ಆವರಿಸಿದಂತೆ ಕಂಡು ಬರುತ್ತದೆ. ಇದು ದಕ್ಷಿಣ ಕರ್ನಾಟಕದ ಸಾಮಾಜಿಕ ಬದುಕನಷ್ಟೆ ಪ್ರತಿನಿಧಿಸುವುದಿಲ್ಲ. ಕರ್ನಾಟಕದ ಈ ದೇಶದ ಎಲ್ಲ ಹೆಣ್ಣಿನ ಸಮಾಜವು ಈ 'ಬಂಜೆ' ಎನ್ನುವ ಸಂಕಟದಿಂದ ಹೊರಬಂದಿಲ್ಲ ಎನ್ನುವುದನ್ನು ಸೂಚಿಸುತ್ತದೆ. ಆ ಕಾರಣಕ್ಕಾಗಿಯೇ ಹೊನ್ನಮ್ಮ ಬಂಜೆ ಎಂಬ ಶಬುದ ಬಿಡಿಸಯ್ಯ ಎಂದು ಎಲ್ಲಾ ದೇವರಿಗೆ ಹರಕೆ ಹೊತ್ತುಕೊಳ್ಳುತ್ತಾಳೆ. ಅದಕ್ಕಾಗಿ ಏನೆಲ್ಲಾ ತ್ಯಾಗಕ್ಕೂ ಸಿದ್ಧಳಾಗುತ್ತಾಳೆ.

ಈ ಕಾವ್ಯದಲ್ಲಿ ಅಥವಾ ಕಥನಗೀತೆಯಲ್ಲಿ ಏಳು ಜನ ಅಕ್ಕಂದಿರಲ್ಲಿ ಹೊನ್ನಮ್ಮ ಕೊನೆಯವಳು. ಹೆಣ್ಣು ಇಲ್ಲಿ ಅಧಿಕವಾಗಿ ಕಾಣಿಸಿಕೊಳ್ಳುತ್ತಾಳೆ. ಆರು ಜನರಿಗೆ ಮಕ್ಕಳಿದ್ದರೂ ಇವಳೊಬ್ಬಳಿಗೆ ಮಾತ್ರ ಮಕ್ಕಳಿಲ್ಲದಿರುವುದು. ಮಕ್ಕಳಿದ್ದಂತೆ ನೋಡಿಕೊಳ್ಳುವುದು ಆ ಸಮಾಜದ ಒಂದು ದೌರ್ಬಲ್ಯವನ್ನು ತಿಳಿಸುತ್ತದೆ. ಇಷ್ಟಾದರೂ ಬಂಜೆಯರಿಗೆ ತಾಯಿತನದ ಬದುಕನ್ನು ನೀಡುವ, ಶಿವಪಾರ್ವತಿಯರು ಒಂದು ಅವರಿಗೆ ಮಕ್ಕಳ ಸಾಂತ್ವಾನವನ್ನು ತುಂಬುವ ಈ ಕಥೆ ಉಳಿದ ಸಮಾಜದ ಬಂಜೆಯರ ಬದುಕಿಗೆ ಆದರ್ಶವಾಗಿರಬೇಕು. ಆದಾಗ್ಗೆ ಇಂತಹ ಕಥೆಗಳು ಮತ್ತೆ ಮತ್ತೆ ಹುಟ್ಟಿಕೊಳ್ಳುತ್ತವೆ. ಮಕ್ಕಳಿಲ್ಲದ ಕೊರಗನ್ನು ನೀಗಿಸಿಕೊಳ್ಳುವ ಪರಿ ಇದು. ಒಂದು ಬಗೆಯ ತಾಯಿತನದ ಬಂಧವೇ ಆದರೆ ಹಕ್ಕಿ ಪಕ್ಷಿಗಳಿಗೂ ಇವಳಿಗೆ ಬಂಜೆ ಎನ್ನುವ ಸತ್ಯ ತಿಳಿವಂತೆ ಮಾಡಿದ್ದು ಅದೇ ಪುರುಷತ್ವ ಪ್ರಧಾನ ವ್ಯವಸ್ಥೆಯು ಆಗಿರಬೇಕು.

ಹೆಣ್ಣಿನ ಹಸಿ ಹಸಿ ಭಾವನೆಗಳು ಇಲ್ಲಿ ಪ್ರಕಟವಾಗುತ್ತಲೇ ಹೋಗುತ್ತದೆ. ಹಾಗಾಗಿ ಹಕ್ಕಿ ಪಕ್ಷಿಗಳು ಬಂಜೆ ತೆಗಸಿದ ಬಾವಿ, ಬಂಜೆ ಬೆಳಸಿದ ತೋಟ ಆ ನೀರು ಕುಡಿದರೆ, ಅವಳ ತೋಟದ ಹಣ್ಣು ತಿಂದರೆ ನಾವು ಬಂಜೆ ಆಗಬಹುದೆಂದು ಭಾವಿಸುತ್ತವೆ. ಹೀಗೆ ಭಾವಿಸುವಂತೆ ಹಕ್ಕಿ ಪಕ್ಷಿಗಳು ನಿರಾಕರಿಸುವಂತೆ ಈ ವ್ಯವಸ್ಥೆ ಬಂಜೆ ಹೊನ್ನಮ್ಮನನ್ನು ಹೇಗೋ ರೂಢಿಸಿಕೊಂಡಿವೆ. ತುಂಬಾ ಮುಗ್ಧವಾದ ಸ್ವಾತಂತ್ರ್ಯ ಹೊಂದಿರುವ ಪ್ರಕೃತಿಯ ಎಲ್ಲಾ ಬಗೆಯ ಚೈತನ್ಯಗಳಿಗೆ ಕೊಡುವ ಈ ಲೋಕಕ್ಕೆ ನಮ್ಮನ್ನು ನಾವು ಆರೋಪ ಮಾಡಿಕೊಂಡು ಬಿಟ್ಟಿದ್ದೇವೆ ಎಂದು ಈ ಕಥೆಯನ್ನು ಓದಿದಾಗ ಅನಿಸುತ್ತದೆ. ಈ ಕಟು ವಾಸ್ತವಗಳನ್ನು ನಾವು ಅರ್ಥಮಾಡಿಕೊಳ್ಳುವ ಮೂಲಕ ಹೆಣ್ಣಿನ ಸಂಕಟಗಳಿಗೆ ನಾವು ಇಂದು ಕಂಡುಕೊಳ್ಳುತ್ತಿರುವ ಉತ್ತರಗಳೇನು ಎನ್ನುವುದಷ್ಟೆ ನಮಗೆ ಮುಖ್ಯವಾಗಬೇಕು.

ಮಕ್ಕಳ ನಿರಾಕರಣೆ, ಗಂಗೆಯ ನಿರೂಪಣೆ ಹಕ್ಕಿಪಕ್ಷಿಗಳ ನಿರಾಕರಣೆ ಆಧುನಿಕ ಜಗತ್ತಿನಲ್ಲಿ ಇಲ್ಲದಿದ್ದರೂ ಅದನ್ನು ನಮ್ಮ ಗ್ರಾಮೀಣ ಸಮುದಾಯದಲ್ಲಿ ಬಂಜೆತನದ ಸ್ವರೂಪ ಬೇರೆ ಬೇರೆ ರೀತಿಯಲ್ಲಿ ಅಭಿವ್ಯಕ್ತಿಗೊಳ್ಳುತ್ತವೆ. ಹೊನ್ನಮ್ಮನನ್ನು ಒಡೆಯ ಕೊರಕಲ್ಲಿಗೆ ಎಸೆಯುವುದು, ಅಕ್ಕಂದಿರರ ಮೇಲೆ ಅವಳು ಶಾಪ ಹಾಕುವುದು ಈ ಪ್ರತಿಕಾರ ಇಲ್ಲಿ ಸಹಜವಾಗಿ ನಿರೂಪಿತಗೊಂಡಿದೆ.

ಕೊನೆಗೆ ಎಲ್ಲಾ ಹೆಣ್ಣುಗಳ ಆದರ್ಶದ ಬಯಕೆಯಂತೆ ಹೊನ್ನಮ್ಮನನ್ನು ದೇವರ ಮಕ್ಕಳ ಫಲಕ್ಕಾಗಿ ಕಾಯುತ್ತಾಳೆ. ತನಗಾದ ತನ್ನ ಅಕ್ಕಂದಿರಿಂದ ಅನುಭವಿಸಿದ ಎಲ್ಲಾ ಅಪಮಾನ ಸಂಕಟ ಗಳನ್ನು ಇಲ್ಲಿ ಶಿವಪಾರ್ವತಿಯ ಮುಂದೆ ನಿವೇದಿಸಿಕೊಳ್ಳುತ್ತಾಳೆ. ಹೊನ್ನಮ್ಮನ ಈ ಕರುಣೆಗೆ ಮೆಚ್ಚಿ ದೊರಕುವ ಶಿವಪಾರ್ವತಿಯರ ಪರೀಕ್ಷೆಯಲ್ಲಿ ಅವಳು ಗೆಲ್ಲಬೇಕಾಗುತ್ತದೆ. ಹನ್ನೆರಡನೇ ವಯಸ್ಸಿಗೆ ಮಗನನ್ನು ಕಡಿದು ತಮಗೆ ಅಡುಗೆ ಮಾಡಿ ಉಣಿಸಬೇಕೆಂದು(ಬಡಿಸಬೇಕೆಂಬ) ಶಿವ ಪಾರ್ವತಿಯರ ಆಜ್ಞೆಗೆ ಹೊನ್ನಮ್ಮ ಒಪ್ಪಿಗೆ ನೀಡುತ್ತಾಳೆ. ಕೊನೆಗೆ ಮಗನ ಊಟವನ್ನು ಬಡಿಸುತ್ತಾಳೆ.

ಈ ಕಥೆಯನ್ನು ನೋಡಿದರೆ ಶೈವ ಕಥೆಗಳ ಪ್ರಭಾವ ಜನಪದರ ಮೇಲೆ ಇದ್ದಂತೆಯು ಅಥವಾ ಈ ಬಗೆಯ ಜನಪದ ಕಥೆಗಳ ಪ್ರಭಾವ ಶೈವ ಕಥೆಗಳಿಗೆ ಮೂಲವಾದಂತೆಯೂ ಕಾಣಿಸುತ್ತದೆ. ನಮ್ಮ ಕೆಳಸಮುದಾಯಗಳು ಹೆಚ್ಚು ಹೆಚ್ಚು ಈ ಪರೀಕ್ಷೆಗಳಿಗೆ ನಿರ್ಣಯಗಳಿಗೆ ಒಳಪಡಿಸುತ್ತಿರುವ ಅವು ಗೆದ್ದು ಬರುತ್ತವೆ. ಬಹುಶಃ ಸಮುದಾಯಗಳ ಛಲ ಉತ್ಕಟವಾದ ಪ್ರೀತಿ ಭಕ್ತಿಯ ಪಾರಮ್ಯತೆ ಸೇವೆಯ ಮನೋಭಾವವನ್ನು ತೋರಿಸುವ ಕಾರಣಕ್ಕಾಗಿ ಈ ಪ್ರಸಂಗಗಳು ನಿರ್ಮಾಣವಾಗುತ್ತಿರಬೇಕು. ಬೇಡರ ಕಣ್ಣಪ್ಪನದು ಅದೇ ಭಕ್ತಿ ಏಕಲವ್ಯನದು ಸಹ ಅದೇ ನಿಲುವು ಈ ಹೊನ್ನಮ್ಮನದು ಅದೇ ಬಗೆಯದು. ಕೊನೆಗೆ ಹೊನ್ನಮ್ಮನ ಮಗು ಬದುಕಿಕೊಳ್ಳುವ ಮೂಲಕ ಅವಳ ತಾಯಿತನಕ್ಕೆ ನಿಜವಾದ ತಿರುವು ಬರುತ್ತದೆ.

ಶಿವಪಾರ್ವತಿಯರು ಹೊನ್ನಮ್ಮ ಹೊನ್ನಕ್ಕಲಾಗಿ ಬದುಕಲೆಂದು, ಹಾಲೊಕ್ಕಲಾಗಿ ಬೆಳೆಯಲೆಂದು ಆಶಿಸುತ್ತಾರೆ. ಲೋಕದಲ್ಲಿ ಸಿಗದೇ ಇರುವ ಸುಖವನ್ನು ಅಲೌಕಿಕವಾಗಿ ಅನುಭವಿಸುವ ಅವರಿಂದ

ಬಿಡುಗಡೆಗೊಳ್ಳುವ ಈ ಅನುಭಾವದ ಬದುಕೇ ನಮ್ಮ ಜನಪದರದು. ಇದಕ್ಕೆ ಹೊನ್ನಮ್ಮನೂ ಹೊರತಾಗಿಲ್ಲವೆಂಬುದು ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ನಾವು ಗಮನಿಸಬೇಕು.

೩. ಅಣಜಿ ಹೊನ್ನಮ್ಮ

ಕರೆಗೆ ಹಾರವಾದ ಸ್ತ್ರೀಯರಲ್ಲಿ ಅಣಜಿ ಹೊನ್ನಮ್ಮ ಪ್ರಮುಖಳು. ಅಣಜಿ ಗ್ರಾಮದ ಮಲ್ಲನಗೌಡನ ಹೆಂಡತಿ, ಕೆಂಚನಗೌಡನ ಸೊಸೆ. ಕೆಂಚನಗೌಡನಿಗೆ ಕನಸಿನಲ್ಲಿ ಮನೆದೇವರು ಉಚ್ಚಂಗಿ ಎಲ್ಲಮ್ಮನು ಕಾಣಿಸಿಕೊಂಡು ಕೆರೆಯೊಂದನ್ನು ಕಟ್ಟಿಸುವಂತೆ ಹೇಳಿದಾಗ, ಅದರಂತೆ ಗೌಡ ಕೆರೆ ಕಟ್ಟಿಸುತ್ತಾನೆ. ಆದರೆ ಅದರಲ್ಲಿ ನೀರು ಬರುವುದಿಲ್ಲ. ಕೆರೆಯ ಏರಿ ಸಹ ನಿಲ್ಲದೆ ಕುಸಿಯುತ್ತಿತ್ತು. ಹೊತ್ತಿಗೆ ತೆಗೆಸಿ ಕೇಳಿದಾಗ ಕೆರೆಯ ಭದ್ರತೆಗೆ ಬಲಿಯನ್ನು ಕೊಡಬೇಕೆಂದು ತಿಳಿಯಿತು. ತನ್ನ ಮಡದಿಯನ್ನು ಕೆರೆಗೆ ಹಾರ ಕೊಟ್ಟರೆ ಕೆರೆಯ ಏರಿಯು ನಿಲ್ಲುತ್ತದೆ ಎಂದು ಪುರೋಹಿತ ಹೇಳುತ್ತಾನೆ. ಆಗ ಗೌಡ ತನ್ನ ಮಡದಿಯನ್ನು ಕೊಟ್ಟರೆ ಹೆಂಡತಿ ಸತ್ತವನೆಂದು ಹೇಳುತ್ತಾರೆ. ಮಗನನ್ನು ಕೊಟ್ಟರೆ ಗೌಡಿಕೆ ಮಾಡೋರು ಇಲ್ಲದಂತಾಗುತ್ತದೆ. ಮಗಳನ್ನು ಕೊಡುವುದಕ್ಕೆ ಅವಳು ಈಗಾಗಲೆ ನೆರೆಮನೆಗೆ ಹೋದವಳು. ಅವಳ ಮೇಲೆ ಅಧಿಕಾರ ಇಲ್ಲವೆಂದು ಪರಿತಪಿಸಿ ಕೊನೆಯಲ್ಲಿ ಒಂದು ನಿರ್ಧಾರಕ್ಕೆ ಬರುತ್ತಾನೆ.

ಹೊತ್ತಿಗೆಯವರ ಮಾತಿನಂತೆ ಮನೆಯ ಸೊಸೆಯನ್ನು ಬಲಿಕೊಡುವುದು ಉಚಿತವೆನಿಸಿತು. 'ಸೊಸೆ ಹೋದರೆ ಮತ್ತೊಬ್ಬಳನ್ನು ತರಬಹುದು' ಎಂದು ಭಾವಿಸಿಗೊಂಡ ಗೌಡ 'ಕೊಟ್ಟರೆ ಕೊಟ್ಟೇನು ನೆರೆಮನೆ ಹೊನ್ನಮ್ಮ' ಎಂದು ನಿರ್ಧರಿಸಿದ. ಈ ವಿಚಾರ ತನ್ನ ಸೊಸೆಗೆ ತಿಳಿದಾಗ ಹೊನ್ನಮ್ಮ ತನ್ನ ತವರಿನವರಿಗೆ ಪರೋಕ್ಷವಾಗಿ ಚಿಕ್ಕ ಹೊನ್ನವ್ವನನ್ನು ತನ್ನ ಗಂಡನಿಗೆ ಇನ್ನೊಂದು ಮದುವೆ ಮಾಡಿಕೊಡಿ ಎಂದು ಹೇಳಿದಳು. ಈ ಮಾತಿನಿಂದ ಹೊನ್ನವ್ವ ತನ್ನ ಗಂಡನ ಮೇಲೆ ಇಟ್ಟಿರುವ ಪ್ರೀತಿ ಎಂತದ್ದು ಎಂದು ಗೊತ್ತಾಗುತ್ತದೆ.

ಮನೆಯ ಎಲ್ಲರೂ ಸೇರಿ ಗಂಗೆ ಪೂಜೆಗೆ ಹೋಗುತ್ತಾರೆ. ಕೆರೆಗೆ ಹೋಗುವಾಗ ಹೊನ್ನಮ್ಮ ತನ್ನ ಗಂಡನನ್ನು ನೆನೆದು ದುಃಖಿಸುತ್ತಾಳೆ. ಹಾರವಾಗುವ ಸಂದರ್ಭದಲ್ಲಿ ಆಕೆಯ ಗಂಡ ಮನೆಯಲ್ಲಿ ಇರುವುದಿಲ್ಲ. ಹೊನ್ನಮ್ಮ ಅತ್ತೆ-ಮಾವರ ಜೊತೆ ಪೂಜೆ ಮಾಡುತ್ತಿರುವಾಗ ಹೊನ್ನಮ್ಮ ಕೈಹಚ್ಚಿ ಮೂರು ಹಿಡಿ ಮಣ್ಣು ತೆಗೆದುದೇ ತಡ ಪ್ರವಾಹದಂತೆ ನೀರು ನುಗ್ಗಿಬಂದಿತು. ಐದು ಕೊಡಗಳಲ್ಲಿ ನೀರು ತುಂಬಿ ಪೂಜೆಗೈದಳು.

ಪೂಜೆಯ ನಂತರ ಮನೆಗೆ ಹೋಗುವ ಸಂದರ್ಭದಲ್ಲಿ ಮಾವನು ಕೆರೆಯಲ್ಲಿ ಬೆಳ್ಳಿ ಬಟ್ಟಲು ಬಿಟ್ಟುಬಂದಿರುವ ವಿಚಾರ ಹೊನ್ನಮ್ಮಳಿಗೆ ತಿಳಿಸಿ ತರಲು ಹೇಳುತ್ತಾನೆ. ಹೊನ್ನಮ್ಮ ಕೆರೆಯಲ್ಲಿ ಒಂದೊಂದು ಕಾಲು ಇಡುತ್ತಿದ್ದಂತೆ ನೀರು ತುಂಬುತ್ತಾ ಹೋಗುತ್ತದೆ. ಆ ಸಂದರ್ಭದಲ್ಲಿ ಅತ್ತೆ ಮಾವರಿಗೆ ನಾನು ನೀರಲ್ಲಿ ಮುಳುಗಿ ಹೋಗುತ್ತಿದ್ದೇನೆಂದು ಕೂಗಿದಾಗ 'ಬಂದರೂ ಬರಲವ್ವ ನೀಗಾಡ ಹೋಗಿ ಬಾರವ್ವ' ಎಂದ ಮಾವನ ಧ್ವನಿ ಕೇಳಿದ ಹೊನ್ನಮ್ಮ ಅಸಹಾಯಕಳಾಗಿ ನಿಂತಳು. ಮಾವನನ್ನು ಕೂಗುತ್ತಲೆ ನೀರಿನಲ್ಲಿ ಮುಳುಗಿದಳು. ಮತ್ತೊಮ್ಮೆ ಮಾವನನ್ನು ಕೂಗಿ

ಹೇಳಿದಳು. ಆದರೆ ಹಿಂಜರಿಕೆಯಿಂದಲ್ಲ, 'ಕತ್ತಲಾಗುತ್ತದೆ ಮಾವ ಒಬ್ಬರೇ ಇಲ್ಲೇಕೆ ಇರಬೇಕು' ಸುರಕ್ಷಿತವಾಗಿ ಮನೆ ಸೇರಿಕೊಳ್ಳಿರಿ ಎಂಬ ಉದಾರ ಹೃದಯದಿಂದ ಕೂಗುತ್ತಾಳೆ.

ನೀರಲ್ಲಿ ಐಕ್ಯವಾದುದನ್ನು ಕಂಡ ಮಾವ ಕೆರೆಯ ಏರಿಯ ಮೇಲೆ ಬಿದ್ದು ಹೊರಳಾಡಿದನು. ನೆನೆದು ಕೈಮುಗಿದನು. ಅದರಂತೆ ಹೊನ್ನವ್ವನು ದೇವರಾಗಿಯೇ ಕೆರೆಯ ಹಿಂಬದಿಯ ಶಿವಲಿಂಗದಲ್ಲಿ ಐಕ್ಯವಾದಳಂತೆ. ಈಗಲೂ ಇಲ್ಲಿ(ಕೆರಯ ಏರಿ ಮೇಲೆ)ನ ಗುಡಿಯನ್ನು ಹೊನ್ನಮ್ಮನ ಗುಡಿ ಎನ್ನುವರು. ಮುಂದೆ ಹೊನ್ನಮ್ಮ ತನ್ನ ಮಗ ದೇವೇಂದ್ರನನ್ನು ತನ್ನೆಡೆಗೆ ಕರೆದುಕೊಂಡಳು.

ಅತ್ತ ಮಲೆನಾಡಿಗೆ ಹೋಗಿದ್ದ ಗಂಡ ಮಲ್ಲನಗೌಡ ಹೆಂಡತಿಯನ್ನು ನೆನೆದು ದುಃಖಿಸಿದನು. ಹೊನ್ನಮ್ಮನ ಇಚ್ಛೆಯಂತೆ ಮಲ್ಲನಗೌಡನಿಗೆ ಚಿಕ್ಕ ಹೊನ್ನಮ್ಮನನ್ನು ಕೊಟ್ಟು ಅವಳ ತಂದೆ ಕೆರೆಯ ಏರಿಯಮೇಲೆಯೇ ಲಗ್ನಮಾಡಿದನು. ಈಗಲೂ ಕಾರ್ತಿಕ ಮಾಸದಲ್ಲಿ ಜನ ಅಣಜಿಯ ಕೆರೆಗೆ ಹೋಗಿ ಹೊನ್ನಮ್ಮಳಿಗೆ ವೀಳ್ಯೆದೆಲೆಯನ್ನು, ಮಗ ದೇವೇಂದ್ರನಿಗೆ ಹಾಲನ್ನು ಬಿಡುತ್ತಾರೆ.

**೪. ಒಡ್ಡರ ಬೋಯಿ**

ಅಣಜಿ ಹೊನ್ನಮ್ಮನಂತೆ ಒಡ್ಡರ ಬೋಯಿ ಕೆರೆಗೆ ಹಾರವಾದರೂ, ಹೊನ್ನಮ್ಮಗಿಂತ ಹಾಗೂ ಹುಳಿಯಾರು ಕೆಂಚಮ್ಮನಿಗಿಂತ ಭಿನ್ನ ವ್ಯಕ್ತಿತ್ವವನ್ನು ಹೊಂದಿದ್ದಾಳೆ. ಕಥನಗೀತೆಯ ಪ್ರಾರಂಭದಲ್ಲಿ ಕೆರೆಯ ಬಗ್ಗೆ ಬಂದಿದೆ. ಅಣಜಿ ಕೆರೆಯನ್ನು ಆ ಊರಿನ ಗೌಡ ಕಟ್ಟಿಸುತ್ತಾನೆ. ಆದರೆ ಕೆರೆಯ ಕೋಡಿ ನಿಲ್ಲುವದಿಲ್ಲ. ಅದನ್ನು ಕಟ್ಟಿದ ಒಡ್ಡರ ಬೀಯಿಗಳನ್ನು ಕರೆದು ಗೌಡ ವಿಚಾರಿಸುವಲ್ಲಿ ಕೆರೆ ಬಯಸುವ ಬಲಿಯನ್ನು ಒಡ್ಡರ ಬೀಯಿಗಳು 'ಬಿಮ್ಮನಸೆ ಬಲಿಕೊಟ್ಟರೆ ಕೆರೆಯ ಕೋಡಿ ನಿಲ್ಲುತ್ತದೆ' ಎನ್ನುತ್ತಾರೆ.

ಗೌಡ ಇವರ ಮಾತು ಕೇಳಿ ಮನೆಯ ಹೆಂಡತಿ, ಮಗ, ಮಗಳು ಯಾರನ್ನು ಬಲಿಕೊಡಲು ಇಷ್ಟಪಡುವುದಿಲ್ಲ. ಆದರೆ ತನ್ನ ಹಿರಿಯ ಸೊಸೆಯನ್ನು ಬಲಿಕೊಡಲು ನಿರ್ಧರಿಸುತ್ತಾನೆ. ಅವಳು ಆಗತಾನೆ ಮಗುವನ್ನು ಹಡೆದಿರುತ್ತಾಳೆ. ಮುಂದೆ ಗೌಡ ತನ್ನ ಸೊಸೆಯನ್ನು ಅವಳ ತೌರಿನಲ್ಲಿ 'ಕೋಡಿಯ ಹಬ್ಬ'ವೆಂದು ಆಕೆಯನ್ನು ಹೊರಡಿಸುತ್ತಾನೆ. ಸೊಸೆ ಸಂಶಯದಿಂದಲೇ ಹೊರಡುತ್ತಾಳೆ. ಕ್ರಮೇಣ ಅವಳಿಗೆ ಬಲಿಯ ವಿಷಯ ಗೊತ್ತಾಗುತ್ತದೆ. ತನ್ನ ತೌರಿಗೆ ಹೋಗಿ ತನ್ನ ಮಾವನನ್ನು ನಿಂದಿಸುತ್ತಾಳೆ. ಇಲ್ಲಿ ಅಣಜಿ ಹೊನ್ನಮ್ಮನಂತೆ, ಹುಳಿಯಾರು ಕೆಮಚಮ್ಮನಂತೆ ಒಡ್ಡರ ಬೋಯಿ ಸ್ವಪ್ರೇರಣೆಯಿಂದ ಒಪ್ಪಿ ಬಲಿಯಾಗುವುದಿಲ್ಲ. ಒಡ್ಡರ ಬೋಯಿ ಇಲ್ಲಿ ಪ್ರತಿಭಟಿಸುವ ರೀತಿ ಹೀಗಿದೆ.

ನಮ್ಮ ಮಾವ ಬಡ್ಡಿಮಗ – ಸುದ್ವೀಯೋ
ಅವ್ರು ಹೊಸಕೆರೆ ಕಟ್ಟಿಸ್ಯವೇ – ಸುದ್ವೀಯೋ
ನನ್ನ ಬಲಿಯಾ ಕೊಡುತ್ತಾರೇ – ಸುದ್ವೀಯೋ[೫೦]

ಒಡ್ಡರ ಬೋಯಿಯು ತನ್ನ ಮಾವ ತನ್ನನ್ನು 'ಹೊಸಕೆರೆಗೆ ಬಲಿಕೊಡುತ್ತಾನೆ' ಎಂದು

ತಂದೆ-ತಾಯಿ, ಅಣ್ಣ-ತಂಗಿಯರ ಹತ್ತಿರ ಹೇಳಿಕೊಂಡು ದುಃಖಿಸುತ್ತಾಳೆ. ಆದರೆ ಇವರಿಂದ ಯಾವುದೇ ಪ್ರತಿಕ್ರಿಯೆ ಇಲ್ಲ. ಸಮಾಧಾನ ಪಟ್ಟುಕೊಂಡು ತನ್ನ ಕಂದನೊಡನೆ ಕೆರೆಯ ಹತ್ತಿರ ಬರುತ್ತಾಳೆ. ಅಲ್ಲೇ ಕಾದಿದ್ದ ಮಾವ ಅವಳನ್ನು ಕೆರೆಗೆ ಬಲಿಯಗುವಂತೆ ಮತ್ತೆ ಒತ್ತಾಯಿಸುತ್ತಾನೆ. ಕೆರೆಗೆ ಪೂಜೆ ಮಾಡಿ ಮೂರು ಬೊಗಸೆ ನೀರು ಕುಡಿದು ಇನ್ನೇನು ಮಾಡಬೇಕು ಮಾವಯ್ಯ ಎಂದಳು. ಆಗ ಮಾವ 'ಅವಳ್ನಿಂದಕ್ಕೆ ತಿರುಗೆಂದಾ ಅವಳು ತಿರುಗಿದಾಗ ಮುಂದಕ್ಕೆ ನೂಕ್ಯಾನೆ' ಅವಳನ್ನು ಮಾವ ಮುಂದಕ್ಕೆ ನೂಕಿದಾಗ ಅವಳು 'ನನ್ನಕ್ಕ ನನ್ನಕ್ಕ ಕಾಲು ತುಂಬ ನೀರು ಬಂತು, ಕೊಳ್ಳವ್ವ ಕಂದಾನ ಎಂದು ಕಂದನನ್ನು ಗಂಗೆಯ ಕೈಯಲ್ಲಿ ಕೊಟ್ಟು ತಾನು ನೀರು ಪಾಲಾದಳು'. ಮೂರು ದಿನಗಳ ನಂತರ ಅವಳ ಶವ ನೀರಿನಮೇಲೆ ತೇಲಾಡುತ್ತದೆ. ಅಷ್ಟರಲ್ಲಿ ದಂಡಿಗೆ ಹೋಗಿದ್ದ ಗಂಡ ಹಿಂತಿರುಗುತ್ತಾನೆ.

ಒಡ್ಡರ ಬೋಯಿಯ ಗಂಡನಿಗೆ ತನ್ನ ಹೆಂಡತಿ ಕೆರೆಗೆ ಬಲಿಯಾದ ವಿಷಯ ತಿಳಿಯುತ್ತದೆ. ಆಗ ಕೆರೆಯ ಸಮೀಪಕ್ಕೆ ಬಂದಾಗ, ಅಲ್ಲಿದ್ದ ಜನರೆಲ್ಲಾ ನಿಮ್ಮಪ್ಪ ಬಡ್ಡೀಮಗ ಹೊಸ ಕೆರೆ ಕಟ್ಟಿಸಿದ್ಧ ಬಲಿಯಾನೆ ಕೊಟ್ಟಾನು' ಎಂದು ಹೇಳಿದರು. ಆಗ ಅವನು ನನ್ನ ಹೆಂಡತಿ ಪತಿವ್ರತೆಯಾಗಿದ್ದರೆ, ನನ್ನ ಕಣ್ಣಿಗೆ ಕಾಣಲಿ ಎಂದಾಗ, ಅದೇ ರೀತಿ ನೀರಿನಿಂದ ಒಡ್ಡರಬೋಯಿ ಎದ್ದು ಬರುತ್ತಾಳೆ. ಆದರೆ ಅವಳ ಮಗು ಸತ್ತು ಹೋಗಿರುತ್ತದೆ.

ಈ ಕಥನಗೀತೆ ಉಳಿದ ಕಥನಗೀತೆಗಳಿಗಿಂತ ಭಿನ್ನವಾಗಿದ್ದು, ಕಥೆಯು ಅತ್ಯಂತ ಸುಖಾಂತವಾಗಿದೆ. ಅವಳ ಪ್ರತಿಭಟನೆ ಇಂದಿನ ಶತಮಾನದ ಹೆಣ್ಣಿಗೆ ಮಾದರಿಯಾಗಿದೆ ಎನ್ನಬಹುದು.

**೫. ಮದಗದ ಕೆಂಚವ್ವ**

ಕೃಷ್ಣಮೂರ್ತಿ ಹನೂರು ಅವರು ಸಂಗ್ರಹಿಸಿರುವ ಮದಗದ ಕೆಂಚವ್ವ ಕಥನವು ಮಾವ ಕಟ್ಟಿಸಿದ ಕೆರೆಗೆ ಬಲಿಯಾದ ಸೊಸೆಯೊಬ್ಬಳ ಕಥೆಯಾಗಿದೆ. ಹಾವೇರಿ ಜಿಲ್ಲೆ ಹಿರೇಕೆರೂರು ತಾಲೂಕು ಮಾಸೂರು ಗ್ರಾಮದಿಂದ ಎರಡು ಮೈಲಿ ದೂರದಲ್ಲಿ ಮದಗದ ಕೆರೆ ಇದೆ. ವಿಸ್ತಾರವಾದ ಕೆರೆ, ಸುತ್ತಮುತ್ತಲಿನ ಜನರು 'ಮದಗದ ಕೆಂಚವ್ವನ ಗುಡಿ' ಕೆರೆಯ ನೀರಿನಲ್ಲಿ ಮುಳಗಿ ಹೋಗಿದೆ ಎನ್ನುತ್ತಾರೆ. ಕೆಂಚವ್ವನ ಹೆಸರಿನಲ್ಲಿ ಕೆರೆಯ ಏರಿಯ ಮೇಲಿರುವ ಮಂಟಪವೊಂದಕ್ಕೆ ಪೂಜೆ ನಡೆಯುತ್ತದೆ. ಆದರೆ ಆ ಮಂಟಪದೊಳಗೆ ಇರುವುದು ಒಂದು ಬಸವಣ್ಣನ ವಿಗ್ರಹ ಮಾತ್ರ ಎಂದು ಹೇಳುತ್ತಾರೆ.[೫೦]

ಕೆಂಚವ್ವನ ಮಾವ ತನ್ನ ಮಗಳು ನೀರು ತರುವುದು ದೂರವೆಂದು ಭಾವಿಸಿ ಒಂದು ಕೆರೆಯನ್ನು ಕಟ್ಟಿಸುವುದು ಮುಖ್ಯಕಾರಣವಾಗಿತ್ತು. ಮಗಳ ಒತ್ತಾಯದಂತೆ ತಂದೆ ವಡ್ಡರ ದ್ಯಾಮಣ್ಣನನ್ನು ಕರೆತಂದು ಅಪ್ಪಣೆ ಮಾಡಿದನು. ಹೊತ್ತು ಹುಟ್ಟಿ ಮುಳಗಿ, ಏಳುತ್ತಿದ್ದಂತೆ ಅಡಿಮಣ್ಣ ಬುಡಮೇಲು ಮಾಡಿದ. ಆಗ ಗಂಗಮ್ಮ ಕಾಣಿಸಿಕೊಂಡಳು. ಕಾಣಿಸಿಕೊಂಡ ಗಂಗಮ್ಮ ಕಟ್ಟಿಸಿದ ಯಜಮಾನನ ಹೆಂಡತಿಯನ್ನು ಕೊಟ್ಟರೆ ಅಲ್ಲಿ ಬಹುಕಾಲ ನಿಲ್ಲುವಂತೆ ತಿಳಿಸಿದಳು. ಈ ಮಾತನ್ನು ಕೇಳಿದ ಯಜಮಾನನ ಹೆಂಡತಿ, ಮಗಳನ್ನು ಬಲಿನೀಡಲು ನಿರಾಕರಿಸಿದ. ಕೊನೆಗೆ ಮದುವೆಯಾಗದ

ತನ್ನ ಮಗ ಗೂಳೇಸನಿಗೆ ತನ್ನ ತಂಗಿ ಮಗಳಾದ ಕೆಂಪಚ್ಚವ್ವನನ್ನು ಮದುವೆಮಾಡಿದ. ನಂತರ ಮಗನಿಗೆ ಹೊನ್ನು, ಬೆಳ್ಳಿ, ಮುತ್ತನ್ನು ಸಂಪಾದಿಸಿ ತರುವಂತೆ ದೇಶದ ಮೇಲೆ ಕಳುಹಿಸಿದ. ಮುಂದೆ ಕೆಂಚವ್ವ ಒಂದು ಮಗುವಿಗೆ ತಾಯಿಯಾದಳು. ದಿನ ಅತ್ತೆ ಮಾವರ ಜೋಡಿ ಹೊಸದಾಗಿ ಕಟ್ಟಿಸಿದ ಕೆರೆಯ ಕಡೆಗೆ ಪೂಜೆಗೆಂದು ಎಡೆ ಹಿಡಿದು ನಡೆದಳು. ಪೂಜೆಯ ನಂತರ ಕೆಂಚವ್ವ ಮತ್ತು ಅವಳ ಮಗು ಉಕ್ಕಿಬಂದ ನೀರಿನ ಪಾಲಾದರು. ಮುಂದೆ ತನ್ನ ಗಂಡ ಗೂಳೇಸನ ಕನಸಿನಲ್ಲಿ ಕಾಣಿಸಿಕೊಂಡು, ತನ್ನ ತಂಗಿ 'ಮರಿಕೆಂಚಿ'ಯನ್ನು ಮದುವೆಯಾಗುವಂತೆ ಹೇಳಿದಳು. ಅವಳ ಇಚ್ಛೆಯಂತೆ ಮರಿಕೆಂಚಿಯನ್ನು ವಿವಾಹವಾಗುತ್ತಾನೆ.

ಈ ಕಥನಗೀತೆಯಲ್ಲಿ ಮಾವನ ದೌರ್ಜನ್ಯ ಎದ್ದುಕಾಣುತ್ತದೆ. ತನ್ನ ಹೆಂಡತಿ ಮತ್ತು ಮಗಳನ್ನು ಬಲಿಕೊಡದೇ ತನ್ನ ಮಗನಿಗೆ ಮದುವೆಮಾಡಿಸಿದ್ದು, ಮಗನನ್ನು ಉದ್ದೇಶಪೂರ್ವಕವಾಗಿ ಸಂಪತ್ತುಗಳಿಕೆಗಾಗಿ ಹೊರದೇಶಕ್ಕೆ ಕಳುಹಿಸುವುದು ಕಂಡುಬರುತ್ತದೆ. ಹೆಂಡತಿಯನ್ನು ಕಳೆದುಕೊಂಡ ಗೂಳೇಸನ ದುಃಖಿಸುವುದು ಹೃದಯ ಕಲಕುವಂತಿದೆ. ಈ ದುಃಖ ನೋಡಲಾರದೆ ಕೆಂಚವ್ವ ಮರುಮದುವೆ ಮಾಡಿ ಪುನಃ ಗಂಗೆಯಲ್ಲಿ ಲೀನವಾಗುವುದು ರಮ್ಯಾಂಶವಾಗಿದೆ.

**ಕೆರೆಗೆಹಾರ :** ಜನಮನದಲ್ಲಿ ಸುಪ್ರಸಿದ್ಧ ಕಥನಗೀತೆ ಇದಾಗಿದೆ. ಈ ಕಥನಗೀತೆಯ ಬಗ್ಗೆ ಈಗಾಗಲೇ ಅನೇಕ ಪಾಠಾಂತರಗಳು ಬಂದಿವೆ. ಆದರೂ ಸಹ ಅಲ್ಪಸ್ವಲ್ಪ ಬದಲಾವಣೆಗಳು ಬಿಟ್ಟರೆ ಉಳಿದ ಕಥಾವಸ್ತು ಒಂದೇ ಆಗಿರುತ್ತದೆ. ಈ ಕಾವ್ಯವನ್ನು ಬೆಟಗೇರಿ ಕೃಷ್ಣಶರ್ಮರವರು ಸಂಗ್ರಹಿಸಿದ್ದಾರೆ. ಊರಿನ ಹಿತಕ್ಕಾಗಿ ಕಲ್ಲನ ಕೇರಿಯ ಮಲ್ಲನಗೌಡ ಕೆರಯೊಂದು ಕಟ್ಟಿಸುತ್ತಾನೆ. ಆದರೆ ಅದರಲ್ಲಿ ತುಸುಮಾತ್ರ ನೀರು ಇಲ್ಲ. ಅಂತಹ ಸಂದರ್ಭದಲ್ಲಿ ಹೊತ್ತಿಗೆ ತೆಗೆಸಿ ಕೇಳಿದಾಗ ಹಿರಿಸೊಸೆ ಮಲ್ಲವ್ವನನ್ನು ಹಾರ ಕೊಡಬೇಕು ಆಗ ನೀರು ಬರುತ್ತದೆ ಎಂದು ಜೋತಿಷ್ಯಕಾರ ಹೇಳುತ್ತಾನೆ. ಹಿರಿಸೊಸೆ ಹಾರಕೊಟ್ಟರೆ ಹಿರಿತನಕ ಯಾರು ಇಲ್ಲ ಎಂದು ತಿಳಿದು ಕಿರಿಸೊಸೆ ಭಾಗೀರತಿಯನ್ನು ಹಾರಕೊಡುವುದಕ್ಕೆ ತೀರ್ಮಾನಿಸುತ್ತಾನೆ.



ಈ ಕಥನಗೀತೆಯಲ್ಲಿ ಜ್ಯೋತಿಷ್ಯ ಮನೆಯ ಹಿರಿಯ ಸೊಸೆಯನ್ನು ಬಲಿಕೊಡುವುದು ಎಂದು ಹೇಳಿದರು. ಮಲ್ಲನಗೌಡ ಕಿರಿಯ ಸೊಸೆ ಭಾಗೀರತಿಯನ್ನು ಕೊಡಲು ಮುಂದಾಗುತ್ತಾನೆ. ಭಾಗೀರತೀ ತೌರುಮನೆಗೆ ಹೋದಾಗ 'ಎಂದೂ ಬಾರದ ಮಗಳು ಇಂದ್ಯಾಕೆ ಬಂದೆವ್ವ ಬಾಡಿದ ಮಾರ್‍ಯಾಗ ಕಣ್ಣಾಗ ನೀರೇಕೆ?' ಎಂದು ಅಪ್ಪ ಕೇಳಿದ. ಹಾರ ಕೊಡುವ ವಿಚಾರ ಮರೆಮಾಚಿ ಮಾವನವರು ನನ್ನನ್ನು ಬ್ಯಾರೆ ಇಡುತ್ತಾರಂತೆ ಎಂದು ಹೇಳಿದಾಗ ಇಟ್ಟರೆ ಇಡಲಿ 'ಹೊಲ ಮನೆ ಕೊಡುತೇನು ಚಿಂತಿಸಬೇಡ' ಎಂದಾಗ ಪ್ರತಿಕ್ರಿಯೆಯಾಗಿ ಭಾಗೀರತಿ ಅದನ್ನು ಹೊಳಿ ದಂಡ್ಯಾಗ್ಹಾಕಪ್ಪ

ಎನ್ನುತ್ತಾಳೆ. ಆಗಲು ಅವಳ ಮನೋವೇದನೆ ಅವರಿಗೆ ಅರ್ಥವಾಗುವುದಿಲ್ಲ. ಕೊನೆಗೆ ತನ್ನ ಗೆಳತಿ ಹತ್ತಿರ ನನ್ನನ್ನು ಮಾವ ಕೆರೆಗೆ ಹಾರ ಕೊಡುತ್ತಾರಂತೆ ಎಂದು ಹೇಳಿದಾಗ ಅವಳಿಗೆ ಕೊಟ್ಟರೆ ಕೊಡಲೇಳು ಎನ್ನುವ ಮೂಲಕ ಅವಳನ್ನು ಸಮಾಧಾನ ಪಡಿಸುತ್ತಾಳೆ.

ಇವಳ ನೋವು ಯಾರಿಗೂ ಅರ್ಥವಾಗದೇ ಪುನಃ ವಾಪಸ್ಸು ಮಾವನ ಮನೆಗೆ ಬರುತ್ತಾಳೆ. ಪೂಜೆಗೆ ಸಿದ್ಧರಿದ್ದ ಅತ್ತೆ–ಮಾವರು ಕೆರೆಗೆ ಕರೆತಂದು ಪ್ರಜೆಮಾಡಿ ಬರುವಾಗ ಮಾವ 'ಬಂಗಾರದ ಬಟ್ಟಲು' ಕೆರೆಯಲ್ಲಿ ಬಿಟ್ಟುಬಂದಿರುತ್ತಾನೆ. ಅದನ್ನು ತರಲು ಭಾಗೀರತಿಗೆ ಹೇಳುತ್ತಾರೆ. ಕೆರೆಗೆ ಭಾಗೀರತಿ ಇಳಿದ ಕೂಡಲೇ ಗಂಗಮ್ಮ ತುಂಬಿ ಹರಿದು ಭಾಗೀರತಿಯನ್ನು ಮುಳುಗಿಸಿಕೊಂಡಳು. ನಂತರ ದಂಡಿನಲ್ಲಿದ್ದ ಗಂಡ ಮಾದೇವರಾಯನಿಗೆ ಕೆಟ್ಟ ಕನಸು ಬೀಳುತ್ತದೆ. ಇದರಿಂದ ದಂಡನ್ನು ಅರ್ಧಕ್ಕೆ ನಿಲ್ಲಿಸಿ ವಾಪಾಸಾಗುತ್ತಾನೆ.

ಮಾದೇವರಾಯ ಮನೆಗೆ ಬಂದಾಗ ಹೆಂಡತಿಯ ವಿಚಾರ ಯಾರು ಹೇಳುವುದಿಲ್ಲ. ತನ್ನ ಹೆಂಡತಿಯ ಗೆಳತಿಯಿಂದ ವಿಷಯ ತಿಳಿಯುತ್ತದೆ. 'ಸಾವಿರ ವರಹ ಕೊಟ್ಟರು ಸಿಗಲಾರದ ಸತಿ ನೀನು ನನ್ನ ಬಿಟ್ಟು ಎಲ್ಲಿಗೆ ಹೋದೆ' ಎಂದು ದುಃಖಪಡುತ್ತಾನೆ. ಹೆಂಡತಿಯ ಅಗಲಿಕೆಯನ್ನು ಸಹಿಸದ ಮಾದೇವರಾಯ, ತಾನು ಕೆರೆಯಲ್ಲಿ ಮುಳುಗಿದ. ಕೆರೆಗೆ ಹಾರದ ಕಥನಗೀತೆಗಳನ್ನು ಗಮನಿಸಿದಾಗ ನಾಯಕಿ ತನ್ನ ಗಂಡನಿಗೆ ಮರು ಮದುವೆ ಮಾಡುವುದು, ಸಮಧಾನ ಮಾಡುವುದು ಕಂಡು ಬರುವುದಿಲ್ಲ. ಆದರೆ ಈ ಕಥನಗೀತೆಯಲ್ಲಿ ಭಾಗೀರತಿ ಕೆರೆಗೆ ಹಾರವಾದ ಮೇಲೆ ಕೆರೆಯಿಂದ ಮೇಲೆ ಬರುವುದಿಲ್ಲ. ಗಂಡನಿಗೆ ಮರು ಮದುವೆ ಮಾಡುವುದಿಲ್ಲ. ಕೆರೆಗೆ ಮುಳುಗಿದ ಮೇಲೆ ಸಾವು ಖಚಿತ ಎಂಬುದನ್ನು ನೈಜವಾಗಿ ಇಲ್ಲಿ ಕಾಣಬಹುದು. ಬೇರೆ ಕಥನಗೀತೆಗಳಿಗಿಂತ ಅಂತ್ಯ ಭಿನ್ನವಾಗಿದೆ. ಮನೆಯ ಹಿರಿಯ ಸೊಸೆ ವಿರೋಧದ ವ್ಯಕ್ತದಿಂದಲೂ, ಆರ್ಥಿಕತೆಯಿಂದ ಬಲಿಷ್ಠರು ಆಗಿರುವುದರಿಂದಲೂ ಅವಳನ್ನು ಬಲಿಕೊಡುವುದಿಲ್ಲ ಎಂಬುದು ಇಲ್ಲಿ ಗೊತ್ತಾಗುತ್ತದೆ.

### ೬. ಮಲ್ಲಿಗೆ ಮಾದೇವಿ

ಮಲ್ಲಿಗೆ ಮಾದೇವಿ ಕಥನ ಕಾವ್ಯವು ಹಾರದ ಆಶಯವನ್ನೆ ಒಳಗೊಂಡಿದೆ. ಇದನ್ನು ಡಿ. ಲಿಂಗಯ್ಯನವರು ಸಂಗ್ರಹಿಸಿದ್ದಾರೆ. ಶ್ರೀಮಂತನಾದ ಮಾದ ಮೇಸ್ತ್ರಿಯು ಊರಿನ ಹಿತಕ್ಕಾಗಿ ಮೂರು ಬಿಂದಿಗೆ ಹಣ ಖರ್ಚುಮಾಡಿ 'ಕಟ್ಟೆಬಾಳ'ನ್ನು ಕಟ್ಟಿಸಿದ. ಆದರೆ ಅದು ಸಾಯಂಕಾಲ ಸಮಯಕ್ಕೆ ಸರಿಯಾಗಿ 'ಮದಗಟ್ಟೆ' ಬಿದ್ದು ಹೋಗುತ್ತಿತ್ತು. ಹಣ ಖರ್ಚು ಮಾಡಿದ್ದಕ್ಕೂ ಸಾರ್ಥಕ ವಾಗುತ್ತಿರಲಿಲ್ಲ. ಮೇಸ್ತ್ರಿ ಮಾದ ಬೇಸತ್ತು ಮಲಗಿದ. ಮೇಸ್ತ್ರಿಗೆ ಪಾರ್ವತಿ ಪರಿಮೇಶ್ವರರು ಕನಸಿನಲ್ಲಿ ಬಂದು 'ರಾಮ ಲಕ್ಷ್ಮಣ' ಎಂಬ ಎರಡು ಎತ್ತುಗಳನ್ನು ಬಲಿಕೊಟ್ಟರೆ, ಕಟ್ಟೆ ನಿಲ್ಲುತ್ತದೆ ಎಂದರು. ಅದರಂತೆ ಎತ್ತುಗಳನ್ನು ಬಲಿಕೊಟ್ಟಾಗಲೂ ಕಟ್ಟೆ ನಿಲ್ಲುವುದಿಲ್ಲ. ಅದೇ ಚಿಂತೆಯಲ್ಲಿದ್ದಾಗ ಪುನಃ ಪಾರ್ವತಿ ಪರಮೇಶ್ವರರನ್ನು ಕನಸಿನಲ್ಲಿ ಕಾಣಿಸಿಕೊಂಡು ಮೇಸ್ತ್ರಿ ಕಿರಿಯ ಸೊಸೆ ಎಂಟು ದಿನದ ಬಾಣಂತಿಯನ್ನು ಮಗುವಿನ ಸಹಿತ ಬಲಿಕೊಟ್ಟರೆ ಕಟ್ಟೆ ನಿಲ್ಲುವುದೆಂದರು. ಆಗ ಮೇಸ್ತ್ರಿಯ

ದುಃಖ ಮತ್ತಷ್ಟು ಹೆಚ್ಚಾಯಿತು. ಕೆಲವು ಕಥನಗೀತೆಗಳಲ್ಲಿ ಸ್ವತಃ ಮಾವನೇ ಸೊಸೆಯ ಬಲಿಕೊಡಲು ಮುಂದೆ ಬಂದರೆ ಮಲ್ಲಿಗೆ ಮಾದೇವಿಯ ಮಾವ ಸೊಸೆಯನ್ನು ಈ ಕಥನಗೀತೆಯಲ್ಲಿ ಬಲಿಕೊಡಲು ಇಚ್ಚಿಸುವುದಿಲ್ಲ. ಸೊಸೆಗಾಗಿ ದುಃಖಿಸುತ್ತಾನೆ.

ಸತ್ವಂತೆ ಮಾದೇವಿ
ಅವಳೆಂಟು ದಿನ್ನ ಬಾಣಂತಿ
ಅವಳ್ಮಗೀನ ಸೈವಾಗಿ
ಕಟ್ಟೆತಾಳಲ್ಲಿ ಬಂದು ಅವ್ವ ನಿಂತ್ಕಲ್ಲೆಬೇಕೆಂದು
ಪಾರ್ವತಿ ಪರಮೇಶ್ವರರು
ಹಾಗಂತ ಅವರೀಗ ಮಾದಮೇಸರಿ ಕನಸ್ಗೆ ಅವರು ಹೇಳಿಬಿಟ್ಟರು[೨೨]

ಸ್ವತಃ ತಾನೇ ತನ್ನ ಮಗುವಿನೊಡನೆ ಜನೋಪಕಾರಕ್ಕಾಗಿ ಹಾರಕ್ಕೆ ಸಿದ್ಧವಾಗಿ ಪೂಜೆಗೆ ಸಿದ್ಧವಾಗುತ್ತಾಳೆ. ಕಟ್ಟೆತಾಳಕ್ಕೆ ಬಂದು ಗಂಗೆ ಪೂಜೆ ಮಾಡಿ 'ಗಂಗಮ್ಮ ಗಂಗಮ್ಮ ನನ್ನ ಮ್ಯಾಲೆ ಹರಿಯೆ' ಎಂದು ಏಕ ಚಿತ್ತದಿಂದ ಪ್ರಾರ್ಥಿಸುತ್ತಾಳೆ. ಅವಳ ಸತ್ಯವಂತೆಗೆ ಮೆಚ್ಚಿ ಗಂಗೆ ಅವಳ ಮೇಲೆ ಉಕ್ಕಿ ಹರಿದಳು. ಮಾದೇವಿ ಗಂಗೆಯಲ್ಲಿ ಲೀನಾವಾದಳು. ಈ ಕಥನದಲ್ಲಿ ಗಂಡನ ಸುದ್ಧಿಯಿಲ್ಲದಿರುವುದು ವಿಶೇಷ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯರ ಬಗ್ಗೆ ಮಾನವೀಯತೆಯ ಅಂಶ ಉಳಿದಿದೆ. ಜನತೆಯ ಒಳತಿಗಾಗಿ ಸ್ವ ಪ್ರೇರಣೆಯಿಂದ ಬಲಿಯಾಗುವುದು.

**೭. ಕೆರೆ ಹೊನ್ನಮ್ಮ**

ಕೆರೆಹೊನ್ನಮ್ಮ ಕಥನಕಾವ್ಯವನ್ನು ಟಿ.ಎಸ್. ರಾಜಪ್ಪ ಅವರು ಸಂಪಾದಿಸಿದ್ದಾರೆ. ಇದು ಕೂಡ ಕೆರೆಗೆಹಾರದ ಆಶಯ ಹೊಂದಿದೆ. ಮಲ್ಲೆಗೌಡ ಜನಹಿತಕ್ಕಾಗಿ ಅಡ್ಡ ಆರು ಮಾರು, ಉದ್ದ ಒಂಭತ್ತು ಮಾರು, ಹನ್ನೆರಡು ಆಳುದ್ದ ಕೆರೆಯನ್ನು ತೆಗೆಯಲು ಒಪ್ಪಂದ ಮಾಡಿಕೊಂಡ ಒಡ್ಡರ ಗೌಡ ಕೆರೆಯನ್ನು ತೆಗೆಸಿದ. ಕೆರೆಯಲ್ಲಿ ನೀರು ಮಾತ್ರ ಬರಲಿಲ್ಲ. ಒಂದು ದಿನ ಒಡ್ಡಗೌಡ ಒಮ್ಮೆ ಮಲಗಿದ್ದಾಗ, ಕನಸಿನಲ್ಲಿ ತನ್ನ ಹೆಂಡತಿಯನ್ನು ಕೆರೆ ಆಹುತಿ ಕೇಳಿತು. ಇದರಿಂದ ಹೆಚ್ಚಿತ್ತು ಹೆಂಡತಿಯನ್ನೂ ಕರೆದುಕೊಂಡು ಊರೇ ಬಿಟ್ಟುಹೋದ.

ಇತ್ತ ಮಲ್ಲೆಗೌಡರು ಕೆರೆಗೆ ಜಲ ಬಂದಿಲ್ಲವೆಂದು ಚಿಂತೆ ಮಾಡುತ್ತಾ ಮಲಗಿದ್ದಾಗ ಸ್ವಪ್ನ ಬೀಳುತ್ತದೆ. ಗೌಡರ ಕಿರು ಬೆರಳನ್ನು ಕೆರೆಗೆ ಆಹುತಿ ಕೊಟ್ಟರೆ ಕೆರೆ ತುಂಬುತ್ತದೆ ಎಂದು ಯಾವುದೋ ಶಕ್ತಿ ತಿಳಿಸುತ್ತದೆ. ಆಗ ಗೌಡ ಕಿರು ಬೆರಳು ಕೊಟ್ಟಾರೆ 'ಮೋಟ' ಎನ್ನುವರು ಎಂದುತಿಳಿದ. ಮಗ, ಮಗಳು, ಹೆಂಡತಿಯನ್ನು ಹಾರಕೊಡಲು ಮನಸಿರಲಿಲ್ಲ. ಅದಕ್ಕಾಗಿ ಮನೆಯ ಹಿರಿಯ ಸೊಸೆ ಹೊನ್ನಮ್ಮನನ್ನು ಹಾರ ಕೊಡಲು ನಿರ್ಧರಿಸಿದ.

ಹೊನ್ನಮ್ಮ ವಿಧಿಯಿಲ್ಲದೆ ಕೆರೆಗೆ ಆಹುತಿಯಾಗಲು ಒಪ್ಪಿದಳು. ಆದರೆ ಅವಳ ದುಃಖ ಹೆಪ್ಪುಗಟ್ಟಿರುವುದನ್ನು ಅವಳ ಮಾತುಗಳಿಂದ ತಿಳಿಯಬಹುದು. "ಗಂಡ ಘಟ್ಟಕ್ಕೆ ಹೋದನು, ಮಾವ ಕೆರೆಕಟ್ಟಿಸಿ, ಆಹುತಿಗೆ ನೀಡುವರು ನನ್ನ ಮೂರು ತಿಂಗಳು ಕಂದಾನ ನೋಡಿ ತಬ್ಬಲಿ

ಮಾಡವರೆ ನಾ ಹೋಗಿ ಬತ್ತೀನಂತಾ"[೫೩] ಎಂದು ದುಃಖ ವ್ಯಕ್ತಪಡಿಸುವಳು. ಚಿಕ್ಕ ಹೊನ್ನಿಯನ್ನು ತನ್ನ ಗಂಡನಿಗೆ ಮದುವೆ ಮಾಡಿ ಎಂದು ಹೇಳಿ ಮಾವ ಕಟ್ಟಿಸಿದ ಕೆರೆಗೆ ಬಂದು ಪೂಜೆ ಮಾಡುತ್ತಾಳೆ. ಒಂದೊಂದೆ ಹಂತವನ್ನು ಇಳಿಯುತ್ತಾ ಹೋಗುತ್ತಿದ್ದಂತೆಯೇ ಕೆರೆಯಲ್ಲಿ ನೀರು ತುಂಬಿ ಬರುತ್ತದೆ. ಮಗುವಿನ ಸಮೇತ ಹಾರವಾಗುತ್ತಾಳೆ.

ಅತ್ತ ಘಟ್ಟಕ್ಕೆ ಹೋದ ಗಂಡ ಕನಸು ಕಂಡು, ಊರಿಗೆ ಬಂದಾಗ, ಹೊನ್ನಮ್ಮಳು ಕೆರೆಗೆ ಆಹುತಿಯಾದ ವಿಚಾರ ತಿಳಿದು, ಕೆರೆಯ ಹತ್ತಿರ ಬಂದು ದುಃಖದಿಂದ ಹೆಂಡತಿಯನ್ನು ಕರೆಯುತ್ತಾನೆ. ನೀರಿನಿಂದ ಮೇಲೆ ಬಂದ ಹೆಂಡತಿಯ ಸೆರಗನ್ನು ಹಿಡಿದುಕೊಂಡು ಹೆಂಡತಿ ಮಗುವಿನೊಡನೆ ಐಕ್ಯವಾಗುತ್ತಾನೆ. ಮೈದುನ ಸಹ ಮೂವರು ಹೋದಮೇಲೆ ನಾನು ಬರುವೆನೆಂದು ಕೆರೆಗೆ ಹಾರಲು ಮುಂದೆಯಾದಾಗ ಹೊನ್ನಮ್ಮಳೇ ತಡೆದು ಲೋಕ ಅಪವಾದ ಬರುತ್ತದೆ ಎಂದೂ, ಕೆರೆಯ ದಡದಲ್ಲಿ ಬಸವಣ್ಣನಾಗಿ ಒಡದು ಮೂಡು ಎಂದು ಅಪ್ಪಣೆ ಕೊಡುತ್ತಾಳೆ. "ವರ್ಷಕ್ಕೊಂದು ಸಲ ಪೂಜೆ ನಿನಗೆ ನಡೆದು ಬರಲಿ, ನನಗಿಂತ ನಿನಗೆ ಹೆಚ್ಚಿಗೆ ಹೂವುಗಳು ಬರಲೆಂದು ಹಾರೈಸುತ್ತಾಳೆ".

ಹೀಗೆ ಕೆರೆಗೆಹಾರವಾದ ಹಿನ್ನೆಲೆಯಲ್ಲಿ ಅನೇಕ ಕಥನಗೀತೆಗಳನ್ನು, ಲಾವಣಿಗಳನ್ನು, ಖಂಡಕಾವ್ಯಗಳನ್ನು, ಜನಪದ ಗೀತೆಗಳನ್ನು ಗುರುತಿಸಬಹುದು. ಈ ಮೇಲಿನ ಕಥನಗೀತೆಗಳ ಜೊತೆಗೆ ಬಾವಿ ನೀರಿಗಾಗಿ ಸೊಸೆಯ ಬಲಿ, ಹೊಸಕೆರೆ ನಾನಿಲ್ಲುವವಳಲ್ಲ ಕೆರೆಗೆಹಾರ ಕೆರೆಪೂಜೆ ಈ ಎಲ್ಲಾ ಕಥೆಗಳ ಆಶಯ ಒಂದೇ. ನೀರಿಗಾಗಿ ಬಲಿಯಾಗುವುದು. ಕೆರೆಕಟ್ಟೆ ಒಡೆದಾಗ ಬಲಿಯಾಗಿರುವುದು ಕಂಡುಬಂದಿದೆ. ಕೆಲವು ಕಡೆ ಹಿರಿಯ ಸೊಸೆ ಕಂಡುಬಂದರೆ ಕೆಲವು ಕಡೆ ಕಿರಿಯ ಸೊಸೆ ಕಂಡುಬರುತ್ತಾಳೆ. ಕೆಲವು ಕಥನಗಳಲ್ಲಿ ಕೆಲವು ಕಡೆ ಸುಖಾಂತವಾದರೆ ಕೆಲವು ಕಡೆ ದುಃಖಾಂತವಾಗಿರುತ್ತದೆ. ಆದರೂ ಆಶಯ ಒಂದೇ 'ಬಲಿಯಾಗುವುದು' ಪುರುಷ ಪ್ರಧಾನ ನಿರ್ಮಿತ, ವ್ಯವಸ್ಥಿತ ಸಮಾಜದ ಮೌಲ್ಯಕ್ಕೆ ಸೊಸೆ ಬದ್ಧಳಾಗುವುದು ಕಂಡುಬರುತ್ತದೆ. ಇಲ್ಲಿ ಮಾವ ಸೊಸೆಯನ್ನು ಶೋಷಣೆ ಮಾಡುತ್ತಾನೆ.

### ೮. ಧರಣಿಯಮ್ಮ

ಕೋಟೆಗೆ ಬಲಿಯಾದವರಲ್ಲಿ ಧರಣಿಯಮ್ಮ ಪ್ರಮುಖಳು. ಕೆರೆ ಕಟ್ಟೆಗೆ ಬಲಿಯಾದವರನ್ನು ಈ ಕಥೆ ಹೋಲುತ್ತದೆ. ಕೋಟೆಗೆ ಬಲಿಯಾದವರ ಸಂಖ್ಯೆ ತುಂಬಾ ಕಡಿಮೆ. ನೀರಿಗೆ, ಬೆಂಕಿಗೆ, ಸಹಗಮನ ಮಾಡುತ್ತಿದ್ದವರ ಸಂಖ್ಯೆ ಕಡಿಮೆ. ಧರಣಿಯಮ್ಮನ ಕಥೆ ನಡೆದ ಸ್ಥಳ, ಆ ಬಗ್ಗೆ ಐತಿಹಾಸಿಕ ಆಧಾರ, ಗುರುತುಗಳು ಇಂದು ಸಿಗುವುದಿಲ್ಲ. ಕೋಟೆಯ ಗೋಡೆ ಹೆಚ್ಚು ಕಾಲ ಉಳಿಯುವ ಸಾಧ್ಯತೆಯಿಲ್ಲವಾಗಿ



ಧರಣಿಯಮ್ಮನ ಹೆಸರಿನಲ್ಲಿ ಎದಿದ್ದ ಗುಡಿಯು ಬಹುಶಃ ಕೋಟೆಯೊಡನೆ ಉರುಳಿರಬೇಕು ಎಂಬ ಅಭಿಪ್ರಾಯವಿದೆ.[೫೪]

ಧರಣಿಯಮ್ಮನ ಕಥೆಯಲ್ಲಿ ಕೋಟೆ ಕಟ್ಟಿಸುವುದರ ಆಶಯ ಮುಖ್ಯವಾಗಿದೆ. ಧರಣಿಯಮ್ಮನ ಮಾವ ಹೇಮಾರೆಡ್ಡಿಯು, ಊರ ಸುತ್ತ ಕೋಟೆ ಎಬ್ಬಿಸುವ ಯೋಚನೆ ಮಾಡಿ ರಟ್ಟಿಹಳ್ಳಿಯಿಂದ ವಡ್ಡರ ದ್ಯಾಮಣ್ಣನನ್ನು ಕರೆಸಿದ. ದ್ಯಾಮಣ್ಣ ಕೋಟೆ ಕಟ್ಟಲು ಶುರುಮಾಡಿದೆ. ಕೋಟೆ ಕಟ್ಟಿದಂತೆಲ್ಲಾ ಅದು ಕುಸಿಯುತ್ತಾ ಬಂದಿತು. ಅನುಮಾನ ಬಂದ ಹೇಮರೆಡ್ಡಿಯು ಹೊತ್ತಿಗೆ ತೆಗೆಸಿ ನೋಡಿದಾಗ ಕೋಟೆಗೋಡೆ ಬಲಿ ಕೇಳುತ್ತದೆ. ಎಂದು ಬಂದು ಮಾವ ಹಿಂದು ಮುಂದು ಆಲೋಚಿಸದೆ, ಸೊಸೆ ಧರಣಿಯಮ್ಮನನ್ನು ಬಲಿಕೊಡಲು ನಿರ್ಧರಿಸಿದನು. ಈ ವಿಚಾರ ತಿಳಿದದ್ದೆ ತಡೆ ಸೊಸೆ ಒಲ್ಲದ ಮನಸ್ಸಿನಿಂದ, ವಿಲ್ಲದೆ ಬಲಿಯಾಗಲು ಸಿದ್ಧಳಾದಳು. ಊರ ಹಿತಕ್ಕಾಗಿ ಪ್ರಾಣ ತೆತ್ತುವುದು, ಮುಂದೆ ಗಂಡನ ಹಿತಕ್ಕಾಗಿ ತನ್ನ ತಂಗಿಯನ್ನು ಮದುವೆ ಮಾಡಿಸುವುದು, ಇವೆಲ್ಲಾ ಧರಣಿಯಮ್ಮನ ತ್ಯಾಗಕ್ಕೆ ಸಾಕ್ಷಿಯಾಗಿದೆ.[೫೫]

### ೫.೫. ದೈವ ಸಂಬಂಧಿ ಕಥನಗೀತೆಗಳಲ್ಲಿ ಮಹಿಳೆ

ಸಮಾಜದಲ್ಲಿ ಜನಪದರ ನಿತ್ಯ ಬದುಕಿನ ಕ್ಷಣಕ್ಷಣದಲ್ಲೂ ದೇವರನ್ನು ಸ್ಮರಿಸಿಕೊಂಡು, ಜೀವನವನ್ನು ನಡೆಸುತ್ತಾ ಬಂದಿದ್ದಾರೆ. ದೇವರನ್ನು ಕಾಣುವ ಜನಪದರಿಗೆ ಭೂಮಿ, ಆಕಾಶ, ಪ್ರಕೃತಿ ಎಲ್ಲವೂ ದೈವಮಯವಾಗಿದೆ. ಇಂತಹ ಅಂಶಗಳು ಜನಪದಗೀತೆ, ಕಥನಗೀತೆ, ಲಾವಣಿಗಳಲ್ಲಿ ಕಂಡುಬರುತ್ತವೆ. ಅವರು ಪೂಜಿಸುವ ಶಿವ, ವಿಷ್ಣು, ಹನುಮಂತ, ವಿದ್ಯೆ ಕಲಿಸುವ ಗುರುಗಳಾದ ಸರಸೋತಿ ಬೆನವಣ್ಣ ಊರಿನ ಸಮಸ್ತ ರಕ್ಷಣೆಯ ಭಾರಹೊತ್ತಿರುವ ಊರಮ್ಮ ಮಾರಮ್ಮಗಳ ಮಹಿಮೆಯನ್ನು, ಅವರ ಸತ್ಯ ಸಿರಿಯನ್ನು ಹಾಡಿ ಪ್ರಶಂಸಿರುವುದನ್ನು ಜನಪದ ಸಾಹಿತ್ಯದಲ್ಲಿ ಗುರುತಿಸಬಹುದು.

ಜನಪದರಿಗೆ ದೇವರ ಬಗ್ಗೆ ಅಪಾರವಾದ ನಂಬಿಕೆ, ಭಕ್ತಿ. ತಮ್ಮ ಇಷ್ಟ ದೈವಗಳನ್ನು ಅತ್ಯಂತ ಭಯ ಭಕ್ತಿಯಿಂದ, ನೇಮ-ನಿಷ್ಠೆಯಿಂದ ಆರಾಧಿಸುವುದನ್ನು ಕಾಣಬಹುದು. ಹಾಗೆಯೇ ಅಷ್ಟೆ ಸಲಿಗೆಯಿಂದ, ಆತ್ಮೀಯತೆಯಿಂದ ಪ್ರೀತಿ ವಾತ್ಸಲ್ಯದಿಂದ ದೇವರುಗಳನ್ನು ಕಂಡುಕೊಂಡಿದ್ದಾರೆ. ಉದಾಹರಣೆಗೆ ಆದಿಚುಂಚನಗಿರಿಯ ಭೈರವಸ್ವಾಮಿ, ಕುರುಬರ ಮಾಳಿಗೆ ಒಲಿದು, ಆ ಪ್ರಾಂತ್ಯದ ಪ್ರಾಕೃತಿಕ ಸೌಂದರ್ಯಕ್ಕೆ ಮರುಳಾಗಿ ಆದಿಚುಂಚನಗಿರಿ ಕ್ಷೇತ್ರದಲ್ಲಿ ನೆಲೆನಿಂತನಂತೆ. ಹಾಗೆಯೇ ಮೇಲುಕೋಟೆಯ ಚೆಲುವರಾಯಸ್ವಾಮಿ ಮುಸ್ಲಿಂಳಾದ ದಿಳ್ಳಿಯ ವರನಂದಿಯ ಪ್ರೇಮ ಪಾಶಕ್ಕೆ ಸಿಕ್ಕಿ ಮದುವೆಯಾದನಂತೆ. ಹೀಗಾಗಿ ಆ ಸ್ಥಳದಲ್ಲಿಯ ಜನರಿಗೆ ವರನಂದಿ ಪರಮಪ್ರಿಯ ದೇವತೆ ಯಾದಳಂತೆ. ಅಷ್ಟೆ ಏಕೇ ಜಗತ್ ಸ್ವಾಮಿಯಾದ ಪರಮೇಶ್ವರನೇ ಬೆಸ್ತರ ಮಗಳಾದ ಗಂಗೆಯನ್ನು ಕದ್ದು ಮದುವೆಯಾಗಿ ಗೌರಿಯ ಕೋಪಕ್ಕೆ ತುತ್ತಾದನೆಂದು ಜನಪದ ಕವಿಗಳು ಹೇಳುತ್ತಾರೆ.[೫೬] ಹೀಗೆ ಅನೇಕ ಪ್ರಸಂಗಗಳಲ್ಲಿ ತಮ್ಮ ಇಷ್ಟ ದೈವಗಳನ್ನೂ ಭಕ್ತಿಯಿಂದ, ಸಲಿಗೆಯಿಂದ ಸ್ಮರಿಸಿರುವುದನ್ನು ಜನಪದ ಕಥೆ, ಗೀತೆ, ಕಥನಗೀತೆಗಳಲ್ಲಿ ಗುರುತಿಸಬಹುದಾಗಿದೆ.

ಜನಪದರಿಗೂ ಹಾಗೂ ಅವರು ಆರಾಧಿಸುವ ದೇವರುಗಳಿಗೂ ಇರುವ ಸಂಬಂಧ ಅಗಾಧವಾದುದು. ತಾವು ಪೂಜಿಸುವ ಎಲ್ಲಾ ದೇವರುಗಳು ಸಹ ತಮ್ಮಂತೆಯೇ ಸಂಸಾರಸ್ಥ ಎಂದು ನಂಬಿದ್ದಾರೆ. ಹಾಗಾಗಿಯೇ ಜನಪದರು ದೇವರುಗಳನ್ನು ಗುಣಾವಗುಣಗಳನ್ನು ಹಾಡಿಹೊಗಳಿದ್ದಾರೆ. ಪವಿತ್ರವಾದ ಭಕ್ತಿ, ಮೈತ್ರಿ, ಸಲಿಗೆಯಿಂದ ತಮ್ಮನ್ನೇ ದೇವರಿಗೆ ತೆತ್ತುಕೊಂಡಿದ್ದಾರೆ. ಜನಪದರಲ್ಲಿ ಇರುವ ಇಂಥಹ ಸಮರ್ಪಣ ಭಾವವನ್ನು ಶಿವಶರಣರಲ್ಲಿಯೂ, ದಾಸ ಪಂಥ ದವರಲ್ಲಿಯೂ ಕಾಣಬಹುದು[೫೬].

ಜನಪದರು ಕೆಲಸ ಮಾಡುವವರಾಗಿದ್ದು, ತಾವು ದೇವರನ್ನು ನಂಬಿರುತ್ತಾರೆ. ಅವರು ತಾವು ಅಂದುಕೊಂಡ ಕೆಲಸವಾಗದಿದ್ದರೆ ದೇವರನ್ನು ಬೈಯ್ಯುವುದು, ನಂತರ ತಮ್ಮ ಅಳಲನ್ನೂ ತೋಡಿ ಕೊಂಡು ದುಃಖವನ್ನು ಮರೆಯಲು ಯತ್ನಿಸುತ್ತಾರೆ. ಅವರ ದೈನಂದಿನ ಜೀವನದಲ್ಲಿ ದೈವಸ್ತುತಿ ಮತ್ತು ದೈವನಿಂದನೆ ಸರ್ವೆಸಾಮಾನ್ಯವಾಗಿರುತ್ತದೆ. ಪ್ರೀತಿ–ಪ್ರೇಮ ಎನ್ನುವುದು ಪವಿತ್ರವಾದುದು. ಇದರ ಮೇಲು–ಕೀಳು ಎಂಬ ಭಾವನೆಗಳು ಇರುವುದಿಲ್ಲ. ಪ್ರೇಮ ಎನ್ನುವುದು ಕೇವಲ ಮನುಷ್ಯ ರಿಗಲ್ಲದೇ ದೈವಲೋಕಕ್ಕೂ ವ್ಯಾಪಿಸಿದೆ.

ಅನೇಕ ದೇವರುಗಳಿಗೆ ವಿಧಿಪೂರ್ವಕವಾಗಿ, ಶಾಸ್ತ್ರೋಕ್ತರೀತಿಯಲ್ಲಿ ಮದುವೆಯಾದ ಧರ್ಮಪತ್ನಿ ಯರಿದ್ದರೂ, ಕೆಲವು ದೇವರು ಎರಡನೆ ಹೆಂಡತಿಯರ ಮೋಹಕ್ಕೆ ಈಡಾಗುವ ನಿದರ್ಶನಗಳು ಹೇರಳ. ಇಂಥಹ ಸಂದರ್ಭಗಳಲ್ಲಿ ಮೊದಲ ಹೆಂಡತಿಗಿಂತ ಎರಡನೆ ಹೆಂಡತಿಯರ ಮೇಲೆಯೇ ವಿಶೇಷವಾದ ಪ್ರೇಮವಿರುವುದು ಕಂಡುಬರುತ್ತದೆ. ಅಂಥಹ ಸಂದರ್ಭದಲ್ಲಿ ಕೈ ಹಿಡಿದ ಪತ್ನಿ ಉಪೇಕ್ಷೆಗೆ ಒಳಗಾದರೆ ಅಚ್ಚರಿಯಿಲ್ಲ. ಪ್ರೇಮದ ತೀವ್ರತೆ ಉತ್ಕಟತೆ ಎರಡನೆ ಹೆಂಡತಿಯ ಕಡೆಗೆ ಇದ್ದಾಗ ಎರಡನೆ ಹೆಂಡತಿ ನಲೆಸಿದ್ದ ನೆಲೆಯಲ್ಲಿನ ಅವಳ ಜನರು, ಪ್ರಣಯ ಪ್ರೀತಿಗೆ ಪಾತ್ರರಾಗಿರುವುದು ಕಂಡು ಬರುತ್ತದೆ. ಈ ಸತ್ವವನ್ನು ದೈವಸಂಬಂಧಿ ಪ್ರಣಯ ಕಥನಗೀತೆಗಳಲ್ಲಿ ಗುರುತಿಸಬಹುದು.

ದೈವಸಂಬಂಧಿ ಪ್ರಣಯ ಕಥನಗೀತೆಗಳಲ್ಲಿ ಬರುವ ಮಹಿಳೆಯ ಜನಪದರ ದೇವತೆಯಾದರು. ಅವರನ್ನು ದೇವತೆಯಂತೆ ಕಂಡರೂ, ಅವರ ಜೀವನದ ಕ್ರಮವನ್ನು ಸಾಮಾನ್ಯ ಹೆಣ್ಣೊಬ್ಬಳ ನಡವಳಿಕೆಯಂತೆ ಚಿತ್ರಿಸಿರುವುದನ್ನು ಜನಪದ ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ. ದೈವಸಂಬಂಧಿ ಪ್ರಣಯ ಕಥನಗೀತೆಗಳನ್ನು ಶೈವ ಹಾಗೂ ವೈಷ್ಣವ ಕ್ಷೇತ್ರಗಳೆರಡಕ್ಕೂ ಸಂಬಂಧಿಸಿದಂತೆ ಗುರುತಿಸ ಬಹುದಾಗಿದೆ. ಜನಪದರ ಕೈಯಲ್ಲಿ ದೇವರು ದೇವತೆಗಳು ಯಾವ ರೀತಿ ಚಿತ್ರಿಸಿಕೊಂಡಿದ್ದಾರೆ. ಎನ್ನುವುದನ್ನು ಕೆಲವೊಂದು ಪಾತ್ರಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಕೆಳಕಂಡಂತೆ ವಿಶ್ಲೇಷಿಸಲಾಗಿದೆ.

**ಅ. ಶಿವಕಥೆಗಳಲ್ಲಿ ಕಂಡುಬರುವ ಮಹಿಳೆ**

**೧. ಗಂಗೇಗೌರಿ:** ಶಿವಕಥೆಗಳಲ್ಲಿ ಶಿವನಭಕ್ತಿ, ಆರಾಧನೆ, ತಪಸ್ಸು ಇವೆಲ್ಲವೂ ಒಂದು ಮುಖವಾದರೆ, ಶಿವನ ಕೌಟುಂಬಿಕ ಬದುಕು ಮತ್ತೊಂದು ಮುಖವಾಗಿದೆ. ಶಿವನಜೊತೆ ಅವರ ಒಡನಾಟ, ಗಂಗೇ ಗೌರಿಯರ ಜಗಳ, ಸವತಿ ಮಾತ್ಸರ್ಯ ಇವೆಲ್ಲವೂ ಜನಪದಕಾವ್ಯಗಳಲ್ಲಿ ಕಂಡುಬರುತ್ತದೆ. ತಾವು ನಂಬಿರುವ ದೇವರು ತಮ್ಮಂತೆ ಬದುಕನ್ನು ನಡೆಸುತ್ತಾನೆ. ಅವನಿಗೂ ಅಪವಾದ ತಪ್ಪಿದಲ್ಲ.

ಅವನಿಗೂ ತಮ್ಮಂತೆ ಇಬ್ಬರ ಹೆಂಡತಿಯರ ಗೋಳು, ರಹಸ್ಯಪ್ರೇಮ, ವಿರಹವೇದನೆ, ಇವೆಲ್ಲವೂ ಇದ್ದೇ ಇವೆ. ಇವುಗಳಿಂದ ಅವನು ತಪ್ಪಿಸಿಕೊಳ್ಳಲಾರದೆ ಬದುಕಿನಲ್ಲಿ ಅವನು ಹೆಣಗುತ್ತಾನೆ ಎಂಬ ನಂಬಿಕೆ ಜನಪದರಲ್ಲಿದೆ. ಅದನ್ನು ಈ ಕಥೆಗಳಲ್ಲಿ ನಿರೂಪಿಸಿರುವುದು ಗುರುತಿಸಬಹುದು.

ಶಿವಕಥೆಗಳಲ್ಲಿ ಬರುವ ಮಹಿಳೆಯರು ಪ್ರಧಾನವಾಗಿ ಗಂಗೇಗೌರಿ. ಇವರಿಬ್ಬರು ಶಿವನ ಮಡದಿಯರು. ಶಿವನಿಗೆ ಗಂಗೇಗಿಂತ ಗೌರಿಯ ಮೇಲೆ ಹೆಚ್ಚು ಪ್ರೀತಿ ಎಂಬ ನಂಬಿಕೆ ಗೌರಿಯಭಕ್ತರದು. ಗೌರಿಗಿಂತ ಗಂಗೇಯ ಮೇಲೆ ಹೆಚ್ಚು ಪ್ರೀತಿ ಎಂಬುದನ್ನು, ಶಿವನು ತನ್ನ ಜಟೆಯಲ್ಲಿ ಗಂಗೆಯನ್ನು ಯಾರು ಕಾಣದಂತೆ ಅಡಗಿಸಿಟ್ಟುಕೊಂಡಿರುವುದು ಭಕ್ತರೆಲ್ಲರಿಗೂ ತಿಳಿದಿರುವ ವಿಷಯ. ಶಿವನಿಗೆ ಸಂಬಂಧಿಸಿದ ಅಂಬಿಗರಗಂಗೆ, ಗಂಗೇಗೌರಿ ಜಗಳು, ಜಗಳವ ನೋಡಿ ನಗುತಾನೆ, ಅಂಬಿಗರ ಶಿವಗಂಗೆ, ಗಂಗೆಗೂ ಗೌರಿಗೂ ವಾದವು ಬಂದಾವು ಹೀಗೆ ಅನೇಕ ಕಥೆ, ಕಥನಗೀತೆ, ಲಾವಣೆಗಳನ್ನು ಗುರುತಿಸಬಹುದು.

ಪ್ರಾದೇಶಿಕ ಬದಲಾವಣೆಯನ್ನು ಸ್ವಲ್ಪ ಗುರುತಿಸಬಹುದಾದರೂ, ಕಥೆಯ ಹಂದರ ಒಂದೇ ಎನ್ನಬಹುದು. ಈ ಕಥೆಗಳು ಹಾಡಿರುವ ತ್ರಿಪದಿ ಸಾಹಿತ್ಯದಲ್ಲಿ ದೊರೆಯುತ್ತದೆ. ಹಾಗೆಯೇ ವೃತ್ತಿ ಗಾಯಕರು ಶಿವಕಥೆಗಳನ್ನೇ ಮುಖ್ಯ ಕಸುಬನ್ನಾಗಿ ಇಟ್ಟುಕೊಂಡು ಹಾಡಿರುವುದನ್ನು ನೋಡಬಹುದು. ಜನಪದ ಕಾವ್ಯದ ಪ್ರಕಾರ ಗಂಗೇಗೌರಿ ಒಂದೇ ತಾಯಿಯ ಮಕ್ಕಳು ಶಿಷ್ಟ ಸಂಪ್ರದಾಯದ ಗಿರಿಜ ಕಲ್ಯಾಣದ ಕಥೆಯನ್ನು ಸ್ಥೂಲವಾಗಿ ಈ ಕಥೆ ಹೋಲುತ್ತದೆಯಾದರೂ, ಕೆಲವು ವಿಶಿಷ್ಟವಾದ ವ್ಯತ್ಯಾಸಗಳು ಜನಪದ ಕಾವ್ಯದ ಆವರಣಕ್ಕೆ ತಕ್ಕಂತೆ ಕಂಡುಬರುತ್ತದೆ. ಗಿರಿಜೆಯ ತಾಯಿಯನ್ನು ಇಲ್ಲಿ 'ಮೇನೆಗೆ ಬದಲಾಗಿ ಗಿರಿಜಮ್ಮಾಜಿ' ಎಂದು ಕರೆಯಲಾಗಿದೆ. ತಂದೆ ಗಿರಿರಾಜನಾಗಿದ್ದಾನೆ. ಸೂಲಗಿತ್ತಿ ಸಂಗಮ್ಮ ಅನೇಕ ಜನಪದ ಕಾವ್ಯಗಳಲ್ಲಿ ಬರುವಂತೆ ಇಲ್ಲಿಯೂ ಬರುತ್ತಾಳೆ.

ಗಿರಿಜಮ್ಮಾಜಿಯ ಕನಸ್ಸಲ್ಲಿ ಶಿವನು ನಿನಗೆ 'ಹೆಣ್ಣು ಮಕ್ಕಳಾದರೆ ನನಗೆ ಕೊಡಬೇಕು' ಎಂದು ಕೇಳುವುದು ಕಥೆಯ ಆರಂಭದಲ್ಲಿಯೇ ತಿಳಿಯುತ್ತದೆ.

ಉಂಡುಟ್ಟ ಗಿರಿಜಮ್ಮಾಜಿ ಮಂಚದ ಮೇಲೆ ಮಲಗಿರುವಳು
ಶಿವರಾಯ ಸ್ವಪ್ನಕ್ಕೆ ಸುಳಿದಾನು ಸುಳಿದು ಏನಂದಾನು
ಕನ್ನೇರುಹುಟ್ಟಿದರೆ ಕೊಡುನನಗೆ[೫೮]

ಗಿರಿಜಮ್ಮಾಜಿ ಎರಡು ಹೆಣ್ಣುಮಕ್ಕಳಿಗೆ ಜನ್ಮನೀಡುತ್ತಾಳೆ. ಆದರೆ ಒಂದು ಮಗು ಹುಟ್ಟಿದ ಗಳಿಗೆ ಒಳ್ಳೆಯದಲ್ಲ ಎಂದು ಹಾರುವಯ್ಯ ಹೇಳುತ್ತಾನೆ. ಅದೇ ರೀತಿ ಒಂದು ಮಗುವನ್ನು ನೀರಿಗೆ ಬಿಸಾಕುತ್ತಾಳೆ. ಅವಳೇ ಗಂಗೆ. ಇತ್ತ ಗೌರಿ ಅರಮನೆಯಲ್ಲಿ ಬೆಳೆದು ದೊಡ್ಡವಳಾಗುತ್ತಾಳೆ. ಅವಳೇ ಗಿರಿಜೆ. ಮುಂದೆ ಗಿರಿಜೆ (ಗೌರಿ)ಯನ್ನು ಮದುವೆಯಾಗುತ್ತಾನೆ. ಇಲ್ಲ ಗಿರಿಜೆ ಕಲ್ಯಾಣದ ಅನೇಕ ಪಾಠಗಳಲ್ಲಿ ಗಿರಿಜೆಯ ತಪಸ್ಸಿನ ಪ್ರಸ್ತಾಪ ಬರುವುದಿಲ್ಲ. ಆದರೆ ಮಲೆನಾಡಿನ ಅಂಟಿಕೆ ಪಂಟಿಕೆ ಸಂಪ್ರದಾಯದಲ್ಲಿ ಗಿರಿಜ ಕಲ್ಯಾಣದ ಒಂದು ಪಾಠದಲ್ಲಿ ಮನೆಯನ್ನು ತೊರೆದು ಗಿರಿಜೆ ಹದಿನಾರು ವರ್ಷ 'ಹಾಲುಂಡು ಕಲ್ಲಿನ ಮೇಲೆ' ಹದಿನಾರು ಸೂಜಿಮೊನೆಯೋರಿ ತಪಸ್ಸು ಮಾಡಿ

ಒಲಿಸಿಕೊಳ್ಳಲು ಮತ್ತೊಬ್ಬ ಹೆಂಡತಿ ತನಗಿಲ್ಲ ಎಂದು ಹೇಳಿ ನಂಬಿಸಿ ಮದುವೆಯಾಗುತ್ತಾನೆ. 'ಅಪ್ಪನನಗಿಲ್ಲ ಅವ್ವನನಗಿಲ್ಲ ಮತ್ತೊಬ್ಬಳು ಬಾಲೆ ನನಗಿಲ್ಲ ಎಲೆನಾರಿ ಬಂದೊರಗೆ ನನ್ನ ತುರಬಿಗೆ' ಎಂದು ದೈನ್ಯನಾಗಿ ಪ್ರಣಯಭಿಕ್ಷೆಯನ್ನು ಬೇಡುತ್ತಾನೆ. ಆಗ ಆಗಂತುಕನ ದುಃಖ ನೋಡಿದಳು ಗಂಗೇ ಅವಳ ಪ್ರೇಮಕ್ಕಾಗಿ ತ್ಯಾಗ ಮಾಡಲು ಸಿದ್ದನಿರುವ ಶವನನ್ನು ಕಂಡು ಗಂಗೇ ಈ ರೀತಿ ಹೇಳಿದಳು.

ನಳ್ಳಿ ಹಿಡಿಯೋರು ನಾವು ಮೀನೂ ಮಾರೋರು ನಾವು
ನಮಗೊಡವೆ ನಿಮಗ್ಯಾಕೆ ಶಿವರಾಯ ಎಂದಳು

ಗಂಗೆಯ ಮಾತಿನಿಂದ ಶಿವನ ಮನಸ್ಸು ಕರಗಿತು. ಆಗ ಶಿವ ಗಂಗೆಯನ್ನು ಕುರಿತು 'ನಳ್ಳಿ ಚೀಲವ ತಾರೆ ಒಳ್ಳೆಗಡಿಗೆಯು ತಾರೆ ಬಂದೊರಗೆ ನನ್ನ ತುರುಬಿಗೆ' ಎಂದು ಜಾತಿಯ ಸುಳ್ಳು ಆಡಿದ. ಕೊನೆಗೆ ಮದುವೆಯಾದ ಗಂಗೆಯ ಜೊತೆ ಶಿವನ ಚಕ್ಕಂದವನ್ನು ಗಮನಿಸಿದ ಗಿಣಿಗಳೆರಡು ಗೌರಿಗೆ ಸುದ್ಧಿಯನ್ನು ತಿಳಿಸುತ್ತವೆ. ಗೌರಿಗೆ ಇಲ್ಲಿಲ್ಲದ ಸಂಕಟ ದುಃಖಪಡುತ್ತಾಳೆ. ಈ ವಿಚಾರವನ್ನು ಗೌರಿ ತನ್ನ ತವರಿಗೂ ತಿಳಿಸುವಳು. ಆದರೆ ತೌರಿನವರು ಏನು ಪ್ರತಿಕ್ರಿಯಿಸುವುದಿಲ್ಲ. ಅಲ್ಲಿಂದ ಗೌರಿ ನೇರವಾಗಿ ಕೈಲಾಸಕ್ಕೆ ಬಂದು ಅರಮನೆಯ ಒಕ್ಕು ಭದ್ರವಾಗಿ ಬಾಗಿಲು ಹಾಕಿಕೊಳ್ಳುವಳು. ಅಷ್ಟರಲ್ಲಿ ಶಿವನು ಬಂದು ಬಾಗಿಲು ತೆರೆಯುವಂತೆ ಅಂಗಲಾಚುತ್ತಾನೆ. ಕೊನೆಗೆ ಬಾಗಿಲ ತೆರೆಯುತ್ತಾಳೆ.



ಶಿವನಿಗೆ ಬಾಗಿಲ ತೆರೆದ ಗಿರಿಜೆ ಎರಡು ಮಣೆಯನ್ನು ಹಾಕುತ್ತಾಳೆ. ಎರಡು ಮಣೆಗಳನ್ನು ಕಂಡ ಶಿವನು ತನಗೆ ಅರಿವಿಲ್ಲದವನಾಗಿ, 'ಇದೇನು ಗಿರಿಜೆ ಮಾತೊಂದು ಮಣೆಯೆರಡು ನಿನಗಿಬ್ಬರುಂಟೇನೆ ಪುರುಷಾರು'? ಎಂದು ಗಿರಿಜೆಯನ್ನು ಪ್ರಶ್ನಿಸಿದ. ಸಿಟ್ಟಿನಿಂದಲೇ ಗುಡಗಿದ. ಇದಕ್ಕೆ ಗೌರಿ ಅಂಜಿದಳು. ಅಂಜುತ್ತಾ ಹೀಗೆ ನುಡಿದಳು.

ಅಂಜದಂಜಿದೆ ಅಳುಕಿದೆ ಮಾಶಿವನೆ
ನಿಮಗೊಂದು ನಿಮ ಜಟೆಯೊಳಗೆ ಅಡಗಿರುವ
ಗಂಗ್ಯಮ್ಮನಿಗೊಂದು ಮಣೆಯದೋ ಎಂದಳು

ಸಂದರ್ಭ ಬರುತ್ತದೆ. ಆ ತಪಸ್ಸಿನಿಯ ಬಳಿಗೆ ಶಿವನೇ ವೇಷಧಾರಿಯಾಗಿ ಬಂದು 'ನಾರಿ ನೀಕುಂತ ತಪವ್ಹೇಳ್ಹೆಣ್ಣೆ' ನಿನ್ನ ಮಾರೆಮ್ಯಾಲುಂಟು ಉರಿ ಬೆಂಕಿ' ಎನ್ನುವುದು. ಗಿರಿಜೆಯ ಮನಸ್ಸನ್ನು ಪರೀಕ್ಷಿಸುವ ಸಲುವಾಗಿ ನಾನಾ ರೀತಿಯಲ್ಲಿ ಹಿಯ್ಯಾಳಿಸುವುದು, ಆದರೂ ಶಿವನನ್ನೆ ಮೆಚ್ಚುವುದು ಕಂಡುಬರುತ್ತದೆ. ಗಿರಿಜೆಯ ತಂದೆ ಗೌರಮ್ಮನಿಗೆ, ಗಂಡನನ್ನು ಗೊತ್ತು ಮಾಡಲು ಕೇಳುತ್ತಾನೆ. 'ಬ್ರಾಹ್ಮಣರಿಗೆ ಕೊಡಲೇನ ಮಗಳೆ ಗೌರಮ್ಮ' ಎಂದ ತಂದೆಯ ಮಾತಿಗೆ ಗೌರಮ್ಮ ಕೊಡುವ ಉತ್ತರ ಹೀಗಿದೆ.

ಬ್ರಾಹ್ಮಣರ ಸಹವಾಸ ಹೇಳುವೆನೆ ಕೇಳು
ನಿತ್ಯ ತಣ್ಣೀರಿನಲ್ಲಿನಾ ಬಿಳಲಾದ
ದಿನಕ್ಕೊಂದು ಮಡಿಸೀರೆ ನಾ ಉಡಲಾರೆ
ಹೊತ್ತಿಗೆ ಒಪ್ಪತ್ತು ನಾನುಣ್ಣಲಾರೆ
ಬ್ರಾಹ್ಮಣರ ಸಹವಾಸ ಬೇಡವೊ ತಂದೆ ಎಂದಳು[೫೯]

ಕೊನೆಗೆ ತಂದೆಯು ಶಿವಭಕ್ತ, ಕೋಮಟಿಗ, ಒಕ್ಕಲಿಗ, ಎಲ್ಲರ ಬಗ್ಗೆ ಕೇಳಿದಾಗ ಯಾವ ಜಾತಿಯವರು ಬೇಡ ಎಂದ ಗಿರಿಜೆ ಶಿವಶಿವ ಎಂದು ಶಿವನ ತಪಸ್ಸು ಮಾಡಿದಳು. ನಂತರ ಶಿವ ಪ್ರತ್ಯಕ್ಷನಾಗಿ ಗಿರಿಜೆಗೆ ಒಲಿದ. ಆಗ ಅವರಿಬ್ಬರ ಮದುವೆ ಅತ್ಯಂತ ವೈಭವದಿಂದ ಆಯಿತು. 'ಆಕಾಶಕ್ಕೆ ಚಪ್ಪರಹಾಕಿ, ಭೂಮಿ ಅಡ್ಡಗಲಕ್ಕೆ ಹಸಗಲ್ಲ ಬರೆದು ಲಗ್ನಾವೆ ಆಯಿತು.[೬೦] ಶಿವನಿಗೂ ಗಿರಿಜೆಗೂ ಮದುವೆಯಾದ ಮೇಲೆ, ಶಿವ ಯಾವುದೋ ನೆಪ ಒಡ್ಡಿ ಭೂಲೋಕಕ್ಕೆ ಬರುತ್ತಾನೆ. ನೀರು ಮೊಗೆಯುತ್ತಿದೆ ಗಂಗೆಯನ್ನು ನೋಡಿ ಮಾತನಾಡುತ್ತಾನೆ.

ಗಂಗೇಲಿ ನೀರ ಮಾಗೆಯೋಳೆ ಎಲೆ ಚೆಲುವೆ
ನಿನ್ನ ಹೆಸರುಹೇಳೆ ನಿನ್ನ ಕುಲವ್ಹೇಳೆ ಎಂದನು

ಅದಕ್ಕೆ ಗಂಗೆ 'ಯಾವ ಕುಲವಾದರೆ ಏನು ಹೋಗಯ್ಯ ನಿನ್ನ ದಾರಿಯಲ್ಲಿ ಎಂದಳು. ಅದಕ್ಕೆ ಶಿವ ಹಾರುವವರ ಮಗಳೇನೆ, ಹರದರಿಗೆ ಸೊಸೆಯೇನೆ ಎಂದಾಗ, ಅದಕ್ಕೆ ಗಂಗೆ ನಾಕುಲದಲ್ಲಿ ಅಂಬಿಗರ ಮಗಳು ಮಾ ಶಿವನೆ' ಎಂದಳು. ಶಿವನಿಗೆ ಆಶ್ಚರ್ಯವಾಗಿ ಸಂಶಯವೂ ಆಯಿತು. ಕೊನೆಗೆ ಅವಳ ಮೇಲೆ ಮನಸ್ಸಾಗಿ ಗಂಗೆಯನ್ನು ವಿವಾಹವಾದ.

ಆಗ ಶಿವನ ಸಿಟ್ಟು ತಣ್ಣಗಾಯಿತು. ಯಾರಿಂದಲೋ ತನ್ನ ರಹಸ್ಯ ಬಯಲಾಗಿ ಹೋಗಿದೆ. ಜಟೆಯಲ್ಲಿ ಹುದಗಿದ ಗಂಗೆಗೂ ಸೋಜಿಗ ಹರ ತನ್ನನ್ನು ಎಲ್ಲಿಗೋ ಕರೆತಂದಿದ್ದಾನೆ, ತನಗೆ ಮಡದಿ ಇಲ್ಲವೆಂದು ಹೇಳಿ ಮತ್ಯಾರೋ ಚೆಲುವೆ ಜೊತೆಯಲ್ಲಿ ಸಲಿಗೆಯಿಂದ ನುಡಿಯುತ್ತಿದ್ದಾನೆ. ತಾನೇಕೆ ಬಚ್ಚಿಟ್ಟುಕೊಳ್ಳಬೇಕು ಎಂದು ಗಂಗೆ ಇಳಿದು ತೊಡೆಯಮೇಲೆ ಕುಳಿತಳು.

ಗಂಗೆಯ ಈ ಉದ್ಧಟತನ ಗಿರಿಜೆಯ ಹೃದಯಕ್ಕೆ ಘಾಸಿಯಾಯಿತು. ಆಗ ಇಬ್ಬರಿಗೂ ಜಗಳವಾಯಿತು. ಇದನ್ನು ಗಮನಿಸುತ್ತಾ ಶಿವನು ನೋಡಿ ಕಂಬದ ಮೊರೆಯಲ್ಲಿ ನಗುತ್ತಾ ನಿಂತನು. ಒಮ್ಮೆ ಗೌರಿ ತಾನು ಮುಡಿದು ಮಿಕ್ಕ ಮಲ್ಲಿಗೆ, ಜಾಜಿ, ಮುಂತಾದ ಹೂಗಳನ್ನು ಗಂಗೆಗೂ ತನ್ನ ಮಗ ವೀರಣ್ಣನ ಕೈಲಿ ಕೊಟ್ಟು ಕಳುಹಿಸುತ್ತಾಳೆ. ಆ ಹೂವನ್ನು ನೋಡಿದ ಗಂಗೆ ಬಾಡಿದ ಹೂವಗಳೆಂದು ತಿರಸ್ಕಾರದಿಂದ ಬೇಲಿಗೆ ಚೆಲ್ಲುತ್ತಾಳೆ. ಇದನ್ನು ತಿಳಿದ ಗೌರಮ್ಮ ಗಂಗೆಯ ಹತ್ತಿರಕ್ಕೆ ಜಗಳಕ್ಕೆ ನಿಲ್ಲುತ್ತಾಳೆ.

ಜಡೆ ಜಡೆ ಹಿಡಕೊಂಡು ಜಗಳವಾಡಿದರು
ಹೊರಸರಗೆ ಹಿಡಿಕಂಡು ವೈರವಾಡಿದರು
ಗಂಗಮ್ಮ ಕೆಳಗಾಗಿ ಗೌರಿ ಮೇಲಾಗಿ ಎರಡು ಮೂರು ಪೆಟ್ಟು ಹೊಡೆದಾಳೆ ಗೌರಿ
ಅಪ್ಪರಲ್ಲಿ ಶ್ರೀಗೌರಿ ತನುಮಯದಿಂದ ಸೂತಕವಾದಳು.[೬೧]

ಸೂತಕವಾದ ಗೌರಿಯನ್ನು ನೋಡಿದ ಗಂಗೆಯು 'ನಮಕ್ಕ ನನ್ನ ಕೈಗೆ ಸಿಕ್ಕಿದಳು' ಎಂದುಕೊಂಡು ಉಗುರಷ್ಟು ವಿಭೂತಿಯನ್ನು ಭೂಮಿಯ ಮೇಲೆ ಹಾಕಿ 'ನೀರು ಮಾಯ ಮಾಡಿದಳು' ನಿಜವಾದ ಗಂಗೆ ಹಾಲು ಬೆಟ್ಟವ ಸೇರಿದಳು. ಮಾಯಕಾರಿ ಗಂಗೆ, ಸೂತಕವಾದ ಗೌರಿ ಸ್ನಾನ



ಮಾಡಲು ನೀರು ಹುಡುಕಾಡಿದಳು ಎಲ್ಲೂ ನೀರು ಸಿಗಲಿಲ್ಲ. ತನ್ನ ಮಗ ವೀರಣ್ಣನ ಕೈಲಿ ಸಾಕಷ್ಟು ಹಣ ಕೊಟ್ಟು ನೀರು ತರುವಂತೆ ಹೇಳಿದಳು. ನೀರು ತರಲು ಹೋದ ವೀರಣ್ಣ ಬರೀಗೈಲಿ ವಾಪಸ್ಸು ಬಂದ. ನೀರು ಎಲ್ಲಿ ಎಂದು ಕೊರಗುತ್ತಾಳೆ. ಗೌರಿಯ ಸ್ಥಿತಿಯನ್ನು ಗಮನಿಸಿದ ಶಿವ ಈ ರೀತಿ ಹೇಳುತ್ತಾನೆ. ನೀರಿಗಾಗಿ ನಿನ್ನ ಸವತಿ ಗಂಗೆಯನ್ನು ಬೇಡಿಕೊ ಎನ್ನುತ್ತಾನೆ. ಅದಕ್ಕೆ ಗೌರಿ "ಸತ್ತು ಮಣ್ಣಾದರೂ ನಾನು ಸವತಿಯ ಕೇಳಲಾರೆ ಮತ್ತೆ ಮಣ್ಣಾದರೂ ನಾನು ಸವತಿಯ ಕೇಳಲಾರೆ" ಎನ್ನುತ್ತಾಳೆ. ಸವತಿ ಮಾತ್ಸರ್ಯ ಎಷ್ಟೋ ತೀವ್ರತರವಾದುದು ಎಂಬುದು ಗೌರಿಯ ಅಂತರಂಗದ ಮಾತಿನಿಂದ ಅರಿವಾಗುತ್ತದೆ.

ಗೌರಿಯ ಹಠ ಹೆಚ್ಚುಕಾಲ ಉಳಿಯಲಿಲ್ಲ. ಕೊನೆಗೆ ಮಗ ವೀರಣನನ್ನು ಗಂಗೆಯ ಬಳಿ ನೀರು ಕೊಡುವಂತೆ ಕೇಳಿ ತರಲು ಕಳುಹಿಸುತ್ತಾಳೆ. ವೀರಣ್ಣ ಗಂಗೆ ಹತ್ತಿರಹೋಗಿ ನೀರು ಕೊಡುವಂತೆ ಕೇಳುತ್ತಾನೆ. ಅದಕ್ಕೆ ಗಂಗೆ ಕಂದ ನಿನಗೆ ಬೇಕಾದರೆ ಒಂದು ಚಂಬು ನೀರು ಕೊಡುವೆ ಎನ್ನತ್ತಾಳೆ. ಕೊನೆಗೆ ಶ್ರೀಗೌರಿಯೇ ಗಂಗೆಯ ಬಳಿಗೆ ಬರಬೇಕಾಯಿತು. ಶ್ರೀ ಗೌರಿ ಬರುವುದನ್ನು ನೋಡಿದ ಗಂಗೆ ಅದೇ ಸಮಯದಲ್ಲಿ 'ಬೀದಿಯಲ್ಲೆಲ್ಲ ಕರಿಮೀನು ಎರಚಿದಳು. ಸಂದಿಗೊಂದಿಗೆಲ್ಲ ಸೀಗಡಿ ಎರಚಿದಳು' ಆದರೂ ನೀರಿಗಾಗಿ ಗೌರಿ, ಗಂಗೆಯ ಮನೆಯಬಾಗಿಲಿಗೆ ಬಂದಳು. ಬಂದು ಗೌರಿ, ಗಂಗೆಯನ್ನು ವಿನಯದಿಂದ ಕೂಗಿದಳು. ಕೊನೆಗೆ ಬಾಗಿಲು ತೆಗೆದಳು.

ಗಂಗಿ ನೀರು ಕೊಡು ನನ್ನ ಭಾಗದ ಗಂಡನ ಕೊಡತೀನಿ ಎಂದಳು. ಹಾಲು ಅನ್ನದ ಭಾಷೆ ಮಾಡಿದಳು ಗೌರಿ. ನಂತರ ಗಂಗೆ ನೀರುಕೊಟ್ಟಳು ಗೌರಿಯ ಸೂತಕವೇನೋ ತೀರಿತು. ಆದರೆ ಗೌರಿ ಮಾತಿನಂತೆ ಗಂಗೆಗೆ ಶಿವನನ್ನು ಕೊಡಲೊಪ್ಪಲಿಲ್ಲ. ಗಂಗೆ ಅಕ್ಕಾ ಗೌರಿ ನೀನು ಶಿವರಾಯನನ್ನು ಕೊಡುತೀನಂಥ ನೀರು ನಾ ಕೊಟ್ಟೆ ಇವತ್ತೊ ಒಂದು ರಾತ್ರಿ ಶಿವನಾದ್ರು ಕಳುಹೆ ಎಂದು ಗಂಗೆ ಗೌರಿಯನ್ನು ಬೇಡಿಕೊಂಡಳು. ಕೊನೆಗೆ ಗೌರಿ ಸೋತು ಗಂಗೆ ಗೌರಿ ಒಂದಾದರು., ಮಾರಿಯ ಹಬ್ಬವನ್ನು ಗಂಗೆಗೂ, ಗೌರಿ ಹಬ್ಬವನ್ನು ಗೌರಿಗೂ, ಶಿವರಾತ್ರಿಯನ್ನು ತನಗೂ ಹಂಚಿಕೊಂಡು ಸುಖವಾಗಿದ್ದರು.

ಸಾಮಾನ್ಯ ಗರತಿಯೊಬ್ಬಳು ತನ್ನ ಗಂಡನನ್ನು ಸವತಿಗೆ ಬಿಟ್ಟುಕೊಡಲು ಹೇಗೆ ಇಚ್ಛಿಸುವುದಿಲ್ಲವೋ ಹಾಗೆಯೇ ಆದಿಶಕ್ತಿ ಗೌರಮ್ಮನು ಗಂಗೆಗೆ ಶಿವನನ್ನು ಬಿಟ್ಟುಕೊಡಲು ಒಪ್ಪುವುದಿಲ್ಲ. ಎನ್ನುವುದು ಕಂಡುಬರುತ್ತದೆ.

೨. ಚಾಮುಂಡಿ

ಕನ್ನಡ ಜನಪದ ಕಾವ್ಯಗಳಲ್ಲಿ ಚಾಮುಂಡಿ-ನಂಜುಂಡ ಇವರ ಪ್ರಣಯ ಪ್ರಸಂಗಕ್ಕೆ ಸಂಬಂಧಿಸಿದಂತೆ, ಅನೇಕ ಸ್ವಾರಸ್ಯ ಪೂರ್ಣ ಘಟನೆಗಳನ್ನು ಗುರುತಿಸಬಹುದು. ಈ ಪ್ರಸಂಗವು ದಕ್ಷಿಣ ಕರ್ನಾಟಕದ ಬಹುತೇಕ ವೃತ್ತಿ ಗಾಯಕರ ಗಾಯನಗಳಲ್ಲಿ ಕಂಡುಬಂದಿದೆ. ಸ್ತ್ರೀ ಗಾಯಕ ಇನ್ನು ವಿಸ್ತಾರವಾಗಿ ಬೆಳಸಿ ಖಂಡಕಾವ್ಯದ ಎತ್ತರಕ್ಕೆ ಏರಿಸಿದ್ದಾರೆ. ನೀಲಗಾರರು, ಕಂಸಾಳೆಯವರು, ಹೆಳವರು ಈ ಕಾವ್ಯವನ್ನು ಒಂದು ರಾತ್ರಿಯ ಕಥೆಯನ್ನಾಗಿ ಮಾಡಿಕೊಂಡು, ಆಕರ್ಷಕ ಮೇಳವನ್ನು ಮಾಡಿಕೊಂಡಿದ್ದಾರೆ. ಹೆಳವರು ಈ ಕಥೆಯನ್ನು ಚಾಮುಂಡಿ ಪುರಾಣವೆಂದು ಕರೆಯುತ್ತಾರೆ. ಚಾಮುಂಡಿ ಕಥೆಗೆ ಸಂಬಂಧಿಸಿದಂತೆ ಬರುವ ಐತಿಹಾಸಿಕ ಕಾವ್ಯಗಳಲ್ಲಿ ಚಾಮುಂಡಿ ತನ್ನ ಭಕ್ತರ ಪರವಹಿಸಿ, ಯುದ್ಧದಲ್ಲಿ ಗೆಲುವನ್ನು ತಂದುಕೊಟ್ಟಳು, ಎಂಬುದನ್ನು ಎತ್ತಿ ಹೇಳುತ್ತವೆ. ಅದರಲ್ಲೂ ಪಿರಿಯಾಪಟ್ಟಣ ಕಾಳಗ, ಕೆಂಪೇಗೌಡನ ಲಾವಣಿಗಳಲ್ಲಿ ಚಾಮುಂಡಿ ಈ ಹಿನ್ನೆಲೆಯಲ್ಲಿಯೇ ಕಾಣಿಸಿಕೊಳ್ಳುತ್ತಾರೆ.

ಮಾಗಡಿ ಕೆಂಪೇಗೌಡನ ಸೊಕ್ಕನ್ನು ಮುರಿಯಬೇಕಾದರೆ ರಂಗಧಾಮ, ಅಕ್ಕ ಚಾಮುಂಡಿಯ ನೆರವನ್ನು ಪಡೆಯಬೇಕಾಗುತ್ತದೆ. ಪಿರಿಯಾಪಟ್ಟಣದ ವೀರರಾಜನನ್ನು ಮೈಸೂರು ದಳವಾಯಿ ಸೋಲಿಸಬೇಕಾದರೆ ಚಾಮುಂಡಿಯೇ ಕಾರಣ. ಹೀಗೆ ಚಾಮುಂಡಿ ತನ್ನ ಭಕ್ತರಿಗೆ ಜಯವನ್ನು ತಂದು ಕೊಡುವ ಸಂದರ್ಭಗಳಲ್ಲಿ ಕಂಡುಬರುತ್ತಾಳೆ. ಇದರಿಂದಾಗಿ ಜನಪದ ಕಾವ್ಯಗಳಲ್ಲಿ ಮೇಲಿಂದ ಮೆಲೆ ಮೈಸೂರು ಹಾಗೂ ಚಾಮುಂಡಿಯ ಪ್ರಸ್ತಾಪ ಬರುತ್ತದೆ.[೨]

ಮೈಸೂರಿನ ಬಳಿಯ, ಚಾಮುಂಡಿ ಬೆಟ್ಟದ ತಡಿಯಲ್ಲಿರುವ ಕಾರಂಜಿ ಕೆರೆಗೆ ಚಾಮುಂಡಿ ಜಳಕಕ್ಕೆ ಹೋಗುವುದು ಕಥನಗೀತೆಯ ಪ್ರಾರಂಭದಲ್ಲಿ ಕಂಡುಬರುತ್ತದೆ. ನಂಜುಂಡ ತನ್ನ ಹೆಂಡತಿಯಾದ ದೇವೀರಿಗೆ ಸುಳ್ಳು ಹೇಳಿ, ಕಾರಂಜಿಯ ಕೆರೆಯ ಬಳಿ ಬಂದನು. ಏರಿಯ ಮೇಲೆ ಇಟ್ಟಿದ ಚಾಮುಂಡಿಯ ನವರತ್ನ ಸೀರೆಯ ಕದ್ದುಕೊಂಡ ನಂಜುಂಡ ಕೈ ಚಪ್ಪಾಳೆ ಹೊಡೆದನು. ಚಪ್ಪಾಳೆಯ ಶಬ್ಧ ಕೇಳಿ ಸುತ್ತಲೂ ನೋಡಿದ ಚಾಮುಂಡಿ ನೀರಿನಿಂದ ಮೇಲೆ ಬಂದು ತನ್ನ ನವರತ್ನ ಸೀರೆಗಾಗಿ ತಡಕಾಡಿದಳು. ಸೀರೆ ಸಿಗದಿದ್ದಾಗ, ತನ್ನ ಮಂಡೆಯ ಬಿಚ್ಚಿ ತನ್ನ ಸೊಂಟಕ್ಕೆ ಸುತ್ತಿ ಚಾಮುಂಡಿ ತನ್ನ ಬೆಟ್ಟಕ್ಕೆ ಓಡುತ್ತಾಳೆ. ಚಾಮುಂಡಿ ಬೆಟ್ಟಕ್ಕೆ ಓಡಿ ಹೋಗುವಾಗ, ಚಾಮುಂಡಿಯನ್ನು ಹಿಂಬಾಲಿಸಿದ ನಂಜುಂಡ, ನಿಲ್ಲು ಎಂದರೂ ನಿಲ್ಲದೆ ಚಾಮುಂಡಿ ನೇರವಾಗಿ ಅರಮನೆ ಸೇರಿದಳು. ಬಾಗಿಲು ಕಾಯುವವನಿಗೆ ಯಾರು ಬಂದರೂ ಒಳಗಡೆ ಬಿಡಬೇಡ ಎಂದು ಆಜ್ಞಾಪಿಸಿದಳು. ನಂಜುಂಡ ಬಾಗಿಲು ಕಾಯುವವನ್ನು ಒಳಗಡೆ ಬಿಡುವಂತೆ ಅಂಗಲಾಚಿ ಬೇಡಿದನು. ಆದರೂ ಬಿಡಲಿಲ್ಲ. ಅದಕ್ಕೆ ನಂಜುಂಡ ಸರಿಹೊತ್ತಿನಲ್ಲಿ ಬಂದ ನಂಜುಂಡನನ್ನು ಚಾಮುಂಡಿ ಪ್ರಶ್ನಿಸುವ ರೀತಿ ಬಹಳ ನಾಟಕೀಯವಾಗಿ ಮೂಡಿ ಬಂದಿದೆ.

ಸಪ್ಪಟ ಸರಿಹೊತ್ತಿನಲ್ಲಿ ನಮ್ಮಟ್ಟಿಗೆ
ಬಂದೋರ್ಯಾರು? ಹೆಸರ್ಹೇಳಿ ಕುಲವ್ಹೇಳಿ

ಎಂದು ಕೇಳಿದ ಚಾಮುಂಡಿಯ ಮಾತಿಗೆ ನಂಜಯ್ಯ ಉತ್ತರಿಸಿದ್ದು ಹೀಗೆ

ಆಯ ಉಳ್ಳೋಳು ನೀನು ಚಾಯ ಉಳ್ಳೋಳು ನೀನು
ನಿನದಂಡೆಗೊಬ್ಬನು ಬರುವೆನು...... ಚಾಮುಂಡಿ
ನೀ ಬೇಗೆದ್ದು ಕದವ ತೆಗಿಬಾರೆ.

ಇಂತಹ ಮಾತಿಗೆ ಚಾಮುಂಡಿ ಕರಿಯಕೋಳಿ ತಿನ್ನೊ ಕರಿಯ ಚಾಮುಂಡಿ ನಾನು. ನನ್ನ ಬಳಿ ಲಿಂಗ ಜಂಗಮರು ಬರಬಹುದೇ? ಎನ್ನುತ್ತಾಳೆ. ಚಾಮುಂಡಿಯ ಸೌಂದರ್ಯಕ್ಕೆ ಸೋತು ಅವಳನ್ನು ಸೇರುವ ಆಸೆ ಆತುರವಾಗಿದೆ. ಕುಲಯಾವುದಾದರೇನು ಎನ್ನುತ್ತಾ ಚಾಮುಂಡಿಯ ಜೊತೆ ಸಂಬಂಧವನ್ನು ಬೆಳೆಸುವುದಕ್ಕೆ ಸಿದ್ಧನಾಗುತ್ತಾನೆ. ಕೊನೆಗೆ ಚಾಮುಂಡಿ, ನಂಜಯ್ಯ ನಂಜನಗೂಡಿನಿಂದ ನಡೆದು ಬಂದಿದ್ದಾನೆಂದು ಕರುಣೆಯಿಂದ, ಪ್ರೀತಿಯಿಂದ ಕದವನ್ನು ತೆಗೆದು ಕೈ ಮುಗಿಯುತ್ತಾಳೆ.

ತನ್ನನ್ನು ಅರಸಿ ಬಂದ ನಂಜುಂಡನನ್ನು ಮುಗಳು ನಗೆಯ ಹೂಮಳೆಯಲ್ಲಿ ಬರಮಾಡಿ ಕೊಳ್ಳುತ್ತಾಳೆ. ನಂಜಯ್ಯ ಅವಳ ಅರಮನೆಯ ಕೋಣೆ ನಾನು ಬರುವಿಕೆಗಾಗಿ ಅಲಂಕೃತವಾಗಿದ ರೀತಿಯಲ್ಲಿ ಅಲಂಕೃತವಾಗಿದೆ ಎಂದು ಆಶ್ಚರ್ಯಪಡುತ್ತಾನೆ.

ಚಾಮುಂಡಿಯ ಜೊತೆ ಮಂಚದ ಮೇಲೆ ವರಗೀದಾನು. ಆ ರಾತ್ರಿ ಸುಖವಾಗಿ ಕಳೆದರು. ಚಾಮುಂಡಿಯ ಮನೆಯಲ್ಲಿ ಒಂದು ಸುಖದ ರಾತ್ರಿ ಕಂಡ ನಂಜಯ್ಯ ಇದ್ದಕ್ಕಿದ್ದಂತೆ ಬೆಚ್ಚಿದನು. ಅದಕ್ಕೆ ಕಾರಣ ಕೇಳಿದ ಚಾಮುಂಡಿಗೆ 'ದೇವೀರಿ ಸ್ವಪ್ನಕ್ಕೆ ಬಂದಿದ್ದಳು' ಎಂದನು. ಬೆಳಕು ಹರಿಯುವುದರೊಳಗೆ ನಾನು ನಂಜನಗೂಡಿಗೆ ಹೋಗಬೇಕು ಎಂದು ಹೊರಟ ನಂಜಯ್ಯನ ದೋತ್ರವನ್ನು ಹಿಡಿದು 'ಕೊರಳ ಪದಕವನ್ನು' ಕೇಳುತ್ತಾಳೆ. ಅದನ್ನು ನಂಜಯ್ಯ ಕೊಡುವುದಿಲ್ಲ. ಇದಕ್ಕೆ ಚಾಮುಂಡಿ ದೈನ್ಯದಿಂದ ನಂಜುಂಡನನ್ನು ಹೀಗೆ ಕೇಳಿಕೊಳ್ಳುತ್ತಾಳೆ.

ನಿಮ್ಮ ಹೆಸರ್ಹೇಳಿ ಸ್ವಾಮಿ, ಕುಲವೇಳಿ ಎಂದು ಕೇಳುತ್ತಾಳೆ
ನಂಜನಗೂಡಿಗೆ ನಡುವೆ ತೋಪೇಲಿರುವ
ನಾನಂಜುಂಡಲಿಂಗ, ಬಿಡೆ ಸೆರಗಮ್ಮ[೬]

ಈ ರೀತಿಯಾಗಿ ಹೇಳಿ ನಂಜುಂಡ ಚಾಮುಂಡಿಯ ಬೆಟ್ಟದಿಂದ ತನ್ನೂರಿಗೆ ಬಂದು ಸೇರುತ್ತಾನೆ. ಇತ್ತ ದೇವೀರೆ ಗಂಡನಿಗಾಗಿ ಪರೀಷೆಯಲ್ಲೆಲ್ಲಾ ಹುಡುಕುತ್ತಾ, ಎಲ್ಲೊ ಸಿಗದೆಯಿರುವುದಕ್ಕೆ ಅನುಮಾನಗೊಂಡು ಅವನ ಬರುವಿಕೆಗಾಗಿ ದಾರಿ ಕಾಯುತ್ತಿರುತ್ತಾಳೆ. ನಂಜಯ್ಯ ಪ್ರೀತಿಯಿಂದ 'ದೇವೀರಿ ಬಾಗಿಲು ತೆರೆ' ಎಂದು ಪರಿಪರಿಯಾಗಿ ಬೇಡುತ್ತಾನೆ. ಆದರೆ ದೇವೀರಿ ಬಾಗಿಲು ತೆರೆಯುವುದಿಲ್ಲ ಮತ್ತೆ ದೊಡ್ಡ ದನಿಯಲ್ಲಿ ನಂಜಯ್ಯ ಕೂಗಿ ಕದವನ್ನು ತಟ್ಟಿದ. ಆದರು ಬಾಗಿಲು ತೆರೆಯಲಿಲ್ಲ. ಅದಕ್ಕೆ ಅವಳು ನಂಜುಂಡನಿಗೆ ಸೂತಕದ ಶಿಕ್ಷೆಯನ್ನು ಕಳೆದುಕೊಳ್ಳುವಂತೆ ಹೇಳುವಳು. ಅವಳ ಆಜ್ಞಾನುಸಾರವಾಗಿ ಕಪಿನಿ ಹೊಳೆಯಲ್ಲಿ ಮಿಂದು ಸೂತಕ ಕಳೆದುಕೊಂಡನು, ಮುಂದೆ ನಂಜುಂಡ ದೇವೀರಿಯ ಇಬ್ಬರು ತಮ್ಮ ತಪ್ಪುಗಳನ್ನು ಅರಿತು ಸುಖದಲ್ಲಿದ್ದರು. ಇಲ್ಲಿ ಮೂಲಭೂತವಾಗಿ ಕಂಡುಬರುವ ಅಂಶವೆಂದರೆ ಮನುಷ್ಯನಿಗೆ ಇರುವ ಹಾಗೆ ದೈವಗಳಿಗೂ

ಕಾಮ, ಪ್ರೇಮ, ರಾಗದ್ವೇಷ, ಚಪಲತೆ ಹಾಗೂ ಆತುರ ಕಾತುರ ಇದ್ದೆ ಇರುತ್ತದೆ ಎಂಬುದನ್ನು ಜನಪದರು ತಾವು ನಂಬಿರುವ ದೈವಗಳ ಜೀವನದಿಂದ ವ್ಯಕ್ತಪಡಿಸುತ್ತಾರೆ.

ಈ ಸ್ತ್ರೀ ಪಾತ್ರಗಳು ಸಾಮಾನ್ಯ ಸ್ತ್ರೀ ಪಾತ್ರಗಳಂತೆ ಕಂಡುಬಂದಿವೆ. ದೈವ ಸಂಬಂಧಗಳು ಹೇಗೆ ಮಾನವ ಸಂಬಂಧದ ಹಾಗೆ ತಮ್ಮ ಬೇಕು ಬೇಡಗಳನ್ನು ಅಪಮಾನ ಅನುಮಾನ ತಿರಸ್ಕಾರಗಳನ್ನು ವ್ಯಕ್ತಪಡಿಸುತ್ತವೆ ಎಂಬುದನ್ನು ಈ ಪಾತ್ರಗಳಿಂದ ತಿಳಿಯಬಹುದು. ಚಾಮುಂಡಿ ಮನೆಗೆ ಹೋದ ನಂಜುಂಡನಿಗೆ, ದೇವೀರಿ ಸೂತಕದ ಶಿಕ್ಷೆ ವಿಧಿಸಿದರೂ, ಮತ್ತೆ ಗಂಡನನ್ನು ಬರಮಾಡಿಕೊಳ್ಳುವುದು, ಗೌರವಿಸುವುದು, ಸತಿಯಾದವಳ ಕರ್ತವ್ಯ ಎಂದು ದೇವರಾದ ದೇವೀರಿಯು ಎತ್ತಿ ತೋರಿಸುತ್ತಾರೆ.

ನಂಜುಂಡನ ಬಯಕೆಯನ್ನು ಈಡೇರಿಸಿದ ಚಾಮುಂಡಿಯು ಸಹ ಅವನನ್ನು ತನ್ನಲ್ಲೇ ಒತ್ತಾಯ ಮಾಡಿ ಇರಿಸಿಕೊಳ್ಳಲು ಒಪ್ಪುವುದಿಲ್ಲ. ಏಕೆಂದರೆ ಈಗಾಗಲೇ ಮನೆಯಲ್ಲಿ ನಂಜುಂಡನಿಗೆ ಹೆಂಡತಿಯು ಇದ್ದಾಳೆ ಎನ್ನುವ ನೈತಿಕ ಹೊಣೆಯ ಅರಿವು ಇರುವುದರಿಂದ, ಅವನನ್ನು ದೇವೀರಿಯ ಹತ್ತಿರ ಕಳಿಸಿಕೊಡುತ್ತಾಳೆ. ಇಲ್ಲಿ ಗಂಗೆಗೌರಿಯರ ಹಾಗೆ ಮುಖಾಮುಖಿ ಜಗಳವನ್ನು ದೇವೀರಿ ಚಾಮುಂಡಿ ಆಡುವುದಿಲ್ಲ. ಇದಕ್ಕೆ ಮುಖ್ಯಕಾರಣ ಚಾಮುಂಡಿಯನ್ನು ನಂಜುಂಡ ದೇವೀರಿ ಇರುವ ಮನೆಗೆ ಕರೆತರುವುದಿಲ್ಲ. ಒಂದು ಮನೆಯಲ್ಲಿ ಚಾಮುಂಡಿ ಒಂದು ಮನೆಯಲ್ಲಿ ದೇವೀರಿ ಇರುವಾಗ ನಂಜುಂಡ ಯಾವಾಗ ಎಲ್ಲಿಗೆ ಬೇಕಾದರೂ ಹೋಗಬಹುದಿತ್ತು. ಒಟ್ಟಾರೆ ಹೇಳುವುದಾದರೆ ಜನಪದರು ತನ್ನ ಆರಾಧ್ಯ ದೈವಗಳಿಗೆ ಹೆಂಡತಿಯರಿದ್ದರೂ, ಎರಡನೇ ಹೆಂಡತಿಯನ್ನು ತಂದು ಅವರ ಸರಸ ವಿರಸವನ್ನು ನೋಡುವುದರ ಮೂಲಕ ಸಂತೋಷ ಪಡುತ್ತಾರೆ.

೩. ಮಾಳವ್ವ

ಆದಿಚುಂಚನಗಿರಿ ಭೈರವ ಮಾಳವ್ವನ ಪ್ರಣಯ ಪ್ರಸಂಗವನ್ನು ಹೇಳುವ ಕಾವ್ಯ. ಈ ಪ್ರಸಂಗ ಜನಪದರ ಕೈಯಲ್ಲಿ ಅತ್ಯಂತ ಸುಂದರವಾಗಿ ನಿರೂಪಿತವಾಗಿದೆ.

ವಜ್ರದ ಗಿರಿಯ ಮೆಲೆ ನಿದ್ರೆ ಮಾಡುವ ಹೆಣ್ಣೆ
ಮುದ್ದು ಗಂಗಾಧರ ಸೆರೆತಂದ – ಹೆಣ್ಣೆ
ನೀನಿದ್ದ ಪಟ್ಟಣದ ಹೆಸಹ್ಹೇಳೆ[೬೪]

ಎಂದು ಕಾವ್ಯ ಪ್ರಾರಂಭವಾಗುತ್ತದೆ. ಆದಿಚುಂಚನಗಿರಿ ಹಚ್ಚ ಹಸಿರಿನಿಂದ ಕಂಗೊಳಿಸುತ್ತದೆ. ಆ ಬೆಟ್ಟದ ನಡುವೆ ಮುದ್ದು ಗಂಗಾಧರನಿಗೆ ಚೋಳರು ಕಟ್ಟಿದ ದೇವಾಲಯ, ಅತ್ಯಂತ ಆಕರ್ಷಕವಾಗಿದೆ. ಗಂಗಾಧರನಿಗೆ ಇಬ್ಬರು ಮಡದಿಯರು ಗಂಗೆ ಮತ್ತು ಪಾರ್ವತಿ, ಗಂಗೆಗೆ ಗಂಗಿಮಾಳಿ, ಮಾಳವ್ವ ಎಂತಲೂ ಕರೆಯುವರು. ಪಾರ್ವತಿಗೆ ಅರಿಯದಂತೆ ಮಾಳವ್ವನನ್ನು ಗಂಗಾಧರ ಎಲ್ಲಿಂದ ಕರೆ ತಂದನೆಂದು ಪ್ರಶ್ನಿಸುತ್ತಾರೆ. ಜನಪದರು ಇದಕ್ಕೆ ಉತ್ತರವಾಗಿ ಮಾಳವ್ವಳೇ ಹೇಳುತ್ತಾಳೆ. ಶಿವ ಅಲವಂಗದ ಕೋಟೆಯನ್ನು ಹಗಲಲ್ಲಿಯೇ ಕನ್ನ ಕೊರೆದು, ಅವಳನ್ನು

ಕರೆತಂದ ಎನ್ನುವಳು. ಮುಂದೆ ಆದಿಚುಂಚನಗಿರಿಯ ಭೈರವ ಮಾಳವ್ವಳ ಪ್ರಣಯ ಪ್ರಸಂಗಕ್ಕೆ ತಾಣವಾಯಿತು.

ಭೈರವ ಸಾಮಾನ್ಯನಲ್ಲ. ಈಗಾಗಲೆ ಮಡದಿ ಪಾರ್ವತಿಯನ್ನಿಟ್ಟುಕೊಂಡು ಕುರುಬತಿ ಮಾಳವನನ್ನು ತರುವ ಸಾಹಸ ನಿಜಕ್ಕೂ ಮೆಚ್ಚುವಂತದ್ದು, ಲೋಕವನ್ನಾಳುವ ಭೈರವನನ್ನು ಕಂಡರೆ ಹೆಣ್ಣುಮಕ್ಕಳೆಲ್ಲಾ ಹೆದರುವರು. ಇಂತಹ ಭೈರವ ಕುರುಬತಿಗೆ ಒಲಿಯ ಬೇಕಾದರೆ ಆ ಕುರುಬತಿ ಎಂಥವಳು, ಎಂಥ ಸುಂದರಿ ಅವಳ ದಿವ್ಯವಾದ ರೂಪಿಗೆ ಹೇಗೆ ಮನಸೋತ ಎನ್ನುವುದಕ್ಕೆ ಜನಪದರು ಹೇಳುವ ರೀತಿ.



ತುಪ್ಪದರಿಬಿಗೆ ಸೋತ ತೆಕ್ಕೆ ಕುರಬಿಗೆ ಸೋತ
ತುಪ್ಪಮಾರುವ ಕುರುಬತಿ-ಕೊರಳಲ್ಲಿ
ಮುತ್ತು ಕಂಡು ಭೈರವ ಮನಸೋತ

ಇಂಥ ಚೆಲುವೆಯನ್ನು ಭೈರವ ಮದುವೆಯಾಗಿ, ತನ್ನ ಗಿರಿಗೆ ಕರೆತಂದು, ಚಕ್ಕಂದವಾಡುತ್ತಾನೆ. ಇವಳನ್ನು ಮತ್ತಷ್ಟು ಒಲಿಸಿಕೊಳ್ಳಲು ಅವಳಂತೆ ಕುರಿಕಾಯುವ, ಇವಳೊಂದಿಗೆ ಹುಲ್ಲೆ ಮರಿಯಾಗುವ, ಇವಳಂತೆ ನಡೆಯುವ. ಹೀಗಾಗಿ ಇವರಿಬ್ಬರು ನಂಟು ಇನ್ನಷ್ಟು ಬೆಳೆಯಿತು. ಇವರಿಬ್ಬರ ಸಂಬಂಧ ಪಾರ್ವತಿಗೂ ಗೊತ್ತಾಗುತ್ತದೆ. ಮುಂದೆ ಭೈರವ ಪಾರ್ವತಿಗೆ ಹೆದರಿ ಮಾಳವ್ವ ಇರುವಲ್ಲಿಗೆ ಬಂದು ನೆಲೆಸುತ್ತಾನೆ. ಭೈರವನಿಗೆ ಮಾಳವ್ವನೇ ಜಗತ್ತು ಬೇರೆ ಏನು ಇಲ್ಲ ಎನ್ನುವಂತಿದೆ.

ಪಾರ್ವತಿ ಭೈರವನ ಅಗಲಿಕೆಯಿಂದ ತುಂಬಾ ದುಃಖತಪ್ತಳಾಗುತ್ತಾಳೆ. ತನ್ನ ಗಂಡನನ್ನು ಒಲಿಸಿಕೊಂಡ ಸವತಿ ಹೇಗಿರಬೇಕು ಎಂದು ನೋಡಲು ಮಾಳವ್ವ ಇರುವ ಕಡೆ ಬರುತ್ತಾಳೆ. ಮಾಳವ್ವಳ ಅಪ್ರತಿಮ ಸೌಂದರ್ಯವನ್ನೂ ಕಂಡ ಪಾರ್ವತಿಗೆ ಸಿಟ್ಟು ಆವೇಶ ಬಂದರೂ ಅದನ್ನು ಸಹಿಸಿಕೊಳ್ಳುತ್ತಾಳೆ. ಅಪರಿಚಿತವಾದಳ ಜೋಡಿ ವಾದವೇನು ಎಂಬಂತೆ ತನ್ನ ಪತಿರಾಯ ಭೈರವನನ್ನು ತಿದ್ದಲು ಪ್ರಯತ್ನಿಸುತ್ತಾಳೆ. ಕರುಬುತಿಯ ಸಂಪಾಸಿದ ಕುರಿಗಳನ್ನಾ ಕಾಯುತ್ತೀಯಾ, ಕುರಿಹಾಲು ಕರೆದುಂಡಿದಿಯಾ, ಇವೆಲ್ಲ ಅವಳಿಗಾಗಿ ಮಾಡಿದಿಯಾ, ಬೇಡ ಅವಳನ್ನು ಬಿಟ್ಟು ನನ್ನ ಸಂಗಡ ಇರು ಎಂದು ನೀತಿಮಾತುಗಳನ್ನು ಆಡುತ್ತಾಳೆ. ಆದರೆ ಭೈರವ ಇವಳ ಮಾತಿಗೆ ಬಗ್ಗಲಿಲ್ಲ. ಹಾಗೆಯೇ ನಂಜಯ್ಯ ನಂಥ ಅಂಜುಬುರುಕನಲ್ಲ, ಉಪಾಯ ಚತುರನಲ್ಲ, ಧೈರ್ಯವಂತ. ತನ್ನ ಮಡದಿಯನ್ನು ಧಿಕ್ಕರಿಸಿ ಮಾತನಾಡುವ ಪ್ರೇಮೋನ್ಮತ್ತ. ಮಾಳಿಯೊಂದಿಗೆ ಇದ್ದು ಅವಳು ಮಾಡುವ ಕೆಲಸವನ್ನು ಮಾಡುತ್ತೇನೆ ಎಂದು ನಿರ್ದಾಕ್ಷಿಣ್ಯವಾಗಿ ಹೇಳುತ್ತಾನೆ. ಪಾರ್ವತಿಗೆ ದಿಕ್ಕೆ ತೋಚುವುದಿಲ್ಲ. ಗಂಡನ ಮೊಂಡುತನಕ್ಕೆ ಬೆರೆಗಾಗುತ್ತಾಳೆ. ಆದರೆ ನಿರಾಶಳಾಗಲಿಲ್ಲ. ಕೊನೆಗೆ ಮಾಳವನನ್ನೆ ಹೆದರಿಸಲು ಪ್ರಯತ್ನಿಸುತ್ತಾಳೆ.

ಭೈರವ ಸಂಬಂಧ ಬಿಟ್ಟುಬಿಡು, ಇಲ್ಲದಿದ್ದರೆ ಕೊರಳಿಗೆ ಹದಿನಾರು ಹಾವು ಸುತ್ತುತ್ತೇನೆ ಎಂದು ಹೆದರಿಸಿದಳು. ಆದರೆ ಮಾಳವ್ವ ಇದ್ಯಾವುದಕ್ಕೂ ಜಗ್ಗುವುದಿಲ್ಲ. ಕೊನೆಗೆ ಮಾಳವ್ವನನ್ನು ಭೈರವ ಕರೆತಂದು ತನ್ನ ಅರಮನೆಯಲ್ಲಿಯೇ ಇಟ್ಟುಕೊಳ್ಳುತ್ತಾನೆ. ಆಗ ಪಾರ್ವತಿ ವಿಧಿಯಿಲ್ಲದೆ ಅವರಿಬ್ಬರ ಜೊತೆಯಲ್ಲಿ ಹೊಂದಿಕೊಂಡು ಹೋಗುವುದು ಅನಿವಾರ್ಯವಾಗುತ್ತದೆ. ಇದರಿಂದ ಭೈರವನಿಗೆ ಸಮಾಧಾನವಾಗುತ್ತದೆ. ಪಾರ್ವತಿಯ ಉದಾರ ಗುಣವನ್ನು ಕಂಡ ಭೈರವ ಇಬ್ಬರನ್ನು ಸಮನಾಗಿ ಕಾಣುತ್ತಾನೆ.

ನಂಜಯ್ಯ ಚಾಮುಂಡಿಯ ನೆಲೆಯನ್ನು ಅರಸಿಕೊಂಡು, ಆರೇಳು ಗಾವುದ ದೂರದ ಚಾಮುಂಡಿ ಗಿರಿಗೆ ಬಂದರೆ, ಭೈರವ ಮಾಳವ್ವನ್ನು ಕರೆತಂದು ತನ್ನ ಅರಮನೆಯಲ್ಲಿಯೇ ಇಟ್ಟುಕೊಳ್ಳುತ್ತಾನೆ. ಶಿವನಿಗಿಂತ ನಂಜಯ್ಯನಿಗಿಂತ, ರಂಗಯ್ಯನಿಗಿಂತ, ಭೈರವಸ್ವಾಮಿ ಹಠವಾದಿ, ಧೈರ್ಯವಂತ. ಇಲ್ಲಿ ಬರುವ ಪಾರ್ವತಿಯು ಗೌರಿ, ದೇವೀರಿ, ಲಕ್ಷ್ಮೀದೇವಿಯರ ಹಾಗೆ ಪ್ರತಿಭಟಿಸಿದರೂ, ಕೊನೆಗೆ ವಿಧಿಯಿಲ್ಲದೆ ತನ್ನ ಗಂಡನ ಕಿರಿಯ ಹೆಂಡತಿಯ ಜೊತೆ ಹೊಂದಿಕೊಂಡು ಹೋಗುವುದನ್ನು ಕಾಣಬಹುದು.

**೪. ಕೋಮಲೆ**

ಮೈಲಾರಲಿಂಗ ಕೋಮಲೆಯರ ಪ್ರಣಯಪ್ರಸಂಗ ಆಶ್ಚರ್ಯಕರವಾಗಿದೆ ಹಾಗೂ ವಿಚಿತ್ರವೆನಿಸಿದೆ. ಕೋಮಲೆ ಮದುವೆಯಾದ ಇನ್ನೊಬ್ಬನ ಹೆಂಡತಿ. ಅದು ಅಲ್ಲದೆ ಒಂದು ಮಗುವಿನ ತಾಯಿ ಹಾಗೂ ಐದು ದಿನದ ಬಾಣಂತಿ. ಇವನು ನಂಜಯ್ಯ ಹಾಗೂ ಭೈರವನಿಗಿಂತ ಹಠದ ಸ್ವಭಾವದವನು ಹಾಗೂ ಸಾಹಸಿ.



ಈ ಕಥನ ಕಾವ್ಯದಲ್ಲಿ ಮೈಲಾರಲಿಂಗ, ಗೊರವನ ವೇಷದಲ್ಲಿ ಹೋಗಿ ಕುರುಬತಿ ಕೋಮಲೆಯನ್ನು ಅಪಹರಿಸಿ ತಂದವನು. ಐದು ದಿನದ ಬಾಣಂತಿಯನ್ನು ಕರೆತಂದು, ತನ್ನ ಅರಮನೆಯಲ್ಲಿಟ್ಟುಕೊಳ್ಳುವ ಅವನ ವಿಲಕ್ಷಣ ಸ್ವಭಾವಕ್ಕೆ ಯಾರಾದರೂ ಅಚ್ಚರಿ ಪಡಲೇಬೇಕಾಗುತ್ತದೆ. ಮೈಲಾರಲಿಂಗ ಕೋಮಲೆಯರ ಪರಸ್ಪರ ಪ್ರಣಯ ಪ್ರಸಂಗ ನೈಜ ಚಿತ್ರವನ್ನು ನೀಡುವುದಕ್ಕೆ ಬದಲಾಗಿ ಬಲತ್ಕಾರದ ಅತಿವರ್ತನೆಯ ತುತ್ತ ತುದಿಯಲ್ಲಿ ನಿಲ್ಲುತ್ತದೆ. ನವುರಾದ ಭಾವಗಳಿಗೆ ಬದಲಾಗಿ, ಒರಟಾದ ಶೈಲಿಯ, ಅನುಚಿತ ಸನ್ನಿವೇಶಗಳಿಂದ ಕೂಡಿ, ಮಿಕ್ಕ ಕಥೆಗಳಿಗಿಂತ ಭಿನ್ನವಾಗಿ ತೋರುತ್ತದೆ.

ಗೋರವನ ವೇಷದಲ್ಲಿ ಬಂದ ಮೈಲಾರಲಿಂಗ, ಕೋಮಲೆಯ ಮನೆಯ ಮುಂದೆ ಬರುತ್ತಾನೆ. ಐದು ದಿನದ ಬಾಣಂತಿ ಕೋಮಲೆಯನ್ನು 'ನೀರನ್ನು ತಂದು ಹೂಯ್ಯ' ಬೇಕೆಂದು ಕೇಳುತ್ತಾನೆ. ಅದಕ್ಕೆ ಒಪ್ಪದ ಕೋಮಲೆಗೆ ಅಂಗಲಾಚಿ ಬೇಡಿಕೊಳ್ಳುತ್ತಾನೆ. ಕೊನೆಗೆ ವಿಧಿಯಿಲ್ಲದೆ ನೀರು

ಹೊಯ್ಯುತ್ತಾಳೆ. ಅವಳ ಅಂಗಸೌಂದರ್ಯಕ್ಕೆ ಮನಸೋತ ಮೈಲಾರಲಿಂಗ ಅವಳನ್ನು ಪಡೆದು ಕೊಳ್ಳಬೇಕೆಂದು ತೀರ್ಮಾನಿಸುತ್ತಾನೆ. ಅವಳನ್ನು ತನ್ನ ಜೊತೆಯಲ್ಲಿ ಬರುವಂತೆ ಬಲತ್ಕಾರದಿಂದ ಒಪ್ಪಿಸಲು ಪ್ರಯತ್ನಿಸುತ್ತಾನೆ.

ಮೈಲಾರಲಿಂಗನ ಈ ವರ್ತನೆಗೆ ಸೋತ ಕೋಮಲೆ 'ಬೀಸುವ ದೊಣ್ಣೆ ತಪ್ಪಿಸಿಕೊಂಡರೆ ನೂರುವರ್ಷ ಆಯಸ್ಸು' ಎನ್ನುವ ಗಾದೆಯಂತೆ ಮಗುವಿಗೆ ಹಾಲು ಕೊಟ್ಟು ಬರುತ್ತೇನೆಂದು ಸುಳ್ಳು ಹೇಳಿ ತಪ್ಪಿಸಿಕೊಳ್ಳುತ್ತಾಳೆ. ಒಮ್ಮೆ ಕಸತೆಗೆದುಕೊಂಡು ತಿಪ್ಪೆಗೆ ಹಾಕಿ ಬರಲು ಹೊರಟ ಕೋಮಲೆಯನ್ನು ತಿಪ್ಪೆಯಲ್ಲಿ ಅವಳ ಕೈ ಹಿಡಿಯಲು ಪ್ರಯತ್ನಿಸಿ ವಿಫಲನಾಗುತ್ತಾನೆ. ಇನ್ನೊಮ್ಮೆ ಬಾವಿ ನೀರು ತರಲು ಹೋದ ಕೋಮಲೆಯನ್ನು ದಾರಿಯಲ್ಲಿ ಅಡ್ಡಗಟ್ಟಿ ಬಲವಂತವಾಗಿ ಮೈಲಾರಕ್ಕೆ ಕರೆದುಕೊಂಡು ಹೋಗುತ್ತಾನೆ.

ಮೈಲಾರಲಿಂಗನ ಮೊದಲ ಹೆಂಡತಿ ಗಂಗೆ ಮಾಳಿಗೆ ಕೋಮಲೆಯನ್ನು ಕರೆತಂದಿರುವ ವಿಷಯ ತಿಳಿದು, ಸಿಡಿಮಿಡಿಗೊಳ್ಳುತ್ತಾಳೆ. ಆದರೆ ಮೈಲಾರಲಿಂಗ ತನ್ನ ಹೆಂಡತಿಯನ್ನು ನಯವಾಗಿ ಸಮಾಧಾನಪಡಿಸುತ್ತಾನೆ. ಬಲಗಡೆ ಅವಳು, ಎಡಗಡೆ ನೀನು ಇರುವಂತೆ ಹೇಳುತ್ತಾನೆ. ಪಾರ್ವತಿ, ಗಂಗೆಮಾಳಿ ಈ ಇಬ್ಬರ ದುಃಖವು ಒಂದೇ ಬಗೆಯದು. ನೋವನ್ನು ನುಂಗಿಕೊಂಡು, ಅನಿವಾರ್ಯವಾದ ಪರಿಸ್ಥಿತಿಗೆ ಒಗ್ಗಿಕೊಳ್ಳಬೇಕಗುತ್ತದೆ. ಬಲಗಡೆ ಒಬ್ಬಳನ್ನು, ಎಡಗಡೆ ಒಬ್ಬಳನ್ನು ಸ್ವೀಕರಿಸಿ ಪುರುಷ ನಾದವನು ಮಡದಿಯರನ್ನು ನಲಿಸುವ, ನುಡಿಸುವ ಪರಿ ಎರಡು ಕತೆಗಳ ವೈಶಿಷ್ಟ್ಯವೆನ್ನಬೇಕು.[೬೨]

ಗೋರವನ ವೇಷಧರಿಸಿದ ಮೈಲಾರಲಿಂಗ, ಕೋಮಲೆಯನ್ನು ಬಲವಂತವಾಗಿ ತನ್ನವಳನ್ನಾಗಿ ಮಾಡಿಕೊಳ್ಳುವುದು ರಸಿಕತನದ ಪರಾಕಷ್ಠೆಯಾಗಿದೆ. ದೇವರುಗಳಲ್ಲಿಯೂ ಸಹ ತಮಗೆ ಬೇಕಾದದ್ದನ್ನು ಪಡೆಯುವಾಗ ಸಮಾಜದ ರೀತಿ-ನೀತಿ, ನೈತಿಕ ಹೊಣೆಯ ಜವಾಬ್ದಾರಿಯನ್ನು ಮರೆತು, ಬಲವಂತವಾಗಿ ಪಡೆದುಕೊಂಡಿರುವುದನ್ನು ಮೈಲಾರಲಿಂಗ ದೇವರ ವ್ಯಕ್ತಿತ್ವದಲ್ಲಿ ಕಂಡುಬರುತ್ತದೆ.

**೫. ಹೊನ್ನಾಲದೇವಿ**

ಗಂಗಾಧರ-ಹೊನ್ನಾಲದೇವಿಯ ಕಥೆಯು ಪ್ರಣಯ ಪ್ರಸಂಗಕ್ಕೆ ಸಂಬಂಧಿಸಿದೆ. ಈ ಕಥೆಯು ಕೋಮಲೆ, ಮೈಲಾರ ಲಿಂಗರ ಕಥೆಯಂತೆ ಸಾಗುತ್ತದೆ. ಜಂಗಮನಾದ ಗಂಗಾಧರ ಹೊನ್ನಾಲ ದೇವಿಯ ಮನೆಯ ಬಾಗಿಲಿಗೆ ಭಿಕ್ಷೆಬೇಡಲು ಬರುತ್ತಾನೆ. ಅವಳ ಸೌಂದರ್ಯ ರೂಪನೋಡಿ ಗಂಗಾಧರ ಬೆರಗಾದನು. "ನನಗೆ ಹೊನ್ನುಭಿಕ್ಷೆ ಬೇಡ ಕನ್ನೆ ಭಿಕ್ಷೆಬೇಕೆಂದು ನುಡಿಯುತ್ತಾನೆ" ಗಂಗಾಧರನ ಮಾತನ್ನು ಕೇಳಿದ ಹೊನ್ನಾಲದೇವಿ ಭಯಪಟ್ಟಳು. ತಾನು ಗಂಡುಳ್ಳ ಗರತಿ, ಮಕ್ಕಳ ತಾಯಿಯನ್ನು ನೀನು ಒಪ್ಪುವುದು ಸರಿಯಲ್ಲ ಎಂದು ದೋಷಿಸುತ್ತಾಳೆ.



ಗಂಗಾಧರ ಹೊನ್ನಾಲದೇವಿಯನ್ನು ಪಡಿಯಲೇಬೇಕೆಂಬ ಹಠದಿಂದ ಅವಳ ಮೇಲೆ 'ಮಲೆಯಾಳದ ಕಪ್ಪಿಟ್ಟ' ಮಂಕುಬೂದಿ ಎರಚಿ, ಜೂಲುನಾಯಿ ಮಾಡಿಕೊಂಡು ಯಾರಿಗೂ ಅನುಮಾನಬಾರದಂತೆ ತನ್ನ ಹಿಂದೆ ಕರೆದುಕೊಂಡು ಹೋಗುತ್ತಾನೆ.

ಹೊನ್ನಾಲದೇವಿ ಮಗುವಿನ ತಾಯಿ, ಬಾಣಂತಿ ತನ್ನ ಮಗುವನ್ನು ಬಿಟ್ಟುಬಂದ ಅವಳ ಎದೆಯ ಹಾಲು ತುಂಬಿ ಬಂದಿದೆ. ಆಲದ ಎಲೆಯನ್ನು ಕಿತ್ತು ದೊನ್ನೆ ಮಾಡಿಕೊಂಡೇ ಅದರಲ್ಲಿ ಹಾಲನ್ನು ತುಂಬಿ ತನ್ನ ಮುಂದೆ ಇಟ್ಟುಕೊಂಡು ತನ್ನ ಮಗುವಿಗಾಗಿ ದುಃಖಿಸುತ್ತಾಳೆ. ಇದನ್ನು ಕಂಡ ಗಂಗಾಧರ, ಹಿಂದಕ್ಕೆ ಹೋಗು ಎನ್ನುತ್ತಾನೆ. ಆದರೆ ಅವಳಿಗೆ ದಿಕ್ಕೇತೋಚದಂತೆ ಆಗುತ್ತದೆ. ಹಿಂದಕ್ಕೆ ಹೋದರೆ ಸರಿಸಮರಿಗೆ ಆಡಿಕೆ ಎನ್ನುತ್ತಾಳೆ.

ಇತ್ತ ಹೊಲಕ್ಕೆ ಹೋದ ಗಂಡನಿಗೆ 'ಸೊಪ್ಪಿನ ಬಿತ್ತು' ಕನಸಕಂಡ ವಸಂತರಾಯ ಮನೆಗೆ ಬಂದಾಗ, ಅವನ ತಾಯಿ ನಡೆದ ವಿಷಯವನ್ನು ಹೇಳುತ್ತಾಳೆ. 'ಉಕ್ಕು ಹಾಲಿಗೆ ಬಿಟ್ಟು, ಕುಡಿಯೋ ಕಂದನ ಬಿಟ್ಟು ಹೋದಳಪ್ಪ' ಎಂದಳು. ಅತ್ತೆಗೇನುಗೊತ್ತು ಮಂಕುಬೂದಿ ಎರಚಿ ಜೂಲುನಾಯಿ ಮಾಡಿಕೊಂಡು ಹಿಂದೆ ಕರೆದುಕೊಂಡು ಹೋಗಿರುವುದು. ಆದರೆ ಸೊಸೆ ಹೋಗಿದ್ದಾಳೆ ಎಂಬುದು ಮಾತ್ರ ಗೊತ್ತಿದೆ. ಅದನ್ನೇ ತನ್ನ ಮಗನಿಗೆ ಹೇಳಿದಳು.

ವಸಂತರಾಯನಿಗೆ, ಗಂಗಾಧರನು ಹೊನ್ನಾಲದೇವಿಯನ್ನು ಅಪಹರಿಸಿರುವುದು ಕಂಡು ದುಃಖಿಸುತ್ತಾನೆ. ತನ್ನ ಎರಡು ಮಕ್ಕಳನ್ನು ಕರೆದುಕೊಂಡು ತನ್ನ ಹೆಂಡತಿ ಹೊನ್ನಾಲದೇವಿಯನ್ನು ಹುಡುಕಲು ಶಿವಗಂಗೆ ಮಠದ ಹತ್ತಿರಕ್ಕೆ ಬಂದನು. ಅಲ್ಲಿ ತನ್ನ ಹೆಂಡತಿಯನ್ನು ಬಿಟ್ಟು ಕೊಡುವಂತೆ ಗಂಗಾಧರನ್ನು ಬಗೆ ಬಗೆಯಾಗಿ ಬೇಡಿಕೊಳ್ಳುತ್ತಾನೆ. ಗಂಗಾಧರ ಹಾಗೂ ಹೊನ್ನಾಲದೇವಿ ಗಂಡ ವಸಂತರಾಯನ ನಡುವೆ ವಾದ-ವಿವಾದ ನಡೆಯುತ್ತದೆ. ಆದರೂ ಸಹ ಗಂಗಾಧರ ಹೊನ್ನಾಲದೇವಿಯನ್ನು ಬಿಟ್ಟುಕೊಡಲಿಲ್ಲ. ಕೊನೆಗೆ ವಿಧಿಯಿಲ್ಲದೆ ವಸಂತರಾಯ ಸುಮ್ಮನಾಗುತ್ತಾನೆ.

ಹೊನ್ನಾಲ ದೇವಿಯು ತನ್ನ ಮಕ್ಕಳಿಗಾಗಿ ಹಂಬಲಿಸುವ, ಹಾಗೂ ವಸಂತರಾಯನು ತನ್ನ ಹೆಂಡತಿಯನ್ನೂ ಬಿಟ್ಟುಕೊಡು ಎಂದು ಗಂಗಾಧರನಿಂದ ಕೇಳುವ ಸನ್ನಿವೇಶ, ಎಲ್ಲವೂ ಕರುಣ ರಸಪೂರಿತವಾಗಿದೆ. ಗಂಗಾಧರ ಹೊನ್ನಾಲದೇವಿಯನ್ನು ಕರೆತರುವಾಗ ಬಹಳ ನಿಷ್ಠುರವಾಗಿಯೇ ನಡೆದುಕೊಳ್ಳುತ್ತಾನೆ. ಕೈಹಿಡಿದ ಗಂಡ ಬಂದು ಹೆಂಡತಿಯನ್ನು ಬಿಟ್ಟುಕೊಡುವಂತೆ ಕೇಳಿಕೊಂಡರು ಕಳುಹಿಸುವುದಿಲ್ಲ. ಒಟ್ಟಾರೆ ಶಿವ ಕಥೆಗೆ ಸಂಬಂಧಿಸಿದಂತೆ ಶಿವ-ಗಂಗೇಗೌರಿ, ನಂಜುಂಡ-ಚಾಮುಂಡಿ, ಭೈರವ-ಮಾಳವ್ವ, ಮೈಲಾರಲಿಂಗ-ಕೋಮಲೆ, ಗಂಗಾಧರ-ಹೊನ್ನಾಲದೇವಿ ಈ ಎಲ್ಲಾ ಕಥೆಗಳು ಒಂದೇ ಆಶಯವನ್ನು ಒಳಗೊಂಡ ಕಥೆಗಳಾಗಿವೆ. ಹಿರಿಯ ಹೆಂಡತಿಯು ಇದ್ದು ಕಿರಿಯ ಹೆಂಡತಿಯನ್ನು ಸೇರುವುದು ಮದುವೆಯಾದ ಹೆಣ್ಣಾದ ಹೊನ್ನಾಲದೇವಿ ಹಾಗೂ ಕೋಮಲೆಯನ್ನು ಬಲತ್ಕಾರದಿಂದ ಕದ್ದು ತುರುವುದು ನೈತಿಕ ಹಿನ್ನೆಲೆಯಲ್ಲಿ ಪ್ರಶ್ನಾರ್ಹವಾದರೂ, ಪುರುಷ ಪ್ರಧಾನ ಸಮಾಜ, ದೇವಲೋಕ ಮಾನವಲೋಕಗಳೆರಡರಲ್ಲೂ ಒಂದೇ ಎನ್ನುವುದು ಅರಿವಿಗೆ ಬರುತ್ತದೆ.

ಈ ಕಥೆಗಳಲ್ಲಿ ಬರುವ ಮಹಿಳೆಯರು ದೇವಾನು ದೇವತೆಗಳಾಗಿದ್ದರೂ, ಸವತಿ ಮಾತ್ಸರ್ಯದಿಂದ ತಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ಸಾಮಾನ್ಯ ಹೆಣ್ಣು ಹೀಗೆ ಗಂಡನಿಂದ ದರ್ಪಕ್ಕೆ, ಕೋಪಕ್ಕೆ ಒಳಗಾಗುತ್ತಾಳೋ, ಹಾಗೆ ಇಲ್ಲಿಯ ಸ್ತ್ರೀ ದೇವತೆಗಳು ಪುರುಷ ದೇವರುಗಳಿಂದ ದರ್ಪಕ್ಕೆ ಒಳಗಾಗುತ್ತಾರೆ. ಹಿರಿಯ ಹೆಂಡತಿಯನ್ನು ವಿರೋಧಿಸಿ ಕಿರಿಯ ಹೆಂಡತಿಯನ್ನು ತಂದರೂ, ಪುರುಷ ದೇವರುಗಳು ಹೆದರುವುದಿಲ್ಲ. ಹಿರಿಯ ಹೆಂಡತಿಯರೇ ವಿಧಿಯಿಲ್ಲದೆ ತಮ್ಮ ಗಂಡ ಹಾಗೂ ಗಂಡನ ಕಿರಿಯ ಹೆಂಡತಿಯ ಜೊತೆ ಹೊಂದಿಕೊಂಡು ಸಹ ಬಾಳ್ವೆಯನ್ನು ಮಾಡಬೇಕಾಗುತ್ತದೆ.

**ಆ. ವೈಷ್ಣವ ಕಥೆಗಳಲ್ಲಿ ಬರುವ ಮಹಿಳೆಯರು**

ವೈಷ್ಣವ ಕಥೆಗಳಲಿ ಬರುವ ಜನಪದರ ಆರಾಧ್ಯ ದೈವ ಹಾಗೂ ಅವರ ಹಿರಿಯ ಪತ್ನಿ, ಕಿರಿಯ ಪತ್ನಿಯರ ಜೀವನಕ್ರಮ ಹಾಗೂ ಸಂಬಂಧವನ್ನು ಹೆಚ್ಚು ಕಾಣಬಹುದು. ಶೈವಕಥೆಗಳ ಆಶಯವನ್ನೆ ಹೊತ್ತು ಸಾಗುತ್ತದೆ. ಈ ವೈಷ್ಣವ ಕಥೆಗಳು. ಚಲುವರಾಯ, ವರನಂದಿ, ಬಿಳಿಗಿರಿರಂಗಯ್ಯ ಕುಸುಮಬಾಲೆ, ಹಟ್ಟಿಲಕ್ಷ್ಮಮ್ಮ-ರಂಗಯ್ಯ ಇವರುಗಳ ಪ್ರಣಯ ಪ್ರಸಂಗವೇ ಈ ಕಥನಗೀತೆಗಳ ವಸ್ತುವಾಗಿದೆ. ಶಿವ ಕಥೆಗಳಂತೆ ಇಲ್ಲಿ ಇರುವ ವೈಷ್ಣವ ಕಥೆಗಳಲ್ಲಿನ ದೈವಗಳು ತಮ್ಮ ಕಿರಿಯ ಪತ್ನಿಗಾಗಿ ತಮ್ಮ ಪ್ರೀತಿ, ಹಠವನ್ನು ಚಲಾಯಿಸುವುದನ್ನು ಕಾಣಬಹುದು.

೧. ವರನಂದಿ

ವರನಂದಿ-ಚೆಲುವರಾಯರ ಪ್ರಣಯ ಪ್ರಸಂಗ ಜನಪದ ಕಾವ್ಯಗಳಲ್ಲಿ, ಸ್ಥಳಪುರಾಣಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಒಂದೇ ರೀತಿಯಲ್ಲಿ ಕಂಡುಬರುತ್ತದೆ. ಬೀಬಿ ನಾಚ್ಚಿಯರ್ ಎಂಬ ಹೆಸರು ಸ್ಥಳ ಪುರಾಣದಲ್ಲೂ, ವರನಂದಿ ಅಥವಾ ವರನಂಜಿ ಎಂಬ ಹೆಸರು ಜನಪದ ಕಾವ್ಯಗಳಲ್ಲಿ ಲಭ್ಯವಾಗುತ್ತದೆ. ಮೇಲುಕೋಟೆಯ ಚೆಲುವರಾಯ ತುರುಕರ ಕನ್ಯೆ ವರನಂದಿಯನ್ನು ಪ್ರೀತಿಸುವುದು, ಇಲ್ಲಿ ವರನಂದಿ ತುರುಕರ ಹೆಣ್ಣು ಎಂಬುದುಕ್ಕೆ ಖಚಿತವಾದ ಆಧಾರಗಳಿಲ್ಲದಿದ್ದರೂ, ಜನಜನಿತವಾದ ಕಥೆಗಳಲ್ಲಿ, ಕೆಲವು ಜನಪದ ತ್ರಿಪದಿಗಳಲ್ಲಿ ಅವಳು ತುರುಕರ ಹೆಣ್ಣೇ ಎಂಬಂತೆ ವರ್ಣಿತವಾಗಿದೆ.

ವರನಂದಿಯ ಹೆಸರಿನ ಬಗ್ಗೆ ಧರ್ಮದ ಬಗ್ಗೆ ಹಲವಾರು ಸಂಶಯಗಳಿದ್ದರೂ ಕಾವ್ಯದಲ್ಲಿನ ಕೆಲವು ಅಂಶಗಳನ್ನಿಟ್ಟುಕೊಂಡು ಹಲವು ನಿರ್ಣಯಗಳನ್ನು ಮಾಡಲಾಗಿದೆ. ವರನಂದಿಯ ತಂದೆ ದಿಳ್ಳಿಪಟ್ಟಣದವನೆಂದು ಪ್ರಸ್ತಾಪವಿದೆ. ದಿಳ್ಳಿ ಎಂದರೆ ದೆಹಲಿ ಆಗಿರಲಾರದು. ದೂರದ ಊರುಗಳನ್ನೆಲ್ಲಾ 'ದಿಳ್ಳಿ' ಎಂದೇ ಹೇಳುವ ಪರಿಪಾಠ ಜನಸಾಮಾನ್ಯರಲ್ಲಿ ಬಂದಿದೆಯೆಂದೂ, ಆ ದಿಳ್ಳಿ ಪಟ್ಟಣದ ರಾಜ ಮಹಮದೀಯ ಬಾದಷಹನೇ ಆಗಿರದೆ 'ಅಮ್ಮಳರಾಯ'ನೆಂಬ ಹಿಂದೂ ರಾಜನೇ ಇದ್ದರೂ ಇರಬಹುದೆಂದೂ ಊಹಿಸಲಾಗಿದೆ.[೬]

ವರನಂದಿಯನ್ನು ಕರ್ನಾಟಕನ ನವಾಬನ ಪುತ್ರಿ ನಂದಿನಿ ಎಂದು ಕರೆಯಲಾಗಿದೆ.[೭] ಆದರೂ ನಂಜಿ ಎಂಬುದು ದಕ್ಷಿಣ ಕರ್ನಾಟಕದಲ್ಲಿ ಒಕ್ಕಲಿಗರಲ್ಲಿ ಪ್ರಚಲಿತವಿರುವ ಹೆಸರು ಆಗಿರಬಹುದು. ನಂಜಿ, ನಂಜಮ್ಮ, ನಂಜವ್ವ ಹೀಗೆ ಒಕ್ಕಲಿಗರು ತಮ್ಮ ಹೆಣ್ಣು ಮಕ್ಕಳನ್ನು

ನಂಜನಗೂಡಿನ ನಂಜಯ್ಯನ ಹೆಸರಿನಲ್ಲಿ ಕರೆದುಕೊಳ್ಳುತ್ತಾರೆ.[೮] ಒಟ್ಟಾರೆ ವರನಂದಿ, ವರನಂಜಿ ಹಿಂದೂ ಮುಸ್ಲಿಂರ ಪ್ರಭಾವಕ್ಕೆ ಒಳಗಾದ ಹೆಸರಾದ್ದರಿಂದ ಬೀಬಿ ನಾಚ್ಚೀಯರ್ ಇಲ್ಲಿ ಸೇರಿಸಿಕೊಂಡಿರಬೇಕು ಎಂದು ಗ್ರಹಿಸಲಾಗಿದೆ.

ಗೊಂಬೆಯ ರೂಪದಲ್ಲಿದ್ದ, ಮೂವರು ದೇವರುಗಳಲ್ಲಿ ಚೆಲುವಯ್ಯನನ್ನು ವರನಂದಿ ಚೆಲುವಯ್ಯನನ್ನು ಒಲಿದು ಆರಿಸಿಕೊಂಡಳಂತೆ ವರನಂದಿ ಪ್ರಸಂಗದಲ್ಲಿ ಚೆಲುವಯ್ಯ ಹಗಲೆಲ್ಲ ಗೊಂಬೆಯಾಗಿದ್ದು, ಇರುಳೆಲ್ಲ ಪುರುಷನಾಗಿ ಅವಳೊಡನೆ ನಲಿಯುತ್ತಿದ್ದನೆಂಬ ಕಲ್ಪನೆಯೂ ಸೇರಿಕೊಂಡಿದೆ. ಚೆಲುವಯ್ಯ ವರನಂದಿಯ ಅರಮನೆಯ ಮುಂದೆ ಬಂದು ಶಂಖವನ್ನು ನುಡಿಸಿದ. "ಬಂದೀಯ ಹೆಣ್ಣೆ ನನ್ ಕೂಡ" ಎಂದು ಕೇಳಿದ ದಾಸಯ್ಯನ ಅಧಿಕ ಪ್ರಸಂಗ ವರನಂದಿಯಲ್ಲಿ ಕೊಪವನ್ನು ಕೆರಳಿಸಿತು.

ಯಾವ ಸೀಮೆಯೋನು ಎತ್ತಲ ರಾಜ್ಯದೋನು
ಯಾವ ನಾಡಿನ್ ಬಡದಾಸ- ಬಂದವನೆ
ಅವನ ಬಾಗಿಲಿಂದಾಚೆಗೆ ತಳ್ಳಿರಿ

ಎಂದು ಕೋಪಗೊಂಡು ಹೇಳಿದ ವರನಂದಿಯ ಮಾತಿಗೆ ಚೆಲುವಯ್ಯ ಅಂಜಲಿಲ್ಲ. ಅದಕ್ಕೆ ಚೆಲುವಯ್ಯ ಪ್ರತಿಯಾಗಿ "ಯಾವ ಸೀಮೆಯಲ್ಲ ಎತ್ತಲ ರಾಜ್ಯವಲ್ಲ ಮೈಸೂರು ಸೀಮೆ ಘನ ಸೀಮೆ ಒಳಗಿರುವ ನಾನು ಹೂವು ಮಾರುವ ದೊರೆ ಚೆಲುವ" ಎಂದು ಹೇಳಿ ಅವಳನ್ನು ಒಲಿಸಿಕೊಂಡನು. ವರನಂದಿಯನ್ನು ಮೇಲುಕೋಟೆಗೆ ಕರೆದುಕೊಂಡು ಹೋಗುವಾಗ ಆ ಸಮಯದಲ್ಲಿ ತುರುಕರು ಬಾಣಗಳನ್ನು ಬಿಟ್ಟರು ಅದನ್ನು ತಪ್ಪಿಸಿಕೊಂಡು ಮೇಲುಕೊಟೆಗೆ ಬಂದನು. ವರನಂದಿ ಒಂದೆಡೆ ಚೆಲುವಯ್ಯನನ್ನು ಗೊಂಬೆಯಾಗಿ ಇಟ್ಟುಕೊಂಡು ಒಲಿಸಿಕೊಂಡರೆ, ಇನ್ನೊಂದೆಡೆ ಚೆಲುವಯ್ಯನೇ ವರನಂದಿಯನ್ನು ಒಲಿಸಿಕೊಳ್ಳುವುದು ಕಂಡುಬರುತ್ತದೆ.

ಚೆಲುವಯ್ಯನ ಸಂಬಂಧಿಕರಾದ ಭೈರವ, ನಂಜಯ್ಯ, ಬಿಳಿಗಿರಿ ರಂಗಯ್ಯ ತಿಮ್ಮಪ್ಪ ಮುಂತಾದ ದೈವಗಳು ತುರುಕರ ಹೆಣ್ಣನ್ನು ಮದುವೆಯಾಗುತ್ತಾನೆಂದು ಚೆಲುವಯ್ಯನನ್ನು ನಿಂದಿಸುತ್ತಾರೆ. ಆದರೆ ಚೆಲುವಯ್ಯ ಹೆದರುವುದಿಲ್ಲ. ಅವರು ಮಾಡಿದ ಕೆಲಸಗಳನ್ನೇ ಬಯಲಿಗೆಳೆಯುತ್ತಾನೆ. ಧರ್ಮ ಪತ್ನಿಯರಿದ್ದು ನೀವು ಕಿರಿಯ ಪತ್ನಿಯರನ್ನು ತಂದಿಲ್ಲವೆ ಎಂದು ವಾದಿಸಿದರೂ ಅವರ್‍ಯಾರು ಇವರ ಮದುವೆಗೆ ಬರುವುದಿಲ್ಲ. ಕೊನೆಗೆ ತನ್ನ ಭಕ್ತರನ್ನು ಆಶ್ರಯಿಸಿಕೊಂಡು ವರನಂದಿಯನ್ನು ಮದುವೆಯಾಗುತ್ತಾನೆ. ಮದುವೆಗೆ ಇತರ ಸಂಬಂಧಿಗಳು ಯಾರೂ ಬರುವುದಿಲ್ಲ. ಅನ್ಯ ಜಾತಿಯ ಮದುವೆ ಸಂಬಂಧಗಳ ವಿಚಾರದಲ್ಲಿ ದೇವರಲ್ಲಿಯೂ ಪ್ರತಿಭಟನೆ ಇತ್ತು ಎನ್ನುವುದನ್ನು ಗುರುತಿಸಬಹುದು.

ಚೆಲುವಯ್ಯನಿಗೆ ಧರ್ಮಪತ್ನಿ ತುಳಸಮ್ಮಳಿದ್ದರೂ, ಯಾರ ಮಾತನ್ನೂ ಲೆಕ್ಕಿಸದೆ ತಾನು ಪ್ರೀತಿಸಿದ ಕನ್ಯೆಯಾದ ವರನಂದಿಯನ್ನು ಮದುವೆಯಾದ. ಅವಳನ್ನು ತನ್ನ ತೇರಿನ ಮೇಲೆ

ಕುಳ್ಳಿರಿಸಿಕೊಂಡು ಹೋಗುವ ಅಂದ ಚಂದದ ಸೊಗಸು ವಿಪರೀತವಾಗಿದೆ. ಇದನ್ನು ಕಂಡ ತೊಳಸಮ್ಮ ಬೇಸರದಿಂದ ಆರತಿ ಕೊಡುವೋಕೆ ಮನನೊಂದು ಮನವೆರಡು ಮೆಚ್ಚಿ ಬಂದೋಳು ವರನಂದಿ ಬೆಳಗಿದರೆ, ಮತ್ತೊಂದು ದೇವರಿಗೆ ಸಲುವದು ಎಂದು, ತನ್ನನ್ನು ಮಾತ್ರ ಗರ್ಭಗುಡಿಯಲ್ಲಿ ಬಿಟ್ಟು ಮೆಚ್ಚದವಳನ್ನು ಬೀದಿಯಲ್ಲಿ ಮೆರವಣಿಗೆ ಮಾಡುವ ಪೆಲುವಯ್ಯನನ್ನು ನಿಂದಿಸಿ ತುಳಸಮ್ಮ ಮಾತನಾಡುತ್ತಾಳೆ. ಆದರೆ ಭಕ್ತರಿಗೆ ಅದ್ಯಾವುದು ಬೇಡ. ತಮ್ಮ ಚಲುವಯ್ಯ ಮೆಚ್ಚಿದವಳ ಜೊತೆ ಅಂದಚಂದವಾಗಿ ತೇರಿನಲ್ಲಿ ಕುಳಿತಿರುವುದನ್ನು ಕಂಡು ಹರ್ಷಪಡುತ್ತಾರೆ.

**೨. ಕುಸುಮಾಲೆ**

ಬಿಳಿಗಿರಿರಂಗಯ್ಯನಿಗೆ ತೊಳಸಮ್ಮ, ಲಕ್ಷ್ಮೀದೇವಿಯರು ಧರ್ಮ ಪತ್ನಿಯರು. ಸ್ಥಳೀಯ ಜನರ ನಡುವೆ ತನ್ನ ಸಂಬಂಧವನ್ನು ಗುರುತಿಸಿಕೊಳ್ಳಲು ಆಯಾಯಾ ಕ್ಷೇತ್ರದ ಹೆಣ್ಣನ್ನು ಮದುವೆಯಾಗಿ ಸ್ಥಳೀಯ ಪ್ರೀತಿಗೆ ಪಾತ್ರಾರಾಗಿರುವುದು ಈ ಕಥನಗೀತೆಯಲ್ಲಿ ಕಂಡುಬಂದಿದೆ. ಬಿಳಿಗಿರಿರಂಗಯ್ಯನಿಗೆ ಹೆಂಡತಿಯರಲ್ಲದೇ ಸೂಳೆರಂಗಿಯ ಜೊತೆ ಸಂಬಂಧವನ್ನು ಇಟ್ಟುಕೊಂಡಿರುತ್ತಾನೆ.

ಕುಸುಮಬಾಲೆ ಒಮ್ಮೆ ಗೆಣಸು ತರಲು ಕಾಡಿಗೆ ಹೋದಾಗ ಅವಳನ್ನು ರಂಗಯ್ಯ ನೋಡಿದನು. ಅವಳ ರೂಪ ಸೌಂದರ್ಯಕ್ಕೆ ಮರಳಾಗಿ ಅವಳನ್ನು ಪಡೆಯಬೇಕೆಂದು ಸತತ ಪ್ರಯತ್ನಮಾಡಿ ಪಡೆಯುತ್ತಾನೆ. ಸೂಳೆಮನೆಗೆ ಹೋಗುತ್ತೇನೆಂದು ಕುಣಿಕುಣಿಯುತ್ತಾ ಬಂದ ರಂಗಯ್ಯ ಕಾಡಿನಲ್ಲಿ ಕುಸುಮಾಲೆಯನ್ನು ನೋಡಿ ಬೆರಗಾದನು. ಮಾನವರಂತೆ ದೇವರು ಸಹ ಚೆನ್ನಾಗಿರುವ ವಸ್ತು ಎಲ್ಲೆ ಇರಲಿ ಪಂಥಕಟ್ಟಿ ಪಡೆಯುತ್ತಾರೆ ಎಂಬುದಕ್ಕೆ ಸಾಕ್ಷಿಯಾಗಿದೆ ರಂಗಸ್ವಾಮಿಯ ಮಾತು.

ಸದಾ ಸೂಳೆರಂಗಿಯ ಮನೆಗೆ ಹೋಗುವ ಗಂಡನನ್ನು ತಡೆದು ತೊಳಸಮ್ಮ, ಲಕ್ಷ್ಮಮ್ಮನವರು ಕುದಿಯುವ ನೀರನ್ನು ಮೈಮೇಲೆ ಚೆಲ್ಲಿದರೂ ಸೂಳೆಯ ಸಹವಾಸ ರಂಗಯ್ಯನಿಗೆ ಹೋಗುವುದಿಲ್ಲ. ಬೊಬ್ಬೆ ಎದ್ದ ಮೈಯ ಮೇಲೆ ಹೆಂಡತಿಯರು ಹರಕಡ್ಡಿಲ್ಲಿ ಹೊಡೆಯುತ್ತಾರೆ. ಆದರೂ ರಂಗಯ್ಯನಿಗೆ ಸೂಳೆಯರ ನೆನಪು ಕಾಡುತ್ತದೆ. ರಂಗಯ್ಯ ರಾತ್ರಿ ಎಲ್ಲೋ ಹೋಗದಂತೆ ಅವನ ಹೆಂಡತಿಯರು ಕಾಯುತ್ತಾರೆ. ಎಡಚೋರಿ ತುಳಸಮ್ಮ ಬಲಚೋರಿ ಲಕ್ಷ್ಮೀದೇವಿ ನಟ್ಟನಡು ಮಧ್ಯ ನಾರಾಯಣಸ್ವಾಮಿ ಮಲಗಿದ್ದರೂ, ರಂಗಯ್ಯನಿಗೆ ಸೂಳೆಯ ನೆನಪು ಕಾಡುತ್ತದೆ. ಒಮ್ಮೆ ಹೆಂಡತಿಯರನ್ನಾ ತಪ್ಪಿಸಿಕೊಂಡು ಹೋಗುವ ರೀತಿ ಈಗಿದೆ. ಕಗ್ಗಲಿಯ ತುಂಡು ತಂದು ಕೈಕಾಲುಗಳನ್ನಾ ಮಾಡಿ ತದ್‌ರೂಪದಂತೆ ತಯಾರಿಸಿ ಇಬ್ಬರ ಹೆಂಡಿರ ಮಧ್ಯದಲ್ಲಿ ಅದನ್ನು ಇಟ್ಟು ತಪ್ಪಿಸಿಕೊಂಡು ಸೂಳೆರಂಗಿಯ ಮನೆಗೆ ಹೋಗುತ್ತಾನೆ. ಹೋಗುವ ಮಧ್ಯದಲ್ಲಿ ಹನುಮಂತ ತಡೆದಾಗ ಹನುಮಂತನಿಗೆ ಕೈಕೊಳವ ಹಾಕಿ ಕಾಲಿಗೆ ಸಂಕೋಲೆ ಹಾಕಿ ಕಮರಿಯಲ್ಲಿ ತಳ್ಳಿ ಬಿಟ್ಟು, ಶಂಖ ಜಾಗಟೆಯ ಸಮೇತ ಸೂಳೆ ಮನೆಗೆ ರಂಗಯ್ಯ ಹೋದನು. ಇಂತವನು ಕುಸುಮಾಲೆಯನ್ನು ಬಿಡುವನೇ?.

ಕುಸುಮಾಲೆಯನ್ನು ಕರೆದುಕೊಂಡು ತನ್ನ ಗಿರಿಗೆ ಹೋದ. ಮಡದೀರ ದಂಡೆಯಲ್ಲಿ ನಿಂತರು. ನಾರಾಯಣ ಇಬ್ಬರ ಹೆಂಡರಿಗೆ ಈಗೆ ಹೇಳುವನು. ನಾಹೋಗಿ ಈಗಲೇ ಸೋಲಿಗರ

ಹೆಣ್ಣ ಬೊಮ್ಮಯಯ್ನ ಮಗಳು ಕುಸುಮಾಲೆಯ ಲಗ್ನ ಮಾಡಿಕೊಂಡು ಬಂದಿವ್ನಿ. ನೀವಿಬ್ಬರು ಇನ್ನು ಮುಂದೆ ಮೇಲುಗಿರಿಯಲ್ಲಿ ಕೂತು ಪಟ್ಟವ ಆಳಿರೆ ಎಂದನು. ಕುಸುಮಾಲೆ ಜೊತೆಯಲಿ ನಾನಾದರೀಗ ನಾಲೋಕ ಚಂಚಾರ ಮಾಡುತೀನಿ ಹೆಣ್ಣೆ ಎನ್ನುವನು. ಹಿರಿಯ ಹೆಂಡತಿಯರಿದ್ದು ಕಿರಿಯ ಹೆಂಡತಿಯನ್ನು ತರುವ ಆಶಯ ಒಂದೇ ಆದರೂ ಕಥೆಯ ವಿನ್ಯಾಸ, ಕಾವ್ಯದ ಸೊಗಸು ಸುಂದರವಾಗಿ ಒಡಮೂಡಿದೆ. ಸಾಮಾನ್ಯ ಮನುಷ್ಯನ ನಡುವಳಿಕೆಗೂ ದೈವಗಳ ನಡುವಳಿಕೆಗೂ ವ್ಯತ್ಯಾಸವಿಲ್ಲವೆಂದು ಮೂಡಿಬಂದಿದೆ.

೩. ಹಟ್ಟಿಲಕ್ಕಮ್ಮ

ಬಯಲು ಸೀಮೆಯ ಗೊಲ್ಲ ಸಮುದಾಯದವರ ಕುಲದೇವತಗೆ ಹಾಗೂ ಅವರ ಆರಾಧ್ಯ ದೇವತೆ, ಹುಟ್ಟಿ ಲಕ್ಕಮ್ಮ, ಅವಳ ಪತಿ ರಂಗಯ್ಯ. ರಂಗಯ್ಯನು ಲಕ್ಕಮ್ಮನನ್ನು ಅಪಾರ ಪ್ರೀತಿ. ಇಂಥ ಪ್ರೀತಿಯೊಂದಿದ ರಂಗಯ್ಯ ಒಮ್ಮೆ ದಾರಿತಪ್ಪುತ್ತಾನೆ. ಸತಿಪತಿಯರ ನಡುವೆ ವಿರಸ ತರುವಂಥ ಕೆಲಸವೊಂದು ನಡೆಯುತ್ತದೆ.

ರಂಗಯ್ಯ ಬೇರೊಬ್ಬಳಲ್ಲಿ ಪ್ರೇಮ ವ್ಯವಹಾರವನ್ನು ಇಟ್ಟುಕೊಂಡು ವಿಷಯ ಲಕ್ಕಮ್ಮನಿಗೆ ತಿಳಿಯುತ್ತದೆ. ಅವಳೇ ತೊಳಸಮ್ಮ. ಇವಳನ್ನ ಒಮ್ಮೆ ಬಾಳೆಯ ತೋಟದಲ್ಲಿ ಹರಿದ ನೀರನ್ನು ಕುಡಿಯಲು ಹೋದ ರಂಗಯ್ಯ, ಚಲುವೆ ತುಳಸಮ್ಮನನ್ನು ಕಂಡು ಬೆರಗಾದದನ್ನು ತನ್ನ ಹೆಂಡತಿ ಲಕ್ಕಮ್ಮನ ಹತ್ತಿರ ಹೇಳಿಕೊಳ್ಳುತ್ತಾನೆ. ಇದರಿಂದ ಲಕ್ಕಮ್ಮಳಿಗೆ ರಂಗಯ್ಯನ ಮೇಲೆ ಎಲ್ಲಿಲ್ಲದ ಕೋಪ. ಗಂಡ ಮನೆಗೆ ಬಂದರು ಅವನನ್ನು ಲೆಕ್ಕಿಸದೆ ಉಯ್ಯಾಲೆಯ ಮೇಲೆ ಆಡುತ್ತಿದ್ದಾಳೆ. ತನ್ನ ಪತಿ ದೈವ ಮನೆಗೆ ಬಂದಿರುವುದೇ ಗೊತ್ತಿದ್ದಂತಿಲ್ಲ.. ಮುಂದೆ ಪತಿ ಬಂದಿದ್ದನ್ನು ತಿಳಿದು ನೀರು ತರಲು ಹೊರಡುತ್ತಾಳೆ. ರಂಗಯ್ಯ ಅವಳನ್ನು ಚಿವುಟಿ ಏಳಿಸುತ್ತಾನೆ. ಲಕ್ಕಮ್ಮ ಮತ್ತಷ್ಟು ಸಿಟ್ಟಿಗೇಳುತ್ತಾಳೆ. ಕೊನೆಗೆ ತಡೆಯಲಾರದೆ ದುಃಖದಿಂದ ಲಕ್ಕಮ್ಮ ತನ್ನ ಮನದಾಳದ ನೋವನ್ನು ಕೊಡವಿಯೇ ನೆಮ್ಮದಿ ಪಡೆದುಕೊಳ್ಳುತ್ತಾಳೆ. ಅವಳ ಮನದಾಳದ ಮಾತು ಹೀಗಿದೆ.

ಕಾರೆಯ ಕುರುಕೆಂದು ಬೇಲದ ಕಾಯ್ ಒಗರೆಂದು
ಈನಾಡಿನ ಹೆಣ್ಣು ಕರಿದೆಂದೂ-ರಂಗಯ್ಯ
ತರದೀರೊ ಅವಳ ಬೆಡಗೀಯ್

ತಾನು ಬಣ್ಣದಲ್ಲಿ ಸ್ವಲ್ಪ ಕಪ್ಪೆಂದು ಲಕ್ಕಮ್ಮನಿಗೂ ಗೊತ್ತು ಅದಕ್ಕಾಗಿ ಪತಿ ಸುಂದರಿಯಾದ ತುಳಸಮ್ಮನನ್ನು ತಂದಿದ್ದಾನೆ ಎಂಬ ಅನುಮಾನ ಲಕ್ಕಮ್ಮನಿಗೆ ಇದೆ. ಲಕ್ಕಮ್ಮನ ಮಾತಿಗೆ ರಂಗಯ್ಯ ಸಮಾಧಾನ ಹೇಳುತ್ತಾನೆ. ತಾನು ಮೆಚ್ಚಿದ ಹೆಣ್ಣನ್ನು ಕೂಡಿದರೇನಾಯಿತು. ತಂದೆರೇನಾಯಿತು, ಹಗಲಿನಲ್ಲಿ ಪತ್ನಿ ಲಕ್ಕಮ್ಮನ ಸೇವೆಮಾಡಿ, ರಾತ್ರಿ ತನ್ನ ಮಂಚಕ್ಕೆ ಬರುತ್ತಾಳೆ ಎಂದು ರಂಗಯ್ಯ ತನ್ನ ಹೆಂಡತಿಗೆ ರಂಗಯ್ಯ ಹೇಳುತ್ತಾನೆ. ಕೆಲವುದಿನ ತುಳಸಮ್ಮನ ಹತ್ತಿರ ಹೋಗುವುದಿಲ್ಲವೆಂದು ಲಕ್ಕಮ್ಮನಿಗೆ ಸುಳ್ಳು ಭರವಸೆಯನ್ನು ಕೊಟ್ಟು ನಂಬಿಸುತ್ತಾನೆ. ಆದರೂ ಲಕ್ಕಮ್ಮನಿಗೆ ಸಂಶಯ. ಇದನ್ನರಿತ ರಂಗಯ್ಯ ತುಳಸಮ್ಮನ ಜೊತೆಗೆ ಪ್ರೇಮದ ವಿಷಯವನ್ನೆಲ್ಲಾ ಹೇಳಿಯೇ ಬಿಡುತ್ತಾನೆ.



ತುಳಸಮ್ಮಳಿಗೆ ಮನ ಸೋತ ರಂಗಯ್ಯ ಲಕ್ಕಮ್ಮಳನ್ನು ಮರೆತನು. ಅದಕ್ಕೆ ಲಕ್ಕಮ್ಮ ಸೋತರೆ ಸೋಲಲಿ ಮನಿಗೇಕೆ ಬರಲಿಲ್ಲೆ ಎಂದು ದುಃಖ ಭಾರವಾಗಿ ನುಡಿಯುತ್ತಾಳೆ. ಆದರೆ ರಂಗಯ್ಯ ಕೇಳುವುದಿಲ್ಲ ಅದಲ್ಲದೆ ರಂಗಯ್ಯ ಮೆಚ್ಚಿದ ಹೆಣ್ಣೆಂದು ತೊಳಸಿಯ ಮೇಲೆ ಭಕ್ತರಿಗಾಗಲೇ ಸ್ವಲ್ಪ ಪಕ್ಷಪಾತ ಮೂಡುತ್ತದೆ. ಲಕ್ಕಮ್ಮ ತುಳಸಮ್ಮನಿಗೆ ಸ್ವಲ್ಪ ಆಶ್ರಯ ನೀಡುವಂತೆ ಹಾಗೂ ಅವಳ ಅಪಾರ ಒಡವೆ ವಸ್ತ್ರಗಳಲ್ಲಿ ಕೆಲವನ್ನು ತುಳಸಮ್ಮನಿಗೆ ಕೂಡುವಂತೆ ವಿನಯದಿಂದ ಹೇಳುತ್ತಾರೆ.

ರಂಗಯ್ಯನೇ ಲಕ್ಕಮ್ಮಳ ಬಳಿ ವಿನಯವಾಗಿ ಸ್ವಲ್ಪ ಒಡವೆ ವಸ್ತ್ರವನ್ನು ತನ್ನ ಚಿಕ್ಕ ಹೆಂಡತಿಗೆ ಕೊಡುವಂತೆ ಕೇಳಿಕೊಳ್ಳುತ್ತಾನೆ. ತನ್ನ ಪತಿಯೇ ಎದುರಾಗಿ ಬಂದು ಕೇಳುವಾಗ ಲಕ್ಕಮ್ಮ ಸುಮ್ಮನಿರುವಳೇ ಅವಳು ಹೇಳುವ ಮಾತಿನ ಧಾಟಿ ವ್ಯಂಗ್ಯವಾಗಿದೆ. 'ಉಟ್ಟು ಬಿಟ್ಟ ಸೀರ್‍ಯಾವೆ ತೊಟ್ಟು ಬಿಟ್ಟ ತಾಳ್ಯಾವೆ ಕೊಟ್ಟು ಬಾರೋ ರಂಗಯ್ಯ ತುಳಸಿಗೆ' ಎಂದಳು ಲಕ್ಕಮ್ಮ. ಮಾತನ್ನು ರಂಗಯ್ಯ ಕೇಳಿದಾಕ್ಷಣ, ತನ್ನ ಚಿನ್ನ ಹಿಂದಿನ ತುಳಸಿಯನ್ನ ಲಕ್ಕಮ್ಮ ನೆದುರು ನಿಲ್ಲಿಸುತ್ತಾನೆ. ಅವಳನ್ನು ನೋಡಿದ ಲಕ್ಕಮ್ಮನ ಮುಖ ಕೋಪದಿಂದ ಗಂಟು ಕಟ್ಟುತ್ತದೆ.

ತುಳಸಮ್ಮ ರಂಗಯ್ಯ ಸಂತೋಷದಿಂದ ಇರುವುದನ್ನು ಸಹಿಸದ ಲಕ್ಕಮ್ಮನನ್ನು ಗಮನಿಸಿದ ರಂಗಯ್ಯ, ಲಕ್ಕಮ್ಮನನ್ನು ಮತ್ತೆ ಮತ್ತೆ ರೇಗಿಸುತ್ತಾನೆ. ಲಕ್ಕಮ್ಮ ತುಳಸಿ ಜೊತೆ ಜಗಳವಾಡುತ್ತಾಳೆ. ಮುಂದೆ ರಂಗಯ್ಯ ಅವರಿಬ್ಬರ ಜಗಳವನ್ನು ನೋಡಿ ತುಳಸಿಯನ್ನು ಬೇರೆಡೆಗೆ ಕರೆದೊಯ್ಯುತ್ತಾನೆ.

ತನ್ನ ಪತಿ ಸರಿಯಾಗಿ ಮನೆಗೆ ಬಾರದಿರುವುದು ಲಕ್ಕಮ್ಮಳಿಗೆ ತುಂಬಾ ನೋವಾಗುತ್ತದೆ. ನಿತ್ಯವೂ ಕಾಯುತ್ತಾಳೆ. ಅದರಂತೆ ಪತಿ ತುಳಸಮ್ಮನ ಮನೆಯಿಂದ ಲಕ್ಕಮ್ಮನ ಮನೆಗೆ ಬರುತ್ತಾನೆ. 'ಲಕ್ಕು ಕದ ತೆಗಿಯೆ' ಒಬ್ಬನೇ ಬಂದಿದ್ದೇನೆ ಬಾಗಿಲು ತೆಗೆ ಎನ್ನಲು ಒಳಗಿಂದ ಲಕ್ಕಮ್ಮ ಕದ ತೆಗೆಯೋಕೆ ಬಾಲ ತೊಡೆಯ ಮೇಲಿದೆ, ಸೀರಿಲ್ಲ ಶಿವನೆ ಹೊರಗಿರಿ ಎಂದಾಗ ರಂಗಯ್ಯನಿಗೆ ಸೋಜಿಗವಾಗುತ್ತದೆ. ಹೆಂಡತಿಯನ್ನು ನಯವಾದ ಮಾತುಗಳಿಂದ ಕದವನ್ನು ತೆರೆಯುವಂತೆ ಮಡುತ್ತಾನೆ. ಲಕ್ಕಮ್ಮ ವಿಧಿಯಿಲ್ಲದೆ ಕದವನ್ನು ತೆರೆಯುತ್ತಾಳೆ. ಒಂದು ಮಾತನಾಡದೆ ಎರಡು ಮಣೆಗಳನ್ನು ಹಾಕುತ್ತಾಳೆ. ಅವಳ ಮಾತುಗಳಿಂದ ಮನಸೋತ ರಂಗಯ್ಯ ತುಳಸಿಯನ್ನು ಭೂಮಿಗೆ ಇಳಿಯ ಬಿಡುತ್ತಾನೆ. ಆಗ ಸತಿ ಪತಿಯ ನಡುವೆ ಇದ್ದ ವಿರಸ ಮಾಯವಾಗುತ್ತದೆ. ಲಕ್ಕಮ್ಮನ ಕೀರ್ತಿ ಮತ್ತಷ್ಟು ಹೆಚ್ಚಾಗುತ್ತದೆ. ಅವಳ ಛಲವನ್ನು ಪತಿ ಭಕ್ತಿಯನ್ನು ಕಂಡ ಗೊಲ್ಲರು ಮೆಚ್ಚಿಗೆಯಿಂದ, ಭಕ್ತಿಯಿಂದ ಹಾಡಿ ಹೊಗಳುತ್ತಾರೆ.

ದೈವ ಸಂಬಂಧಿ ಕಥನಗೀತೆಗಳಲ್ಲಿ ಬರುವ ಎಲ್ಲಾ ಸ್ತ್ರೀ ಹಾಗೂ ಪುರುಷ ಪಾತ್ರಗಳನ್ನು ಗಮನಿಸಿದಾಗ, ಒಂದೇ ಅಂಶವನ್ನು ಹೊತ್ತು ಸಾಗುತ್ತವೆ. ಜನಪದರ ಆರಾಧ್ಯ ದೈವ, ಸ್ಥಳೀಯ ದೇವತೆಗಳ ಪ್ರೀತಿಗೆ ಪಾತ್ರನಾಗಿ, ಆ ಪ್ರದೇಶದ ಜನರಿಗೆ ಬಹಳ ಹತ್ತಿರನಾಗುವುದು ಕಂಡುಬರುತ್ತದೆ.

ಅದಕ್ಕಾಗಿ ಹೆಂಡತಿಯಿದ್ದರೂ, ಮೊತ್ತೊಬ್ಬ ಹೆಂಡತಿಯನ್ನು ಕರೆತರುವುದು ಒಂದು ಕಾರಣವಾದರೆ ಮತ್ತೊಂದು ಕಾರಣ ಮಾನವರಂತೆ ದೈವಗಳು ಸಹ ರಸಿಕರು, ಚಂಚಲರು, ಭೋಗಪ್ರಿಯರು ಎಂಬುದನ್ನು ಅವರ ಹಾಗೂ ಅವರ ಪತ್ನಿಯ ಸಂಬಂಧದಿಂದ ಅರಿಯಬಹುದು. ಮಾನವ ಸಹಜವಾದ ಆಸೆ ಆಮಿಷಗಳು ದೇವರಿಗೂ ಸಹ ಇವೆ ಎಂಬುದು ಶಿವಗಂಗೆಗೌರಿ, ನಂಜಯ್ಯ, ಚಾಮುಂಡಿ, ಬಿಳಿಗಿರಿರಂಗಯ್ಯ, ಕುಸುಮಾಲೆ ಹೀಗೆ ಅನೇಕ ಪಾತ್ರಗಳಿಂದ ತಿಳಿದುಕೊಳ್ಳಬಹುದು.

### ೫.೬. ಜನಪದ ಪೌರಾಣಿಕ ಕಥನಗೀತೆಗಳಲ್ಲಿ ಮಹಿಳೆ

ಜನಪದ ಸಾಹಿತ್ಯದಲ್ಲಿ ಪೌರಾಣಿಕ ವಸ್ತುಗಳಿಗೆ ಸಂಬಂಧಿಸಿದಂತೆ, ಅನೇಕ ಸ್ತ್ರೀ ಪಾತ್ರಗಳನ್ನು ಗುರುತಿಸಬಹುದು. ರಾಮಾಯಣ, ಮಹಾಭಾರತ ಕಾವ್ಯಗಳಲ್ಲಿ ಬರುವ ಪಾತ್ರಗಳಾಗಿವೆ. ಜನಪದ ಸಾಹಿತ್ಯದಲ್ಲಿ ಬರುವ ಪೌರಾಣಿಕ ಅಂಶಗಳು ಶಿಷ್ಟ, ಸಾಹಿತ್ಯದಲ್ಲಿ ಬರುವ ಪೌರಾಣಿಕ ಅಂಶಗಳಿಂದ ಬೇರೆಯಾಗಗಿದ್ದು, ಯಾವುದಕ್ಕೆ ಯಾವುದು ಮೂಲ ಎನ್ನುವುದು ಪರಿಶೀಲನಾರ್ಹವಾದ ವಿಚಾರವಾಗಿದೆ. ಮಹಾಭಾರತ, ರಾಮಾಯಣ, ಭಾಗವತಕ್ಕೆ ಸಂಬಂಧಿಸಿದ ಕಥೆ, ಕಥನಗೀತೆಗಳನ್ನು ಹಾಡ್ಗತೆಗಳನ್ನು ಕರ್ನಾಟಕದಾದ್ಯಂತ ಗುರುತಿಸಬಹುದು. ಜನಪದರ ದೃಷ್ಟಿಯಲ್ಲಿ ರಾಮಾಯಣ ಮತ್ತು ಮಹಾಭಾರತದ ಕಥೆಗಳು ಗೋಳಿನ ಕಥೆಗಳಾಗಿವೆ ಹೀಗಾಗಿ ಜನಪದರು ತಮ್ಮ ಬದುಕನ್ನು ಸಮೃದ್ಧಿ, ತೃಪ್ತಿಗಳಿಂದ ಇಟ್ಟುಕೊಳ್ಳಲು ಹಾಗೂ ತಮ್ಮ ಬದುಕಿನಲ್ಲಿ ಬರುವ ಕಷ್ಟ-ನಷ್ಟ, ನೋವು-ನಿರಾಸೆಗಳನ್ನು ಸರಿದೂಗಿಸಲು ಪೌರಾಣಿಕ ಕಥೆಗಳಲ್ಲಿ ಬರುವ ಕೆಲವು ಸ್ತ್ರೀ ಪಾತ್ರಗಳನ್ನು ಆದರ್ಶವಾಗಿಟ್ಟುಕೊಂಡರು.

ಅನೇಕ ಜನಪದ ಪೌರಾಣಿಕ ಕಥನಗೀತೆಗಳಲ್ಲಿ ಬರುವ ರಾಮ-ಲಕ್ಷ್ಮಣ-ಸೀತೆ, ಕರ್ಣ, ಧರ್ಮರಾಯ, ಕುಂತಿ, ದ್ರೌಪದಿ, ಅರ್ಜುನ, ಅಭಿಮನ್ಯು, ಕೃಷ್ಣ, ವಿಧುರ ಮುಂತಾದ ಸ್ತ್ರೀ ಪಾತ್ರಗಳ ವೀರ, ತ್ಯಾಗ, ಶೀಲದಗುಣ ಹಾಗೂ ಅವರ ಆದರ್ಶಗಳು ಜನಪದರ ಮೇಲೆ ಪರಿಣಾಮ ಬೀರಿತು. ಅವರೆಲ್ಲರೂ ಕನ್ನಡ ನಾಡಿನಲ್ಲಿ ಮಾತ್ರವೆ ಅಲ್ಲದೆ ಭಾರತದಾದ್ಯಂತ ಊರೂರಿನಲ್ಲಿ ಹಾಗೂ ವಿಶಿಷ್ಟವಾದ ಬೆಟ್ಟಗುಡ್ಡ, ಕಾಡು, ಕಣಿವೆಗಳಲ್ಲಿ ರಾಮಸೀತೆಯರು, ಪಾಂಡವರು, ಬಂದು ವನವಾಸ ಮಾಡಿದರು ಎಂಬ ನಂಬಿಕೆ ಜನಪದರಲ್ಲಿ ಪ್ರಬಲವಾಗಿದೆ. ಹಾಗೆಯೇ ಸೀತೆಬೆಟ್ಟ, ಕೊಂತಿಬೆಟ್ಟ, ಪಾಂಡವಪುರ, ಹನುಮಾಪುರ, ಗುರುಡಗಿರಿ, ಅವರೆಗಿಡ ಮುಂತಾದ ಸ್ಥಳ ಹಾಗೂ ಪದಾರ್ಥಗಳ ಹೆಸರಿನ ಹಿಂದೆ ರಾಮಾಯಣ, ಮಹಾಭಾರತ ಕಥಾ ಬೀಜಗಳು ಹುದುಗಿವೆ. ಇವುಗಳಲ್ಲಿ ಬರುವ ಸ್ತ್ರೀ ಪಾತ್ರಗಳಾದ ಕುಂತಿ, ದ್ರೌಪದಿ, ಸುಭದ್ರೆ, ಸೀತೆ ಪಾತ್ರಗಳಿಗೆ ಜನಪದರ ಮೆರಗನ್ನು ಕೊಟ್ಟು ಹಾಡಿ ಮೆಚ್ಚಿದ್ದಾರೆ. ಅವರನ್ನು ಸಾಮಾನ್ಯ ಸ್ತ್ರೀಯರಂತೆ ಗುರುತಿಸಿ, ಚಿತ್ರಿಸಿ, ಅವರ ಕಷ್ಟನಷ್ಟಗಳಿಗೆ ತಾವು ಸ್ಪಂದಿಸಿದ್ದಾರೆ. ಅಂಥಹ ಕೆಲವು ಪಾತ್ರಗಳ ಸಂಕಥನವನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಜನಪದ ಪೌರಾಣಿಕ ಕಥನಗೀತೆಗಳಲ್ಲಿ ಬರುವ ಮುಖ್ಯಪಾತ್ರಗಳಾದ ಕುಂತಿ, ದ್ರೌಪದಿ, ಸುಭದ್ರೆ ಈ ಪಾತ್ರಗಳನ್ನು ಜನಪದರು ಚಿತ್ರಿಸಿರುವ ರೀತಿಯಲ್ಲಿ ನೋಡುವುದಾದರೆ, ಈ ಪಾತ್ರಗಳು ಶಿಷ್ಟ ಸಂಪ್ರದಾಯದಲ್ಲಿ ಬರುವ ಪಾತ್ರಗಳಿಗಿಂತ ಭಿನ್ನವಾಗಿವೆ. ಈ ಪಾತ್ರಗಳನ್ನು ನಮ್ಮ ಜನಪದರು ಸರಳವಾಗಿ ಚಿತ್ರಿಸಿರುವುದನ್ನು ಕಾಣಬಹುದು.

೧. ಕುಂತಿ

ನಮ್ಮ ಜನಪದರು ಕುಂತಿಯನ್ನು ದೇವತೆಯನ್ನಾಗಿ ಕಲ್ಪಿಸಿಕೊಂಡು ಭಯಭಕ್ತಿಗಳಿಂದ ಪೂಜಿಸುವುದಲ್ಲದೆ, ಆರಾಧಿಸುತ್ತಾರೆ. ಕುಂತಿ ಜನಪದ ಭಾಷೆಯಲ್ಲಿ ಕೊಂತಿ, ಕೊಂತ್ಯಮ್ಮ, ಕೊಂತಿ ಪೂಜೆ ಎಂಬ ಹೆಸರುಗಳಲ್ಲಿ ಪ್ರಚಲಿತವಾಗಿದೆ. ಅಲ್ಲದೆ ಕುಂತಿಗೆ ಸಂಬಂಧಿಸಿದಂತೆ ಕೊಂತಿಪದಗಳು, ಕೊಂತಿ ಪೂಜೆ ವಿಶಿಷ್ಟವಾಗಿವೆ. ಕೊಂತಿ ಪದಗಳಲ್ಲಿ ಕೊಂತಿದೇವಿಯ ಜನನ, ಬಾಲ್ಯ ಹಾಗೂ ವರದಿಂದ ಕರ್ಣನನ್ನು ಪಡೆಯುವುದು ಮದುವೆ, ಒಸುಗೆ, ಕಾಡಿನಲ್ಲಿ ಮಕ್ಕಳನ್ನು ಪಡೆದುದು, ಆ ಮಕ್ಕಳ ಆಟಪಾಟಗಳಲ್ಲಿ ಆನಂದದಿಂದ ಕಾಲ ಕಳೆಯುವುದು. ಆನಂತರ ಪಾಂಡವರ ಜೂಜು, ವನವಾಸ, ಕುರುಕ್ಷೇತ್ರ, ಪಾಂಡವರ ಜಯ ಮುಂತಾದ ಭಾರತದ ಕಥೆಯನ್ನು ಕುರಿತ ಘಟನೆಗಳನ್ನು ಒಳಗೊಂಡಿದ್ದರೂ, ಜನಪದರಿಂದ ಕೊಂತಿಯ ಜೀವನ ಚಿತ್ರಣ ಸಾಮಾನ್ಯ ಗೃಹಣಿಯ ಜೀವನ ಚಿತ್ರದಂತೆ ಪ್ರತಿಧ್ವನಿತವಾಗಿದೆ.



ಕುಂತಿ ಎಳೆಯ ಮಕ್ಕಳನ್ನು ಕಟ್ಟಿಕೊಂಡು, ಕಾಡುಮೇಡುಗಳನ್ನು, ಊರು ಕೇರಿಗಳನ್ನು ಅಲೆದು ಸಂಕಷ್ಟದಲ್ಲಿ ಪರಿತಪಿಸಿದ ಬಡತನದ ದಾರುಣ ಚಿತ್ರಣ ಇಲ್ಲಿದೆ. ಆದರೆ ಅವರ ಬದುಕು ಯಾವುದೋ ಕಂಡರಿಯದ ಪುರಾಣಲೋಕದ ಗೊಂಡಾರಣ್ಯವಲ್ಲ. ಜನಪದ ಕವಿ ತನ್ನ ನೆಲದ ಉಸಿರನ್ನು ಆ ಕಥೆಯ ಹಂದರಕ್ಕೆ ತುಂಬಿ ಸಜೀವಗೊಳಿಸಿದ್ದಾನೆ. ಹಿರೋಡೆ (ಈಗಿನ ಪಾಂಡವಪುರ)ಯ ಪ್ರಸ್ತಾಪ ಜೀಶಂಪ ಅವರು ಸಂಗ್ರಹಿಸಿರುವ ಕೊಂತ್ಯಮ್ಮ ಎಂಬ ಖಂಡಕಾವ್ಯದಲ್ಲಿ ಬಂದಿದೆ. 'ಕೊಂತ್ಯಮ್ಮ'ನನ್ನು ಕುರಿತ ಖಂಡಕಾವ್ಯವನ್ನು ಕಥೆ ಎನ್ನುವುದಕ್ಕಿಂತ ಅವರ ಕಷ್ಟಕಾರ್ಪಣ್ಯವನ್ನು ಚಿತ್ರಿಸುವ ಒಂದು ಸುಂದರ ಭಾವಗೀತೆ ಎನ್ನಬಹುದು ಎಂದಿದ್ದಾರೆ ಜೀ.ಶಂ.ಪ.ಅವರು.[೬೦]

ಒಂದು ಕಾಲದಲ್ಲಿ ಬಾಳಿ ಬದುಕಿದ ಕುಂತ್ಯಮ್ಮನಿಗೆ ಬಡತನ ಬಂದು ಅವಳು ಅನುಭವಿಸುವ ಕಷ್ಟನೋವು ಹೇಳತೀರದು. ಸಂಬಂಧಿಕರು ಏನಿದ್ದರೂ ಉಣ್ಣುವಾಗ, ಉಡುವಾಗ, ಅದೇ ಕಷ್ಟ ಬಂತೆಂದರೆ ತಿರುಗಿ ಸಹ ನೋಡುವವರಲ್ಲ. ಹಾದಿನೆರಳು, ಬೀದಿನೆರಳು ಹಗೆಯಾಯಿತು. ಬಂಧು ಬಳಗದವರ ಜೊತೆ ಅಡವಿ ಗಿಡವೆಲ್ಲ ಹಗೆಯಾಗಿದೆ. 'ಬಾಳಿ ಬದುಕಿದ ಕುಂತ್ಯಮ್ಮನ ಸ್ಥಿತಿ ಹೀಗಾದ ಮೇಲೆ, ಇನ್ನು ನಮ್ಮಂತಹವರ ಪಾಡೇನು?' ಎಂಬ ದೌರ್ಬಲ್ಯದ ಧ್ವನಿಯನ್ನು ಜನಪದರು ಹೃದಯಂಗಮವಾಗಿ ವ್ಯಕ್ತಪಡಿಸುತ್ತಾರೆ.

ಕೊಂತ್ಯಮ್ಮನಿಗೆ ಉಣ್ಣೋದಕ್ಕೆ ಅನ್ನವಿಲ್ಲದೆ ಕೊಂತ್ಯಮ್ಮಗೆ ಉಡುವುದಕ್ಕೆ ಸೀರೆಯಿಲ್ಲದೆ ದುಃಖಿಸುತ್ತಾಳೆ. ಕೊನೆಯಲ್ಲಿ ಚಿಂದಿ ಬಟ್ಟೆಗಳನ್ನು ಜೊತೆಮಾಡಿಕೊಂಡು ಹೊಲಿಯುವುದಕ್ಕೆ ದಾರವಿಲ್ಲದೆ ಸಣಬನೆದಾರ ಮಾಡಿಕೊಂಡು, ಹಂಚಿ ಕಡ್ಡಿಯ ಮುರಿದು ಸೂಜಿಯ ಮಾಡಿ ಹೊಲಿದಳು.

ಆದರೂ ಬಟ್ಟೆಗಳಲ್ಲಾ 'ಮಡಿಯಿಂದಲೇ ಮೇಲಕೆ ಎದೆಯಿಂದ ಕೆಳಕ್ಕೆ' ಮಾನಮುಚ್ಚಿ ಕೊಳ್ಳುವಷ್ಟು ಮಾತ್ರ ಆಯಿತು ಎನ್ನುತ್ತಾರೆ ಜನಪದರು. ಕೊಂತ್ಯಮ್ಮ ಹೊಟ್ಟೆಗೆ ಅನ್ನವಿಲ್ಲದಾಗ ಪಡುವ ಕಷ್ಟ ವಿಪರ್ಯಾಸವಾಗಿದೆ. ಕಾಡುಬಳ್ಳಿ ಸೊಪ್ಪು ಕೊಯ್ಯುದು, ಉಪ್ಪಿಲ್ಲದೆ ಸಪ್ಪೆ ಸೊಪ್ಪನ್ನು ಮಕ್ಕಳಿಗೆ ಹಂಚುವುದು. ಭೀಮನಿಗೆ ಸೊಪ್ಪು ಸಾಲದಿದ್ದಾಗ ತನ್ನ ಎದೆ ಹಾಲನ್ನು ಕೊಡುತ್ತಾಳೆ. ಹಾಲು ಬರದಿರಲು ಕೊನೆಗೆ ತನ್ನ ಕಿರು ಬೆರಳನ್ನು ಭೀಮನ ಬಾಯಿಗೆ ಚೀಪಲು ಕೊಟ್ಟಳು. ಎಂತವರಿಗೆಂತ ಕಾಲ ಏನು ಬಡತನವಯ್ಯ ಎಂದು ಜನಪದರು ಕೊಂತ್ಯಮ್ಮನ ಬಡತನವನ್ನು ನೋಡಿ ದುಃಖದ ನಿಟ್ಟುಸಿರು ಬಿಡುತ್ತಾರೆ. ಅಂತಹ ಸಂದರ್ಭದಲ್ಲಿ ಮತ್ತೊಬ್ಬರ ಮನೆಯಲ್ಲಿ ಕೂಲಿ ಮಾಡಿ ಬಂದ ಅಕ್ಕಿನುಚ್ಚನ್ನು ಮಕ್ಕಳಿಗೆ ಗಂಜಿಮಾಡಿ ಕೊಡಲು ನೆಲೆಯಿಲ್ಲದೆ, ಹಿರುವೊಡೆ ಈಗಿನ ಪಾಂಡವಪುರದ ಬೆಟ್ಟದ ತಪ್ಪಲಿನಲ್ಲಿ ಹೋಗಿ ಕುಂತಿ ತಂಗಿದಳು ಎಂದು ಜನಪದರು ಹೇಳುತ್ತಾರೆ.

ಕೊಂತ್ಯಮ್ಮ ಮತ್ತು ಮಕ್ಕಳಿಗೆ ಸರಿಯಾಗಿ ಬಟ್ಟೆಯಿಲ್ಲದೆ, ಮಲಗಲು ನೆಲೆ ಇಲ್ಲದೆ ತಾವರೆ ಎಲೆಗಳ ತಂದು ನಡಗುತ್ತಿರುವ ತನ್ನ ಐದು ಮಕ್ಕಳಿಗೆ ಹೊದಿಸಿ ದುಃಖಪಡುತ್ತಾಳೆ. ಜೀತ ಮಾಡಿ ತಂದಿದ್ದ ನುಚ್ಚನ್ನು ಗಂಜಿ ಕಾಯಿಸಲು ಮಡಕೆ ಇಲ್ಲ ಬೆಂಕಿ ಇಲ್ಲ. ಕೊನೆಗೆ 'ಕಲ್ಲು ಬಾಂಡಲೆಯ ಮಾಡಿ' ಮೂರು ಗಂಡನೆ ಹೂಡಿ, ಕಲ್ಲು ಬಾಂಡಲೆಯ ಒಳಗೆ ಗಂಜಿಯ ಕಾಸಿದಳು. ಐದು ಜನ ಮಕ್ಕಳನ್ನು ಸಾಲಾಗಿ ಕುಂಡರಿಸಿ ಗಂಜಿಯನ್ನು ಕೊಟ್ಟು ಉಣಿಸಿದಳು. ಹೀಗೆ ಕಥೆಯ ಪ್ರಾರಂಭ ಕೊಂತ್ಯಮ್ಮನ ಬಡತನದಿಂದ ಪ್ರಾರಂಭವಾಗಿ ಬಡತನದಿಂದಲೇ ಮುಕ್ತಾಯವಾಗುತ್ತದೆ. ಮಕ್ಕಳ ಜೊತೆಗೆ ಕಾಡಲ್ಲಿ ಪಡುವ ಕಷ್ಟ, ಯಾರು ಸಹಾಯ ಮಾಡದಿರುವುದು ಜನಪದರ ಕಣ್ಣಿಗೆ ಕಟ್ಟಿದಂತಿದೆ. ಶಿಷ್ಟ, ಸಾಹಿತ್ಯದಲ್ಲಿ ಬರುವ ಕುಂತಿಯ ಪರಿಚಯಕ್ಕಿಂತ ಜನಪದ ಸಾಹಿತ್ಯದಲ್ಲಿ ಬರುವ ಕೊಂತ್ಯಮ್ಮನ ಪರಿಚಯ ವಿಭಿನ್ನವಾಗಿದೆ. ಜನಪದರ ಬದುಕಿನ ನೈಜತೆಯ ಪ್ರತಿಬಿಂಬವಾಗಿ ಕಂಡುಬಂದಿದ್ದಾಳೆ. ಹೀಗಾಗಿ ಕೊಂತ್ಯಮ್ಮ ಒಬ್ಬ ಸಾಮಾನ್ಯ ಸ್ತ್ರೀಯಂತೆ ಜನಪದರಿಗೆ ಕಂಡುಬಂದಿದ್ದಾಳೆ.

ಜನಪದರಲ್ಲಿ 'ಕೊಂತಿ ಪೂಜೆ' ಅತ್ಯಂತ ಶ್ರೇಷ್ಠವಾಗಿದೆ. ಕೊಂತಿ ಸ್ತ್ರೀಯರ ದೇವತೆಯಾಗಿ ಪೂಜಾರ್ಹಳಾಗಿರುವುದಕ್ಕೆ ಅವಳ ವ್ಯಕ್ತಿತ್ವವೇ ಕಾರಣವಾಗಿದೆ. ರಾಜಕನ್ಯೆ ಗಾಂಧರಿಯಂತೆ ನೂರುಜನ ಅಪ್ರಯೋಜಕ ಮಕ್ಕಳನ್ನು ಪಡೆಯದೆ ಧೀರೋದಾತ್ತ, ಪರಾಕ್ರಮಿಗಳು, ಗುಣಶಾಲಿಗಳು, ವಿನಯ ಸಂಪನ್ನರು, ದೇವಪ್ರಿಯರೂ, ಲೋಕ ವಿಖ್ಯಾತರೂ ಆದಂತಹ ಮಕ್ಕಳನ್ನು ಹೆತ್ತಂತೆ ಶ್ರೇಷ್ಠ ತಾಯಿ. ವನವಾಸವೇ ಮೊದಲಾದ ಕಷ್ಟ ಕೋಟಲೆಗಳು ಬಂದರೂ ಅವಳ ಮಕ್ಕಳಿಗಾಗಿ ಧೈರ್ಯ-ಸ್ಥೈರ್ಯಗಳಿಂದ ಅವನೆಲ್ಲ ಗೆದ್ದುಜಯಶೀಲಳಾದ ಶ್ರೇಷ್ಠ ಸ್ತ್ರೀ ಎನಿಸಿಕೊಂಡಿದ್ದಾಳೆ.

ಇಂತಹ ಆದರ್ಶ ಸ್ತ್ರೀಯನ್ನು (ಮಹಿಳೆಯನ್ನು) ಪೂಜಿಸುವುದರಿಂದ, ಅವಳಂತೆಯೇ ತಮಗೂ ಸಂತಾನ ದೊರೆತು ಅದರಿಂದ ಸತ್ಕೀರ್ತಿ ಲಭ್ಯವಾಗುವುದೆಂಬ ಅಭಿಲಾಷೆಯಿಂದ ಜನಪದರು ಕುಂತಿಯನ್ನು ಇಷ್ಟದೇವತೆ, ಆರಾಧ್ಯ ದೇವತೆಯಾಗಿ ಸಂಪ್ರಾದಾಯಿಕವಾಗಿ ಪೂಜಿಸುತ್ತಾ ಬಂದಿರುವುದು ಕಂಡುಬಂದಿದೆ. ಕೊಂತಿ ಪೂಜೆಯನ್ನು ಕಾರ್ತಿಕ ಮಾಸದಲ್ಲಿ ಆಚರಿಸುತ್ತಾರೆ. ಕೆಲವು ಪ್ರದೇಶದಲ್ಲಿ ದೀಪಾವಳಿಯ ಮೊದಲನೆಯ ಸೋಮವಾರ ಅಥವಾ ಕಡೆಯ ಸೋಮವಾರ ಕೊಂತಿ ಪೂಜೆ

ಪ್ರಾರಂಭವಾಗಿ ಒಂದು ತಿಂಗಳ ಕಾಲ ನಡೆಯುತ್ತದೆ. ಒಟ್ಟಾರೆ ಕೊಂತಿಪೂಜೆ ಕೊಂತ್ಯಮ್ಮಪದ ಎರಡು ಕಥನಗೀತೆಗಳು ಕೊಂತಿಯ ಜೀವನ ಚರಿತ್ರೆಯನ್ನು ಜನಪದ ಸೊಗಡಿನಿಂದ ಹೇಳುತ್ತವೆ. ಮತ್ತೊಂದು ಪಠ್ಯದ ಸಾರಾಂಶವನ್ನು ಹೀಗೆ ನೋಡಬಹುದು.

ಕ್ಯಾತನಹಳ್ಳಿ, ಪಾಂಡವಪುರ, ಮಂಡ್ಯದ ಸುತ್ತಮುತ್ತಲಿನ ಭಾಗಗಳಲ್ಲಿ ಈ ಕೊಂತ್ಯಮ್ಮನ ಆಚರಣೆ ಪ್ರಮುಖವಾಗಿ ಕಂಡು ಬರುತ್ತದೆ. ಹಾಗೆಯೇ ಚಿತ್ರದುರ್ಗ, ಹಿರಿಯೂರು ಮೊಳಕಾಲ್ಮೂರು ಭಾಗಗಳಲ್ಲಿಯೂ ಸಹ ಈ ಕಥನಗೀತೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಈ ಕೊಂತ್ಯಮ್ಮನ ಕಾವ್ಯವನ್ನು ಮುಖ್ಯವಾಗಿ ದಲಿತರು ಹಾಡುತ್ತಾರೆ. ಜನಪದ ಪೌರಾಣಿಕ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಕೊಂತ್ಯಮ್ಮ ಬಹುಶಃ ಪುರಾಣದ ಕುಂತಿಗೆ ಪ್ರೇರಣೆಯಾಗಿರಬೇಕು. ಹೀಗೆ ಪ್ರೇರಣೆಯಾಗುವುದು, ಸಂಸ್ಕೃತೀಕರಣಗೊಳ್ಳುವುದು, ನಮ್ಮ ಜನಪದ ಬದುಕಿನ ಮುಖ್ಯ ಜಾಯಮಾನ. ಕೆಲವು ಸಂದರ್ಭದಲ್ಲಿ ರಾಮಾಯಣ, ಮಹಾಭಾರತಗಳ ಪಾತ್ರಗಳು ನಮ್ಮ ಜನಪದ ಸಾಹಿತ್ಯಕ್ಕೆ ಮೂಲ ಆಕಾರವಾಗುವುದುಂಟು. ಅದೇನೆ ಇದ್ದರೂ ಈ ಎರಡು ಕೊಡುಕೊಳೆಗಳು ಮೌಖಿಕ ಮತ್ತು ಶಿಷ್ಟ ಪರಂಪರೆಯಲ್ಲಿ ಕಾಣಿಸಿಕೊಳ್ಳುತ್ತವೆ. ಈ ಕೊಂತ್ಯಮ್ಮ ಆ ಬಗೆಯಲ್ಲಿ ಕೊಡುಕೊಳೆಯಾಗಿರಬಹುದಾದ ಒಂದು ಹೆಣ್ಣು.

ಪಾಂಡವರ ಕಥೆಯ ಎಳೆ ಈ ಕೊಂತ್ಯಮ್ಮನ ಕಥೆಯ ಸಂದರ್ಭದಲ್ಲಿಯೂ ಕಾಣಿಸುತ್ತದೆ. ಯಾಕೆಂದರೆ ಪಾಂಡವರು ವನವಾಸಕ್ಕೆ ಹೋದಂತಹ ಸಂದರ್ಭದ ರೀತಿ ಕೊಂತ್ಯಮ್ಮನ ಕಥನಗೀತೆಯಲ್ಲಿ ಕಂಡುಬರುತ್ತದೆ. ಕೊಂತ್ಯಮ್ಮ ಕಾಡು-ಮೇಡುಗಳನ್ನು ತಿರುಗಿ ಊರು-ಕೇರಿಗಳಲ್ಲಿ ಬದುಕುವ ಒಂದು ಸಂಕಟದ ಬಡತನದ ದಾರುಣ ಸ್ಥಿತಿ ಈ ಕೊಂತ್ಯಮ್ಮನದು. ಬಹಳ ಮುಖ್ಯವಾಗಿ ಹಿರೋಡು (ಪಾಂಡವಪುರ) ಸ್ಥಳದ ವಿವರಗಳು ಇಲ್ಲಿ ಕಾಣಿಸುವುದರಿಂದ ಪಾಂಡವರ ಐತಿಹ್ಯಗಳಿಗೂ, ಈ ಕಾವ್ಯದ ಕೊಂತ್ಯಮ್ಮನ ಸಂದರ್ಭಕ್ಕೂ ಒಂದು ಒಳಸಂಬಂಧ ಏರ್ಪಟ್ಟಿದೆ. ಪಾಂಡವರು ಕಡುಕಷ್ಟವೆ ನಮ್ಮ ಕಡುಕಷ್ಟ ಎನ್ನುವ ಮನೋಭಾವ ಸೂಕ್ಷ್ಮವಾಗಿ ಈ ಕಾವ್ಯದಲ್ಲಿ ಬಿಚ್ಚಿಕೊಳ್ಳುತ್ತದೆ. ಕುಂತಿಯ ಬದುಕು ನಮ್ಮ ಕೊಂತ್ಯಮ್ಮನ ಬದುಕಾಗಿ ಕಾಣಿಸುವುದು ಈ ಕಾವ್ಯದಿಂದಲೇ. ಇದು ನಮ್ಮೆಲ್ಲ ಜನಪದ ಲೋಕದೃಷ್ಟಿ ಅವರ ಅನನ್ಯತೆಯ ಕೊಂತ್ಯಮ್ಮನ ಪದವನ್ನು ಹಾಡುತ್ತಾರೆ. ಇದೊಂದು ಸುಂದರ ಭಾವಗೀತೆಯಂತೆಯೇ ನಿರೂಪಿತವಾಗಿದೆ.

ಕೊಂತ್ಯಮ್ಮನ ಮೊದಲ ಕಾಲದ ಸ್ಥಿತಿ, ಆನಂತರದ ಅವಳ ಬದುಕು ಇಲ್ಲಿ ವಿಶಿಷ್ಟವಾಗಿ ನಿರೂಪಿತವಾಗಿದೆ. ಅವಳು ಬಾಳ್ವೆ ಮೂಡುವಂತಹ ಆರಂಭದ ಕಾಲ ಒಳ್ಳೆಯ ಸ್ಥಿತಿಯಲ್ಲಿರುವಂತಹುದು. ಕೊಂತ್ಯಮ್ಮನ ಬಡತನ ಯಾವ ರೀತಿಯಿತ್ತು ಎಂದರೆ ಆ ಪಾಂಡವಪುರದ ಜನರಂತೆಯೇ ಇತ್ತು.

ಅವಳ ಬಾಲ್ಯಾವಸ್ಥೆಯ ಸವಿನೆನಪುಗಳಾದ ಹಾಡು, ಆಟಿಕೆ, ಉಣ್ಣುವ ರೀತಿ ಅದನ್ನು ನೋಡುವಂತಹ ನೆಂಟರು ಅನೇಕರು ಹೀಗೆ ಇದ್ದಂತಹ ಕಾಲವೊಮ್ಮೆ ಕಡುಕಷ್ಟಕ್ಕೆ ಈಡಾದಾಗ

ಊರು, ಆ ಊರಿನ ಹಾದಿ ಬೀದಿ ಅಡವಿ ಇವೆಲ್ಲ ಅವಳಿಗೆ ಹಗೆಯಾಗುತ್ತವೆ. ಐದು ಜನ ಮಕ್ಕಳನ್ನು ಕಟ್ಟಿಕೊಂಡು ಕೇರಿ ಕೇರಿ ಅಲೆಯುತ್ತ ಚಿಂದಿ ಬಟ್ಟೆಯನ್ನುಟ್ಟು ತಿರುಗುವ ಅವಳ ದಾರುಣ ಸ್ಥಿತಿ ಯಾವ ಹೆಣ್ಣಿಗೂ ಬರಬಾರದು. ತನ್ನ ಹರಿದ ಬಟ್ಟೆಯನ್ನು ಸೆಣಬಿನ ದಾರದ ಮೂಲಕ ತಾನೇ ಹೊಲಿದುಕೊಳ್ಳುತ್ತಾಳೆ. ಅಂಚಿನ ಕಡ್ಡಿಯನ್ನು ಮುರಿದು ಅದನ್ನು ಸೂಜಿ ಮಾಡಿ ಕೊಳ್ಳುತ್ತಾ ತನ್ನ ಮಕ್ಕಳಿಗೆ ಬಟ್ಟೆ ನೇಯ್ದು ಕೊಡುತ್ತಾಳೆ. ಉಣ್ಣಲಿಕ್ಕೆ ಅನ್ನವಿಲ್ಲದಾಗ ಕಾಡಿನ ಹಸಿ ಸೊಪ್ಪನ್ನು ತಿಂದು ಬದುಕುತ್ತಾಳೆ. ಅವಳ ತಾಯಿತನದ ಒಂದು ಕರುಣಾಜನಕ ಸ್ಥಿತಿಯೆಂದರೆ, ತನ್ನ ಮಕ್ಕಳಿಗೆ ತನ್ನ ಎದೆ ಹಾಲು ಎಟುಕದಿದ್ದಾಗ ಕಿರುಬೆರಳನ್ನು ಚೀಪುವಂತೆ ಕೊಡುತ್ತಾಳೆ. ಭೀಮ ನಕುಲರೆಂಬ ಮಕ್ಕಳನ್ನು ತನ್ನ ಕಂಕುಳದಲ್ಲಿ ಕಟ್ಟಿಕೊಂಡು ಒಬ್ಬ ಬ್ರಾಹ್ಮಣರ ಮನೆಗೆ ಬಂದಾಗ ನಮ್ಮ ಮನೆಯ ಒಳಗೆ ನೀನು ಕುಟ್ಯಾಣವ ಕುಟ್ಟಿ ಅನ್ನ ನೀಡಿಸಿಕೋ ಎನ್ನುತ್ತಾರೆ.

ಹೀಗೆ ಅನೇಕ ಕೂಲಿ ಕೆಲಸಗಳ ಮಾಡುತ್ತ ಅವರು ಕೊಟ್ಟ ನುಚ್ಚಕ್ಕಿಯನ್ನೇ ತಂದು ತನ್ನ ಮಕ್ಕಳೊಂದಿಗೆ ನೆಲೆಸಲು ಊರಲ್ಲಿ ಸೂರು ಇಲ್ಲದಂತಹ ಸ್ಥಿತಿ ಇದ್ದಾಗ ಕೊಂತ್ಯಮ್ಮ ಇರುವಡೆಯ ಬೆಟ್ಟಕ್ಕೆ ಹಾದಿ ಮಾಡಿಕೊಳ್ಳುತ್ತಾಳೆ. ಇಬ್ಬನಿ ಸುರಿದರು ಅದನ್ನು ಲೆಕ್ಕಿಸದೇ, ಮಲಗಲು ಮನೆ ಇಲ್ಲದೆ, ಹಾಸಲು ಚಾಪೆ ಇಲ್ಲದೆ ಹೊದಿಕೆ ಇಲ್ಲದೆ ಇರುವಂತಹ ಈ ಸ್ಥಿತಿಯಲ್ಲಿ ಕೆರೆಯ ಒಳಗಡೆ ಹೋಗಿ ತಾವರೆಯ ಎಲೆಗಳನ್ನು ಬಿಡಿಸಿ ತಂದು ತನ್ನ ಐದು ಜನ ಮಕ್ಕಳಿಗೆ ಹೊದಿಸುತ್ತಾಳೆ. ಬಾಳ ದುಃಖವ ಮಾಡಿಕೊಂಡು ಬ್ರಾಹ್ಮಣರು ಕೊಟ್ಟ ನುಚ್ಚಕ್ಕಿಯ ಗಂಜಿಯನ್ನು ತಯಾರಿಸಿ ಬೇಕೆಂದರೆ ಅದಕ್ಕೆ ಮಡಕೆ ಇರುವುದಿಲ್ಲ. ಈ ತಾಯಿಯ ದುಃಖವನ್ನು ಕಂಡ ಅವಳ ಸಂಕಟದ ಬದುಕನ್ನು ಅಂತ ಅರ್ಜುನ ಕೊನೆಗೆ ತನ್ನ ಬಾಣದಿಂದ ಬೆಂಕಿಯನ್ನು ಒತ್ತಿಸಿ ಕೊಡುತ್ತಾನೆ. ಕಲ್ಲನ್ನು ಬಾಣಲೆ ಮಾಡಿ ಕೊಡುತ್ತಾನೆ. ಹೀಗೆ ಕೊಟ್ಟ ಅರ್ಜುನನ ಕರುಣೆಯಲ್ಲಿ ಆ ಬೆಟ್ಟದಲ್ಲಿ ಕೊಂತ್ಯಮ್ಮ ಮೂರು ಗುಂಡನ್ನು ಊಡಿ ಮಕ್ಕಳಿಗೆ ಗಂಜಿ ಕಾಯಿಸಿ ಕೊಡುತ್ತಾಳೆ. ಇಷ್ಟಾದರೂ ತನ್ನ ಮಕ್ಕಳ ಮುಂದಿನ ಭವಿಷ್ಯದ ಬಗ್ಗೆ ಮನದಲ್ಲಿಯೇ ಸಂಕಟ ಪಡುತ್ತಾಳೆ. ಅವಳ ಶೋಕ ಎಂಥವರಿಗೆ ಎಂಥ ಕಾಲ ಮಾರಾಯರಿಗೆ ಏನು ಬಡತನ ಎಂದು ಮಮ್ಮಲ ಮರುಗುತ್ತಾಳೆ.

ಹೀಗೆ ಪುರಾಣದ ಒಂದು ಹೆಣ್ಣಿನ ಪಾತ್ರವನ್ನು ಹಿಡಿದುಕೊಂಡು ನಮ್ಮ ಜನಪದ ಸಮುದಾಯಗಳು ತಮ್ಮ ಹೆಣ್ಣಿನ ಸಂಕಟದಲ್ಲಿ ತುಂಬಿಕೊಳ್ಳುವರು. ಅದಕ್ಕೊಂದು ಸಾರ್ವತ್ರಿಕವಾದ ಮಾನ್ಯತೆಯನ್ನು ತಂದುಕೊಳ್ಳುವುದು ಈ ಕಥನಗಳ ವೈಶಿಷ್ಟ್ಯ. ಹಾಗೆಯೇ ಕಥಾನಕಗಳಲ್ಲಿ ಹೆಣ್ಣಿನ ಶೋಷಣೆ ದಾರಿದ್ರ್ಯ, ಬಡತನ, ಪುರಾಷಾಧಿಕಾರದ ಅಂಶಗಳು ಎದ್ದು ಕಾಣುವಂತೆ ಕಾಣುತ್ತವೆ. ಅದು ಅಲ್ಲದೆ ಪೌರಾಣಿಕ ಅಂಶಗಳು ಒಂದು ಗಾಡಿನ ಅಧಿಕಾರದ ಬಲೆಗೆ ಸಿಲುಕಿ ತನ್ನ ಪ್ರಾಣವನ್ನೇ ಬಲಿ ಕೊಡುವ ಸನ್ನಿವೇಶಗಳು, ಕೆರೆ, ಬಾವಿ, ಕಟ್ಟಡ, ಸಮಾಜದ ಒಳಿತಕ್ಕೆ ಹಾಗೂ ಇನ್ನಿತರೆ ಸನ್ನಿವೇಶಗಳಿಗೆ ಅನುಗುಣವಾಗಿ ಇತರರ ಸುಖಕ್ಕಾಗಿ ತಮ್ಮ ಪ್ರಾಣ ಬಲಿದಾನ ಮಾಡಿರುವಂತಹ ಸನ್ನಿವೇಶಗಳು ಕಂಡು ಬರುತ್ತವೆ. ಒಟ್ಟಾರೆಯಾಗಿ ನಮ್ಮ ಗ್ರಾಮೀಣ ಹೆಣ್ಣುಗಳು ಅನುಭವಿಸುವ ಒಂದು ಕ್ರೂರ ಬದುಕನ್ನೇ ಕಾವ್ಯದ ಮೂಲಕ ಹೀಗೆ ತಣ್ಣಗೆ ಹೇಳಿಕೊಂಡು ಹೋಗಿ ಬಿಡುತ್ತದೆ.

೨. ದ್ರೌಪದಿ

ಮಹಾಭಾರತದ ಕುರುಕ್ಷೇತ್ರ ಯುದ್ಧಕ್ಕೆ ಹಾಗೂ ಮಹಾಭಾರತದ ಬೆಳವಣಿಗೆ ಅತ್ಯಂತ ಕ್ರಿಯಾತ್ಮಕ ಶಕ್ತಿಯನ್ನು ಕೊಟ್ಟ ಸ್ತ್ರೀ ಎಂದರೆ ದ್ರೌಪದಿ ತನ್ನ ಹಾವಭಾವ, ಮಾತಿನ ಮೋಡಿ, ದಿಟ್ಟತನದ ಮಾತಿನಿಂದ ಏಕಕಾಲದಲ್ಲಿ ಎಲ್ಲರನ್ನು ಸೆರೆಹಿಡಿಯುವ, ಅದರಲ್ಲೂ ಹೆಚ್ಚಾಗಿ ಭೀಮನನ್ನು ಸೆರೆಹಿಡಿಯುವ ಶಕ್ತಿ ದ್ರೌಪದಿಯಲ್ಲಿದೆ. ದ್ರೌಪದಿಗೆ ಸಂಬಂಧಿಸಿದಂತೆ ಒಂದೆರಡು ಪ್ರಮುಖ ಅಂಶಗಳನ್ನು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ. 'ಧರ್ಮರಾಜ ದ್ರೌಪದಿ ಮತ್ತು ಜೂಜು' ಪ್ರಸಂಗದಲ್ಲಿ ಜನಪದ ಪರಿಸರದಲ್ಲಿ ಕಥೆ ಹೇಗೆ ಮೂಡಿದೆ ಎಂಬ ಅಪರೂಪದ ವಿಶೇಷತೆವೊಂದನ್ನು ಕಾಣಬಹುದು. ಒಮ್ಮೆ ನೆಂಟರ ಮದುವೆಗೆ ಬಂದ ಧರ್ಮರಾಜನನ್ನು, ದುನೆದಾರ ಜೂಜಿಗೆ ಆಹ್ವಾನಿಸುತ್ತಾನೆ. ಜೂಜಿನಲ್ಲಿ 'ಸೋಲೂತ ನಡೆದ ಧರ್ಮರಾಜ' ಸೋಲುವುದು ರಾಜ್ಯ, ಕೋಶ, ಎತ್ತು, ಎಮ್ಮೆ, ಆಭರಣಗಳನ್ನು ಕಡೆಗೆ ಮಡದಿಯನ್ನು ಸೋಲುತ್ತಾನೆ.

ಸೋತಂತ ಧರ್ಮರಾಯ ನಿಲುಗುದರಿ ಏರಿಕೊಂಡು ಅರಮನೆಗೆ ಬರುತ್ತಾನೆ. ಬಾಗಿಲು ತೆಗೆದ ಹಡೆದವ್ವನಿಗೆ ತಾನು ಮಡದಿಯನ್ನು ಸೋತ ಸುದ್ದಿಯನ್ನು ಹೇಳುತ್ತಾನೆ. ಕುಂತಿಗೆ ಚಿಂತೆಯಾಗುತ್ತದೆ. 'ಎಲ್ಲಿ ಬಚ್ಚಿಡಲಿ ನನ್ನ ಸೊಸಿನ' ಎಂದು ಕಾತರಿಸುತ್ತಾಳೆ. ಆದರೆ ದ್ರೌಪದಿ ಬಚ್ಚಿಟ್ಟುಕೊಳ್ಳಲು ಒಪ್ಪುವುದಿಲ್ಲ. ದ್ರೌಪದಿ ನಿಲುಗುದರಿ ಏರಿ ದುನೆದಾರನ ಮನೆಗೆ ಹೊರಟೇ ಬಿಡುತ್ತಾಳೆ. ಪಗಡೆ ಹಚ್ಚಲು ದುನೆದಾರನಿಗೆ ಹೇಳಿ, ಅವನ ಜೊತೆ ಪಗಡೆಯಾಡಿ ಸೋಲಿಸುತ್ತಾಳೆ. ಧರ್ಮರಾಯ ಸೋತಂತಹ ಎಲ್ಲಾ ಸೊತ್ತುಗಳನ್ನು ದುನೆದಾರನಿಂದ ವಾಪಸ್ಸು ಪಡೆದುಕೊಳ್ಳುತ್ತಾಳೆ. ನಂತರ ಅವನ ಎದೆಗೆ ಒದ್ದಳು, ಒದ್ದು ಹೊಸ್ತಿಲ ಹೊರಕ್ಕೆ ಹೊರಟಳು. ಬಾಗಿಲಲ್ಲಿ ನಿಂತು 'ಬಾಗಾಲ ತಗಿಯ ಧರ್ಮರಾಜ' ಎಂದಳು. ಬಾಗಿಲು ತೆಗೆದು ಧರ್ಮರಾಜನಿಗೆ ಆಶ್ಚರ್ಯವೋ ಆಶ್ಚರ್ಯ. ಅವಳನ್ನು ಕಂಡ ಧರ್ಮರಾಯ ದ್ರೌಪದಿಯ ಹತ್ತಿರ ಆ ದುನೆದಾರ ಒಂದು ಕರಿನಾಯಿಯನ್ನು ಬಿಟ್ಟವನಲ್ಲ', ನಿನ್ನನ್ನು ಹೆಗೆ ಬಿಟ್ಟ? ಎಂದು ಉದ್ಗರಿಸಿದನು. ದ್ರೌಪದಿ ಘನಕಾರ್ಯವನ್ನು ನೋಡಿದ ಧರ್ಮರಾಯ ತುಂಬಾ ಹೆಮ್ಮೆ ಪಡುತ್ತಾನೆ. ಹಾಗೆಯೇ ದ್ರೌಪದಿಯ ಮೇಲೆ ಅವನಿಗೆ ಒಂದು ಅನುಮಾನ ಬರುತ್ತದೆ. ಇಲ್ಲಿ ದ್ರೌಪದಿಯ ಶೀಲವನ್ನು ಶಂಕಿಸಿದಂತೆ ಕಂಡುಬರುತ್ತದೆ.

ಊರಹೊರಗೆ ಉರಿಯುತ್ತಿರುವ ದೊಡ್ಡ 'ಕುಳುಬಾನ'ದಲ್ಲಿ ಕೆಂಪಗೆ ಕಾಯುತ್ತಿರುವ ಹಾರೆಯನ್ನು ಕೈಯಲ್ಲಿ ತೆಗೆದುಕೊಂಡು ಬಾ ಎಂದು ದ್ರೌಪದಿಗೆ ಧರ್ಮರಾಯ ಅಜ್ಞಾಪಿಸುತ್ತಾನೆ. ಪತಿವ್ರತೆ ದ್ರೌಪದಿ ಶಿವನ ಸ್ಮರಣೆ ಮಡಿ ಕುಲುಮೆಯಲ್ಲಿನ ಹಾರೆಯನ್ನು ತೆಗೆಯುತ್ತಾಳೆ. ಆಗ ಧರ್ಮರಾಜ ದ್ರೌಪದಿಯನ್ನು ಒಪ್ಪಿಕೊಳ್ಳುತ್ತಾನೆ. ಹೀಗೆ ಶಿಷ್ಟ ಸಾಹಿತ್ಯದಲ್ಲಿ ಬರುವ ದ್ರೌಪದಿಗೂ ಜನಪದ ಸಾಹಿತ್ಯದಲ್ಲಿ ಬರುವ ದ್ರೌಪದಿಗೂ ಎಷ್ಟೋ ವಿಷಯಗಳಲ್ಲಿ ಅಂತರವನ್ನು ಕಾಣಬಹುದು. ಜನಪದರ ಬುದ್ಧಿವಂತಿಕೆಗೆ, ಸಮಯ ಪ್ರಜ್ಞೆಗೆ ಯಾರಾದರೂ ತಲೆದೂಗಲೇಬೇಕು. ಇಲ್ಲಿ ಕುಂತಿಯ ಪಾತ್ರ ಗೌಣವಾಗಿಬಿಟ್ಟಿದೆ. ಮಗನ ಮೇಲೆ ಅತಿಯಾದ ಮಮತೆಯುಳ್ಳ ತಾಯಿಯಾಗಿ ಮಾತ್ರ ಚಿತ್ರಿಸಲ್ಪಟ್ಟಿದ್ದಾಳೆ.

ದ್ರೌಪದಿಯ ವ್ಯಕ್ತಿತ್ವಕ್ಕೆ ಮತ್ತೊಂದು ಸನ್ನಿವೇಶವೆಂದರೆ 'ಪಾಂಡವರ ಹಾಡು' ಈ ಹಾಡಿನಲ್ಲಿ ಬರುವ ದ್ರೌಪದಿಯ ಪಾತ್ರ ವೈಶಿಷ್ಟ್ಯಪೂರ್ಣವಾಗಿದೆ. ಪಾಂಡವರು ಅಜ್ಞಾತವಾಸಕ್ಕಾಗಿ ವಿರಾಟನಗರಿಗೆ ಬಂದು ಆಶ್ರಯ ಪಡೆದರು. ಸೈರೇಂದ್ರಿ ವೇಷದಲ್ಲಿರುವ ದ್ರೌಪದಿಯ ಸೌಂದರ್ಯಕ್ಕೆ ಮರುಳಾದ ಕೀಚಕನನ್ನು ಭೀಮನು ವಧೆ ಮಾಡುವ ಪ್ರಸಂಗ, ಕೀಚಕ ದ್ರೌಪದಿಯನ್ನು ಬಲವಂತವಾಗಿ ಅತಿಕ್ರಮಿಸಲು ಹೋಗುತ್ತಾನೆ. ದ್ರೌಪದಿ ತಪ್ಪಿಸಿಕೊಂಡು ಓಡುತ್ತಾಳೆ. ಆ ಸಂದರ್ಭದಲ್ಲಿ ಸೂರ್ಯ ನಾರಾಯಣ ದ್ರೌಪದಿಯ ನೆರವಿಗೆ ಬರುತ್ತಾನೆ. ಕಿಚಕನನ್ನು ಅಡ್ಡಲಾಗಿ ನೂಕಿ ಕೆಡವುತ್ತಾನೆ. ಮುಂದೆ ತುಂಬಿದ ಸಭೆಯಲ್ಲಿ ಕೀಚಕ ದ್ರೌಪದಿಯನ್ನು ಕಾಲಲ್ಲಿ ಒದ್ದು ಅವಮಾನಿಸುತ್ತಾನೆ. ಆಗ ಕೀಚಕ ಭೀಮನಿಂದ ಹತನಾಗುತ್ತಾನೆ.

ಕೀಚಕನನ್ನು ಸುಡಲು ಚಿರಣಿಯ ಚಿತೆಯಲ್ಲಿ ದ್ರೌಪದಿಯನ್ನು ಹಾಕಿ ಸುಡಬೇಕೆಂದು ಕೀಚಕನ ಕಡೆಯವರು ಸಂಚುಕಾರ ಹೂಡಿರುತ್ತಾರೆ. ಇದನ್ನರಿತ ಭೀಮರಾಯ ಅವರು ಬರುವ ಮೊದಲೇ ಚಿತೆಗೆ ಬೆಂಕಿ ಇಟ್ಟು ದಹಿಸುತ್ತಾನೆ. ಹೀಗೆ ಜನಪದರಲ್ಲಿ ದ್ರೌಪದಿಯ ವ್ಯಕ್ತಿತ್ವವನ್ನು ತಮ್ಮದೇಯಾದ ಜನಪದ ಶೈಲಿಯಲ್ಲಿ ವರ್ಣಿಸಿ ನಿರೂಪಿಸಿದ್ದಾರೆ.

**೩. ಸುಭದ್ರೆ**

ಜನಪದರ ಜಿವನದ ಚಕ್ರದಲ್ಲಿ ಹಳ್ಳಿಯ ಹೆಣ್ಣುಮಗಳೊಬ್ಬಳು ಗರ್ಭವತಿಯಾಗಿ ಎಲ್ಲ ಸಡಗರ ಸಂಭ್ರಮಗಳನ್ನು ಮೆರೆದು ನಾನಾ ರೀತಿಯ ಶಾಸ್ತ್ರ ಸಂಪ್ರದಾಯಗಳನ್ನು ಮುಗಿಸಿ ಹೆರಿಗೆಗಾಗಿ ತೌರಿಗೆ ಹೊರಡುವ ಮಧುರ ಸನ್ನಿವೇಶದಂತೆ ಈ ಕಥೆಯು ಸಾಗುತ್ತದೆ.

ಅಭಿಮನ್ಯು ಜನನಕ್ಕೆ ಸಂಬಂಧಪಟ್ಟ ಧರ್ಮರಾಯನ ದ್ಯೂತಕ್ಕೆ ಸಂಬಂಧಪಟ್ಟ ಎರಡು ಹೊಸ ಹಾಡುಗಳು ಸಂಕಲನವಾಗಿದೆ. ಇದೇ ಸಂಗ್ರಹಕಾರರ 'ಜನಪದ ಕಥನಗೀತೆಗಳು' ಸಂಕಲನದಲ್ಲಿ 'ಚೆನ್ನಿಗೆ ಜೋಗಯ್ಯ' ಎಂಬ ಜೋಗಿಯ ಹಾಡಿನ ಮತ್ತೊಂದು ಪಾಠ ಪ್ರಕಟಗೊಂಡಿದೆ. ಪಾಂಡವರ ಅಜ್ಞಾತವಾಸಕ್ಕೆ ಸಂಬಂಧಿಸಿದಂತೆ ಕೆಲವು ಗೀತೆಗಳು 'ಧರ್ಮರಪದ' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿವೆ.[೮] ಮಾಸ್ತಿಯವರು ತಮ್ಮ 'ಲಾವಣಿಯ ಸಾಹಿತ್ಯ' ಎಂಬ ಲೇಖನದಲ್ಲಿಯೂ ಜೋಗಿ ಹಾಡಿನ ಪರಿಚಯವನ್ನು ವಿವರವಾಗಿ ಮಾಡಿಕೊಟ್ಟಿದ್ದಾರೆ.[೬]

ಒಟ್ಟಾರೆ ಹೇಳುವುದಾದರೆ ಮಹಾಭಾರತದಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ಜನಪದರು ತಮ್ಮದೇಯಾದ ದೃಷ್ಟಿಕೋನದಲ್ಲಿಟ್ಟುಕೊಂಡು, ಜನಪದ ಶೈಲಿಯಲ್ಲಿ ರಚಿಸುವಾಗ, ಧಾರ್ಮಿಕ ಲೇಪನವನ್ನು ಲೇಪಿಸದೆ ಸಾರ್ವಕಾಲಿಕ ಮೌಲ್ಯವನ್ನು ಎತ್ತಿಹಿಡಿಯುವ ಪ್ರಯತ್ನವನ್ನು ಮಾಡಿದ್ದಾರೆ.

ರಾಮಾಯಣವೂ ಕೂಡ ಪೌರಾಣಿಕ ಕಥಾವಸ್ತುವಿಗೆ ಸಂಬಂಧಿಸಿದ ಮುಖ್ಯ ವಿಷಯ. ಅದರಲ್ಲೂ ಭಾಗವಂತಿಕೆ ಸಂಪ್ರದಾಯದ ಹಾಡುಗಳಲ್ಲಿ ರಾಮಾಯಣವು ಕಂಡುಬರುತ್ತದೆ. ಬ್ರಹ್ಮ ಕೌಸಲ್ಯಗೆ ರಾಮಾವತಾರದ ವಾರ್ತೆಯನ್ನು ಕೊರವಂಜಿಯ ರೂಪದಲ್ಲಿ ಬಂದು ಹೇಳುವುದು, ಸಮುದ್ರ ತೀರದಲ್ಲಿ ಆಂಜನೇಯ ಬಾಲವನ್ನು ಬಿಟ್ಟು ಆಳವನ್ನು ನೋಡಬಹುದು. ರಾಮಾಯಣಕ್ಕೆ

ಸಂಬಂಧಪಟ್ಟಂತೆ ಬಿಡಿಬಿಡಿಯಾದ ಹಾಡುಗಳು ಅಲ್ಲಲ್ಲಿ ತ್ರಿಪದಿ ರೂಪದಲ್ಲಿ ದೊರೆಯುತ್ತವೆ. ಆದರೆ ಇವು ಒಂದು ಪ್ರಸಂಗವನ್ನು ಸುಸಂಬದ್ಧವಾಗಿ ಚಿತ್ರಿಸುವುದಿಲ್ಲ. ಉತ್ತರ ರಾಮಾಯಣದ 'ಲವಕುಶ' ಪ್ರಸಂಗ ಮಾತ್ರ ನೀಲಗಾರರಲ್ಲಿ ದೇವರ ಗುಡ್ಡದಲ್ಲಿ ಇಂದಿಗೂ ದೊರೆಯುತ್ತದೆ.[೩] ಆದರೆ ಸಮಗ್ರ ರಾಮಾಯಣದ ಕಥೆವಾಗಿಲ್ಲವಾದರೂ ಈಗ ದೊರೆತಿರುವ ಕೆಲವು ತ್ರಿಪದಿಗಳು ಸಂಪೂರ್ಣ ರಾಮಾಯಣದ ಒಂದು ಚಿತ್ರವನ್ನು ಕೊಡಲು ಸಮರ್ಥವಾಗಿವೆ.

ರಾಗಿಯ ಕಲಿಪ್ಪಡಿದು ಸಿರಿರಾಮರ ಸಾಧನೆಗೆ ದೇವು
ರಾವಳರು ಕೊಂದು ರಣದಲ್ಲಿ ಚೆಂಡಾಡಿದ
ಸಿರಿರಾಮರ ಪಾದ ನೆನೆದೇವು ಎಂದಿದ್ದಾರೆ.



ಬೀಸುವ ಪದಗಳಲ್ಲಿ ಉಳಿದು ಬಂದಿರುವ ತ್ರಿಪದಿಗಳು ರಾಮಾಯಣದ ಕೆಲವು ಸನ್ನಿವೇಷಗಳನ್ನು ನೆನೆಪು ಮಾಡಿಕೊಡುತ್ತಿವೆ. ಈ ತ್ರಿಪದಿಗಳು ರಾಮಾಯಣದಲ್ಲಿ ಬರುವ ಪಾತ್ರಗಳ ವಿಚಾರವನ್ನು ಘಟನೆಗಳನ್ನು ಎತ್ತಿಹೇಳುತ್ತವೆ. ಅದರಲ್ಲಿ ಮುಖ್ಯವಾಗಿ ಸೀತೆಯ ಪಾತ್ರವನ್ನು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

೪. ಸೀತಮ್ಮ

ಸೀತೆ ರಾಮಾಯಣದಲ್ಲಿ ಬರುವ ಅತ್ಯಂತ ಪ್ರಮುಖ ಪಾತ್ರ. ಜನಪದರು ತಮ್ಮದೇಯಾದ ವಾತಾವರಣದಲ್ಲಿ ಸೀತೆಯನ್ನು, ಸೀತಮ್ಮ ಎಂದು ಹೆಸರಿಟ್ಟು ಚಿತ್ರಿಸುತ್ತಾರೆ. ಸೀತೆಯ ಸ್ವಯಂವರಕ್ಕೆ ಸಂಬಂಧಿಸಿದ ತ್ರಿಪದಿಯೊಂದನ್ನು ಶಿವಧನಸ್ಸನ್ನು ಎತ್ತಿದ ರಾಮಚಂದ್ರ ಸೀತೆಯನ್ನು ವರಿಸಿದ ಸನ್ನಿವೇಶವನ್ನು ಹೀಗೆ ಪರಿಚಯಿಸುತ್ತಿದೆ. ರಾಮಸೀತೆಯ ಮದುವೆ ಆಯಿತು ಮುಂದೆ ಸೀತೆಯ ಸುದ್ಧಿ ಲಂಕೆಗೂ ಹರಡಿತು. ಸೀತಾದೇವಿ ಆಯೋಧ್ಯೆಗೆ ಬಂದಾಗ, ಜನ ಬೆರೆಗಾದರು. ಅಲೌಕಿಕ ಸುಂದರಿಯನ್ನು ನೋಡಿ ಆದರಿಸಿ ತಂದಾರೊ ಗೋದುವೆ. ಮೈಯೊಳ ಎಳ್ಹೂವಿನಂತೆ ಬಳುಕೋಳ- ಸೀತಮ್ಮ ಎಲ್ಲರಸಿ ತಂದ್ರಿರಾಮ ದೇವ್ರೆ. ಎಂದಿದೆ. ತರುಣದಲ್ಲೇ ಸೀತಾದೇವಿ ಅಲ್ಲಿ ರಾವಣನಿಗೆ ಸೆರೆಯಾದಳು ಸೆರೆಯಾದ ಸೀತೆಯನ್ನು ಕಾಪಾಡಲು ರಾಮನು ರಾವಣನ ಜೊತೆ ಹೋರಾಡಿ, ಸೀತೆಯನ್ನು ಕರೆತರುತ್ತಾನೆ. ಈ ತರಹದಲ್ಲಿ ಸೀತೆಯನ್ನು ಕರೆತರುವಾಗ ರಾಮನಿಗೆ ಒಂದು ಸಂಶಯದ ಎಳೆ ತಲೆಯಲ್ಲಿ ಸುಳಿಯುತ್ತದೆ. 'ಸಿಟ್ಟಿನಲ್ಲಿದ್ದ ರಾವಣ' ಬಹುಶಃ ತನ್ನ ತಂಗಿಗಾದ ಅವಮಾನದಿಂದ ಕುಪಿತನಾಗಿ "ಮುಟ್ಟದೆ ಹೋದಾನೆಯೇ ತನ್ನ ಮಡದಿಯನ್ನು"? ಎಂಬುದೇ ಆ ಸಂಶಯ. ಅದಕ್ಕೆ ಸಾಕ್ಷಿಯಾಗಿ "ಉಟ್ಟೇರು ಸೀರಿಗಳು ಉಟ್ವಾಂಗ ಇಲ್ಲಲ್ಲ, ತೊಟ್ಟೇರು ಕುಪ್ಪಾಸ ತೊಟ್ವಾಂಗ ಇಲ್ಲಲ್ಲ' ಎಂಬ ಮಾತುಗಳು 'ಹಾಲಗಲ್ಲದ ಮ್ಯಾಲೆ ಹರಿಗಾಯಿ ತಿರುಗಾಯಿ' ಎಂಬ ಮಾತಂತೂ ಇದೀಗ ತಾನೆ ನಡೆದ ಘಟನೆಯ ಪರಿಣಾಮದಂತೆ ಗೋಚರಿಸುತ್ತಿದೆ. ಅದಕ್ಕಾಗಿ ರಾಮನು, ಸೀತೆಯನ್ನು ಕೊಂದು ಬಾ ಎಂದು ಕೂಡಲೆ ಲಕ್ಷ್ಮಣನಿಗೆ ಅಜ್ಞಾಪಿಸುತ್ತಾನೆ.

ಅಣ್ಣನ ಮಾತಿನಂತೆ ಅರಣ್ಯದ ಹಾದಿ ಹಿಡಿದು ಲಕ್ಷ್ಮಣ ಹೊರಡುತ್ತಾನೆ. ಅರಣ್ಯದಲ್ಲಿ ಸೀತೆಯನ್ನು ಕಡಿಯಲು ತಂದ ಅಲಗನ್ನು ನೆಲದ ಮೆಲೆ ಇಡುತ್ತಾನೆ. ಕತ್ತಿಯ ಒಳಗೊಂದು, ಹತ್ತು ತಿಂಗಳ ಪುತ್ರನು, ಅಲಗಿನ ಹೊರಗೊಂದು ಆರು ತಿಂಗಳ ಪುತ್ರನು ಲಕ್ಷ್ಮಣನ ಅರಿವಿಗೆ ಗೋಚರಿಸುತ್ತಾರೆ. ಆಗ ತನ್ನ ಅತ್ತಿಗೆಯನ್ನು ಉದ್ದೇಶಿಸಿ, ಅತ್ತಿಗೆ ಸೀತವ್ವ ಯತ್ಯಾರ ಹೋಗವ್ವ ನಾನಿನ್ನ ಕಡಿಯಲ್ಲ' ಎಂದು ಹೇಳಿ ಹಿಂದಕ್ಕೆ ಬಂದು ಬಿಡುತ್ತಾನೆ. ಲಕ್ಷ್ಮಣ ರಾಮನ ಬಳಿ ಬಂದು ಅತ್ತಿಗೆಯನ್ನು ದಟ್ಟ ಅರಣ್ಯ ಮಧ್ಯದಲ್ಲಿ ಕೊಂದೆನು ಎಂದು ಹೇಳಿದಾಕ್ಷಣ ರಾಮನ ಕಣ್ಣಲ್ಲಿ ಗಳಗಳನೇ ನೀರು ಸುರಿಯಿತು. ಚಿಕ್ಕವನಿದ್ದ ನಿನ್ನನ್ನು ತಾಯಿ ರೀತಿಯಲ್ಲಿ ಸಾಕಿದ್ದಾಳೆ ಅಂತವಳನ್ನು ಹೇಗೆ ಕೊಂದಿಯಾ? ಎಂದಾಕ್ಷಣ ಲಕ್ಷ್ಮಣ ಬೆಚ್ಚಿದ. ರಾಮ ದುಃಖ ತಡೆಯಲಾರದೆ ಸೀತೆಯ ನಿರ್ಜಿವಾದ ದೇಹವಾದರೂ ಇದ್ದರೆ ತಂದು ತೋರಿಸು ಎಂದು ಹೇಳುತ್ತಾನೆ. ಅದು ಇಲ್ಲ ಎಂದಾಗ ಬೂದಿಯಾದರೂ ತಂದು ತೋರಿಸು ಎನ್ನುತ್ತಾನೆ. ಅದಕ್ಕೆ ಲಕ್ಷ್ಮಣ ಅದನ್ನು ಗಂಗೆಗೆ ಬಿಟ್ಟು ಬಂದೆ ಎಂದ. ಇತ್ತ ಸೀತೆ ವಾಲ್ಮೀಕಿ ರಾಯನ ಆಶ್ರಯ ಪಡೆದು ಗಂಡುಮಗುವಿಗೆ ಜನ್ಮನೀಡುತ್ತಾಳೆ. ಸೀತೆ ಒಮ್ಮೆ ಗಂಗೆ ಪೂಜೆಗೆ ಮಗುವನ್ನು ಎತ್ತಿಕೊಂಡು ಹೋಗುತ್ತಾಳೆ. ಇತ್ತ ವಾಲ್ಮೀಕಿರಾಯ ತೊಟ್ಟಿಲಲ್ಲಿ ಮಗು ಇಲ್ಲದಿದ್ದನ್ನು ನೋಡಿ ದರ್ಜೆಹುಲ್ಲು, ಮರು ಜವಳಿ ಕಡ್ಡಿಯನ್ನು ತಂದು ಮಾಯದಲ್ಲಿ ಒಂದು ಮಗುವನ್ನು ಮಾಡುತ್ತಾನೆ. ಸೀತೆಗೆ ಇದು ನಿನ್ನ ಮಗು ಎಂದು ನಂಬಿಸುತ್ತಾನೆ. ಅವರೇ 'ಲವಕುಶ'ರು. ಮುಂದೆ ರಾಮ ಲವಕುಶರಿಗೆ ಯುದ್ಧ ನಡೆಯುತ್ತದೆ. ನಂತರ ತನ್ನ ಮಕ್ಕಳೆಂದು ಗೊತ್ತಾಗಿ ಸೀತೆಯನ್ನು ಪುನಃ ಅರಮನೆಗೆ ಕರೆತಂದು ಬಾಳುವೆ ಮಡುತ್ತಾರೆ.

೫. ಸಂಪನ್ನೆ

ತುಮಕೂರು ಹಾಗೂ ಹಾಸನ ಜಿಲ್ಲೆಗಳಲ್ಲಿ ಪ್ರಚಲಿತದಲ್ಲಿರುವ ಸಂಪನ್ನೆಯ ಕಥನವು ಅನೇಕ ಕುತೂಹಲಗಳನ್ನು ಕಟ್ಟಿಕೊಂಡಿದೆ. ಮಹಾಭಾರತದ ಪಾತ್ರ ಪ್ರಸಂಗಗಳಿಗೆ ಹೋಲಿಕೆಯಾಗುವ ಅನೇಕ ಅಂಶಗಳು ಇಲ್ಲಿ ವ್ಯಕ್ತವಾಗಿದೆ. ಪೌರಾಣಿಕ ಹಾಗೂ ಜಾನಪದ ವಸ್ತುವಿನ್ಯಾಸಗಳನ್ನು ಲೌಕಿಕವಾಗಿ ಅಭ್ಯಸಿಸಲು ಈ ಕಥನಕಾವ್ಯ ನೆರವಾಗುತ್ತದೆ. ದೊರೆತ ಎರಡು ಪಠ್ಯಗಳಲ್ಲಿ ಅನೇಕ ಸಾಮ್ಯತೆಗಳಿದ್ದರೂ 'ಪಾಂಡವ', 'ನಾರೀಂದ್ರ' ಎಂಬ ಎರಡು ಭಿನ್ನ ಪುರುಷ ಪಾತ್ರಗಳು ಸಂಪನ್ನೆಯ ಮಕ್ಕಳಾಗಿ ಬರುತ್ತವೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯವಿಚಾರವೆಂದರೆ, ಈ ಮಕ್ಕಳು ಜನಿಸುವುದು ಅಯೋನಿಜವಾಗಿ. ಕಾಡುಗೊಲ್ಲರ ಜುಂಜಪ್ಪನು ಕೂಡ ಬಂಗಾರದ ಹಲ್ಲಿಯಾಗಿ ತಾಯಿ ಚೆನ್ನಮ್ಮನ ಚಿನ್ನ ಹುರಿಯಿಂದ ಹುಟ್ಟುತ್ತಾನೆ. ಬಹುತೇಕ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರೆನಿಸಿದವರೆಲ್ಲ ಈ ಬಗೆಯಲ್ಲಿ ಅಯೋನಿಜತ್ವದ ಹುಟ್ಟು ಪಡೆದವರೇ. ಅಂದರೆ ಇಲ್ಲಿ ಸಂಪನ್ನೆಯ ಬೆನ್ನಿನಲ್ಲಿ ಒಡಮೂಡಿ ಬರುವವನು ನಾರೀಂದ್ರ ತಾಯಿಗೆ ಒದಗಿದ ಕಂಟಕಗಳನ್ನು ನಿವಾರಿಸುವುದಲ್ಲದೆ, ಬಾಣಂತಿಯಾದ ತಾಯಸೂತಕ(ಮೈಲಿಗೆ)ವನ್ನು ತಾನೇ ನೀರು ತಂದು ಕಳೆಯುತ್ತಾನೆ. ಈ ಅಯೋನಿತ್ವ ಸೂತಕದ ವಿಚಾರ, ಹುತ್ತದ ಹಾವನ್ನು ಬಳೆಗಳನ್ನಾಗಿಸುವುದು.

ಮೋಡಿ-ಸಿದ್ಧ ಪದ್ಧತಿ ತೋರುವುದು ಇದೆಲ್ಲ ಬುಡಕಟ್ಟು ಕುಲವ್ಯವಸ್ಥೆಯನ್ನು ನೆನಪಿಸುತ್ತದೆ. ರಕ್ತಸಂಬಂಧದಲ್ಲಿ ಆಗಲೇ ಇಲ್ಲಿ ಬಿರುಕು ಕಾಣಿಸಿಕೊಂಡಿದೆ. ಕೊಳು ಕೂಡ ವಿಚಾರದಲ್ಲಿ ಸಂಬಂಧಗಳು ಬಿಗಡಾಯಿಸುತ್ತಿವೆ. ಆ ಕಾರಣಕ್ಕಾಗಿಯೇ ಸಂಪನ್ನೆಗೂ ಸಂಪನ್ನೆಯ ಅಣ್ಣನ ಮಡದಿ ಹೊನ್ನಮ್ಮನಿಗೂ ಗಂಡು-ಹೆಣ್ಣು ಕೊಡುವ ವಿಚಾರದಲ್ಲಿ ಮನಸ್ತಾಪವುಂಟಾಗುತ್ತದೆ. ಕೊನೆಗೆ ಹೊನ್ನಮ್ಮ ಮಗಳನ್ನು ತನ್ನ ತಮ್ಮನಿಗೆ ಕೊಡಲು ತೀರ್ಮಾನಿಸಿದಾಗ ಸಂಪನ್ನೆಯ ಮಗ ನಾರೀಂದ್ರನೇ ಹೋಗಿ ಅವಳನ್ನು ಗೆದ್ದು ತರುತ್ತಾನೆ. ಮಹಾಭಾರತದ 'ವತ್ಸಲಾಹರಣ'ದ ಪ್ರಸಂಗವನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.

ಸೂತಗದ ವಿಚಾರದೊಂದಿಗೇ ಈ ಕಥನ ಆರಂಭವಾಗುತ್ತದೆ. ಅತ್ತಿಗೆ ನಾದಿನಿಯಿರಿಬ್ಬರೂ ಸೂತಗಗೊಂಡು ಹೊಳೆಯಲ್ಲಿ ಮಡಿಗೊಂಡು ಒಂದು ಒಪ್ಪಂದಕ್ಕೆ ಬರುತ್ತಾರೆ. ಹೆಣ್ಣು ಹೆತ್ತರೆ ನೀನು ಕೊಡಬೇಕು. ಗಂಡು ಹೆತ್ತರೆ ನಾನು ಕೊಡುತ್ತೇನೆ ಎಂಬ ಅಭಿಪ್ರಾಯದ ಒಪ್ಪಂದದಲ್ಲಿರುತ್ತಾರೆ. ಇಂತಹ ಒಪ್ಪಂದ ಪ್ರಸ್ತುತ ಸಮಾಜದಲ್ಲಿ ಈಗಲೂ ಕೆಲವು ಕಡೆ ಬಳಕೆಯಲ್ಲಿದೆ ಅಥವಾ ನಡೆಯುತ್ತದೆ. ಅದಕ್ಕೆ ಕೆರೆಯ ಒಳಗಿನ ಕುರಿ, ಮರಿ ಜಲದ ಸಾಕ್ಷಿಯನ್ನು ಇಡುತ್ತಾರೆ. ಇಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಬೇರೆ ನರಮನುಷ್ಯರನ್ನು ಸಾಕ್ಷಿಯಾಗಿ ಬಳಸಿಕೊಳ್ಳದೇ ಜ್ಞಾನ ಇಲ್ಲದೇ ಇರುವಂತಹ ಪ್ರಾಣಿಗಳನ್ನು ಬಳಸಿಕೊಂಡಿರುವುದು ಗಮನಾರ್ಹವಾಗಿದೆ. ಹಾಗೆಯೇ ಇವರಿಬ್ಬರ ಚಿತ್ರಣ ಸಂಬಂಧಗಳು ಕಡೆದು ಕೊನೆಯಾಗಬಾರದೆಂಬ ಉದ್ದೇಶದಿಂದ ಇಂತಹ ಒಪ್ಪಂದ ನಡೆದಿರಬಹುದು. ನಂತರ ಅವರು ಸಂತೋಷದಿಂದ ಅರಮನೆಗೆ ಬಂದು ಊಟ ಮಾಡಿ ವೀಳ್ಯ ಸೇವಿಸಿ ಮಂಚದ ಮೇಲೆ ಮಲಗಿಕೊಳ್ಳುತ್ತಾರೆ. ಹೀಗೆ ಮಲಗಿಕೊಳ್ಳುವುದೇ ತಡ ದುಃಸ್ವಪ್ನಗಳು ಇಬ್ಬರಿಗೂ ಬೀಳುತ್ತವೆ. ನಿಂಬೆಹಣ್ಣಿನ ಸ್ವಪ್ನ ಒಬ್ಬಳಿಗೆ ಬಿದ್ದರೆ ಬಾಳೆಹಣ್ಣಿನ ಸ್ವಪ್ನ ಇನ್ನೊಬ್ಬಳಿಗೆ ಬೀಳುತ್ತದೆ. ಅಕ್ಕಪಕ್ಕದ ಮನೆಯವರಿಗೆ ಈ ಸ್ವಪ್ನದ ವಿವರಣೆ ಕೇಳಿದರೆ ಅವರು ಸ್ವಪ್ನದಲ್ಲಿ ನಿಂಬೆಹಣ್ಣು ಕಂಡವರು ಹೆಣ್ಣು ಮಗುವನ್ನು, ಬಾಳೆಹಣ್ಣು ಕಂಡವರು ಗಂಡು ಮಗುವನ್ನು ಪಡೆಯುತ್ತಾರೆಂದು ಹೇಳುತ್ತಾರೆ.

ಸಂಪನ್ನೆ ಐದು ತಿಂಗಳು ತುಂಬಿದ ಗರ್ಭಿಣಿ ತಂಗಿಯನ್ನು ಕರೆದುಕೊಂಡು ಬರಲೆಂದು ಅಣ್ಣ ಹೋಗಲು ಅನುವಾದರೆ ಹೆಂಡತಿ (ಸಂಪನ್ನೆಯ ಅತ್ತಿಗೆ) ಮನೆಯಲ್ಲಿ ಬೆಲ್ಲ, ಅಕ್ಕಿ, ಎಲೆ, ಅಡಿಕೆ ತುಪ್ಪವಿಲ್ಲವೆಂದು ಹೇಳುತ್ತಾಳೆ. ಅದಕ್ಕೆ ಅವನು ಬೆಲ್ಲ, ಅಕ್ಕಿ, ಎಲೆ, ಅಡಿಕೆ ತುಪ್ಪ ತಂದುಕೊಡುತ್ತಾನೆ. ಇತ್ತ ತಂಗಿಯನ್ನು ಕರೆಯಲು ಹೋಗುವ ಸಿದ್ಧತೆಯಲ್ಲಿದ್ದಾಗ ಗಂಡನಿಗೆ ಬುದ್ಧಿವಾದ ಹೇಳುತ್ತಾಳೆ. ತನ್ನ ಶ್ರೀಮಂತಿಕೆಯು ತೋರಿಸಿಕೊಳ್ಳುತ್ತಾಳೆ. ಹೆಣ್ಣು ಹೆಣ್ಣಿಗೆ ಶತ್ರು ಎಂಬ ಅಂಶ ಇಲ್ಲಿ ಕಂಡುಬರುತ್ತದೆ. ಅಂದ ಕುಲದವರು ಚಂದ ಕುಲದವರು ನಾವು ಅವರ ಮನೇಲಿ ಊಟ, ವೀಳ್ಯ ವಿಶ್ರಾಂತಿ ಬೇಡ ಎನ್ನುತ್ತಾಳೆ, ಊಟ ಮಾಡಿದರೆ ಮಾಟಗೀಟ ಮಾಡಿಸಿ ಬಿಟ್ಟಾರು ಎನ್ನುವ ಅನುಮಾನ ಅವಳಿಗೆ, ಇದನ್ನೆಲ್ಲ ಕೇಳಿಸಿಕೊಂಡ ಅಣ್ಣ ಕುದುರೆಯೊಂದಿಗೆ

ತಂಗಿಯ ಕರೆಯಲು ಬರುತ್ತಾನೆ. ಅತ್ತೆಗೆ ಹೇಳಿ ಬೇಗನೇ ಅರಮನೆಗೆ ಕಳುಹಿಸಿಕೊಡಲು ಭಿನ್ನವಿಸುತ್ತಾನೆ. ಅಲ್ಲಿಯು ತನ್ನ ಹೆಂಡತಿಯ ಅಭಿಪ್ರಾಯವನ್ನೇ ತಿಳಿಸುತ್ತಾನೆ. ಅದಕ್ಕೆ ಅತ್ತೆ.

ಹೆಚ್ಚಾಯದಿಂದ ನಿಮ್ಮಣ್ಣ ಕರಿಯಲು ಬಂದ
ಹೋಗು ಬಾರಮ್ಮ ಸೊಸೆ ಮುದ್ದೆ ಎನ್ನುತ್ತಾಳೆ

ಕೊನೆಗೆ ಮಗನಿಗೆ ಬುದ್ಧಿವಾದ ಹೇಳಿ ಮಡದಿ ಕಳಿಸಿಕೊಡಲು ಹೇಳುತ್ತಾಳೆ. ಮಗನೂ ಒಪ್ಪಿ ಮಡದಿಗೆ ಹೋಗಿ ಬರುವಂತೆ ತಿಳಿಸುತ್ತಾನೆ. ತಕ್ಷಣ ಅವಳು ಹೋಗಲು ಒಪ್ಪುವುದಿಲ್ಲ. ಆ ಬಗೆಯ ಹಿಂಜರಿಕೆ, ಮಕ್ತತೆಯಿಲ್ಲದೆ ಸ್ವಾತಂತ್ರ್ಯ ಎಲ್ಲ ಹೆಣ್ಣುಗಳಿಗಿರುವಂತೆ ಅಂದಿನ ಸಮಾಜದಲ್ಲೂ ಇತ್ತು. ಗಂಡ ಮನದೊಳಗೆ ಸಿಟ್ಟು ಮಾಡಿದ ಕ್ಷಣ ಅವಳು ಹೋಗಲು ಅನುವಾಗುತ್ತಾಳೆ. ನಂತರ ತನ್ನ ಅಣ್ಣನ ಮನೆಗೆ ಬಂದಾಗ ತನ್ನ ಅತ್ತಿಗೆ ಸಹಜವಾಗಿಯೇ ಶ್ರೀಮಂತಿಕೆಯನ್ನು ತೋರಿಸಿಕೊಳ್ಳದೆ ನಡೆದುಕೊಳ್ಳುತ್ತಾಳೆ.

ಮೈತೊಳೆದು ಮಡಿಬಟ್ಟೆ ಉಟ್ಟು ದೀಪ ಹಚ್ಚುತ್ತಾಳೆ. ತನ್ನ ಆಗಮನವನ್ನು ಹಣತೆಗೆ ಹೇಳಿಕೊಳ್ಳುತ್ತಾಳೆ. ದೀಪವಿರುವ ತನಕ (ನಾಬರುವ ತನಕ) ಉರಿಯವ್ವ ಎಂದು ಗಂಡನ ಮನೆಗೆ ಬೆಳಕನಿತ್ತು ಹರಿಸುತ್ತಾಳೆ. 'ನಾ ಬರೂತಕ್ಕ ಉರದರೆ ಜ್ಯೋತಮ್ಮಬಾಯಿ ತುಂಬ ಹೊನ್ನ ಹುಯಿಸೇನು' ಎನ್ನುತ್ತಾಳೆ. ಅಣ್ಣನ ಮನೆಗೆ ಬರುವುದಕ್ಕಿಂತ ಪೂರ್ವದಲ್ಲಿ ಹೇಳಿರುವಂತಹ ಮಾತು ಗಂಡನ ಮನೆಯಲ್ಲಿ ದೀಪವ ಹಚ್ಚುತ್ತಾ ಆಶಿಸುತ್ತಾಳೆ.

ಅತ್ತಿಮರಗುಂಟ ಅತ್ತೆಮ್ಮೆ ಕಳುವಲು ಬಂದು
ಅತ್ತೆಮ್ಮ ಹಿಂದಕ್ಕೆ ಹೋಗುತ್ತಾಳೆ
ಮಾವಿನ ಮರಗುಂಟ ಮಾವಯ್ಯ ಕಳವಲು ಬಂದು
ಮಾವಯ್ಯ ಹಿಂದಕ್ಕೆ ಹೋಗುತ್ತಾರೆ
ನಿಂಬೆ ಮರಗುಂಟ ಗಂಡಯ್ಯ ಕಳವಲು ಬಂದು
ಗಂಡಯ್ಯ ಹಿಂದಕ್ಕೆ ಹೋಗುತಾನೆ ||

ಹೀಗೆ ಅತ್ತೆ, ಮಾವ, ಗಂಡ ಆಕೆಯನ್ನು ಕಳುಹಿಸಿ ಹೋಗುತ್ತಾರೆ. ಇತ್ತ ಅಣ್ಣ ಕುದುರೆ ಮೇಲೆ ತಂಗಿ ಕಾಲು ನಡುಗೆಯಲ್ಲಿ ಮಾತನಾಡುತ್ತಾ ಬರುತ್ತಿರುತ್ತಾರೆ. ಗುಡ್ಡಗಳೆಲ್ಲಾ ಮರೆಯಾಗು ತ್ತಿರುತ್ತವೆ. ಬೇಲಿಯ ಮೇಲಿನ ಬ್ರಹ್ಮಗೊಂಡೇಗಿಡ ನೋಡಿದಾಕ್ಷಣ ಅವನೇ ನನ್ನ ಹಸುಗಳು ಎಂದು ಸಂಭ್ರಮ ಪಡುತ್ತಾಳೆ. ದಾರಿ ಮಧ್ಯದಲ್ಲಿಯೇ ಅಣ್ಣ ಪಾಂಡವರ ಪಟ್ಟಣ ಹಾಳಾದ ಕಥೆಯನ್ನು ತಂಗಿಗೆ ಹೇಳುತ್ತಾನೆ. ಹೀಗೆ ಕಥೆ ಹೇಳುತ್ತಾ ಗುಡ್ಡಗಳ ದಾಟಿಕೊಂಡು ಬರುವ ಹೊತ್ತಿಗೆ ಅಣ್ಣ ತಂಗಿಗೆ ಮೈಮೇಲಿನ ಆಭರಣಗಳನ್ನೆಲ್ಲ ತೆಗೆಯಲು ಹೇಳುತ್ತಾನೆ ಅದಕ್ಕೆ ಅವಳು ಭಯಗೊಂಡು,

ಮಟ್ಟ ಮಂಗಳವಾರ ಸುಟ್ಯಾಶುಕ್ಕವಾರ
ಇಟ್ಟಿದ್ದ ಆಭರಣ ಅಳಿಬಹುದೆ - ಅಣ್ಣ
ನಾ ಹೆಂಗಾಭರಣ ಅಳಿಯಾಲಿ ಎನ್ನುತ್ತಾಳೆ ||

ಈ ಸೀರೆ, ಆಭರಣಗಳನ್ನು ಕಳಚಿಕೊಂಡು ತವರಿಗೆ ನಾ ಹ್ಯಾಂಗ ಬರಲಿ ಎಂದು ಅಣ್ಣನನ್ನು ಪ್ರಶ್ನಿಸುತ್ತಾಳೆ. ಆಗ ಅಣ್ಣ ಕೋಪಗೊಂಡು ತಲೆಯ ಮೇಲಿನ ರುಮಾಲು ಎಸೆದು ತಂಗಿಯ ಬಿಟ್ಟು ಹೋಗುತ್ತಾನೆ. ಹೋಗುವಾಗ ತಂಗಿಯ ಆಭರಣ ವಸ್ತ್ರಗಳನ್ನೆಲ್ಲಾ ತೆಗೆದುಕೊಂಡು ಅವಳನ್ನು ಒಂಟಿಯಾಗಿಸಿ ಹೋಗುವುದು ತುಂಬಾ ಕೆಡದೆನಿಸುತ್ತದೆ. ಇಲ್ಲಿ ತನ್ನ ತಂಗಿಯು ಗರ್ಭಿಣಿ ಎಂದು ಮನವರಿತಿದ್ದರೂ ತುಂಬು ಗರ್ಭಿಣಿಯನ್ನು ಹಾದಿ ಮಧ್ಯದಲ್ಲಿಯೇ ಇಳಿಸಿ ಒಬ್ಬಳನ್ನು ಉಳಿಸಿ ಹೋಗುವಂತದ್ದು ಸರಿಯಲ್ಲ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬ ನಾಣ್ಣುಡಿ ಜ್ಞಾನಪಕಕ್ಕೆ ಬರುತ್ತದೆ.

ಒಬ್ಬಳೇ ಒಂಟಿಯಾಗಿ ಗುಡ್ಡ ಕಣಿವೆಗಳ ದಾಟಿ ಅಲ್ಲಿರೋ ದನ ಕಾಯೋ ಹುಡುಗರನ್ನು ಕೇಳುತ್ತಾಳೆ.



ದನಕಾಯೋ ಮಕ್ಕಳಿರ ಕುರಿಕಾಯೋ ಮಕ್ಕಳಿರ
ನಮ್ಮಣ್ಣನರಮನೆ ಯಾವುದಪ್ಪ ಎಂದರೆ, ಅದಕ್ಕವರು
ಆ ಗುಡ್ಡು ಮರೆಯಾಗಿ ಈ ಗುಡ್ಡ ಮರೆಯಾಗಿ
ಇನ್ನೊಂದು ಗುಡ್ಡ ಇಳಿಯಮ್ಮ ಸಂಪನ್ನೆ

ಅದೇ ಕಾಣೆ ನಿಮ್ಮಣ್ಣನರಮನೆ ಎನ್ನುತ್ತಾರೆ. ಇದು ಭಾಗ್ಯದ ಬಳೆಗಾರನ ಹಾಡನ್ನು ನೆನಪಿಗೆ ತರುತ್ತದೆ. ಇಲ್ಲಿ ಅವಳ ಗಾಢವಾದ ಅಸಹಾಯಕತೆ ಒಂಟಿತನ ಪ್ರಕಟಗೊಳ್ಳುತ್ತದೆ. ಕೊನೆಗೂ ಸುಧಾರಿಸಿ ಕೊಂಡು ತವರಿಗೆ ಸಂಪನ್ನೆ ಬರುತ್ತಾಳೆ.

ಇಲ್ಲಿ ಹೊನ್ನಮ್ಮ ಸಂಪನ್ನೆಯ ಸಹಾಯಕ್ಕೆ ಬಂದಂತೆ ತೋರುತ್ತದೆ. ಕೇರಿಕೇರಿಗೆ ಹೋಗಿ ಒಳ್ಳೆಯ ಅಕ್ಕಿ, ಬೆಲ್ಲ, ಅಡಿಕೆ, ಎಲೆ, ತುಪ್ಪಕೊಡುತೀನಿ ನೀವು ನುಚ್ಚಕ್ಕಿ, ಕಂಟುಬೆಲ್ಲ, ಗೋಟಡಕೆ, ತರಗತಿ ಮುಗ್ಗು ತುಪ್ಪಕೊಡಿರಮ್ಮ ಎಂದು ಸಾರುತ್ತಾಳೆ. ಇದು ಸೊಸೆಯ ಮೇಲೆ ಹೊನ್ನಮ್ಮ ಇಟ್ಟಿರುವ ಅಪನಂಬಿಕೆಯನ್ನು ತಿಳಿಸುತ್ತದೆ. ಕೇರಿಯ ಜನರಿಗೂ ಸಂಪನ್ನೆಯ ಇಂದಿನ ಜೀವನ ಸ್ಥಿತಿ ಅರ್ಥವಾಗಲಿ ಎಂಬುವ ಮನೋಭಾವ ಅವಳದಾಗಿರಬೇಕು -ಕುಂಬಾರನು ಕೇರಿಗೆ ಬಂದು ಹೊನ್ನಮ್ಮ 'ಎರಡು ತರದ ಮಡಕೆ ಮಾಡಬೇಕು. ಕುಂಬಾರ ಬಾಯಿ ತುಂಬ ಹೊನ್ನ ಹುಯ್ಸೇನು' ಎನ್ನುತ್ತಾಳೆ. ಹೀಗೆ ತಂದ ಎರಡೂ ಮಡಕೆಯಲ್ಲಿ ಎರಡು ತರಹದ ಅಡಿಗೆ ಮಾಡುತ್ತಾಳೆ. ಅಣ್ಣ ತಂಗಿಗೂ ಇಲ್ಲಿ ಊಟ ಮಾಡಿಸುತ್ತಾಳೆ. ತಂಗಿ ಇಲ್ಲ, ತುತ್ತು ಎಂದಕ್ಷಣವೇ ಮೇಲೆ ಕೆಳಗಾಗುತ್ತಾಳೆ. ಅಣ್ಣ ಇದನ್ನು ತಿಳಿದು ತಂಗಿಯ ಸಂತೈಸುತ್ತಾ ಚಂದ್ರಾಯುಧ ತೆಗೆದುಕೊಂಡು

ಅವರತ್ತೆಗೆ ಹೊಡೆಯಲು ಹೋಗುತ್ತಾನೆ. ಕೊನೆಗೆ ತಂಗಿಯೇ 'ಎಂತೋರ ಮಗಳೆಂದು ತಂದೋ ಸೊಸೆಯೆಂದು ಕೆಟ್ಟ ಅಪಕೀರ್ತಿ ಬರುತ್ತದೆ' ಎಂದು ಅದರಣ್ಣನ ಪಾದ ಹಿಡಿದು ಬೇಡುತ್ತಾಳೆ. ಅಣ್ಣನ ಕೈಯಲ್ಲಿದ್ದ ಚಂದ್ರಾಯುಧ ಕಿತ್ತುಕೊಂಡು ಸಂತೈಸುತ್ತಾಳೆ. ಇಬ್ಬರೂ ವಿಶ್ರಾಂತಿ ಪಡೆಯುತ್ತಾರೆ.

ಅಣ್ಣ ತಂಗಿಗೆ ಒಂದು ಕಥೆಯನ್ನಾದರೂ ಹೇಳುವಂತೆ ಕೇಳಿಕೊಳ್ಳುತ್ತಾನೆ. ಅದಕ್ಕವಳು

ಹಿಂದೆ ಕಂಡವಳಲ್ಲ ಮುಂದೆ ಕಂಡವಳಲ್ಲ
ನಾನೇನು ಕಥೆಯ ಹೇಳಲಣ್ಣ ಎನ್ನುತ್ತಾಳೆ.

ಕೊನೆಗೆ ಅಣ್ಣನೇ ಹೇಳುತ್ತಾನೆ. ತಂಗಿ ಸಂಪನ್ನೆ ಅದಕ್ಕೆ ಹೂಗುಡುತ್ತಾಳೆ. ಸಂಪನ್ನೆಗೆ ಕತೆ ಕೇಳುತ್ತಾ ನಿದ್ರೆ ಆವರಿಸಿ ಅವಳು ಮಲಗುತ್ತಾಳೆ. ಅವಳ ಹೊಟ್ಟೆಯೊಳಗಿರುವ ಮಗುವು ಹೂಗುಡುತ್ತದೆ. ಇಲ್ಲಿ ಮಹಾಭಾರತದ ಸನ್ನಿವೇಶವು ನೆನಪಿಗೆ ಬರುತ್ತದೆ. ಅಭಿಮನ್ಯು ಹೊಟ್ಟೆ ಒಳಗೆ ಇದ್ದಾಗ ಕೇಳುವಂತೆ ಸಂಪನ್ನೆಯ ಹೊಟ್ಟೆಯೊಳಗಿನ ಮಗುವು ಹೂಗುಡುತ್ತದೆ. ಇದನ್ನು ಅರಿತ ಅಣ್ಣ ಸಂಪನ್ನೆಗೆ ಹೆರಿಗೆ ನೋವು ಕಾಣಿಸಿಕೊಳ್ಳಬಹುದೆಂಬ ಮುನ್ನಾಲೋಚನೆಯಿಂದ ಅವನ ಸೂಲಗಿತ್ತಿಯ ಹುಡುಕಿಕೊಂಡು ದಾರಿ ಹಿಡಿಯುತ್ತಾನೆ. ಹಾದಿ ಬೀದಿಯ ಎಲ್ಲರನ್ನು ಕೇಳುತ್ತಾನೆ. ಆದರೆ ಯಾರು ಹೇಳುವುದಿಲ್ಲ. ಅದಕ್ಕೆ ಅವನು ಕೆಲವೊಂದು ಆಮಿಷಗಳನ್ನಾ ಒಡ್ಡುತ್ತಾನೆ. ಸೂಲಗಿತ್ತಿಯ ಮನೆ ತೋರಿಸಿದವರಿಗೆ ವಾಲಿಗೆಜ್ಜೆ, ಬಂಗಾರದ ಒಡವೆ ಕೊಡುತ್ತೇನೆ ಎಂದು ಹೇಳಿದರೂ ಸಹ ಒಬ್ಬೊಬ್ಬರೂ ಆಕೆಯ ಅರಮನೆಯ ಗುರುತು ಹೇಳುತ್ತಾರೆ.

ಹಾದ್ಹಾದಿಗೆಲ್ಲ ಹಾಸುಗಲ್ಲು ಹೊದಿಸ್ಯವರೆ
ಕ್ವಾಣೆ ಸಾಲಿಗೆ ಬಿಡಿಮುತ್ತ - ಬಿಡಿಸ್ಯವಳೆ
ಅದು ಕಾಣೆ ಸೂಲಗಿತ್ತಿ ಅರಮನೆ

ಕಟ್ಟೆಯ ಕಸವ ಅತ್ತ ಗುಡಿಸುವ ಹೆಣ್ಣೆ
ಯಾವುದಮ್ಮ ಸೂಲಗಿತ್ತಿ ಅರಮನೆ ಎಂದರೆ
ಅಂಗಳಂಗಳಕ್ಕೆಲ್ಲ ಗಂಗಳ ಕಲ್ಲ ದಿಸ್ಯವೆ
ಕಂಬ ಸಾಲಿಗೆ ಮುತ್ತ ಬಿಡಿಸ್ಯವೆ - ಸಂಪನ್ನ
ಅದು ಕಾಣೆ ಸಂಗಮ್ಮನ ಅರಮನೆ ಎನ್ನುತ್ತಾರೆ.

ಸೂಲಗಿತ್ತಿ ಸಂಗಮ್ಮನ ಮನೆ ಅರಮನೆಯಾಗಿ, ಅಷ್ಟೊಂದು ಚಿತ್ರವಿಚಿತ್ರವಾಗಿದೆ ಎಂದು ಹೇಳುವಲ್ಲಿ ಜನಪದರ ಗಾಢ ಪ್ರೀತಿ, ಅನನ್ಯತೆ ಇಲ್ಲಿ ವ್ಯಕ್ತವಾಗುತ್ತದೆ. ಅವಳ ಕಂಡ ಹರ್ಷನಾದ ಅಣ್ಣನು ಮನೆಗೆ ಬರುವಂತೆ ಕೇಳಿಕೊಳ್ಳುತ್ತಾನೆ. ಆದರೆ ಇಲ್ಲಿ ಸಂಗಮ್ಮ ಈಗ ನನಗೆ ಬರಲು ಆಗುವುದಿಲ್ಲ ಎಂದು ಸುಗಮವಾಗಿ ಹೇಳಿ ಬಿಡುತ್ತಾಳೆ. ಆದರೆ ಅಣ್ಣ ತಂಗಿಯ ಮೇಲಿನ ಪ್ರೀತಿಯಿಂದ ಸಂಗಮ್ಮಳಿಗೆ ನಾಗರ ಒಡವೆ ಮೂಗಳ ಮುತ್ತ ಮೇಲೆ ನಾ ಗಂಡುಗ ಗೆದ್ದು ಕೊಡುತ್ತೇನೆ ಎನ್ನುತ್ತಾನೆ. ಈ ರೀತಿಯಾಗಿ ಸಂಪತ್ತನ್ನು ಬಿಟ್ಟು ಮತ್ತೆ ತನ್ನವಳ ಬೇಡಿಕೆಯನ್ನು

ಅವಳ ಮುಂದೆ ಇಡುತ್ತಾಳೆ. ಅದಕ್ಕೂ ಅವನು ಒಪ್ಪಿ ಬಡಿಗೇರ ಮನೆಗೆ ಬಂದು ಬಡಿಗೇರನಿಗೆ ಪಲ್ಲಕಿ ಕೊಡುವಂತೆ ಬೇಡುತ್ತಾನೆ. ಆದರೆ ಬಡಿಗೇರ ಸುಮ್ಮನೆ ಕೊಡುವುದಿಲ್ಲ ಅದಕ್ಕೆ ಬೆಲೆ ತೆತ್ತು ತರುತ್ತಾನೆ. ಆಗ ಸಂಗಮ್ಮಳು ತನ್ನ ಅಲಂಕಾರ ವೈಭೋಗದಿಂದ ಬಂದು ಕೂಳಿತಾಗ ಅವಳನ್ನು ಅರಮನೆಗೆ ಕರೆದುಕೊಂಡು ಬಂದು ಹೆರಿಗೆ ಮಾಡುವಂತಹ ಸನ್ನಿವೇಶ, ಇಲ್ಲಿ ಹೆಣ್ಣು ಹೆಣ್ಣಿಗೆ ಸಹಾಯ ಮಾಡುವಂತಹ ಸನ್ನಿವೇಶ ದೂರದ ಮಾತಾಗಿದೆ ಎಂತಲೂ ಸಹ ನಾವು ಅರಿಯಬಹುದು.

ಇತ್ತ ಸಂಪನ್ನೆ ಮತ್ತು ತನ್ನ ಮಗ ನರೇಂದ್ರ ಜೊತೆಗೂಡಿ ಅಪ್ಪನಿರುವಲ್ಲಿಗೆ ದಾರಿಯನ್ನು ಹಿಡಿಯುತ್ತಾರೆ. ಆ ದಾರಿ ಮಧ್ಯದಲ್ಲಿ ಹಲವಾರು ಸಮಸ್ಯೆ ಬಂದರು ಅದನ್ನು ನೀಗಿಸಿಕೊಂಡು ಗಂಡನಿರುವಲ್ಲಿಗೆ ಬಂದು ಸೇರಿಕೊಳ್ಳುತ್ತಾರೆ. ಮಗನಿಗೆ ಹಲವಾರು ಚಿನ್ನದ ಒಡವೆಗಳನ್ನು ಮಾಡಿಸಿ ಮಗನಿಗೆ ಹಾಕುತ್ತಾಳೆ. ಸಂಪನ್ನೆ ಮಗನಿಗೆ ಈಗ ಅತ್ತೆಯ ಹೋರಿಯನ್ನು ಹೊಡಕೊಂಡೋಗಿ ದುಡಿಯಪ್ಪ ಎಂದು ಬುದ್ಧಿ ಹೇಳುತ್ತಾಳೆ. ಹೀಗೆ ಅಂದ ಚಂದವಾಗಿ ಬೇಸಾಯ ಮಾಡುವಾಗ ನೀರಿಗೆಂದು ಅತ್ತೆಯ ಮಗಳು ಬರುತ್ತಾಳೆ. ಅವಳು ಇವನ ಕೈಯೊಳಗಿದ್ದ ಅಂದ ಚಂದದ ಬಳೆಗಳನ್ನು ನೋಡಿ ಅವನ ಮೇಲೆ ವ್ಯಾಮೋಹಗೊಳ್ಳುತ್ತಾಳೆ. ಕೊನೆಗೆ ಅವನೇ ಅವಳಿಗೆ ಪ್ರೀತಿಯಿಂದ ಬಳೆಗಳನ್ನು ತೊಡಿಸುತ್ತಾನೆ. ಹೀಗೆ ತೊಟ್ಟು ನೀರು ತೆಗೆದುಕೊಂಡು ಮನೆಗೆ ಹೋದಾಗ ಕೈಯೊಳಿದ್ದ ಬಳೆಗಳು ಅವರ ಅವ್ವಳ ಕಣ್ಣಿಗೆ ಬೀಳುತ್ತವೆ. ಈ ರೀತಿ ನೋಡಿದಾಕ್ಷಣ ಸಿಟ್ಟು ನೆತ್ತಿಗೇರಿ ಪಾಡಿಯ ಬಳೆಯೆಂದು ಸುತ್ತಿಗೆಯಿಂದ ಹೊಡೆಯಲು ಹೋಗುತ್ತಾಳೆ. ಆದರೆ ಬಳೆ ಹೊಡೆಯುವುದೇ ಇಲ್ಲ. ಕೈಯಲ್ಲಿ ಹಾಗೇ ಬಳೆಗಳು ಇರುವಾಗ ಕೊನೆಗೆ ಬಳೆ ತೊಡಿಸಿದವನನ್ನು ಜರಿಯುತ್ತ ತನ್ನ ತಮ್ಮನಿಗೆ ಲಗ್ನ ಮಾಡಿಸಲು ಮುಂದಾಗುತ್ತಾಳೆ.

ತಾಯಿಯಾದವಳು ಮಗಳ ಮನಸ್ಸನ್ನು ಅರ್ಥಮಾಡಿಕೊಳ್ಳದೆ ಅವಳನ್ನು ಇಲ್ಲಸಲ್ಲದ ಮಾತು ಗಳಿಂದ ನೋವು ಪಡಿಸುವುದಲ್ಲದೆ ಹೊಡೆಯುವುದಕ್ಕೂ ಮುಂದಾಗುವಂತದ್ದು, ಹಾಗೆಯೇ ಮಗಳಾದವಳು ಸಹ ತನ್ನ ಅವ್ವಳ ಮನಸ್ಸನ್ನು ನೋವುಪಡಿಸಿರುವಂತಹದ್ದು ಈ ಕಥನಕದಲ್ಲಿ ಪ್ರತಿಬಿಂಬಿತವಾಗಿದೆ. ತನ್ನ ಅವ್ವ ಹೀಗೆ ತನ್ನ ಮಗಳನ್ನು ಮದುವೆ ಮಾಡಲು ಮೂಹರ್ತ ಇಡಲು ಜೋಯಿಸರ ಮನೆಗೆ ಹೋಗುತ್ತಾಳೆ. ಆದರೆ ಜೋಯಿಸ ಮನೆಯಲ್ಲಿರದೆ ಈಶ್ವರಗುಡಿ ಯಲ್ಲಿರುವುದು ಖಚಿತವಾಗುತ್ತದೆ. ಅವ್ವ ನೇರವಾಗಿ ಜೋಯಿಸರ ಹತ್ತಿರ ಹೋದಾಗ ಅವಳ ಮಾತಿಗೆ ಹೂಗೊಟ್ಟು ಬರುವುದಿಲ್ಲ. ಅವನು ಕೆಲವೊಂದು ಬೇಡಿಕೆಯಿಡುತ್ತಾನೆ. ಗಂಡಿನ ಬಟ್ಟೆ ಬಂದರೆ ಬರುತೀನಿ, ಹೆಣ್ಣಿನವರ ಹರಿದಾಳಿ ಬಂದರೆ ಬರುತೀನಿ ಎನ್ನುತ್ತಾನೆ. ಮತ್ತೆ ಮೇಲಾಗಿ ನನಗೆ ಮಾಲೆ ಬರಬೇಕು ಎಂದಾಕ್ಷಣವೇ ನಾರೀಂದ್ರನೇ ಮಾಲೆ ಹಿಡಿದು ಬಿಲ್ಲುಬಾಣಗಳ ತೊಟ್ಟು ಮದುವೆಯ ಚಪ್ಪರಕ್ಕೆ ಬಂದು ಅವರತ್ತೆಯ ಎದೆಗೆ ಬಾಣ ಹೊಡೆಯುತ್ತಾನೆ. ಅವಳು ಸೋತು ಹೋಗಿ 'ನೆತ್ಯಗಳು ಚಾಕ ಇರಿಯಪ್ಪ ನಾರೀಂದ್ರ ಮಗಳ ಕೊಟ್ಟು ಲಗ್ನ ಮಾಡುತೀನಿ' ಎನ್ನುವ ಸ್ಥಿತಿಗೆ ಬರುತ್ತಾಳೆ. ಇಲ್ಲಿ ಪುರುಷ ದೌರ್ಜನ್ಯ ದೃಶ್ಯವನ್ನು ಕಾಣಬಹುದು. ಒಬ್ಬ ಸ್ವಂತ ಅತ್ತೆಯೆನ್ನದೆ ಅವಳ ಮೇಲೆ ಬಾಣ ಪ್ರಯೋಗ ಮಾಡಿರುವಂತಹದ್ದು. ಅದೇ ಸ್ಥಿತಿ ಮಾವನದು ಕೂಡ ಆಗುತ್ತದೆ. ಕೊನೆಗೆ ಇಬ್ಬರನ್ನೂ ಕ್ಷಮಿಸಿ ಬದುಕಿಸಿ ಅವರ ಮಗಳನ್ನು ಮದುವೆಯಾಗುತ್ತಾನೆ.

ಇತ್ತ ತನ್ನ ತಾಯಿಗೆ ಈ ಮದುವೆಯ ಸನ್ನಿವೇಶ ತಿಳಿಯುತ್ತಿದ್ದಂತೆ ಅವಳಿಗೆ ಎಲ್ಲಿಲ್ಲದ ಸಂತೋಷ ಹರ್ಷ ಉಕ್ಕುತ್ತದೆ. ನಂತರ ತನ್ನ ಮಗನ ಪರಾಕ್ರಮವನ್ನು ಒಪ್ಪಿಕೊಂಡಾಡುತ್ತಾಳೆ.

ಜನಪದ ಸಾಹಿತ್ಯದಲ್ಲಿ ಕಥನಕಾವ್ಯಗಳು ವಿಸ್ತಾರವಾದವು ಹಾಗೂ ಸಮೃದ್ಧವಾದವು. ಹೆಸರೇ ಸೂಚಿಸುವಂತೆ ಕಥೆಗೆ ಇಲ್ಲಿ ಹೆಚ್ಚು ಪ್ರಾಧಾನ್ಯತೆ. ಕಥನಗೀತೆಗಳಲ್ಲಿ ಕವಿಯು ಕಾವ್ಯದ ಹೊರಗೆ ನಿಂತು ಪಾತ್ರಗಳ ಮುಖಾಂತರ ಕಥೆಯನ್ನು ಹಾಡುತ್ತಾ ಉದ್ದಕ್ಕೂ ಬೆಳೆಸುತ್ತಾ ಹೋಗುತ್ತಾನೆ. ಕಥೆಯು ಘಟನೆಯಿಂದ ಘಟನೆಗೆ, ಸನ್ನಿವೇಶದಿಂದ ಸನ್ನಿವೇಶಕ್ಕೆ ನಿರರ್ಗಳವಾಗಿ ಹರಿಯುತ್ತಾ ಹೋಗುತ್ತದೆ. ಬದುಕನ್ನು ತಳಹದಿಯನ್ನಾಗಿಸಿಕೊಂಡು ಅನುಭವದ ಸಂಗತಿಗಳಿಗೆ ಹೆಚ್ಚು ಒತ್ತುಕೊಟ್ಟು ಸೃಷ್ಟಿಯಾಗಿರುವ ಜನಪದ ಕಥನಕಾವ್ಯಗಳು ಬಹುಸಂಕೀರ್ಣವಾದ, ವೈವಿಧ್ಯತೆಯ ವೈಭವದಿಂದ ಬೆರಗುಗೊಳಿಸುತ್ತವೆ. ಬದುಕಿನ ಕ್ರೂರ ಸತ್ಯಗಳನ್ನು ಆಧರಿಸಿ ಹುಟ್ಟಿಕೊಂಡ ಇಂತಹ ರಚನೆಗಳಲ್ಲಿ ತ್ಯಾಗ, ಪ್ರೇಮ, ಸಾಹಸ, ಬಲಿದಾನ, ಛಲ, ದ್ವೇಷ, ನೋವು-ನಲಿವು ಮನುಷ್ಯನ ದೌರ್ಬಲ್ಯಗಳು ಹೀಗೆ ಸಮಾಜದ ಮೂಲಾನುಭವವೇ ಇವುಗಳ ಮುಖ್ಯ ಸಾಮಾಗ್ರಿಯಾಗಿರುತ್ತದೆ. ಬದುಕಿನ ಸಂಭ್ರಮದ ಕ್ಷಣಗಳಿಗಿಂತ ನೋವಿನ ಕ್ಷಣಗಳೇ ಹೆಚ್ಚು ಮೂರ್ತಿ ರೂಪ ತಳೆಯುವುದನ್ನು ಕಥನಗೀತೆಗಳು ಸಾದರಪಡಿಸುತ್ತವೆ. ಕಥನಗೀತೆಗಳಲ್ಲಿ ಕಂಡುಬರುವ ನಾಯಕಿಯರು ತಮ್ಮದಲ್ಲದ ತಪ್ಪಿಗಾಗಿ, ಪುರುಷ ಪ್ರಧಾನ ವ್ಯವಸ್ಥೆಯ ಶೋಷಣೆ, ದಬ್ಬಾಳಿಕೆಗಳಿಗೊಳಗಾಗಿ ಗೋಳಿಯ ಆಳಕ್ಕಿಳಿಯುವುದು ವಿಧಿಯ ಒಳಸಂಚುಗಳಿಗೊಳಗಾಗಿ ದಾರುಣವಾದ ಯಾತನೆಗಳಿಗೀಡಾಗುವುದು ಸಹಜವಾಗಿ ಪರಿಣಾಮಕಾರಿಯಾಗಿ ಮೂಡಿ ಬಂದಿರುತ್ತದೆ. ನಾಯಕಿಯರ ತ್ಯಾಗ, ಬಲಿದಾನ, ನಿಷ್ಠೆ, ಆದರ್ಶಗಳು ಜನಪದರ ಮನಸ್ಸನ್ನು ಕಲಕುತ್ತವೆ. ವಸ್ತುವಿನ ಸಹಜಯಿಂದಾಗಿ ಬಹುಕಾಲದವರೆಗೆ ಕೇಳುಗರ ಮನಸ್ಸಿನಲ್ಲಿ ನಿಲ್ಲುತ್ತವೆ. ಗಂಭೀರ ಪರಿಣಾಮವನ್ನುಂಟು ಮಾಡುತ್ತವೆ.

ಕಾಳೇಗೌಡ ನಾಗವಾರ ಸಂಗ್ರಹಿಸಿರುವ ೧೫ ಕಥನಗೀತೆಗಳು ವೈವಿಧ್ಯಮಯ ವಸ್ತುಸಂಗತಿಯನ್ನು ಒಳಗೊಂಡಿವೆ. ಚರಿತ್ರೆ, ಪುರಾಣ, ಸಾಮಾಜಿಕ ಸಂಗತಿಗಳು ಇಲ್ಲಿನ ಕಾವ್ಯಗಳಲ್ಲಿ ಹಾಸುಹೊಕ್ಕಾಗಿವೆ. ಹೆಂಡತಿಯ ಶೀಲವನ್ನು ಶಂಕಿಸಿ ಪೂರ್ವಾಪರ ವಿವೇಚಿಸದೆ ದಂಡಿನಿಂದ ಹಿಂತಿರುಗಿ ಬಂದ ಗಂಡ ಕೆಂಡದರಾಯ ಕೈಹಿಡಿದ ಮಡದಿಯನ್ನು ತುಂಡರಿಸಿ ಚೆಲ್ಲುವುದು ಪುರುಷನ ಮನಃಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಆಗದವರ ಚಾಡಿ ಮಾತುಗಳು ಕೈಹಿಡಿದ ಹೆಂಡಿರ ಸಾವಿಗೆ ಕಾರಣವಾಗುತ್ತದೆ. ಇಷ್ಟಾಗಿಯೂ ಮಡದಿ ಜಾಗರದ ಹೆಣ್ಣು ಪಾತಿವ್ರತ್ಯ ಮಹಿಮೆಯಿಂದ ಸೊಸೆಯ ಪರವಾಗಿ ನಿಲ್ಲುವುದು ಈ ಕಾವ್ಯದಲ್ಲಿ ಮುಖ್ಯವೆನಿಸುತ್ತದೆ. ಮಗ ಮುನಿದು ನಿಂತರೂ ತಾಯಿ ಬುದ್ಧಿವಾದ ಹೇಳುವುದು ಮಗನು ಪಶ್ಚಾತ್ತಾಪ ಪಡುವುದು, ದುರಂತಕ್ಕೊಳಗಾಗಿದ್ದರೂ ತುಂಬಿ ತುಳುಕವ ಸೊಸೆಯ ಮುಗ್ಧತೆ ಇತ್ಯಾದಿ ಅಂಶಗಳೆಲ್ಲವೂ ಕಥನಗೀತೆಯನ್ನು ಉದ್ದಕ್ಕೂ ಜೀವಂತವಾಗಿಸುತ್ತವೆ.

ದನಗಾಹಿ ಗೊಲ್ಲರ ಹುಡುಗ ತನ್ನ ಮೋಹ ಜಾಲಕ್ಕೆ ಒಳಗಾಗಲಿಲ್ಲವೆಂದು ಊರ ಗೌಡರ ಮಗಳು ಅವನ ಮೇಲೆ ಇಲ್ಲಸಲ್ಲದ ಚಾಡಿ ಮಾತುಗಳನ್ನು ಹೇಳಿ ತಂದೆಯಿಂದ ಅವನನ್ನು ಕೊಲ್ಲಿಸುತ್ತಾಳೆ. ಆಗ ಆ ಹುಡುಗನ ನೆಚ್ಚಿನ ಕಾಳುನಾಯಿ, ಜೂಲುನಾಯಿಗಳು ದನಗಳೊಡನೆ

ಸೇರಿಕೊಂಡು ಗೌಡರ ಮಗಳನ್ನು ಕಚ್ಚಿ ಸಾಯಿಸುತ್ತವೆ. ನಂತರ ತಮ್ಮ ಒಡೆಯನನ್ನು ಬದುಕಿಸಿಕೊಂಡ ಕಥೆಯೇ ಬಯಲು ಸೀಮೆಗೌಡನ ಮಗಳ ಕಥನಗೀತೆಯ ವಸ್ತು.

ಮದುವೆಯಾದ ತಾರುಣ್ಯದಲ್ಲಿಯೇ ಗಂಡ ರಣರಂಗಕ್ಕೆ ಹೋಗಿ ಮಡಿಯಲು ಬಾಲವಿಧವೆಯಾಗಿ ರೋಧಿಸುತ್ತ ಕೆಂಡಕೊಂಡವಾಗುವ ವಡ್ಡಗೆರೆ ನಾಗಮ್ಮನ ಕಥೆಯು ನಾಡಿನಾದ್ಯಂತ ಹಲವಾರು ಪಾಠಾಂತರಗಳಲ್ಲಿ ಲಭ್ಯವಿದೆ. ಗಂಡಂದಿರ ಅಕಾಲ ಮರಣಕ್ಕೆ ಬಲಿಯಾದ ಈ ತೆರನ 'ಮಹಾಸತಿ' ಯರುಗಳು ಸ್ವ-ಇಚ್ಛೆಯಿಂದ ಅಗ್ನಿಪ್ರವೇಶ ಮಾಡಿರುವ ಘಟನೆಗಳು ನಾಡಿನ ನಾನಾ ಕಡೆಗಳಲ್ಲಿ ಕಂಡು ಬರುತ್ತವೆ. ಅಂತಹ ದುರ್ಘಟನೆಯೊಂದನ್ನು ವಸ್ತುವಾಗಿಸಿಕೊಂಡ ಈ ಲಾವಣಿಯ ಮೊದಲ ಭಾಗದಲ್ಲಿ ಬರುವ, ಅರಳಿದ ಮನಸ್ಸಿನಿಂದ ಎಲ್ಲರೂ ಸೇರಿ ನಡೆಸುವ ಅಕ್ಕನಾಗುವಿನ ಮದುವೆ. ಈರಣ್ಣನ ಮರಣ ಹಾಗೂ ಕಟ್ಟಿಕೊಂಡ ಗಂಡನೊನೆ ಸುಖವನ್ನೇ ಕಾಣದೆ ಅಗ್ನಿಗಾಹುತಿಯಾಗುವ ನಾಯಕಿಯ ಧಾರಕಾರವಾಗಿ ಹರಿಯುವ ಕರುಳು ಕಿತ್ತಿರುವ ರೋಧನ. ಇವು ಜೀವಂತ ಚಿತ್ರಗಳಾಗಿ ವಡ್ಡಗೆರೆ ನಾಗಮ್ಮ ಲಾವಣೆಯ ಘನತೆಯನ್ನು ಹೆಚ್ಚಿಸಿವೆ (ಕಾಳೇಗೌಡ ನಾಗವಾರ).

ಹುಟ್ಟಿನಿಂದಲೇ ಬಂಜೆ ತಾನು ತುಳಿಯುವ ಧರೆ ಬಂಜೆಯಾಗುತ್ತದೆ. ಕೆರೆ ಬತ್ತುತ್ತದೆಂದು ಹಾದಿ ಬೀದಿಯ ಅತೀವ ತಿರಸ್ಕಾರಕ್ಕೊಳಗಾಗಿ, ತಾನಿಳಿದ ಕೊಳದ ನೀರೂ ಹಿಂದು ಹಿಂದಕ್ಕೆ ಸರಿಯಲಾಗಿ ಕಾಲವೇ ಕನಿಕರಗೊಳ್ಳುವಂತೆ ರೋಧಿಸಿದಾಗ ಶಿವ-ಪಾರ್ವತಿಯರು ಪ್ರತ್ಯಕ್ಷರಾಗಿ, ಅವರ ವರದಿಂದ ಸಂತಾನ ಭಾಗ್ಯ ಪಡೆದ ಬಂಜೆ ಹೊನ್ನಮ್ಮನ ಕತೆಯನ್ನು ನಾಡಿನಾದ್ಯಂತ ಹೆಂಗಸರು ಹೆಚ್ಚಾಗಿ ಹಾಡುತ್ತಾರೆ. ಬಂಜೆತನ ಹೆಣ್ಣಿಗೆ ಅಂಟಿದ ಶಾಪ. ಈಗ ಹುಟ್ಟಿ ಈಗಲೇ ಸತ್ತರೂ ಚಿಂತೆಯಿಲ್ಲ. ಮಗು ಒಂದನ್ನು ಕೊಡು. ಬಂಜೆಂಬ ಶಬ್ದ ಹೊರಲಾರೆ ಎನ್ನುವ ಹೆಣ್ಣಿನ ಅಳಲು ಬಂಜೆ ಹೊನ್ನಮ್ಮನ ಕಥನಗೀತೆಯಲ್ಲಿ ಪರಿಣಾಮಕಾರಿಯಾಗಿ ಪಡಿಮೂಡಿದೆ.

ಗಂಡ ರಂಗಯ್ಯ ದಂಡಿಗೆ ಹೋಗಿದ್ದು ಅತ್ತೆನಾದಿನಿಯರ ಕಿರುಕುಳ ತಡೆಯಲಾಗದೆ, ಮೈದುನನಿಗೆ ಬಸಿರಾದಳೆಂಬ ಅಪಮಾನವನ್ನು ಸಹಿಸಲಾಗದೆ ಜೀವಂತವಾಗಿ ನರಳುತ್ತಾ ಬೇಯುತ್ತಿದ್ದ ಶಿವ-ಪಾರ್ವತಿಯರ ಇಚ್ಛೆಯಂತೆ ಅರಣ್ಯದ ನಡುವಿನ ಅರಮನೆಯಲ್ಲಿದ್ದುಕೊಂಡು ದಿನ ತಳ್ಳುತ್ತಿರುವಾಗ ದಂಡಿನಲ್ಲಿದ್ದ ಪತಿರಾಯನಿಗೆ ಕೆಟ್ಟಕನಸು ಬಿದ್ದು ಊರಿಗೆ ಓಡೋಡಿ ಬರುತ್ತಾನೆ. ಬಂದಾದ ನಂತರ ತನ್ನ ತಾಯಿಯನ್ನು ತನ್ನ ಮಡದಿಯ ಸುಳಿವು ಕಾಣದಿದ್ದಾಗ ಚಡಪಡಿಸುತ್ತಾ ಕೇಳುತ್ತಾನೆ. ತಾಯಿಯಿಂದ ಸಮರ್ಪಕವಾದ ಉತ್ತರ ಸಿಗದೆ ಬಳೆಗಾರನ ವೇಷದಲ್ಲಿ ಊರೂರು ತಿರುಗುವಾಗ ತಾನು ತನ್ನ ಹೆಂಡತಿಗೆ ಹಿಂದೆ ಕೊಟ್ಟಿದ್ದ ಉಂಗುರದ ಗುರುತಿನಿಂದ ಮಡದಿಯನ್ನು ಗುರುತಿಸಿದಾಗ ಪತಿಯನ್ನು ಮತ್ತೆ ಸ್ವೀಕರಿಸಿದ ಜಾಗಲೆಯ ಕತೆ ಅತ್ಯಂತ ರಮ್ಯವಾದುದು. ಪುರಾಣ ನಾರಿಯರಂತೆ ಪಾವಿವ್ರತ್ಯವನ್ನು ಆದರ್ಶವನ್ನಾಗಿಸಿಕೊಂಡು ಎಂತಹ ಕಷ್ಟನಿಷ್ಠುರಗಳು ಅಪಮಾನಗಳ ನರಕದಲ್ಲಿ ಬೇಯುತ್ತಿದ್ದಾಗ್ಯೂ ಸಹ ಎದೆಗುಂದದೆ ತನ್ನ ಸೀತವ್ವನನ್ನು ಕಾಯ್ದುಕೊಂಡು ಒಂದು ಸಾಬೀತುಪಡಿಸಿದ ಹೆಣ್ಣು ಜಾಗಲೆ.

ಗಂಡುಳ್ಳ ಗರತಿ ಕಡುಚಲುವೆ ಒಕ್ಕಲಗಿತ್ತಿ ದೊರೆ ಮಗನ ಅಷ್ಟೈಶ್ವರ್ಯಗಳ ಆಸೆ ಆಮಿಷಗಳಿಗೆ ಒಳಗಾಗದೆ, ಕಡೆಗೆ ತನ್ನನ್ನು ನೆನೆದರೂ ಸಾಕೆಂದು ಬೇಡುವ ದೊರೆ ಮಗನ ದೈನೀಸಿ ಕೋರಿಕೆಗೂ ಜಗ್ಗದ ಒರಟು ಬಟ್ಟೆಯ ಹೊಲ ಉಳುವ ಒಕ್ಕಲು ಮಗನೇ ತನ್ನ ಸರ್ವಸ್ವವೆಂದು ನಂಬಿದ ಒಕ್ಕಲುಗಿತ್ತಿಯ ಶ್ರದ್ಧೆ ಪತಿನಿಷ್ಠೆ ಮಾನಸಿಕ ದೃಢತೆಗಳೇ ವಿಷಯವಾಗುಳ್ಳ ಒಬ್ಬರಿಟ್ಟುಡುಗೆ ಕಥನಗೀತೆಯು ಸತೀತ್ವವನ್ನು ಮೆರೆಯುವ ಸತ್ವಪೂರ್ಣವಾದ ಭಾವ ಭಾಷೆಗಳಲ್ಲಿ ಮೂಡಿ ನಿಂತಿದೆ. ದಂಡಿನಲ್ಲಿದ್ದವನ ಹೆಂಡತಿ ಕೆರೆ ನೀರಿಗೆ ಹೋದಾಗ ಸಲುಗೆಯಿಂದ ಮಾತನಾಡಿಸಿದ್ದನ್ನು ಅವಳು ದಂಡಿನಲ್ಲಿದ್ದ ಗಂಡನಿಗೆ ಓಲೆ ಬರೆದು ತಿಳಿಸುತ್ತಾಳೆ. ದಂಡಿನಿಂದ ಹಿಂತುರಿಗಿ ಬಂದ ಗಂಡ ವಿಚಾರಿಸಿದಾಗ ತಂಗಿಯಲ್ಲಿ ಸಲಿಗೆ ಬೆಳೆಸಿದರೆ ತಪ್ಪೇನೆಂದು ಜಾಣತನದಿಂದ ಉತ್ತರ ನೀಡಿದ ಮುತ್ತಿನ ಶೆಟ್ಟಿಯ ಕಥೆ.

ಮೇಲಿನ ಎಲ್ಲಾ ಕಥನ ಕಾವ್ಯಗಳಲ್ಲಿಯೂ ಮನುಷ್ಯನ ಬದುಕಿನಲ್ಲಿ ದಿನನಿತ್ಯ ಕಾಣಿಸಿಕೊಳ್ಳುವ ಸಮಸ್ತ ಬಗೆಯ ವ್ಯವಹಾರಗಳು ಅಭಿವ್ಯಕ್ತಿ ಪಡೆದಿರುತ್ತವೆ. ಪ್ರೇಮ, ತ್ಯಾಗ, ಮಾತ್ಸರ್ಯ, ಸಾಹಸ, ಛಲ, ದ್ವೇಷ, ಬಂಜೆತನ, ಹೆಣ್ಣಿನ ಪಾತಿವ್ರತ್ಯ ಮನುಷ್ಯನ ಜಿಪುಣತನ ಇತ್ಯಾದಿಗಳ ನಡುವೆಯೂ ಮನುಷ್ಯ ಆದರ್ಶಪ್ರಾಯವಾದ ಗುಣಗಳನ್ನು ಉಳಿಸಿಕೊಂಡು ಬರಬಲ್ಲ ನೈತಿಕ ಮೌಲ್ಯಗಳನ್ನು ಎತ್ತಿ ಹಿಡಿಯಬಲ್ಲನೆಂಬ ಮೌಲ್ಯ ಅನುಸರಣಿಯ ಸಂದೇಶವೂ ಸಹ ಈ ಕಾವ್ಯಗಳಲ್ಲಿದೆ. ಪರಸ್ತ್ರೀ, ಸಿರಿವಂತನ, ಅಧಿಕಾರಸ್ಥನ, ಮಗಳಾದರೂ ತಾನಾಗಿ ಮೈಮೇಲೆ ಬಂದರೂ ಅವಳ ಶೀಲ ಭಂಗ ಮಾಡಬಾರದೆನ್ನುವ ದನಗಾಹಿಯ ಶೀಲ ವೈಭವ, ಗಂಡು ಕಡು ಬಡವನಾದರೂ ಸರಿಯೆ, ದೊರೆಯ ಮಗನ ಪ್ರಲೋಭನಕ್ಕೊಳಗಾಗದೆ ಪತಿನಿಷ್ಠೆಯನ್ನು ಮೆರೆದ ಒಕ್ಕಲುಗಿತ್ತಿಯ ಪಾತಿವ್ರತ್ಯ, ಕೆರೆಗೆಹಾರವಾಗಿರುವ, ಶೀಲಶಂಕೆಗೆ ಒಳಗಾದ, ಹೀಗೆ ಹತ್ತು ಹಲವು ಅಂಶಗಳನ್ನು ವಸ್ತುಗಳನ್ನಾಗಿಸಿ ಕೊಂಡು ರಚನೆಯಾಗಿರುವ ಕಥನಗೀತೆಗಳು ಬರೆ ಗೀತೆಗಳಾಗಿರದೆ ನಿಜ ಜೀವನದಲ್ಲಿ ಅಳವಡಿಕೆ ಯಾಗುವಂತಹ ಅಂಶಗಳನ್ನು ಸಮಾಜಕ್ಕೆ ಸಾರುತ್ತವೆ. ಪಾತಿವ್ರತ್ಯ ಧರ್ಮ ಕಥನಗೀತೆಗಳಲ್ಲಿ ಮೂರ್ತತ್ವ ಪಡೆದಿವೆ.

**ಅಡಿಟಿಪ್ಪಣಿಗಳು**

೧. ಜೀ.ಶಂ. ಪರಮಶಿವಯ್ಯ, ಜನಪದ ಖಂಡಕಾವ್ಯಗಳು 'ನಾಗವ್ವ' ಪು. ೩೫

೨. ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೩೫

೩. ಜೀ.ಶಂ. ಪರಮಶಿವಯ್ಯ, ಜನಪದ ಖಂಡಕಾವ್ಯಗಳು 'ಹಿರಿದಿಮ್ಮವ್ವ' ಪು. ೮೩

೪. ಕಾಳೇಗೌಡ ನಾಗವಾರ, ಬಯಲು ಸೀಮೆಯ ಲಾವಣಿಗಳು 'ವಡ್ಡಗೆರೆ ನಾಗಮ್ಮ' ಪ್ರಸ್ತಾವನೆ, ಪು. XXIII

೫. ಅದೇ ಪು. ೮೫

೬. ಕೃಷ್ಣಮೂರ್ತಿ ಹನೂರು, ಕತ್ತಾಲದಾರಿ ದೂರ 'ಮಹಾಸತಿ ವೀರತಿಮ್ಮವ್ವ' ಪು. ೪೧

೭. ಅದೇ ಪು. ೩೮

೮. ಅದೇ ಪು. ೩೯

೯. ಅದೇ 'ಮಹಾಸತಿ ತಾಡಿ ನಾಗಮ್ಮ' ಪು. ೪೩-೪೪

೧೦. ಅದೇ ಪು. ೮೫

೧೧. ಅದೇ 'ಮಹಾಸತಿ ಕಾಟವ್ವ' ಪು. ೯೬

೧೨. ಅದೇ ಪು. ೯೨

೧೩. ಕೃಷ್ಣಮೂರ್ತಿ ಹನೂರು, ಕತ್ತಾಲದಾರಿ ದೂರ 'ಸತಿ ಚೆನ್ನಮ್ಮ' ಪು. ೩೩೭

೧೪. ಕ.ರಾ.ಕೃ, ಹಣತೆ ಉರಿಯುತಿದೆ, ಪು. ೨೬೦

೧೫. ಜೀ.ಶಂ. ಪರಮಶಿವಯ್ಯ, ಜನಪದ ಖಂಡಕಾವ್ಯಗಳು, ಪು. ೧೮

೧೬. ಅದೇ ಈರೋಬಿ, ಪು. ೧೮

೧೭. ಅದೇ ಪು. ೧೯

೧೮. ಅದೇ ಪು. ೧೨೧

೧೯. ಅದೇ ಪು. ೧೮

೨೦. ಅದೇ ಪು. ೧೯

೨೧. ಅದೇ ಪು. ೨೧

೨೨. ಶಿವನಂಜಯ್ಯ ಡಿ., ಜನಪದ ಸಾಹಿತ್ಯದಲ್ಲಿ ಬಂಡಾಯದ ನೆಲೆಗಳು, ಪು. ೧೧೭

೨೩. ಖಂಡೋಬಾ ಪಿ.ಕೆ., ಮುತ್ತಿನಹಾರ, ಜನಪದ ಕಥನಗೀತೆಗಳು, ಪು. ೩೫

೨೪. ದೇವೇಂದ್ರಕುಮಾರ ಸಿ. ಹಕಾರಿ, ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು. ೨೩೮-೨೩೯

೨೫. ಕಾಳೇಗೌಡ ನಾಗವಾರ, ಬೇಕಾದ ಸಂಗಾತಿ 'ಗುಣಸಾಗರಿ' ಪು. ೨೪೭

೨೬. ದೇವೇಂದ್ರಕುಮಾರ ಸಿ. ಹಕಾರಿ, ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು. ೨೭೩

೨೭. ಅದೇ ಪು. ೨೭೩

೨೮. ಜೀ.ಶಂ. ಪರಮಶಿವಯ್ಯ, ಜನಪದ ಖಂಡಕಾವ್ಯಗಳು, 'ಉತ್ತರದೇವಿ' ಪು. ೧೧

೨೯. ಅದೇ ಪು. ೧೪

೩೦. ದೇವೇಂದ್ರಕುಮಾರ ಸಿ. ಹಕಾರಿ, ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು. ೨೭೩

೩೧. ಅದೇ ಪು. ೨೭೪

೩೨. ಅದೇ ಪು. ೨೭೪

೩೩. ಅದೇ ಪು. ೨೭೫

೩೪. ಅದೇ ಪು. ೨೭೬

೩೫. ಕಾಳೇಗೌಡ ನಾಗವಾರ, ಬಯಲು ಸೀಮೆಯ ಲಾವಣಿಗಳು 'ವಡ್ಡಗೆರೆ ನಾಗಮ್ಮ' ಪ್ರಸ್ತಾವನೆ, ಪು. XXIV

೩೬. ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೯೪

೩೭. ಅದೇ ಪು. ೧೦೫

೩೮. ಅದೇ ಪು. ೧೦೬

೩೯. ಅದೇ ಪು. ೧೦೭

೪೦. ಕಾಳೇಗೌಡ ನಾಗವಾರ, ಬಯಲು ಸೀಮೆಯ ಲಾವಣಿಗಳು 'ವಡ್ಡಗೆರೆ ನಾಗಮ್ಮ' ಪ್ರಸ್ತಾವನೆ, ಪು. ೯೯

೪೧. ಅದೇ ಪು. ೧೦೪

೪೨. ಅದೇ ಪು. ೧೦೭

೪೩. ಕ.ರಾ.ಕೃ, ಜನಪದ ಕಥನಗೀತೆಗಳು, ಕಲಿಯುಗದ ಬಾಲೆ, ಪು. ೧೩೩

೪೪. ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೧೫

೪೫. ಅದೇ ಪು. ೪೫

೪೬. ಅದೇ ಪು. ೪೬

೪೭. ಅದೇ ಪು. ೫೬

೪೮. ಅದೇ ಪು. ೫೭

೪೯. ಅದೇ ಪು. ೫೭

೫೦. ಅದೇ ಪು. ೧೭೧

೫೧. ಕೃಷ್ಣಮೂರ್ತಿ ಹನೂರು, ಕತ್ತಾಲದಾರಿ ದೂರ 'ಕೆಂಚವ್ವ' ಪು. ೭೫

೫೨. ಲಿಂಗಯ್ಯ ಡಿ., ಜನಪದ ಕಥನ ಕಾವ್ಯಗಳು, 'ಮಲ್ಲಿಗೆ ಮಾದೇವಿ' ಪು. ೩

೫೩. ರಾಜಪ್ಪ ಟಿ.ಎಸ್., ಕೆರೆಹೊನ್ನಮ್ಮ ಮತ್ತು ಇತರ ಲಾವಣಿಗಳು 'ಕೆರೆಹೊನ್ನಮ್ಮ' ಪು. ೯೪

೫೪. ಕೃಷ್ಣಮೂರ್ತಿ ಹನೂರು, ಕತ್ತಾಲದಾರಿ ದೂರ 'ಧರಣಿಯಮ್ಮ' ಪು. ೧೭೫

೫೫. ಅದೇ ಪು. ೧೭೫

೫೬. ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೮೬

೫೭. ತಪಸ್ವಿಕುಮಾರ್ ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ ಜನಪದ ನಿತ್ಯ ಜೀವನಕ್ರಮ, ಪು. ೩೬-೩೭

೫೮. ಜೀ.ಶಂ. ಪರಮಶಿವಯ್ಯ, ಜನಪದ ಕಾವ್ಯಕಥೆಗಳು, ಪು. ೩೬೫

೫೯. ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೯೦

೬೦. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಕಾವ್ಯಪ್ರಕಾರಗಳು, ಪೌರಾಣಿಕ ಕಾವ್ಯಗಳು, ಪು. ೨೯೯-೩೦೦

೬೧. ಕ.ರಾ.ಕೃ, ಜನಪದ ಕಥನಗೀತೆಗಳು, ಗಂಗೆಗೌರಿ ಜಗಳ, ಪು. ೩೭೪

೬೨. ಜೀ.ಶಂ. ಪರಮಶಿವಯ್ಯ, ಜಾನಪದ ಕೆಲವು ಮುಖಗಳು, ಪು. ೧೪೯

೬೩. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಕಾವ್ಯಪ್ರಕಾರಗಳು, ದೈವಸಂಬಂಧಿ ಪ್ರಣಯ ಕಥೆಗಳು, ಪು. ೩೫೮

೬೪. ಜೀ.ಶಂ. ಪರಮಶಿವಯ್ಯ, ಜನಪದ ಕಾವ್ಯಕಥೆಗಳು, ಇಬ್ಬರಿಗ್ಗೊವ ಮಂಡಿಸ್ಯಾದ ಪು. ೪೧೦

೬೫. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಕಾವ್ಯಪ್ರಕಾರಗಳು, ದೈವಸಂಬಂಧಿ ಪ್ರಣಯ ಕಥೆಗಳು, ಪು. ೩೪೯

೬೬. ಅದೇ ಪು. ೩೬೩

೬೭. ಕಲ್ಯಾಣ ಸುಂದರಂ ಎಂ.ಕೆ., ಮುಸಲ್ಮಾನ್ ಮೀರಾ ನವನೀತ, ೧೯೫೮ ಡಿಸೆಂಬರ್ ಸಂಚಿಕೆ, ಉದ್ಧೃತ: ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ಪು. ೩೬೫

೬೮. ಅದೇ ಪು. ೩೬೪

೬೯. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯಪ್ರಕಾರಗಳು, ಪು. ೩೬೫

೭೦. Vedic Folklore, by V.S. Agarawala, Publication in Folklore, Vol-I, P. 4

೭೧. ಜೀ.ಶಂ. ಪರಮಶಿವಯ್ಯ, ಅವರ ನೆನೆದೇವು, ಪು. ೧೧

೭೨. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಕನ್ನಡ ನಾಡಿನ ಲಾವಣಿ ಸಾಂಗತ್ಯ ವಿಮರ್ಶೆ, ಪು.೦

೭೩. ಜೀ.ಶಂ. ಪರಮಶಿವಯ್ಯ, ಜನಪದ ಕಾವ್ಯಕಥೆಗಳು, ಪು. ೨೨೬

# ಸಮಾರೋಪ

ಜನಪದ ಸಾಹಿತ್ಯದಲ್ಲಿ, ಜನಪದ ಕಥನಗೀತೆಗಳು ಪರಿಪಕ್ವವಾದ ರಸಭರಿತ ಫಲಗಳಿದ್ದಂತೆ. ಒಂದೊಂದು ಕಥನಗೀತೆಯೂ ಒಂದೊಂದು ರಸಭರಿತ ಗೀತೆಯಾಗಿ ಹಬ್ಬಿನಿಂತು, ತನ್ನದೇಯಾದ ವರ್ಚಸನ್ನು ಬೀರಿದೆ. ಪರಶಿವನಿಂದ ಪಾಮರನವರೆಗೂ ಇಲ್ಲಿನ ಕಥಾನಾಯಕರು, ಕಥಾನಾಯಕಿಯರು ಮೆರೆದಿದ್ದಾರೆ. ಮಹಿಳಾ ಪ್ರಧಾನ ಪಾತ್ರಗಳನ್ನೇ ಪ್ರಮುಖವಾಗುಳ್ಳ ಕಥನಗೀತೆಗಳು ಇಲ್ಲಿ ಹೆಚ್ಚಾಗಿವೆ. ಕಾಡಸಿದ್ಧಮ್ಮ, ನೀಲವೇಣಿ. ಬಾಲನಾಗಮ್ಮ, ನೀಲಕಂಠರೂಪಾವತಿ, ಉತ್ತರದೇವಿ ಗುಣಸಾಗರಿ, ಜಾಗಲೆ, ಕಲಿಯುಗದ ಬಾಲೆ, ಬಯಲುಸೀಮೆಯ ಗೌಡನ ಮಗಳು, ಈರೋಬಿ, ಭಾಗೀರಥಿ, ಹುಳಿಯಾರು ಕೆಂಚಮ್ಮ, ಕುಂತಿ-ದ್ರೌಪದಿ ಹೀಗೆ ಅನೇಕ ಸ್ತ್ರೀ ಪಾತ್ರಗಳು ಕಂಡುಬರುತ್ತವೆ.

ಜಾನಪದವು ಜನಪದ ಸಮಾಜದಲ್ಲಿ ಅನೇಕ ನಿಟ್ಟಿನಲ್ಲಿ ಕ್ರಿಯಾಶೀಲವಾಗಿರುತ್ತದೆ. ಜಾನಪದಕ್ಕೆ ಸಂಬಂಧಿಸಿದ ಅನೇಕ ವಿವರಗಳನ್ನು ಜನಪದ ಸಾಹಿತ್ಯಕ ಪ್ರಕಾರಗಳು ಕಟ್ಟಿಕೊಡುತ್ತವೆ. ಅಂತವುಗಳಲ್ಲಿ ಕಥನಗೀತೆಯು ಒಂದು. ಇದರಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ಅಭ್ಯಸಿಸಿದಾಗ ಅವರ ಜೀವನದ ರೀತಿ ನೀತಿ, ಸುಖ-ದುಃಖ ಹಾಗೂ ಅವರು ಎದುರಿಸಿದ ಬಿಕ್ಕಟ್ಟುಗಳೆಲ್ಲದರ ಪರಿಚಯವಾಗುತ್ತದೆ. ಈ ಮಹಿಳೆಯರು ಜೀವನದ ಒಂದೊಂದು ಮೌಲ್ಯವನ್ನು ಪ್ರತಿಪಾದಿಸಿ ಹೋರಾಟಗಾರ್ತಿಯರಾಗಿ ಕೆಲವೊಮ್ಮೆ ಕಂಡುಬರುತ್ತಾರೆ. ಈ ಮೌಲ್ಯಗಳು ಯಾವುದೇ ಜನಾಂಗದ ಸಾಂಸ್ಕೃತಿಕ ಬೆಳವಣಿಗೆಯನ್ನು ಸೂಚಿಸಲು ಸಹಾಯಕವಾಗಿವೆ.

ಕಥನಗೀತೆಗಳಲ್ಲಿನ ಕಥೆ ಭೂಲೋಕ, ದೇವಲೋಕ, ರಾಕ್ಷಸಲೋಕಕ್ಕೆ ಸಂಬಂಧಿಸಿವೆ. ಇಲ್ಲಿನ ಕೇಂದ್ರವ್ಯಕ್ತಿ ಮಹಿಳೆಯಾಗಿದ್ದಾಳೆ. ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಇಲ್ಲೆಲ್ಲಾ ಕಂಡುಬಂದರೂ, ವ್ಯವಸ್ಥೆಯ ವಿರುದ್ಧ ಹೋರಾಡುವ ಮಹಿಳೆಯರನ್ನು ಗುರುತಿಸಬಹುದು. ಈ ಮಹಿಳೆಯರ ಹೋರಾಟವು ಫಲದಾಯಕವಾಗದಿದ್ದರೂ, ಹೋರಾಡುವ ಛಲ ಅವರಲ್ಲಿರುವುದು ಕಂಡು ಬಂದಿದೆ.

ಜನಪದ ಮಹಿಳೆಯರು ಅನಾಗರೀಕರು, ಮುಗ್ಧರು, ಸಹನಶೀಲರು ಎಂದು ಅಂದಿನಿಂದ ಇಂದಿನವರೆಗೂ ಹೇಳುತ್ತಾ ಬಂದಿದ್ದೇವೆ. ಆದರೆ ಅಲ್ಲಿರುವ ದಿಟ್ಟತನದ ಜಾಗೃತಿ, ಜೀವನವನ್ನು ಕಂಡ, ಪ್ರೀತಿಸಿದ ಅರ್ಥೈಸಿಕೊಂಡಿರುವ ರೀತಿ ಹಾಗೆ ಸಮಸ್ಯೆಗಳು ಎದುರಾದಾಗ ಬದುಕಿನ ವಿಷಮ ಸನ್ನಿವೇಷಗಳಲ್ಲಿ ತೆಗೆದುಕೊಂಡ ನಿರ್ಧಾರಗಳು, ಎಲ್ಲಾ ಕಾಲದ ಜನರಿಗೂ ಮಾರ್ಗದರ್ಶಕ ವಾಗಬಲ್ಲವು. ಅವರ ಪರಿಪಕ್ವವಾದ ಮನಸ್ಸು ವಾಸ್ತವತೆಯ ದೃಷ್ಟಿಕೋನಕ್ಕೆ ಸಾಕ್ಷಿಯಾಗಿವೆ. ಅಂತವುಗಳನ್ನು ನಾವು ಇಲ್ಲಿ ಉದಾಹರಣೆಗೆ ನೋಡುವುದಾದರೆ ಅತ್ತೆ–ಸೊಸೆಯ ಜಗಳ, ಅತ್ತಿಗೆ ನಾದಿನಿಯರ ತಿಳಿಗೇಡಿತನ, ಸವತಿ ಮಾತ್ಸರ್ಯ, ಗುರುವಿನ ಉಪಟಳ, ಮಾಯಾವಿಯಿಂದ ಸ್ತ್ರೀ ಅಪಹರಣ, ಅನುಮಾನ, ಬಂಜೆತನ, ದೌರ್ಜನ್ಯ, ದರ್ಪ, ವಿಕೃತ ಕಾಮ, ವೈಧವ್ಯ, ಹೆಣ್ಣಿನ ಬಲಿ, ಸಹಗಮನ ಪಾತಿವ್ರತ್ಯ, ಬಡತನ ಹಾಗೂ ಕಷ್ಟನಷ್ಟಗಳು ಈ ಎಲ್ಲಾ ಅಂಶಗಳು ದೇಶ ಕಾಲವನ್ನು ಮೀರಿ ಎಲ್ಲ ಕಡೆಯಲ್ಲೂ ಕಂಡುಬರುತ್ತಿವೆ. ಇದಕ್ಕೆ ಮುಖ್ಯ ಕಾರಣ ಯಾವ ದೇಶದಲ್ಲಿಯೇ ಆಗಲಿ, ಯಾವ ಜನಾಂಗದಲ್ಲಿಯೇ ಆಗಲಿ ಅದರ ಸುತ್ತಮುತ್ತಲಿನ ವಾತಾವರಣದ ಮೇಲಿಂದ ಮಾನವನ ಸಂಸ್ಕಾರಗಳು ಮಾತ್ರ ಬದಲಾಗಬಹುದೇ ವಿನಹ ಅವರ ಮನೋಭಾವನೆಗಳು ಎಲ್ಲಿದ್ದರೂ ಒಂದೇಯಾಗಿರುತ್ತವೆ.

ಕಥನಗೀತೆಗಳಲ್ಲಿ ಬರುವ ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳೆಲ್ಲಾ ಕತೆಗಾರನ ಭೂತ, ವರ್ತಮಾನ, ಭವಿಷ್ಯತ್ ಕಾಲಕ್ಕೆ ಸಂಬಂಧಿಸಿ ಅವನ ಹಿನ್ನಲೆಯಲ್ಲಿನ, ಕಳೆದುಹೋದ ತಲೆಮಾರುಗಳಲ್ಲಿ ಜೀವಂತವಾಗಿದ್ದು, ಈಗ ಹೇಳಿಕೊಳ್ಳುವುದಕ್ಕೆ ಬದುಕಿರಬಹುದು. ಇಂತಹ ಕಥನಗೀತೆಗಳನ್ನು ಸ್ತ್ರೀ ಪುರುಷರಿಬ್ಬರು ರಚಿಸಿ ಹಾಡಿದ್ದಾರೆ. ಸ್ತ್ರೀಯ ಬಗ್ಗೆ ಸ್ತ್ರೀಯರೇ ಹೆಚ್ಚು ಹಾಡಿರುವುದರಿಂದ, ಹೆಣ್ಣೊಬ್ಬಳ ಜೀವನದ ನೋವು ನಲಿವು ಹಾಗೂ ಅವಳ ಜೀವನದ ದೃಷ್ಟಿಕೋನಕ್ಕೆ ಅತ್ಯಂತ ತೀವ್ರವಾಗಿ, ನೈಜವಾಗಿ ಸ್ಪಂದಿಸಿರುವುದನ್ನು ಕಾಣಬಹುದು. ಹೀಗಾಗಿ ಕಥನಗೀತೆಯಲ್ಲಿ ಬರುವ ಜೀವನದ ಮೌಲ್ಯಗಳು ಸಾರ್ವಕಾಲಿಕವಾಗಿವೆ. ಉದಾಹರಣೆಗೆ ಸವತಿ ಮಾತ್ಸರ್ಯಕ್ಕೆ ಒಳಗಾದ, ಕಾಡಸಿದ್ದಮ್ಮ ಪುರುಷ ಪ್ರಧಾನ ಸಮಾಜದಲ್ಲಿದ್ದರೂ, ಅವಳನ್ನು ಶೋಷಿಸುವರು.

ಅವಳ ಗಂಡನ ಹಿರಿಯ ರಾಣಿಯರು. ಇದಕ್ಕೆ ಕಾರಣ ಕೈಹಿಡಿದ ಪತಿಯ ಪ್ರೀತಿ ಹಂಚಿ ಹೋದಾಗ ಹೆಣ್ಣು ಹೆಣ್ಣನ್ನು ಶೋಷಿಸುವುದು ಕಂಡುಬರುತ್ತಿದೆ. ಈ ಶೋಷಣೆಯ ಹಿನ್ನೆಲೆಯಲ್ಲಿ ಪುರುಷನ ಕೈವಾಡವಿದೆ ಎನ್ನಬಹುದು. ಅದೇನೆಂದರೆ ಪುರುಷನಾದವನು ಬಹುಪತ್ನಿತ್ವದ ಗೊಂದಲಕ್ಕೆ ಸಿಕ್ಕಿದಾಗ, ಇಂಥಹ ಸವತಿ ಮಾತ್ಸರಕ್ಕೆ ಎಡೆಮಾಡಿಕೊಟ್ಟಂತೆ ಆಗುತ್ತದೆ. ಈ ಸಮಸ್ಯೆ ದೇಶಕಾಲಕ್ಕೂ ಮೀರಿರುವ ಸಮಸ್ಯೆಯಾಗಿದೆ. ಈ ಸಮಸ್ಯೆ ದೇಶದ, ಸಮಾಜದ ಸಮಸ್ಯೆಯಾಗಿರದಿದ್ದರೂ ಕುಟುಂಬದ ಸಮಸ್ಯೆಯಾಗಿದೆ. ಇಂಥಹ ಸಮಸ್ಯೆ ಕುಟುಂಬದ ಎಲ್ಲಾ ವ್ಯಕ್ತಿಗಳ ಮೇಲೂ ಪರಿಣಾಮ ಬೀರುತ್ತಿವೆ ಎಂದರೆ ತಪ್ಪಾಗಲಾರದು. ಈ ಬಹುಪತ್ನಿತ್ವದ ಗೊಂದಲಕ್ಕೆ ಮಾನವರ ಹಾಗೆ ದೇವಾನುದೇವತೆಗಳು ಸಿಲುಕಿಕೊಂಡಿದ್ದಾರೆ ಎಂಬುದನ್ನು ಕಥನಗೀತೆಗಳ ಹಿನ್ನೆಲೆಯಲ್ಲಿ ಗುರುತಿಸ ಬಹುದು.

ಮಾಯಾವಿ, ಮಲೆಯಾಳದ ಕಪ್ಪು, ಮಾಯದ ಜಾಲ, ಬಾಲನಾಗಮ್ಮನ ಕಥೆ ಇವುಗಳನ್ನು ಕೇಂದ್ರವಾಗಿಟ್ಟುಕೊಂಡು ರಚಿತವಾದ ಕಥೆ, ಸುಂದರಿಯಾದ ಬಾಲನಾಗಮ್ಮಳ ಅಪಹರಣ ಮಾಯಾವಿಯಿಂದ ಆಗುತ್ತಿದೆ. ಈಗಲೂ ಇಂಥ ಅಪಹರಣಗಳನ್ನು ಇಂದಿನ ಕಾಲದಲ್ಲಿ ಕೇಳುತ್ತಿದ್ದೇವೆ, ನೋಡುತ್ತಿದ್ದೇವೆ. ಈಗಲೂ ಸಹ ಮಾಯ, ಮಂತ್ರ, ತಂತ್ರ, ಭಾನಾಮತಿ ಪ್ರಸಂಗ, ಕಣ್ಣುಕಟ್ಟುವ ಆಟ ಇವೆಲ್ಲಾ ಕಂಡುಬರುತ್ತವೆ, ಕೇಳಿಬರುತ್ತವೆ ಎಂದರೆ ತಪ್ಪಾಗಲಾರದು.

ಕೆಲವು ಕಥನಗೀತೆಗಳಲ್ಲಿ ಮಾನವ ಸಹಜವಾದ 'ಅನುಮಾನ' ಪ್ರವೃತ್ತಿ ಯನ್ನು ಗುರುತಿಸಬಹುದು. ಅಂತವುಗಳಲ್ಲಿ ನೀಲಕಂಠ ರೂಪಾವತಿ, ಗುಣಸಾಗರಿ ರೂಪಾವತಿಯ ಪತಿ ವ್ಯಾಪಾರಕ್ಕೆ ಹೋಗಿದ್ದಾಗ ಮಾರ್ಗಮಧ್ಯದಲ್ಲಿ ವ್ಯಾಪಾರ ನಿಲ್ಲಿಸಿ ರಾತ್ರೋ ರಾತ್ರಿ ಬಂದು ಹೆಂಡತಿಯನ್ನು ರಹಸ್ಯವಾಗಿ ಸೇರಿ ಹೋಗುತ್ತಾನೆ. ಮುಂದೆ ಅವಳು ಗಂಡನಿಂದಲೇ ಗರ್ಭಧರಿಸಿದರೂ, ಆ ಗರ್ಭ, ಅಧರ್ಮವೆಂದೂ. ಪತಿವ್ರತೆಯಾದ ರೂಪಾವತಿಯನ್ನು ಅವಮಾನಿಸಿ, ಅನುಮಾನಿಸಿ ಮನೆಯಿಂದ ಹೊರ ಹಾಕುತ್ತಾರೆ. ರೂಪಾವತಿಯ ಕಥಾಂಶವನ್ನು ಹೊಂದಿದ ಗುಣಸಾಗರಿಯ ಕಥೆಯೂ ಬರುತ್ತಿದೆ. ಪುರುಷ ಪ್ರಧಾನ ಸಮಾಜದಲ್ಲಿ ಕೈಹಿಡಿದ ಗಂಡ, ತನ್ನ ಪತ್ನಿಯನ್ನು ನೈತಿಕ ರೀತಿಯಲ್ಲಿ ಸೇರಿದ್ದರೂ, ಅನೈತಿಕ ರೂಪವನ್ನು ಕೊಡುವ ನಮ್ಮ ಇಂದಿನ ಸಮಾಜದ ಜನರು ನೀಲಕಂಠಾ, ರೂಪಾವತಿ, ಗುಣಸಾಗರಿ ಯಂತೆ ಇರುವ ಎಷ್ಟೋ ಮುಗ್ಧ ಹೆಣ್ಣುಮಕ್ಕಳ ಪಾತಿವ್ರತ್ಯಕ್ಕೆ ಆರೋಪವರಿಸಿ, ಅವರ ಮುಂದಿನ ಜೀವನಕ್ಕೆ ತೊಂದರೆ ಮಾಡುತ್ತಾರೆ ಎನ್ನುವುದು ಸತ್ಯದ ಸಂಗತಿಯಾಗಿದೆ. ನೀಲವೇಣಿಯ ಕಥನಗೀತೆಯಲ್ಲಿ ಗುರು ಶಿಷ್ಯಳನ್ನು ಕಾಮಿಸುವುದು ಕಂಡುಬರುತ್ತದೆ. ನಮ್ಮ ಭಾರತೀಯರು ಗುರುವನ್ನು ದೇವರೆಂದು ಕರೆದಿದ್ದಾರೆ. ಆದರೆ ಪಾಠ ಹೇಳಿಕೊಡುವ ಗುರುವೇ, ಶಿಷ್ಯಳ ಸೌಂದರ್ಯಕ್ಕೆ ಮೋಹಿತನಾಗಿ ತನ್ನ ಮಂಚಕ್ಕೆ ಕರೆದಾಗ, ದಿಟ್ಟಳಾದ ನೀಲವೇಣಿಯು ಆ ಗುರುವಿನಿಂದ ತಪ್ಪಿಸಿ ಕೊಳ್ಳುವ ಚತುರತೆ ಮೆಚ್ಚತಕ್ಕದ್ದೇ.

ಜನಪದ ಕಥನಗೀತೆಗಳಿಗೂ ಶಿಷ್ಟಕಥನಗೀತೆಗಳಿಗೂ ಇರುವಂತಹ ಅಂತರ್ ಸಂಬಂಧವನ್ನೂ ಸಹ ಗಮನಿಸಲಾಗಿದೆ. ಶಿಷ್ಟಸಾಹಿತ್ಯದ ಕಥನಗೀತೆಗಳಲ್ಲಿ ಇಲ್ಲದೇ ಇರುವಂತಹ ಅನೇಕ ಅಂಶಗಳು ನಮ್ಮ ಜನಪದರು ತಿಳಿಸಿ ಹೇಳಿದ್ದಾರೆ. ಕಥನಗೀತೆಗಳ ಚಾರಿತ್ರಿಕ ಹಿನ್ನೆಲೆಯನ್ನು ಸಹ ನೋಡಲಾಗಿದೆ. ಅಲ್ಲದೆ ಕಥನಗೀತೆಗಳ ಬಗೆಗೆ ಇದುವರೆಗೂ ನಡೆದಿರುವಂತಹ ಅಧ್ಯಯನಗಳ ವಿವರಗಳನ್ನು ಸಹ ನೀಡಲಾಗಿದೆ ಕಥನಗೀತೆಗಳಲ್ಲಿ ಕಂಡುಬರುವ ಅವರು ಬದುಕಿನ ಸಂಕಥನವನ್ನು ಮನೋ ವೈಜ್ಞಾನಿಕವಾಗಿ ವಿಶ್ಲೇಷಿಸಲಾಗಿದ್ದು, ಸಂಘರ್ಷದ ನೆಲೆಗಳನ್ನು ಗುರುತಿಸಲಾಗಿದೆ. ಅಂತಹುಗಳನ್ನು ಅಧ್ಯಯನಗಳಲ್ಲಿ ವಿಶ್ಲೇಷಿಸಲಾಗಿದೆ.

ಇಂತಹ ಅನೈತಿಕ ರೂಪದ ಗುರುವನ್ನು ಇಂದು ಹೆಚ್ಚು ಕಾಣದಿದ್ದರೂ ಇಲ್ಲವೆನ್ನುವಂತಿಲ್ಲ. ಈಗಲೂ ಅಲ್ಲೊಬ್ಬರು ಇಲ್ಲೊಬ್ಬರೂ ಇದ್ದಾರೆ. ಇಂತಹ ವಿಚಾರವನ್ನು ಪತ್ರಿಕೆ, ದೂರದರ್ಶನಗಳಲ್ಲಿ ಈಗಾಗಲೆ ಪ್ರಚಾರಗೊಂಡಿವೆ ಕೂಡ. ಕಥಾನಾಯಕಿ ನೀಲವೇಣಿಯ ವ್ಯಕ್ತಿತ್ವ, ಬುದ್ಧಿಚಾತುರ್ಯ ಪ್ರತಿಭಟನೆ, ಇವೆಲ್ಲವೂ ಆಧುನಿಕ ಮಹಿಳೆಯರಿಗೂ ಮಾದರಿಯಾಗಿವೆ ಎಂದರೆ ತಪ್ಪಾಗಲಾರದು.

'ಅತ್ತೆ ಸೊಸೆಯ ಜಗಳ' ಪ್ರಧಾನ ಆಶಯವಾಗಿ ಕಂಡುಬರುವ, ಉತ್ತರದೇವಿಯ ಕಥೆಯಲ್ಲಿ ಅತ್ತೆ ಸೊಸೆಯನ್ನು, ಅನುಮಾನಿಸಿ ಶೋಷಿಸುವುದು, ಮನೆಯಿಂದ ಹೊರ ಹಾಕುವುದು ಕಂಡು ಬರುತ್ತದೆ.

ಸೊಸೆಯಾದ ಉತ್ತರದೇವಿ ಅತ್ತೆಯ ವಿರುದ್ಧ ಪ್ರತಿಭಟಿಸಿದರೂ, ಪ್ರಯೋಜನವಿಲ್ಲದೆ ಕೊನೆಗೆ ಯಾರ ಆಶ್ರಯವು ಸಿಗದೆ ತನ್ನ ಮಕ್ಕಳ ಸಮೇತ ಪ್ರಾಣ ಕಳೆದುಕೊಳ್ಳುವುದು ಕಂಡುಬರುತ್ತದೆ.

ಈಗಲೂ ಹೆಣ್ಣನ್ನು ಮೊದಲು ಅನುಮಾನಿಸುವುದು ಪುರುಷನಿಗಿಂತ ಸ್ತ್ರೀ ಎನ್ನಬಹುದು. ಹೆಣ್ಣಿಗೆ ಹೆಣ್ಣೇ ಶತ್ರು ಎನ್ನುವ ಹಾಗೆ ಸೊಸೆಯನ್ನು ಅತ್ತೆ, ಅತ್ತಿಗೆ, ನಾದಿನಿ, ಸವತಿ, ಅಜ್ಜಿ, ತಾಯಿ ಇವರು ಅನುಮಾನಿಸುವುದನ್ನು ಗಮನಿಸಿದ್ದೇವೆ. ಇಂದು ಸಹ ಬಹಳ ಮಂದಿ ಅತ್ತೆಯರು ವರದಕ್ಷಿಣೆಯನ್ನು ಕೇಳಿ, ಸೊಸೆಯನ್ನು ಪೀಡಿಸುವುದು, ಬಂಜೆಯಾದ ಸೊಸೆಯ ಎದುರಾಗಿ ಮತ್ತೊಂದು ಹೆಣ್ಣನ್ನು ತನ್ನ ಮಗನಿಗೆ ತಂದು ಮದುವೆ ಮಾಡುವುದು. ಇಂಥ ಪ್ರಕರಣಗಳಲ್ಲಿ ಪುರುಷನಿಗಿಂತ ಸ್ತ್ರೀ ಹೆಚ್ಚು ಕಂಡುಬರುತ್ತಾಳೆ. ಇದರ ಹಿನ್ನೆಲೆಯಲ್ಲಿ ಪುರುಷನ ಕೈವಾಡವಿದ್ದರೂ, ಕಣ್ಣಿಗೆ ಕಾಣುವುದು ಹೆಚ್ಚಾಗಿ ಸ್ತ್ರೀಯೆ ವಿನಾ ಪುರುಷನಲ್ಲ.

ಈಗಾಗಲೆ ನಾವು ಗಮನಿಸಿದಂತೆ 'ದರ್ಪದೌರ್ಜನ್ಯ'ಕ್ಕೆ ಸಂಕೇತವಾಗಿ ಬಯಲು ಸೀಮೆಯ ಗೌಡನ ಮಗಳು ಕತೆ ಕಂಡು ಬಂದಿದೆ. ಬಡವನ ಮೇಲೆ ಶ್ರೀಮಂತ ಹೆಣ್ಣು ದಬ್ಬಾಳಿಕೆ ನಡೆಸಿ, ಅವನ ಪ್ರಾಣಕ್ಕೆ ಕಂಟಕವನ್ನು ತರುವುದು ಇಲ್ಲಿ ಕಂಡುಬಂದಿದೆ. ಪುರುಷ ಪ್ರಧಾನ ಸಮಾಜದಲ್ಲಿ ಪುರುಷನೇ ಶೋಷಣೆ ಮಾಡುತ್ತಾನೆ ಎಂಬುದು ಪ್ರಚಲಿತವಾಗಿದ್ದರೂ, ಅದಕ್ಕೆ ಅಪವಾದವೆನ್ನುವಂತೆ ಪುರುಷನನ್ನು ಸ್ತ್ರೀಯೇ ಶೋಷಿಸುವುದು ಇಲ್ಲಿ ಕಂಡುಬರುತ್ತದೆ. 'ವಿಕೃತಕಾಮ'ಕ್ಕೆ ಸಂಕೇತವಾಗಿ ಕಲಿಯುಗ ಬಾಲೆಯ ಕಥೆಯ ಕಂಡು ಬರುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಕೆಲವೊಮ್ಮೆ ಕೆಲವು ಪುರುಷರು, ವಿಕೃತ ಕಾಮಿಗಳೆಂದು ಜನಜನಿತವಾಗಿದ್ದರೂ, ಹಾಗೆಯೇ ಸ್ತ್ರೀಯನ್ನು ಸಂಯಮಿ, ಪತಿವ್ರತೆ ಎಂದೆಲ್ಲಾ ಗುರುತಿಸಿರುವುದು ಕಂಡುಬಂದಿದೆ. ಇವೆರಡರ ಮಧ್ಯದಲ್ಲಿಯೂ ಕೆಲವು ಸಂದರ್ಭಗಳಲ್ಲಿ ಸ್ತ್ರೀ ಪುರುಷರಿಬ್ಬರು ತಪ್ಪು ಮಾಡುತ್ತಾರೆ. ಮಾನವ ಸಹಜವಾದ ಗುಣಾವಗುಣಗಳಿಗೆ ಸ್ತ್ರೀ ಪುರುಷರಿಬ್ಬರು ಗುರಿಯಾಗುತ್ತಾರೆ ಎನ್ನುವುದು, ಈ ಕಥೆಯಲ್ಲಿ ಕಂಡುಬರುತ್ತದೆ.

ವಿಕೃತ ಕಾಮದಿಂದ ಕಲಿಯುಗದ ಬಾಲೆ ತನ್ನ ಗಂಡ ಮತ್ತು ಮಕ್ಕಳನ್ನು ಕೊಂದು, ಬೇರೊಬ್ಬನಲ್ಲಿ ಸುಖಪಡುತ್ತಾಳೆ. ಇಂಥ ಪ್ರಕರಣಗಳು ಇಂದು ಹೆಚ್ಚು ಇಲ್ಲದಿರಬಹುದು. ಆದರೆ ಇಲ್ಲವೆ ಇಲ್ಲ ಎಂದು ಕಡಾಖಂಡಿತವಾಗಿ ಹೇಳುವುದಕ್ಕೆ ಬರುವುದಿಲ್ಲ. ಅಪರೂಪವಾಗಿ ಇಂತಹ ಘಟನೆಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. 'ಸಹಗಮನ' ಪದ್ಧತಿಗೆ ಸಾಕ್ಷಿಯಾಗಿ ಅನೇಕ ಸ್ತ್ರೀ ಪಾತ್ರಗಳು ಕಂಡುಬರುತ್ತವೆ. ಪಾತಿವ್ರತ್ಯ, ತ್ಯಾಗ ಮನೋಭಾವನೆ ಹಾಗೂ ಸ್ವರ್ಗ ನರಕಗಳ ಹಿನ್ನೆಲೆಯಲ್ಲಿ, ಸತ್ತಗಂಡನ ಜೊತೆ ಅವಳ ಹೆಂಡತಿಯನ್ನು ಸುಡುವ, ಉಳುವಪದ್ಧತಿ ಹಿಂದೆ

ಜಾರಿಯಲ್ಲಿತ್ತು. ಸತಿ ನಂತರ ಆ ಹೆಣ್ಣನ್ನು ವೈಭವೀಕರಿಸಿ, ಅವಳನ್ನು ದೇವತೆಯನ್ನಾಗಿ ಭಾವಿಸಿ, ಪೂಜಿಸುತ್ತಿದ್ದರು. ಆರ್ಥಿಕವಾಗಿ, ಸಾಮಾಜಿವಾಗಿ, ಸದೃಢಳಾಗಿಲ್ಲದೆ ಇರುವುದರಿಂದ, ಇಂಥ ಒಂದು ಅಮಾನುಷ ಪದ್ಧತಿಗೆ ಒಳಗಾಗುತ್ತಿದ್ದಳು. ಇದೊಂದು ಕ್ರೂರ ಪದ್ಧತಿ ಎಂದು ಅವಳಿಗೆ ಅನಿಸಿದ್ದರೂ, ಗಂಡನಿಲ್ಲದ ಬಾಳನ್ನು ಬದುಕುವುದು ಕಷ್ಟ ಎಂದು ಭಾವಿಸಿದಳು. ಅದರಲ್ಲೂ ನಮ್ಮ ಸಮಾಜ ವಿಧವೆಯರಿಗೆ ತೋರಿಸುವ ಅನಾದರ ಹಾಗೂ ಸಾಮಾಜಿಕ ರಕ್ಷಣೆಯಿಲ್ಲದಿರುವುದು ಇವೆಲ್ಲದರ ಕಾರಣದಿಂದ ಈರೋಬಿಯಂತಹ ಅನೇಕ ಮಹಿಳೆಯರು ಸಹಗಮನ ಮಾಡಿದ್ದಾರೆ. ಆದರೆ ಕೆಲವು ಸಂದರ್ಭದಲ್ಲಿ ತೌರಿನ ಕಡೆಯಿಂದ, ಗಂಡನ ಮನೆಯ ಕಡೆಯವರಿಂದ ಪದ್ಧತಿಗೆ ವಿರೋಧವಿದ್ದರೂ, ವೈಧವ್ಯದ ಬಾಳನ್ನು ನಿಭಾಯಿಸಲು ಅನೇಕ ಹೆಣ್ಣು ಮಕ್ಕಳು ಅಶಕ್ತರಾಗಿ ಸಹಗಮನ ಮಾಡುತ್ತಿದ್ದರು.

ಸಹಗಮನವಾದ ಹೆಣ್ಣನ್ನು ದೇವತೆಯೆಂದು ಪೂಜಿಸುತ್ತಿದ್ದರು. ಸತ್ತ ವ್ಯಕ್ತಿಯ ಆತ್ಮ ಮುಂದೆ ತಮಗೆ ತಮ್ಮ ಕುಟುಂಬಕ್ಕೆ ಹಾಗೂ ಊರಿಗೆ ತೊಂದರೆ ಕೊಡಬಾರದು ಎನ್ನುವ ಉದ್ದೇಶದಿಂದ ಈ ರೀತಿ ಪೂಜಿಸುತ್ತಿದ್ದರು ಎನ್ನಬಹುದು. ತ್ಯಾಗ, ಬಲಿದಾನಕ್ಕೆ ಸಂಬಂಧಿಸಿದಂತೆ ಬರುವ ಅನೇಕ ಸ್ತ್ರೀಯರಲ್ಲಿ ಒಬ್ಬಿಬ್ಬರು ಮನಃಪೂರ್ವಕವಾಗಿ ಕೆರೆ ಕಟ್ಟೆಗೆ ಬಲಿಯಾದರೇ ವಿನಹ, ಎಲ್ಲ ಸ್ತ್ರೀಯರಲ್ಲ, ಪುರುಷ ಪ್ರಧಾನ ಸಮಾಜದಲ್ಲಿ ಬಲಿಯಾಗುವ ವ್ಯಕ್ತಿ, ಸ್ತ್ರೀ ಬಲಿಕೊಡುವವನು ಪುರುಷ. ಬಲಿಯಾಗುವ ಸಂದರ್ಭದಲ್ಲಿ ಹೆಣ್ಣು ಎಷ್ಟೆ ಪ್ರತಿಭಟಿಸಿದರೂ ಪ್ರಯೋಜನವಾಗುವುದಿಲ್ಲ.

ಸ್ತ್ರೀಯ ಅಂದಿನ ಪ್ರತಿಭಟನೆ ಇಂದಿನ ನಾಗರೀಕ ಹೆಣ್ಣಿನ ಪ್ರತಿಭಟನೆಯ ರೂಪದಂತಿದೆ. 'ಬಲಿಪ್ರಕರಣ' ಒಂದು ಬಲವಂತ ಪ್ರಕರಣವಾಗಿದ್ದು, ಅನೇಕ ಅಮಾಯಕ ಹೆಣ್ಣುಮಕ್ಕಳು ಒಲ್ಲದ ಮನಸ್ಸಿನಿಂದ ಬಲಿಯಾಗಿದ್ದಾರೆ. ಬಲಿಯಾದ ಹೆಣ್ಣನ್ನು ವೈಭವಿಕರಿಸಿ, ಅವಳಿಗೆ ಗುಡಿಕಟ್ಟಿಸಿ, ಪೂಜಿಸುತ್ತಾ ಬಂದಿರುವುದನ್ನು ಕಾಣಬಹುದು. ಇಂದು ಸಹ ಕೆಲವು ಮನೆಯಲ್ಲಿ ಸೊಸೆಯನ್ನು ಕ್ಷುಲ್ಲಕ ಕಾರಣಗಳಿಂದ ಸೀಮೆ ಎಣ್ಣೆ ಸುರಿದು ಸಾಯಿಸುವುದು, ಬಾವಿಗೆ ತಳ್ಳುವುದು, ನೇಣು ಹಾಕುವುದು, ಅಪಮಾನಿಸುವುದು, ಅನುಮಾನಿಸುವುದು ಕಂಡುಬರುತ್ತವೆ. ಈ ಪ್ರಕರಣಗಳು ಹಿಂದೆ ನಡೆದ ಬಲಿಯ, ಸಹಗಮನ ಪ್ರಕರಣಕ್ಕೆ ಸಂಕೇತವಾಗಿ ಬಂದಿವೆ ಎನ್ನಬಹುದು. ಶೋಷಣೆ ಮಾಡುವುದು ಸ್ತ್ರೀ ಪುರುಷರಿಬ್ಬರೂ ಎಂದರೆ ತಪ್ಪಾಗಲಾರದು.

ಮಹಿಳೆಯರು ತಮ್ಮ ಸಂಕಷ್ಟಗಳ ವಿರುದ್ಧ ಹೋರಾಡಲು ಪ್ರಯತ್ನಿಸಿದ್ದಾರೆ, ಅನಕ್ಷರಸ್ಥರಾದರೂ ಜೀವನವನ್ನು ಚೆನ್ನಾಗಿ ಅರ್ಥೈಸಿಕೊಂಡವರಾಗಿದ್ದಾರೆ. ಎಂಬುದಕ್ಕೆ ಅವರು ಬದುಕಿನ ಉದ್ದಕ್ಕೂ ನಡೆಸಿದ ಹೋರಾಟ, ಪ್ರತಿಭಟನೆ, ವಿವೇಚನೆಗಳೇ ಸಾಕ್ಷಿಯಾಗಿವೆ. ಕಾಡಸಿದ್ದಮ್ಮ ಸವತಿಯ ಮಾತ್ಸರ್ಯಕ್ಕೆ ಒಳಗಾದರೂ ಜೀವನದ ಪ್ರೀತಿಗೆ ಸಂಕೇತವಾಗಿ ಬರುತ್ತಾಳೆ. ಹೇಗೆಂದರೆ ಅವಳ ಗಂಡನ ಹಿರಿಯ ರಾಣಿಯರು, ಗರ್ಭಧರಿಸಿದ್ದ ಕಾಡಸಿದ್ಧಮ್ಮಳ ಹೊಟ್ಟೆಯ ಮೇಲೆ ಕುಳಿತು ಹೊಡೆಯುವಾಗ, ಅವಳು ಹೇಳುವ ಮಾತು ಹೀಗಿದೆ. ಅಕ್ಕ ನನ್ನನ್ನು ಬೇಕದರೆ ಏನಾದರೂ

ಮಾಡಿ, ಆದರೆ ನನ್ನ ಹೊಟ್ಟೆಯಲ್ಲಿರುವ ಮಗುವಿಗೆ ತೊಂದರೆ ಕೊಡಬೇಡಿ ಎನ್ನುವ ಮಾತು ಎಷ್ಟು ಅಂತಃಕರಣದಿಂದ ಕೂಡಿದೆ.

ಕಾಡಸಿದ್ಧಮ್ಮ ತಾನು ಸತ್ತರೆ ಸರಿಯೇ ಆದರೆ ನನ್ನ ಪ್ರೀತಿಯ ಸಂಕೇತವಾದ ಮಗು ಬದುಕಬೇಕು, ಮುಂದೆ ಬಾಳಬೇಕು, ಎನ್ನುವ ಆಸೆ ಅವಳಲ್ಲಿ ವ್ಯಾಪಕವಾಗಿತ್ತು. ಅವಳು ಮಕ್ಕಳನ್ನು ಹಡೆದರೂ, ಅವಳ ಸವತಿಯರು ಪೊರಕೆ, ಇಟ್ಟಿಗೆ ಹೆತ್ತಿದ್ದಾಳೆ ಎಂದು ರಾಜನಿಗೆ ಸುಳ್ಳು ಹೇಳಿದಾಗ, ರಾಜ ಮಾತ್ರ ನಂಬುತ್ತಾನೆ. ವಿನಹ ಕಾಡಸಿದ್ಧಮ್ಮ ನಂಬುವುದಿಲ್ಲ. ಅಷ್ಟೆಲ್ಲಾ ಸಂಕಷ್ಟಗಳನ್ನು ಎದುರಿಸುತ್ತಿದ್ದರೂ, ಜೀವನನ್ನು ಪ್ರೀತಿಸುವ ಸಹನ ಶಕ್ತಿ, ಚೈತನ್ಯವನ್ನು ಈ ಸ್ತ್ರೀ ಪಾತ್ರದಲ್ಲಿ ಕಾಣಬಹುದು. ಇವಳ ಈ ಧೋರಣೆ ಇಂದು ಹಲವು ಹೆಣ್ಣುಮಕ್ಕಳಿಗೆ ಮಾರ್ಗದರ್ಶನವಾಗಿದೆ ಎಂದರೆ ತಪ್ಪಾಗಲಾರದು. ಬಂಜೆ ಹೊನ್ನಮ್ಮಳು ಕಾಡುಸಿದ್ದಮ್ಮಳ ಹಾಗೇ ಜೀವನವನ್ನು ಪ್ರೀತಿಸುವ ಮಹಿಳೆ, ತಾನು ಬಂಜೆ ಎಂದು ಗೊತ್ತಿದ್ದರೂ, ಬಂಜೆತನವನ್ನು ಹೋಗಲಾಡಿಸಿಕೊಳ್ಳಲು ಮಾಡುವ ಪ್ರಯತ್ನ ಅಷ್ಟಿಷ್ಟಲ್ಲ. ಅವಳು ಎಷ್ಟೆ ನಿಂದನೆಗೆ ಒಳಗಾದರೂ, ಮಗುವಿಗಾಗಿ ಅವಳು ಪಡುವ ಕಷ್ಟ ವಿಪರೀತವಾಗಿದೆ. ದೈವವನ್ನೇ ಭೂಲೋಕಕ್ಕೆ ಕರೆತರುವಷ್ಟು ಪ್ರಯತ್ನಮಾಡಿ, ಮಗುವನ್ನು ಪಡೆಯುತ್ತಾಳೆ.

ಕೌಟುಂಬಿಕ ಜೀವನ ಸಾರ್ಥಕವಾಗಬೇಕಾದರೆ, ಮಕ್ಕಳು ಇರಲೇಬೇಕು. ಕೊನೆಗೆ ಒಂದು ಮಗುವಾದರೂ ಬೇಕು ಎನ್ನುವ ಸಾಮಾಜಿಕ ಕಳಕಳಿಯ ಧೋರಣೆಯನ್ನು ಬೆಳಸಿಕೊಂಡವಳೆಂದರೆ ಬಂಜೆ ಹೊನ್ನಮ್ಮ. ಇಂದಿಗೂ ಇವಳ ಧೋರಣೆ ಒಂದು ಉತ್ತಮ ಮಾದರಿ ಎಂದರೆ ತಪ್ಪಾಗ ಲಾರದು. ನೀಲವೇಣಿ ಕಾಮುಕ ಸಮಾಜದ ಹೋರಾಟದ ಪ್ರತೀಕವಾಗಿ ಕಂಡುಬಂದರೂ ಅವಳ ದಿಟ್ಟತನ, ಬುದ್ಧಿವಂತಿಕೆ, ಸಮಯ ಪ್ರಜ್ಞೆ ವಿದ್ಯಾವಂತ ಮಹಿಳೆಯನ್ನು ಮೀರಿಸುವಂಥದ್ದು. ತನ್ನ ಗುರುವಿನಿಂದ ತನ್ನ ಶೀಲವನ್ನು ಉಳಿಸಿಕೊಂಡು ಒಳ್ಳೆಯ ಕೌಟುಂಬಿಕ ಜೀವನದ ಸುಖವನ್ನು ಪಡೆಯಬೇಕಾದರೆ, ಅವಳ ಹೋರಾಟದ ಪ್ರತಿಯೊಂದು ಹಂತವು ಇಂದಿನ ಹೆಣ್ಣಿನ ಹೋರಾಟಕ್ಕಿಂತ ತೀವ್ರವಾಗಿತ್ತು ಎನ್ನಬಹುದು.

ಬಾಲನಾಗಮ್ಮ ಮೂಢನಂಬಿಕೆ, ಮಂತ್ರ ತಂತ್ರ ಮಾಟದ ವಿರುದ್ಧವಾಗಿ ಪ್ರತಿಭಟಿಸುವ ಮಹಿಳೆಯಾಗಿ ಕಂಡುಬರುತ್ತಾಳೆ. ಮಾಯಾವಿಯಂಥ ವ್ಯಕ್ತಿಯ ಬಳಿಯಲ್ಲಿದ್ದರೂ, ತನ್ನ ಶೀಲವನ್ನು ಕಾಪಾಡಿಕೊಳ್ಳುವ ಉದ್ದೇಶದಿಂದ, ವ್ರತವನ್ನು ಕೈಗೊಳ್ಳುವುದಾಗಿ ಸುಳ್ಳು ಹೇಳಿ, ಆ ಮಾಯಾವಿಯನ್ನು ಪ್ರೀತಿಯ ಮಾತುಗಳಿಂದ ನಂಬಿಸಿ, ಅವಳನ್ನು ಅವಳು ಉಳಿಸಿಕೊಳ್ಳುವ ಯತ್ನ ಹಾಗೂ ಹೋರಾಟವನ್ನು ಮೆಚ್ಚತಕ್ಕದ್ದೇ, ಹೆಣ್ಣಿನ ಮಾತಿನ ಮೋಡಿಗೆ, ಚುರುಕುತನಕ್ಕೆ ಎಂಥ ಮಾಯಾವಿಯು ಸಹ ಸ್ವಲ್ಪ ಕಾಲ ಮುಗ್ಗರಿಸುತ್ತಾನೆ ಎಂಬುದು ಇದರಿಂದ ಅರಿವಾಗುತ್ತದೆ. ಮಾಯಾವಿ ಎದುರು ಇವಳು ತೋರುವ ಧೈರ್ಯ, ಛಲ, ಚುರುಕುತನ ಇಂದಿನ ಹೆಣ್ಣು ಮಕ್ಕಳನ್ನು ಮೀರಿಸುವಂಥದ್ದಾಗಿದೆ. ಹಾಗೆಯೇ ಪೌರಾಣಿಕ ಕಥನಗೀತೆಗಳಲ್ಲಿ ಬರುವ ಕುಂತಿ, ದ್ರೌಪದಿ, ಸೀತೆ ಇವರನ್ನು ಸಾಮಾನ್ಯ ಸ್ತ್ರೀಯ ದೃಷ್ಟಿಕೋನವನ್ನು ಇಟ್ಟುಕೊಂಡು ಚಿತ್ರಿಸಿರುವುದಾದರೂ, ಅವರಲ್ಲಿರುವ ಗುಣ ವೈಶಿಷ್ಟ್ಯ

ಪೂರ್ಣವಾಗಿದೆ. ಕುಂತಿ ತನಗೆ ಬಂದ ಕಷ್ಟವನ್ನು ಒಂದೊಂದಾಗಿ ಸಹಿಸಿಕೊಂಡು ಜೀವನವನ್ನು ಮುಂದುವರಿಸಿಕೊಂಡು ಹೋಗುತ್ತಾಳೆ.

ಪಾಂಡವರ ಪತ್ನಿಯಾದ ದ್ರೌಪದಿ ತನ್ನ ಗಂಡ ಧರ್ಮರಾಯ ಸೋತ ಎಲ್ಲ ವಸ್ತುವನ್ನು ಹಾಗೂ ತನ್ನನ್ನು ತಾನು ಬಿಡಿಸಿಕೊಂಡು ಬರುವುದು ಮಹಿಳಾ ಹೋರಾಟದ ಸಂಕೇತವಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಹೋರಾಡುವ ಮನೋಭಾವನೆ ದ್ರೌಪದಿಯಲ್ಲಿತ್ತು ಎನ್ನಬಹುದು. ಇದರ ಹಿನ್ನೆಲೆಯಲ್ಲಿ ನೋಡುವುದಾದರೆ ಮಹಿಳೆಯು ಮುಗ್ಧಳಲ್ಲ ವಿಚಾರಶೀಲಳು. ಭಾವನೆಯ ಅತೀ ರೇಖಕ್ಕಾಗಲಿ, ಪಾಪ-ಪುಣ್ಯಗಳನ್ನು ಗಳಿಸಿಕೊಳ್ಳುವ ಹೋರಾಟದಲ್ಲೆ ಆಗಲಿ ಕಾಕ ಕಳೆಯಲಿಲ್ಲ. ತನಗೆ ಎದುರಾದ ಸಮಸ್ಯೆಗಳಿಗೆ ನ್ಯಾಯವಾದ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾ, ಸ್ಪಂದಿಸುತ್ತಾ ಹೋಗಿದ್ದಾಳೆ. ಇಷ್ಟೆಲ್ಲಾ ಹೋರಾಟದ ತೀವ್ರತೆಯು ಮಹಿಳೆಯಲ್ಲಿದ್ದರೂ ಸ್ತ್ರೀಗೆ ಶೋಷಣೆ ತಪ್ಪಿದ್ದಲ್ಲ. ಮಹಿಳೆಯ ಈ ದುಃಸ್ಥಿತಿಗೆ ಸ್ತ್ರೀ ಪುರುಷರಿಬ್ಬರು ಕಾರಣರಾಗಿದ್ದಾರೆ.

ಪುರುಷರಿಗಿಂತ ಸ್ತ್ರೀ ಕೀಳು ಎಂಬ ಭಾವನೆ ಸ್ತ್ರೀ ಪುರುಷರಿಬ್ಬರಲ್ಲೂ ಇದೆ. ಸ್ತ್ರೀಯರಲ್ಲೂ ಆ ಭಾವನೆ ಇದೆ. ತಾನು ಪುರುಷನಷ್ಟು ಧೈರ್ಯವಿಲ್ಲದವಳು ಪುರುಷನ ಕೈ ಕೆಳಗೆ ತಾನು ಇರಲೇಬೇಕು, ಇದ್ದರೆ ತನಗೆ ಸಮಾಜದಲ್ಲಿ ಗೌರವವಿರುತ್ತದೆ ಎನ್ನುವ ಭಾವನೆ ಅಂದಿನಿಂದಲೂ ಇಂದಿನವರೆಗೂ ಬೆಳೆದುಬಂದಿದೆ. ಇಂತಹ ವಾತಾವರಣದಲ್ಲಿ ಬೆಳೆದು ಬರುವ ಸ್ತ್ರೀಗೆ ಅತ್ತೆಗಿಂತ ಮಾವ, ತಾಯಿಗಿಂತ ತಂದೆ ನಾದಿನಿಗಿಂತ ಮೈದುನ, ಅಕ್ಕನಿಗಿಂತ ಅಣ್ಣ ದೊಡ್ಡವರಾಗಿ ಕಂಡರೆ ತಪ್ಪಲ್ಲ. ಏಕೆಂದರೆ ಈ ಹೆಣ್ಣು ಪುರುಷ ಪ್ರಧಾನ ಸಮಾಜದಲ್ಲಿ ಬೆಳೆದು ಬಂದ ಹೆಣ್ಣಾಗಿದ್ದಾಳೆ. ಪರಂಪರೆಯಿಂದ ಬಂದ ತನ್ನ ಜನಾಂಗದ, ಮನೆತನದ ಹಾಗೂ ಸಮಾಜದ ರೀತಿ ನೀತಿ ನಡವಳಿಕೆ ಅವಳ ಮೇಲೆ ಪರಿಣಾಮ ಬೀರಿ ಅವಳು ಎಷ್ಟೇ ವಿದ್ಯಾವಂತಳಾದರೂ, ನಾಗರೀಕಳಾದರೂ, ಪುರುಷನಿಗಿರುವಷ್ಟು ಆತ್ಮವಿಶ್ವಾಸ ಅನೇಕ ವೇಳೆ ಅವಳಿಗಿಲ್ಲದೆ ಇರಬಹುದು.

ಬಹುಪಾಲು ಹೆಣ್ಣು ಮಕ್ಕಳು ತಮ್ಮ ಭಾವನೆಗಳನ್ನು, ಆಸೆ ಆಕಾಂಕ್ಷೆಗಳನ್ನು ವ್ಯಕ್ತಪಡಿಸಲಾರದೇ ಸುಮ್ಮನಾಗುತ್ತಾರೆ. ಪುರುಷನ ಹಾಗೆ ಧೈರ್ಯದಿಂದ, ಆತ್ಮವಿಶ್ವಾಸದಿಂದರಲು ಪ್ರಯತ್ನಿಸಿದಾಗ ಅವಳು ಲೋಕಾಪವಾದಕ್ಕೆ ಗುರಿಯಾದರು ಆಗಬಹುದು ಎಂಬ ಕಾರಣಕ್ಕೆ. ತನ್ನ ಹಿಂದಿನ ಹೆಣ್ಣಿನ ನಡವಳಿಕೆ ಅವಳ ಮೇಲೆ ಪರಿಣಾಮ ಬೀರಿ, ಪೂರ್ವಗ್ರಹ ಪೀಡಿತಳಾಗಿ, ಮೌನಿಯಾಗಿ ಹೆಚ್ಚೆಂದರೆ ಕನಸು ಕಾಣಬಹುದು. ಅಥವಾ ಕಣ್ಣೀರು ಹಾಕಬಹುದೇ ವಿನಹ ಪುರುಷನ ಹಾಗೇ ತನ್ನ ಬೇಕು ಬೇಡಗಳನ್ನು ಸ್ತ್ರೀ ಬಹಿರಂಗವಾಗಿ ಅಭಿವ್ಯಕ್ತಗೊಳಿಸಲು ಯಾವುದೇ ಕಾಲದಲೂ ಬಹುಮಟ್ಟಿಗೆ ಸಾಧ್ಯವಾಗುತ್ತಿಲ್ಲ. ಹೀಗಾಗಿ ಮೌನ ಸಂಸ್ಕೃತಿಯ ಪ್ರತೀಕವಾಗಿ ಹೆಣ್ಣು ಕಂಡುಬರುತ್ತಾಳೆ ಹಾಗೂ ಅಲ್ಲಲ್ಲಿ ಅವಳ ಪ್ರತಿಭಟನೆ ಕೇಳಿಬಂದರೂ, ಅದನ್ನು ಪುರುಷನು ತನ್ನ ದಬ್ಬಾಳಿಕೆಯಿಂದ ಮುರಿಯುತ್ತಾ ಬಂದಿರುವುದು ಚರಿತ್ರೆ ಉದ್ದಕ್ಕೂ ಕಂಡುಬಂದಿದೆ.

ಸಹಸ್ರಾರು ಮಹಿಳೆಯರು ಪುರುಷ ಪ್ರಧಾನ ಸಮಾಜ ವ್ಯವಸ್ಥೆಯ ಕ್ರೂರ ಮೌಲ್ಯವನ್ನು ಪ್ರಶ್ನಿಸಿದ್ದಾರೆ. ತಮ್ಮ ಸ್ವಂತ ಅಭಿಪ್ರಾಯವನ್ನು ಅನಾನುಕೂಲಕರ ಪರಿಸ್ಥಿತಿಯಲ್ಲೂ ಅಭಿವ್ಯಕ್ತಿ

ಮಾಡಿ, ಘೋರಶಿಕ್ಷೆಗೆ ಒಳಗಾಗಿದ್ದಾರೆ, ಹತರಾಗಿದ್ದಾರೆ. ಕೆರೆಗೆಹಾರವಾಗುವ ಸಂದರ್ಭದಲ್ಲಿ ಹಾಗೂ ಹುರಿಬೆಂಕಿಯಲ್ಲಿ ತಮ್ಮ ಕೋಮಲ ದೇಹದಹನವಾಗಿ ಬೂದಿಯಾಗಬೇಕು ಎನ್ನುವ ಸಂದರ್ಭದಲ್ಲೂ, ಕ್ರೂರ ಸಮಾಜವನ್ನು ಧಿಕ್ಕರಿಸುವ ಕಿಚ್ಚು ಈ ಮಹಿಳೆಯರದಾಗಿದೆ. ಸಾವಿನ ತೆಕ್ಕೆಯಲ್ಲಿದ್ದರೂ, ಈ ದಿಟ್ಟ ಮಹಿಳೆಯರು ಹೆತ್ತವರನ್ನು, ಅತ್ತೆಮಾವರನ್ನು, ಕಂಡು ಮೈದುನರನ್ನು, ಕೊನೆಗೆ ದೈವ ವನ್ನು, ಜರಿಯುತ್ತಾ ಶಾಪಹಾಕುತ್ತಾ ಸಾವನ್ನು ಅಪ್ಪಿದ್ದಾರೆ. ಜನಪದ ಕಥನಗೀತೆಯಲ್ಲಿ ಬರುವ ಮಹಿಳೆಯರ ಈ ದಿಟ್ಟತನ ಯಾವ ಪ್ರತಿಭಟನೆಗೂ ಕಡಿಮೆ ಇಲ್ಲ. ಕ್ರೂರ ಸಮಾಜದ ಮೌಲ್ಯಗಳಿಗೆ ಭಿನ್ನ ಮತವನ್ನು ವ್ಯಕ್ತಪಡಿಸುತ್ತಲೇ ಬೆಂಕಿ ನೀರು ಮತ್ತು ಕೋಟೆಯ ಅಡಿಪಾಯಗಳಲ್ಲಿ ನುಚ್ಚುನೂರಾದ ಈ ಮಹಿಳೆಯರ ಪ್ರತಿಭಟನೆ ಚಾರಿತ್ರಿಕವಾದ ದಾಖಲೆಯಾಗಿದೆ.

## ಅಧ್ಯಯನದ ಫಲಿತಗಳು

೧. ಕಥನಗೀತೆಗಳಲ್ಲಿ ಮಹಿಳೆಯ ಚಿತ್ರಣಗಳು ಭಿನ್ನವಾಗಿವೆ. ಆಕೆಯನ್ನು ದ್ವಿತೀಯ ದರ್ಜೆ ಸ್ಥಾನದಲ್ಲಿ ನೋಡಲಾಗಿದೆ. ಪುರುಷನ ಅಸ್ತಿತ್ವಕ್ಕಾಗಿ ತನ್ನನ್ನು ತಾನು ಬಲಿಕೊಟ್ಟು ಕೊಳ್ಳಬೇಕು ಎನ್ನುವುದನ್ನು ಪ್ರಧಾನವಾಗಿ ಪ್ರತಿಪಾದಿಸುತ್ತವೆ. ಈ ಹಾಡುವ ಗಾಯಕ ವರ್ಗಗಳ ಮನಸ್ಥಿತಿ ಯಲ್ಲೂ ಇಂತಹದ್ದೇ ಆದ ಮನಸ್ಥಿತಿ ಇರುವುದನ್ನು ಕಾಣಬಹುದು.

೨. ಕಥನಗೀತೆಗಳಲ್ಲಿ ಬಿಂಬಿತವಾಗಿರುವ ಮಹಿಳೆಯ ಹಲವು ಚಿತ್ರಣಗಳು ಹೆಣ್ಣಿಗೆ ಹೆಣ್ಣು ಶತ್ರುಗಳು ಎನ್ನುವ ವಿಭಿನ್ನ ಚಿತ್ರಣಗಳು ಕಾಣಿಸುತ್ತವೆ. ಈ ಚಿತ್ರಣಗಳನ್ನು ಸಂಶೋಧನಾತ್ಮಕವಾಗಿ ಗಮನಿಸಿದಾಗ ಕಥನಗೀತೆಗಳಲ್ಲಿ ಇರುವಷ್ಟು ಅಂಶಗಳು ಕಾಣಿಸುವುದಿಲ್ಲ. ಹಾಗಾಗಿ ಇದರ ಹಿಂದೆ ಕೆಲವು ಒತ್ತಾಸೆಗಳು ರಾಜಕಾರಣಗಳು ಕಾರ್ಯ ನಿರ್ವಹಿಸಿರುವಂತೆ ಕಾಣಿಸುತ್ತದೆ. ವಿಶೇಷವಾಗಿ ಪುರುಷರಾಜಕಾರಣ ಕಾರ್ಯ ನಿರ್ವಹಿಸಿದೆ. ಈ ಪರಿಕಲ್ಪನೆ ಗಟ್ಟಿಗೊಳ್ಳುವುದಕ್ಕೆ ಹಲವು ಕಾರಣಗಳಿವೆ. ಅಂತಹ ಕಾರಣಗಳಲ್ಲಿ ಈ ಕಥನಗೀತೆಗಳನ್ನು ಹಾಡುವ ಗಾಯಕ ವರ್ಗ ಪುರುಷರು ಹೆಚ್ಚಾಗಿದ್ದಾರೆ. ಇವುಗಳ ವಸ್ತುಗಳಲ್ಲಿ ಪೌರಾಣಿಕ ಆಧಾರಿತ ವಸ್ತುಗಳು ಸಂಯುಕ್ತಗೊಂಡಿದೆ. ಪೌರಾಣಿಕ ಕಥೆಗಳನ್ನು ಹೇಳುವವರು ಹೆಚ್ಚು ಹೆಚ್ಚು ಪುರುಷರೇ ಆಗಿದ್ದಾರೆ. ಇದರ ಪರಿಣಾಮವು ಸಹ ಕಥನಗೀತೆಗಳ ಮೇಲೆ ಆಗಿದೆ.

೩. ಕಥನಗೀತೆಗಳಲ್ಲಿ ಮಹಿಳಾ ಪ್ರತಿರೋಧದ ಅಂಶಗಳೂ ಅಪೂರ್ವವಾಗಿ ಕಂಡುಬರುತ್ತವೆ. ಅಲ್ಲದೆ ಇಲ್ಲಿನ ಪ್ರತಿರೋಧಗಳು ಎಲ್ಲ ಶೋಷಣೆಯ ನೆಲೆಗಳಲ್ಲಿ ಕಾಣಿಸದೆ ಕೆಲವೇ ಕೆಲವು ಶೋಷಣಾತ್ಮಕ ಪ್ರಕ್ರಿಯೆಗಳಲ್ಲಿ ಮಾತ್ರ ಕಂಡುಬರುತ್ತದೆ. ಅಂದರೆ ಅತ್ತೆ, ಮಾವ, ತಂದೆ, ತಾಯಿ, ನಾದಿನಿ ಮುಂತಾದ ಕೌಟುಂಬಿಕ ಸದಸ್ಯರು, ಮಡಿವಾಳ ಇಂತಹ ಅಶಕ್ತ ವರ್ಗಗಳ ಜೊತೆ ಪ್ರತಿರೋಧ ಮಾಡಿದ ಹೆಚ್ಚು ವಿವರಗಳು ಸಿಗುತ್ತವೆಯೇ ಹೊರತು ಶಕ್ತ ವರ್ಗಗಳ ಜೊತೆ ಪ್ರತಿರೋಧ ಮಾಡಿದ ವಿವರಗಳು ಕಡಿಮೆ. ಇದು ಮಹಿಳೆಯಾದವಳು ಅಸಕ್ತಳು. ಆಕೆ ಅಂತಹ ವರ್ಗದವರ ಜೊತೆ ಪ್ರತಿರೋಧ ಮಾಡುವುದಕ್ಕೆ ಮಾತ್ರ ಸೀಮಿತವಾದವಳು

ಎನ್ನುವುದನ್ನು ಪರೋಕ್ಷವಾಗಿ ಪ್ರತಿಪಾದನೆ ಮಾಡುತ್ತವೆ. ಹಾಗಾಗಿ ಕಥನಗೀತೆಗಳು ಪ್ರಭುತ್ವಕೇಂದ್ರಿತ ಸಂಸ್ಕೃತಿಯನ್ನು ಅನಾವರಣ ಮಾಡುತ್ತಿವೆ ಎಂದು ಹೇಳಬಹುದು.

೪. ರಮ್ಯ ಕಥನಗೀತೆಗಲಲ್ಲಿ ಪುರುಷನ ಪಾತ್ರಗಳನ್ನು ಅತಿಮಾನುಷವಾಗಿ ರಮ್ಯಾದ್ಭುತವಾಗಿ ಚಿತ್ರಿಸಿಕೊಳ್ಳಲಾಗಿದೆ. ಪುರುಷನು ಮಾತ್ರ ಅತಿಮಾನುಷ ಶಕ್ತಿಯನ್ನು ಹೊಂದಿದವನು, ಆ ಬಗೆಯ ಶಕ್ತಿ ಆತನಲ್ಲಿ ಮಾತ್ರವಿದೆ. ಮಹಿಳೆಯಲ್ಲಿ ಇಂತಹ ಶಕ್ತಿಯನ್ನು ಕಾಣುವುದಕ್ಕೆ ಸಾಧ್ಯವಿಲ್ಲ ಅನ್ನುವುದನ್ನು ಪ್ರತಿಪಾದಿಸಿರುವುದು ಪ್ರಧಾನವಾಗಿ ಕಂಡುಬರುತ್ತದೆ. ಹಾಗಾಗಿ ಕಥನಗೀತೆಗಳು 'ಏಕ ಸಂಸ್ಕೃತಿ'ಯನ್ನು ಪ್ರತಿಪಾದನೆ ಮಾಡುತ್ತವೆ ಎನ್ನಬಹುದು. ಜೊತೆಗೆ ಅತಿಮಾನುಷವಾಗಿ ಸೃಷ್ಟಿಸಿರುವ ಮಹಿಳಾ ಪಾತ್ರಗಳಲ್ಲಿ ಆಕೆಯನ್ನು ಸಾಮಾಜಿಕ ಮೌಲ್ಯ, ನೀತಿಯನ್ನು ಹೇಳುವುದಕ್ಕೆ ಸೀಮಿತವಾಗಿವೆ.

೫. ಜನಪದ ಕಥನಗೀತೆಗಳು ಶಿಷ್ಟ ಕಥನಗೀತೆಗಳ ಮೇಲೆ ಪ್ರಬಾವ ಬೀರಿರುವುದನ್ನು ಕಾಣಬಹುದು. ಅಲ್ಲೂ ಸಹ ಪುರುಷ ಹಿತಾಸಕ್ತಿ ರಾಜಕಾರಣ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ. ಅಂದರೆ ಲಿಖಿತ ಅಭಿವ್ಯಕ್ತಿಗಾರರು ತಮ್ಮ ಅಭಿವ್ಯಕ್ತಿಗಾಗಿ ಸ್ವೀಕಾರ ಮಾಡಿಕೊಂಡಿರುವ ವಸ್ತು ವೈಶಿಷ್ಟ್ಯತೆಯಲ್ಲೂ ಸ್ತ್ರೀಯನ್ನು ದ್ವಿತೀಯ ದರ್ಜೆಯಲ್ಲೇ ಸ್ವೀಕಾರ ಮಾಡಿಕೊಂಡಿರುವುದು ಪ್ರಧಾನವಾಗಿ ತೋಚುತ್ತದೆ. ದಲಿತ ಮತ್ತು ಬಂಡಾಯ ಮತ್ತು ಆಧುನಿಕ ರಂಗಭೂಮಿಗಳಲ್ಲಿ ಇಲ್ಲಿನ ಪ್ರತಿರೋಧಗಳನ್ನು ಬಿತ್ತರಿಸಿದ್ದಾರೆಯಾದರೂ ಅವುಗಳ ಪಾತ್ರವೂ ಗೌಣ.

೬. ಪುರುಷ ಶೋಷಣಾತ್ಮಕ ನೆಲೆಗಳ ವಿರುದ್ಧ ಅಥವಾ ವ್ಯವಸ್ಥೆಗಳ ವಿರುದ್ಧ ಮಹಿಳೆಯರು ಹೋರಾಟ ಮಾಡುವ ವಿಧಾನಗಳು ಕುತೂಹಲವನ್ನು ಹುಟ್ಟಿಸುತ್ತವೆಯಾದರೂ ಪ್ರತಿರೋಧದ ಶಕ್ತಿಗಳಂತೆ ಕಂಡುಬರುತ್ತವೆಯಾದರೂ, ಆ ಹೋರಾಟಗಳು ಮುಕ್ತಾಯವಾಗುವ ವಿಧಾನಗಳು ಅಂದರೆ ತನ್ನ ಕುಟುಂಬವನ್ನು, ತನ್ನ ಮಕ್ಕಳನ್ನು, ತನ್ನ ಪಾತಿವ್ರತ್ಯವನ್ನು ಉಳಿಸಿಕೊಳ್ಳುವುದಕ್ಕಾಗಿ ತನ್ನ ಪ್ರತಿರೊಧಗಳನ್ನು ಹಿಂದಕ್ಕೆ ಪಡೆದಿರುವ ಹಲವು ಚಿತ್ರಣಗಳನ್ನು ಕಾಣಬಹುದು. ಇವುಗಳ ಹಿಂದೆ ಪುರುಷ ರಾಜಕಾರಣ ಇದೆಯಾದರೂ ಅದು ತೆರೆಮರೆಯಲ್ಲಿ ಕಾರ್ಯ ನಿರ್ವಹಿಸಿದೆ. ಮಹಿಳೆಯಾದವಳು ಕೌಟುಂಬಿಕ ವ್ಯವಸ್ಥೆಗಳಿಗಾಗಿ ಪ್ರತಿರೋಧ ಮಾಡಬಾರದು ಎನ್ನುವುದನ್ನು ಬಲವಾಗಿ ಪ್ರತಿಪಾದನೆ ಮಾಡಿವೆ.

೭. ಜನಪದ ಕಥನಗೀತೆಗಳ ಹುಟ್ಟು, ಬೆಳವಣಿಗೆ ಅವುಗಳ ಚಾರಿತ್ರಿಕ ಬೆಳವಣಿಗೆಯನ್ನು ಕುರಿತು ಅವಲೋಕಿಸಲಾಗಿದೆ. ಅಲ್ಲದೆ ಕಥನಗೀತೆಗಳ ಬಗ್ಗೆ ಈವರೆಗೆ ನಡೆದಿರುವಂತಹ ಅಧ್ಯಯನದ ಕೃತಿಗಳಲ್ಲಿ ಮಹಿಳೆ ಬಗ್ಗೆ ವಿಮರ್ಶೆ ಮುಂತಾದ ವಿಚಾರಗಳನ್ನು ಈ ಪ್ರಬಂಧದಲ್ಲಿ ಚರ್ಚಿಸ ಲಾಗಿದೆ.

೮. ಜನಪದ ಕಥನಗೀತೆಗಳು ಮತ್ತು ಶಿಷ್ಟಗೀತೆಗಳಿರುವಂತಹ ಸಂಬಂಧವನ್ನು ಈ ಪ್ರಬಂಧದಲ್ಲಿ ಸ್ಥೂಲವಾಗಿ ಚರ್ಚಿಸಲಾಗಿದೆ. ನವ್ಯ, ನವೋದಯ, ಬಂಡಾಯ, ಕಾಲಘಟ್ಟಗಳ ಕೃತಿಯಲ್ಲಿನ ಜನಪದ ಅಂಶಗಳನ್ನು ಗುರುತಿಸಲಾಗಿದೆ.

೯. ಜನಪದ ಕಥನಗೀತೆಗಳ ದೇಸಿಯ ವಿನ್ಯಾಸದ ಕುರಿತು ಕೆಲವೊಂದು ಕಥನಗೀತೆಗಳನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿ ಬದಲಾವಣೆಗೊಳ್ಳುತ್ತಾ ಆ ಪ್ರದೇಶಕ್ಕೆ ಅಂತಹ ಕಥನಗೀತೆಗಳು ಹೊಂದಿಕೊಂಡಿರುವುದಲ್ಲದೆ ಒಳಮರ್ಮಗಳನ್ನು ಜಿಜ್ಞಾಸಗೆ ಒಳಪಡಿಸಲಾಗಿದೆ.

೧೦. ಜನಪದ ಕಥನಗೀತೆಗಳಲ್ಲಿ ಬರುವ ಮಹಿಳೆ ತಮ್ಮ ಬದುಕಿನುದ್ದಕ್ಕೂ ಪಡುವಂತಹ ಕಷ್ಟಗಳನ್ನು ರೀತಿ–ನೀತಿ, ಸುಖ–ದುಃಖ ಹಾಗೂ ಅವರು ಎದುರಿಸುವ ಬಿಕ್ಕಟ್ಟುಗಳೆಲ್ಲದರ ಪರಿಚಯಿಸಲಾಗಿದೆ.

೧೧. ಕಥನಗೀತೆಗಳಲ್ಲಿ ಬರುವ ಮಹಿಳೆಯರು ಜೀವನದ ಒಂದೊಂದು ಮೌಲ್ಯವನ್ನು ಪ್ರತಿಪಾದಿಸುವ ಹೋರಾಟಗಾರ್ತಿಯರಾಗಿ ಕಂಡುಬರುತ್ತಾರೆ. ಈ ಮೌಲ್ಯಗಳು ಯಾವುದೇ ಜನಾಂಗದ ಸಾಂಸ್ಕೃತಿಕ ಬೆಳವಣಿಗೆಯನ್ನು ಸೂಚಿಸಲು ಸಹಾಯಕವಾಗಿವೆ. ಕಥನಗೀತೆಗಳಲ್ಲಿ ಚಿತ್ರಿತವಾಗಿರುವ ಮಹಿಳೆಯರ ಮೌಲ್ಯಗಳು ಪ್ರಸ್ತುತ ಸಮಾಜಕ್ಕೆ ಒಳಿತು ಮಾಡುವುದಾದರೆ ಅಂತಹ ಮೌಲ್ಯಗಳನ್ನು ಸ್ವೀಕರಿಸಬಹುದು. ಈ ಮೌಲ್ಯಗಳು ಸಮಾಜದ ಮೇಲೆ ದುಷ್ಪರಿಣಾಮ ಬೀರುವುದಾದರೆ ಅಂತಹ ಮೌಲ್ಯಗಳನ್ನು ತಿರಸ್ಕರಿಸುವುದು ಒಳ್ಳೆಯದು.

೧೨. ವಸಾಹತುಶಾಹಿ ವ್ಯವಸ್ಥೆ ವಿರುದ್ಧ ದುರಾಡಳಿತ ವಿರುದ್ಧ ಮಾಡಿದ ಬಂಡಾಯ, ಸಾಂಸ್ಕೃತಿಕ ಪ್ರತಿರೋಧಗಳು ಪ್ರಧಾನವಾಗಿ ಕಂಡುಬರುತ್ತವೆ. ಯಜಮಾನ್ಯ ಸಂಸ್ಕೃತಿ ಜಮೀನ್ದಾರಿ ವ್ಯವಸ್ಥೆಗಳ ಬಳುವಳಿಯಾಗಿ ಹೆಣ್ಣನ್ನು ಕೆರೆಗೆ, ಕೋಟೆಗೆ, ಬೆಂಕಿಗೆ ಬಲಿಕೊಡುವ ಸತಿಪದ್ಧತಿ ವೀರಗಲ್ಲು, ಮಾಸ್ತಿಕಲ್ಲು, ಮುಂತಾದವುಗಳು ಕಥನಗೀತೆಗಳಲ್ಲಿರುವ ವ್ಯವಸ್ಥೆಗಳನ್ನು ತಿಳಿಸುವಲ್ಲಿ ಅಥವಾ ಬಲಪಡಿಸುವಲ್ಲಿ ಪ್ರಮುಖ ಆಕರಳಾಗಿ ಬಳಕೆಯಾಗಿವೆ.

೧೩. ಕಥನಗೀತೆಗಳಲ್ಲಿನ ಕಥೆ ಭೂಲೋಕ, ದೇವಲೋಕ, ರಾಕ್ಷಸಲೋಕಕ್ಕೆ ಸಂಬಂಧಿಸಿವೆ. ಇಲ್ಲಿನ ಕೇಂದ್ರವ್ಯಕ್ತಿ ಮಹಿಳೆಯಾಗಿದ್ದಾಳೆ. ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಇಲ್ಲೆಲ್ಲಾ ಕಂಡುಬಂದರೂ, ವ್ಯವಸ್ಥೆಯ ವಿರುದ್ಧ ಹೋರಾಡುವ ಮಹಿಳೆಯರನ್ನು ಗುರುತಿಸಬಹುದು. ಈ ಮಹಿಳೆಯರ ಹೋರಾಟವು ಕೆಲವೊಮ್ಮೆ ಫಲದಾಯಕವಾಗದಿದ್ದರೂ, ಹೋರಾಡುವ ಛಲ ಅವರಲ್ಲಿರುವುದು ಕಂಡುಬಂದಿದೆ. ಆದರೆ ಆ ಛಲಕ್ಕೆ ಪ್ರತಿಫಲ ಸಿಗದಂತೆ ನೋಡಿಕೊಂಡಿರುವ ವ್ಯವಸ್ಥಿತವಾದ ವಿಧಾನಗಳು ಕಂಡುಬರುತ್ತವೆ. ಆದರೂ ಅವುಗಳನ್ನು ಮೆಟ್ಟಿ ನಿಲ್ಲುವ ಅಪರೂಪದ ಚಿತ್ರಣಗಳು ಉದಾಹರಣೆಗಳು ಸಿಗುತ್ತವೆ. ಅಂತಹ ಕಥನಗೀತೆಗಳನ್ನು ಮಾದರಿ ಕಥನಗೀತೆಗಳೆಂದು ಸಾರಿರುವುದು ಕಡಿಮೆ.

೧೪. ಅನಾದಿ ಕಾಲದಿಂದಲೂ ಜನಪದ ಮಹಿಳೆಯರನ್ನು ಅನಾಗರೀಕರು, ಮುಗ್ಧರು, ಸಹನಶೀಲರು ಎಂದು ಹೇಳುತ್ತಾ ಬಂದಿರುವ ವಿಧಾನಗಳು ಈ ಸಮಾಜದಲ್ಲಿವೆ. ಆದರೆ ಮಹಿಳೆ ಅವುಗಳನ್ನು ಎದುರಿಸಿರುವ ಪ್ರತಿರೋಧಿಸಿರುವ ಮತ್ತು ಅಲ್ಲಿರುವ ದಿಟ್ಟತನದ ಜಾಗೃತಿ, ಜೀವನವನ್ನು ಕಂಡು ಪ್ರೀತಿಸಿದ ಹಾಗೂ ಅರ್ಥೈಸಿಕೊಂಡಿರುವ ರೀತಿ ಸಮಸ್ಯೆಗಳು ಎದುರಾದಾಗ ಬದುಕಿನ ವಿಷಮ ಸನ್ನಿವೇಶಗಳಲ್ಲಿ ತೆಗೆದುಕೊಂಡ ನಿರ್ಧಾರಗಳು ವಿಭಿನ್ನವಾಗಿವೆ. ಇವು

ಮಹಿಳೆಯ ಆತ್ಮಸ್ಥೈರ್ಯವನ್ನು ತಿಳಿಸುತ್ತವೆ. ಈ ಗುಣಗಳು ಎಲ್ಲಾ ಕಾಲದ ಜನರಿಗೂ ಮಾರ್ಗದರ್ಶಕವಾಗಬಲ್ಲವು.

೧೫. ಜನಪದ ಕಥನಗೀತೆಗಳಲ್ಲಿ ಕಥೆ ಮುಂದುವರೆಯಲು ಅಥವಾ ಮಹಿಳೆಯರು ದೇವತೆಯಾಗಿ ನೆಲೆಸಲು, ಮೂಲ ಸಂಘರ್ಷ ಅಂತಹ ಒಂದು ಸಂಘರ್ಷದ ನೆಲೆಗಳನ್ನು ಈ ಕಥನಗೀತೆಗಳಲ್ಲಿ ಬಹಳ ಜಾರೂರಾಗಿ ಪ್ರಬಂಧದಲ್ಲಿ ಸೆರೆ ಹಿಡಿಯಲಾಗಿದೆ.

೧೬. ಕಥನಗೀತೆಗಳನ್ನು ಗಂಡು ಹೆಣ್ಣು ಇಬ್ಬರೂ ಸಂರಚಿಸಿ ಹಾಡಿದ್ದಾರೆ. ಆದರೆ ಸ್ತ್ರೀಯರೇ ಹೆಚ್ಚು ಹಾಡಿರುವುದರಿಂದ, ಹೆಣ್ಣೊಬ್ಬಳ ಜೀವನದ ನೋವು ನಲಿವು ಹಾಗೂ ಅವಳ ಜೀವನದ ದೃಷ್ಟಿಕೋನಕ್ಕೆ ತೀವ್ರವಾಗಿ ನೈಜವಾಗಿ ಸ್ಪಂದಿಸಿರುವುದನ್ನು ಕಾಣಬಹುದು. ಇವುಗಳು ಮಹಿಳೆಯ ಆಂತರಿಕ ನೋವು ಮತ್ತು ಯಾತನೆಗಳನ್ನು ವ್ಯಕ್ತಪಡಿಸುವುದಕ್ಕೆ ಇದ್ದ ಅವಕಾಶಗಳು. ಹಾಗಾಗಿಯೇ ತನ್ನ ನೋವುಗಳನ್ನು ಇಲ್ಲಿ ವ್ಯಕ್ತಪಡಿಸಿದ್ದಾಳೆ.

೧೭. ದರ್ಪ ದೌರ್ಜನ್ಯಕ್ಕೆ ಸಂಕೇತವಾಗಿ ಕೆಲವು ಕಥನಗೀತೆಗಳು ಕಂಡುಬಂದಿವೆ. ಎಲ್ಲಾ ಕಥನಗೀತೆಗಳಲ್ಲಿ ಹೆಣ್ಣು ಶೋಷಣೆ, ಅವಮಾನ ಅನುಮಾನ ಮುಂತಾದ ಕಾರಣಗಳಿಗೆ ಒಳಗಾದರೆ, ಇಲ್ಲಿ ಪುರುಷನ ಮೇಲೆ ಅದು ಬಡವರ ಪುರುಷನ ಮೇಲೆ ದರ್ಪ ತೋರುವಂತಹ ಕಥನಗೀತೆ ಇದೆ. ಬಡವನ ಮೇಲೆ ಶ್ರೀಮಂತ ಹೆಣ್ಣು ದಬ್ಬಾಳಿಕೆ ನಡೆಸಿ ಅವನ ಪ್ರಾಣಕ್ಕೆ ಕಂಟಕ ತಂದಿರುವಂತದ್ದು ಕಾಣಬಹುದಾಗಿದೆ.

೧೮. ಪುತ್ರಸಂತಾನ, ಸುಖಜೀವನ, ಐಶ್ವರ್ಯ ಪ್ರಾಪ್ತಿ ಮುಂತಾದ ಅಂಶಗಳಿಗಾಗಿಯೇ ಕೆಂಡದ ಕೊಂಡ ಆಯುವವರು ತಮ್ಮ ಪುತ್ರರನ್ನು ನೋಡಿಕೊಂಡವರಿಗೆ ಇಂತಹ ಪುಣ್ಯಗಳು ಮುಂದೆ ಆ ತರಹದ ಭಾಗ್ಯವನ್ನು ಒದಗಿಸುವ ಭರವಸೆ ನೀಡುವ ಅದೆಷ್ಟೋ ಕಥಾ ನಾಯಕಿಗಳು ಕೊಂಡು ಹೇರುವ ಮುನ್ನ ಹೇಳುವಂತದ್ದು.

೧೯. ಜನಪದ ಕಥನಗೀತೆಗಳಲ್ಲಿ ಮಹಿಳೆಯರನ್ನು ಹಿಂದಿನ ಪುರುಷ ಸಮಾಜ ಯಾವ ನಿಟ್ಟಿನಲ್ಲಿ ಬಳಸಿಕೊಂಡಿದ್ದಾರೆ. ಅವಳ ಸ್ಥಾನಮಾನಗಳೇನು ಹೆಣ್ಣೇ ಏಕೆ ಆತ್ಮಹತ್ಯೆ, ಬಲಿದಾನವಾಗಬೇಕು ಪುರುಷ ಬಲಿ ಏಕೆ ಆಗಬಾರದು ಎಂಬ ಅಂಶಗಳನ್ನು ಸ್ಥೂಲವಾಗಿ ವಿಶ್ಲೇಷಿಸಿ ಅದಕ್ಕೆ ಪರಿಹಾರವೇನು ಎಂಬುದನ್ನು ಸಹ ಅಧ್ಯಯನದಲ್ಲಿ ದಾಖಲಿಸಲಾಗಿದೆ.

೨೦. ಈ ಕಥನಗೀತೆಗಳು ಪೊಳ್ಳು ದಂತ ಕಥೆಯಾಗಿರದೆ, ನಿತ್ಯ ಜೀವನದಲ್ಲಿ ಹೆಣ್ಣಾದವಳು ಕೌಟುಂಬಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಅನುಭವಿಸಿದ ನೋವನ್ನು ಹಾಡಾಗಿ ಹೊರಹೊಮ್ಮಿಸಿದ್ದಾಳೆ. ಆ ಕಥೆಗಾರ್ತಿ ಹಾಗೂ ಕಥೆಗಾರ ಹೇಳಿದ ಹಾಡಿದ ಕಥನಗೀತೆಗಳು ಬದುಕಿನ ಮೌಲ್ಯಗಳನ್ನು ಪ್ರತಿಬಿಂಬಿಸುತ್ತವೆ. ಇದು ಸರ್ವಕಾಲಿಕವಾಗಿ ಹೆಣ್ಣು ಅನುಭವಿಸುತ್ತಿರುವ ಪಾಡನ್ನು ಹೇಳುತ್ತದೆ. ಹೀಗೆ ಹೆಣ್ಣಿನ ಬದುಕಿನ ಒಳ ವಿವರಗಳ ವಿಶ್ಲೇಷಣೆಯನ್ನು ಕಂಡುಕೊಳ್ಳಲಾಗಿದೆ.

೨೧. ಕಥನಗೀತೆಗಳಲ್ಲಿ ಬರುವ ಪಾತ್ರಗಳನ್ನು ವಿಶ್ಲೇಷಿಸಿದಾಗ ಒಂದೊಂದು ಪಾತ್ರವು ಸಮಾಜಕ್ಕೆ ಉತ್ತಮ, ಮೌಲ್ಯಯುತವಾದ ಸಂದೇಶವನ್ನು ಇಂದಿಗೂ ಎಂದೆಂದಿಗೂ ಅನ್ವಯವಾಗುವಂತೆ ಸಾರಿರುವುದು ಕಂಡುಬರುತ್ತದೆ. ಕಾಮ, ಕ್ರೋಧ, ದರ್ಪ, ಬಂಜೆತನ, ಹಾರವಾಗುವಂತಹ ಸವತಿಮತ್ಸರ್ಯ, ರಾಗ ದ್ವೇಷಗಳು ಇನ್ನೂ ಮುಂತಾದ ಅಂಶಗಳು ನಿಜ ಜೀವನಕ್ಕೆ ಹತ್ತಿರ ವಾಗುವಂತೆ ಪ್ರತಿಬಿಂಬಿಸಿವೆ.

೨೨. ಕಥನಗೀತೆಗಳಲ್ಲಿ ಮಹಿಳೆಯರೇ ಸ್ವ ಇಚ್ಛೆಯಿಂದ ಕೆರೆಗೆ, ಕೋಟೆ, ದೊಡ್ಡ ದೊಡ್ಡ ಕಟ್ಟಡಗಳಿಗೆ ಊರಿನ ಹಿತದೃಷ್ಟಿಯಿಂದ ಹಾರವಾಗಿರುವಂತದ್ದು ಒಂದು ಕಡೆಯಾದರೆ, ಅವಳನ್ನು ಬಲವಂತವಾಗಿ ಪುರುಷಕೇಂದ್ರಿತ ಸಮಾಜ ನೂಕಿ ಹಾರವಾಗಿಸುವಂತದ್ದು ಕಥನಗೀತೆಗಳಲ್ಲಿ ಕಂಡುಬರುತ್ತವೆ. ಇವೆರಡು ಭಿನ್ನ ಪಠ್ಯಗಳು ಸಿಗುತ್ತವೆ. ಒಂದು ವ್ಯವಸ್ಥೆಯಲ್ಲಿ 'ಸ್ವ ಆಸಕ್ತಿ' ಇದ್ದರೆ ಮತ್ತೊಂದು ವ್ಯವಸ್ಥೆಯಲ್ಲಿ 'ಒತ್ತಾಯ'ವಿದೆ ಎಂದು ಗೋಚರವಾಗುತ್ತದೆ. ಆದರೆ ಸ್ವ ಆಸಕ್ತಿ ಎನ್ನುವ ಪರಿಕಲ್ಪನೆಯನ್ನು ರೂಪಿಸಿರುವುದನ್ನು ಸೂಕ್ಷ್ಮವಾಗಿ ಗಮನಿಸಿದಾಗ 'ಸ್ವ ಆಸಕ್ತಿ' ಎನ್ನುವ ಧೋರಣೆಯಲ್ಲೂ ಪುರುಷ ರಾಜಕಾರಣವಿದೆ. ಇತರೆ ಮಹಿಳೆಯರು ಬಲಿ ಆಗಬೇಕು ಎನ್ನುವ ಕಾರಣಕ್ಕಾಗಿ ಬಲಿಯಾದ ಮಹಿಳೆಯರ ಕಥನಗಳ ಆಸಕ್ತಿ ತನ್ನನ್ನು ತಾನು ಬಲಿಕೊಟ್ಟಿದ್ದಾಳೆ ಎನ್ನುವ ರೀತಿಯಲ್ಲಿ ಸಂರಚಿಸಿ ಅನಾವರಣ ಮಾಡಿದಂತೆ ಕಾಣಿಸುತ್ತದೆ.

೨೩. ಸುತ್ತಲಿನ ಪರಿಸರದ ಕಾಳಜಿ, ಪ್ರಾಣಿ, ಪಕ್ಷಿ ಸಂಕುಲಗಳ ಮುಂದೆ ತಮ್ಮ ದುಃಖಗಳನ್ನು ತೋಡಿಕೊಂಡಿರುವುದು, ಮೂಕ ಪ್ರಾಣಿಗಳು ಕೆಲವೊಮ್ಮೆ ನಿರಾಶ್ರಿತರಿಗೆ ಸಹಾಯಕರಾಗಿ ಬಂದಿರುವಂತದ್ದು ಸಹ ಈ ಕಥನಗೀತೆಗಳಲ್ಲಿ ಕಂಡುಬಂದಿದೆ. ಹೀಗೆ ಮೂಕ ಪ್ರಾಣಿಗಳ ಜೊತೆ ತನ್ನ ಸಂಕಷ್ಟವನ್ನು ಹಂಚಿಕೊಂಡಿರುವ ವಿಧಾನ ಆ ಕಾಲದ ಮಹಿಳಾ ಸ್ಥಿತಿಗತಿಯನ್ನು ತಿಳಿಸುತ್ತದೆ. ತನ್ನ ಸಂಕಷ್ಟಗಳನ್ನು ಹಂಚಿಕೊಳ್ಳುವುದುಕ್ಕೆ ಪುರುಷ ವರ್ಗವೂ ಸಹ ಭಾಗಿಯಾಗು ತ್ತಿರಲಿಲ್ಲ ಎನ್ನುವುದು ತಿಳಿದುಬರುತ್ತದೆ. ಇಂತಹ ಶೋಚನೀಯ ಸಂಗತಿಗಳನ್ನು ಕಥನಗೀತೆಗಳು ಅನಾವರಣ ಮಾಡುತ್ತವೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅವುಗಳಿಗೆ ಪರಿಹಾರವಾಗಿ ಕೆಲವೊಂದು ಅಂಶಗಳನ್ನು ಇಲ್ಲಿ ಹೇಳಬಯಸುತ್ತೇನೆ. ಬಹುಶಃ ಕಥನಗೀತೆಗಳಲ್ಲಿ ಬರುವ ಹೆಣ್ಣುಗಳು ಯಾವುದೇ ಪ್ರತಿಭಟನೆ ನೇರವಾಗಿ ಮಾಡುವುದಿಲ್ಲ. ಒಂದು ವೇಳೆ ನೇರವಾಗಿ ಪ್ರತಿಭಟನೆ ಮಾಡಿದ್ದೇ ಆಗಿದ್ದರೆ ಇಂತಹ ಅನಾಹುತಗಳನ್ನು ತಪ್ಪಿಸಬಹುದಿತ್ತೇನೋ ಹಾಗೆಯೆ ಅವರಿಗೆ ಶಿಕ್ಷಣದ ಕೊರತೆಯೂ ಇರಬಹುದು. ಇಲ್ಲಿ ಹೆಚ್ಚಾಗಿ ಕೆಳವರ್ಗದವರು, ಹೆಣ್ಣು ಮಾತ್ರ ಬಲಿಯಾಗಿರುವುದೆ ಇದಕ್ಕೆ ನೇರವಾಗಿ ಹೆಣ್ಣು ಕಾರಣಳಾಗಿದ್ದಾಳೆ. ಹೆಣ್ಣು ಹೆಣ್ಣನ್ನು ಎಂದು ಶೋಷಣೆ ಮಾಡುವುದು ನಿಲ್ಲುತ್ತದೆಯೋ, ಸ್ವಾರ್ಥ ಬುದ್ಧಿ ಬಿಡುತ್ತಾರೋ ಅಂದು ಇಂತಹ ಘಟನೆಗಳು ಸ್ವಲ್ಪ ಮಟ್ಟಿಗಾದರೂ ಕಡಿಮೆ ಮಾಡಬಹುದು. ನಮ್ಮ ಸಮಾಜ ಬಹುಪತ್ನಿತ್ವಕ್ಕೆ ಅವಕಾಶ ಮಾಡಿಕೊಟ್ಟಂತೆ, ಬಹುಪತ್ನಿತ್ವಕ್ಕೆ ಅವಕಾಶಕೊಟ್ಟರೆ ಬಹುಶಃ ಈ ಸವತಿ ಮಾತ್ಸರ್ಯ

ಕಡಮೆಯಾದರೂ ಆಗಬಹುದು. ಇದು ನಮ್ಮ ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬೆಳೆದು ಬಂದ ಹೆಣ್ಣುಮಕ್ಕಳು ಬಹು ಪತ್ನಿತ್ವಕ್ಕೆ ಎಂದು ಒಪ್ಪುವುದಿಲ್ಲ. ಹಾಗೆಯೇ ಸ್ತ್ರೀಯರಿಗೆ ಎಂದು ಸಮಾನಾವಾದ ಹಕ್ಕು, ಧೈರ್ಯವಾಗಿ ಪಡೆಯುತ್ತಾಳೋ ಅಂದು ಇಂತಹ ಕೃತ್ಯಗಳು ಮರುಕಳಿಸದಂತೆ ಆಗಬಹುದು.

ಒಟ್ಟಾರೆ ಹೇಳುವುದಾದರೆ, ಕಥನಗೀತೆಗಳಲ್ಲಿ ಬರುವ ಹೆಣ್ಣಿಗೂ, ನಿತ್ಯ ಜೀವನದಲ್ಲಿ, ಬಾಳಿ ಬದುಕುವ ಹೆಣ್ಣಿಗೂ ಯಾವುದೇ ವ್ಯತ್ಯಾಸವಿಲ್ಲ. ಜೀವಂತ ಸಮಾಜದ ಹೆಣ್ಣು ಕಥನಗೀತೆಯಲ್ಲಿ ಬರುವ ಹೆಣ್ಣಾಗಿದ್ದಾಳೆ. ಹಾಗೆಯೇ ಕಥನಗೀತೆಯಲ್ಲಿ ಬರುವ ಹೆಣ್ಣು ಜೀವಂತ ಸಮಾಜದಲ್ಲಿ ಬಾಳುತ್ತಿದ್ದಾಳೆ ಎಂದರೆ ತಪ್ಪಾಗಲಾರದು. ಹೀಗಾಗಿ ಜನಪದ ಕಥನಗೀತೆಯ ಮಹಿಳೆ ಎಲ್ಲಾ ಸಮಾಜದಲ್ಲೂ ಎಲ್ಲಾ ಕಾಲದಲ್ಲೂ ಕಂಡುಬರುವ ಮಹಿಳೆಯಾಗಿದ್ದಾಳೆ.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ವಕ್ತೃಗಳ ವಿವರ

೩. ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು


ಅಂಬಳಿಕೆ ಹಿರಿಯಣ್ಣ (ಸಂ), ತೀರ್ಥಹಳ್ಳಿ ಸುತ್ತಿನ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೬.

ಅಂಬಳಿಕೆ ಹಿರಿಯಣ್ಣ (ಸಂ), ಕಾಡುಗೊಲ್ಲರ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೮.

ಅಂಬಳಿಕೆ ಹಿರಿಯಣ್ಣ (ಸಂ), ತಂಬೂರಿ ಸಂಪ್ರದಾಯದ ಕಾವ್ಯಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೦.

ಅಂಬಳಿಕೆ ಹಿರಿಯಣ್ಣ (ಸಂ), ಜಾನಪದ ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೪

ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮

ಅಮೃತ ಸೋಮೇಶ್ವರ, ಅವಿಲು, ಕನ್ನಡ ಸಂಘ ವಿವೇಕಾನಂದ ಕಾಲೇಜು, ಪುತ್ತೂರು, ದ.ಕ. ೧೯೭೮

ಅರವಿಂದ ಮಾಲಗತ್ತಿ (ಸಂ), ಪುರಾಣ ಜಾನಪದ ಮತ್ತು ದೇಶಿವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೯

ಅರವಿಂದ ಮಾಲಗತ್ತಿ (ಸಂ), ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶಿವಾದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮

ಅರವಿಂದ ಮಾಲಗತ್ತಿ (ಸಂ), ಜಾನಪದ ತತ್ವಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೯

ಅರವಿಂದ ಮಾಲಗತ್ತಿ (ಸಂ), ಕನ್ನಡ ಕಾವ್ಯದಲ್ಲಿ ದಲಿತ ಧ್ವನಿಗಳು, ವಿಚಾರವಾದಿ ಪ್ರಕಾಶನ, ಕುವೆಂಪು ರಸ್ತೆ, ಮೈಸೂರು, ೧೯೮೭

ಅನಂತ ರಂಗಾಚಾರ್ ಎನ್., ಪಂಪ ಮಹಾಕವಿ ವಿರಚಿತ ಪಂಪ ಭಾರತ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

ಅವದಾನಿ ಜಿ.ಎಸ್. (ಸಂ), ಸಾಹಿತ್ಯ ವಿಮರ್ಶೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೨

ಅರ್ಚಕ ಬಿ. ರಂಗಸ್ವಾಮಿ (ಸಂ), ಹುಟ್ಟಿದ ಹಳ್ಳಿಹಾಡು, ಬಂಡಿಹೊಳೆ, ೧೯೩೩

ಅಗ್ರಹಾರ ಕೃಷ್ಣಮೂರ್ತಿ (ಸಂ), ಸಂಸ್ಕೃತಿಕ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

ಅಶ್ವಿನಿ ಧೋಂಗಡೆ (ಮೂಲ), ವಿಠಲ್‌ರಾವ್ ಗಾಯಕವಾಡ್ (ಅನು), ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೧

ಕಾಳೇಗೌಡ ನಾಗವಾರ (ಸಂ), ಜಾನಪದ ತುಂಬು ಹೊಳೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦

ಕಾಳೇಗೌಡ ನಾಗವಾರ, ಆನಂದಮೂರ್ತಿ ಜಿ.ವಿ., ತ್ರಿಪದಿ, ರಗಳೆ, ಜನಪದ ಸಾಹಿತ್ಯ, ಸಾಮಾನ್ಯನಿಗೆ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ–೭, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೦

ಕಾಳೇಗೌಡ ನಾಗವಾರ, ಕಾಡುಗೊಲ್ಲರ ಜಾನಪದ : ಒಂದು ಅಧ್ಯಯನ, ಅಪ್ರಕಟಿತ ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೩

ಕಾಳೇಗೌಡ ನಾಗವಾರ, ಬಯಲು ಸೀಮೆಯ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೩

ಕಾಳೇಗೌಡ ನಾಗವಾರ, ಬೇಕಾದ ಸಂಗಾತಿ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೦

ಕಾಳೇಗೌಡ ನಾಗವಾರ, ಬೀದಿಮಕ್ಕಳು ಬೆಳೆದೊ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೭

ಕಾಳೇಗೌಡ ನಾಗವಾರ, ಜನಪದ ಸಾಹಿತ್ಯ, ಯುಗಾದಿ ಪ್ರಕಾಶನ, ಬೆಂಗಳೂರು, ೧೯೯೬

ಕ್ಯಾತನಹಳ್ಳಿ ರಾಮಣ್ಣ (ಸಂ), ಜನಪದ ವಿಹಾರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೧

ಕ್ಯಾತನಹಳ್ಳಿ ರಾಮಣ್ಣ (ಸಂ), ಫ್ಲೀಟರ್ ಸಂಗ್ರಹಿಸಿದ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೨

ಕ್ಯಾತನಹಳ್ಳಿ ರಾಮಣ್ಣ (ಸಂ), ಫ್ಲೀಟರ್ ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೭

ಕ್ಯಾತನಹಳ್ಳಿ ರಾಮಣ್ಣ, ಕೊಂತಿಪೂಜೆ : ಒಂದು ಅಧ್ಯಯನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೫

ಕುವೆಂಪು (ಸಂ), ಕನ್ನಡ ಒಗಟುಗಳ ಸಮೀಕ್ಷೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೯೭

ಗದ್ದಗೀಮಠ ಬಿ.ಎಸ್., ಜನತಾ ಗೀತೆಗಳು, ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಧಾರವಾಡ, ೧೯೫೬

ಗದ್ದಗೀಮಠ ಬಿ.ಎಸ್., ಲೋಕಗೀತೆಗಳು, ಮೈಸೂರು ರಾಜ್ಯ ಸಾಹಿತ್ಯ ಮತ್ತು ಅಭಿವೃದ್ಧಿ ಇಲಾಖೆ, ಬೆಂಗಳೂರು, ೧೯೬೦

ಗಾಯತ್ರಿ ನಾವಡ, ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

ಗಾಯತ್ರಿ ನಾವಡ, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಸಿರಿ ಪ್ರಕಾಶನ, ಹೊಸಪೇಟೆ, ೧೯೯೯

ಗಾಯತ್ರಿ ನಾವಡ, ವಿರಚನೆ, ಎನ್.ಆರ್.ಎ.ಎಂ.ಹೆಚ್. ಪ್ರಕಾಶನ, ಕೋಟೇಶ್ವರ, ದಕ್ಷಿಣ ಕನ್ನಡ, ೧೯೯೭

ಗಾಯತ್ರಿ ನಾವಡ, ಮಹಿಳೆ ಬಿಡುಗಡೆ ಹಾದಿಯಲ್ಲಿ, ವಿಚಾರವಾದಿ ಪ್ರಕಾಶನ, ಕುವೆಂಪು ರಸ್ತೆ, ಮೈಸೂರು, ೧೯೯೧

ಗಿರಡ್ಡಿ ಗೋವಿಂದರಾಜು, ಜನಪದ ಕಾವ್ಯ, ಧಾರವಾಡ, ೧೯೭೨

ಗುಂಡ್ಮಿ ಚಂದ್ರಶೇಖರ ಐತಾಳ (ಸಂ), ಕೈಲಿಯ ಕರೆದ ನೊರೆಹಾಲು ದಕ್ಷಿಣ ಜಿಲ್ಲೆಯ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦

ಗುರುಮೂರ್ತಿ ಕೆ.ಜಿ. (ಸಂ), ಜಾನಪದ ಮಾಹಿತಿಯ ಮರು ಅರ್ಥೈಸುವಿಕೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೩

ಗುರುಪ್ರಸಾದ್ ಸಿ.ಟಿ., ನೀಲಗಾರರು : ಒಂದು ಧಾರ್ಮಿಕ ಸಮುದಾಯದ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಗೊರೂರು ರಾಮಸ್ವಾಮಿ ಐಯ್ಯಂಗಾರ್, ಹಳ್ಳಿಯಬಾಳು, ಕಾವ್ಯಾಲಯ ಮೈಸೂರು, ೧೯೪೩

ಗೊರೂರು ರಾಮಸ್ವಾಮಿ ಐಯ್ಯಂಗಾರ್, ಜನಪದ ಜೀವನ ಮತ್ತು ದರ್ಶನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೩೮

ಚೆನ್ನಮಲ್ಲಪ್ಪ ರೇವಪ್ಪ ಲಿಂಗಪ್ಪ, ಗರತಿಹಾಡು, ಸಾಹಿತ್ಯ ಭಂಡಾರ, ಹುಬ್ಬಳ್ಳಿ, ೧೯೩೧

ಚನ್ನಕ್ಕ ಎಲಿಗಾರ, ಪ್ರಾಚೀನ ಕರ್ನಾಟಕದ ರಾಣಿಯರು, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೮೭

ಚಂದ್ರಶೇಖರ ಕಂಬಾರ (ಸಂ), ಕನ್ನಡ ಜಾನಪದ ವಿಶ್ವಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

ಚೆಲುವೇಗೌಡ ತ.ಚಿ., ಕೆಲವು ಜನಪದ ಸಂಪ್ರದಾಯಗಳು, ತಳಗವಾದಿ ಪ್ರಕಾಶನ, ಮೈಸೂರು, ೧೯೭೮

ನಾಗೇಗೌಡ ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ ಸಂಪುಟ ೪, ಮಾನಸ ಗಂಗೋತ್ರಿ, ಮೈಸೂರು, ೧೯೭೨

ನಾಗೇಗೌಡ ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ ಸಂಪುಟ ೫, ಮಾನಸ ಗಂಗೋತ್ರಿ, ಮೈಸೂರು, ೧೯೭೪

ನಾಗೇಗೌಡ ಎಚ್.ಎಲ್. (ಸಂ), ಮೈಲಾರಲಿಂಗನ ಕಾವ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೮೭

ನಾಗೇಗೌಡ ಎಚ್.ಎಲ್., ಕರ್ನಾಟಕದ ಜಾನಪದ ಕಥೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

ನಾಗೇಶ್ ಹೆಚ್.ಕೆ., ಕಾಳಿಂಗರಾಯನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ನಾಗೇಶ್ ಎಚ್.ವಿ., ಸಾಹಿತ್ಯ ಮತ್ತು ಸಮಾಜ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ನಾರಾಯಣ ಪಿ.ವಿ., ಚಂಪೂಕವಿಗಳು, ಸಾಮಾನ್ಯನಿಗೆ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೪, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೭

ನೇಗಿನಹಾಳ ಎಂ.ಬಿ., ನೇಗಿನಹಾಳರ ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಪರಮಶಿವಯ್ಯ ಜೀ.ಶಂ. ದಕ್ಷಿಣ ಕರ್ನಾಟಕ ಜಾನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೦

ಪರಮಶಿವಯ್ಯ ಜೀ.ಶಂ. (ಸಂ), ಪಿರಿಯಾಪಟ್ಟಣ ಕಾಳಗ, ಚೇತನ ಬುಕ್‌ಹೌಸ್, ಮೈಸೂರು, ೧೯೯೭

ಪರಮಶಿವಯ್ಯ ಜೀ.ಶಂ. (ಸಂ), ಕನ್ನಡ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೯

ಪರಮಶಿವಯ್ಯ ಜೀ.ಶಂ. (ಸಂ), ಕನ್ನಡ ವೃತ್ತಿಗಾಯಕರ ಕಾವ್ಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಬೆಂಗಳೂರು, ೧೯೮೨

ಪರಮಶಿವಯ್ಯ ಜೀ.ಶಂ. (ಸಂ), ಜನಪದ ಖಂಡಕಾವ್ಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಬೆಂಗಳೂರು, ೧೯೮೨

ಪರಮಶಿವಯ್ಯ ಜೀ.ಶಂ. (ಸಂ), ಜನಪದ ಕಾವ್ಯ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೧

ಚಲುವರಾಜು (ಸಂ), ಜುಂಜಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಚಂದ್ರಶೇಖರ ಎಸ್., ವಸಾಹತುಶಾಹಿ ಟಿಪ್ಪಣಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೪

ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೮

ಚಿದಾನಂದಮೂರ್ತಿ ಎಂ., ಗ್ರಾಮೀಣ, ಭಾಪ್ಕೋ ಪ್ರಕಾಶನ, ಬೆಂಗಳೂರು

ಚಿದಾನಂದಮೂರ್ತಿ ಎಂ., ಸಂಶೋಧ ತರಂಗ, ಸರಸ ಸಾಹಿತ್ಯ ಪ್ರಕಾಶನ, ಬೆಂಗಳೂರು, ೧೯೬೬

ಚಿದಾನಂದಮೂರ್ತಿ ಎಂ., ಕರ್ನಾಟಕ ಸಂಸ್ಕೃತಿ ನಮ್ಮ ಹೆಮ್ಮೆ, ಸಾಹಿತಿ ಕಲಾವಿದರ ಬಳಗ, ಬೆಂಗಳೂರು

ಚಿದಾನಂದಮೂರ್ತಿ ಎಂ., ಜನ ಜನಪದ ಜಾನಪದ ೧, ೨, ೩ ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೧೯೯೧

ಜವರೇಗೌಡ ದೇ., ಜಾನಪದ ಅಧ್ಯಯನ, ಚೇತನ ಬುಕ್‌ಹೌಸ್, ನಾರಾಯಣಶಾಸ್ತ್ರಿ ರಸ್ತೆ, ಮೈಸೂರು, ೧೯೯೧

ಜವರೇಗೌಡ ದೇ., ಜನಪದ ಸ್ವರೂಪ, ಚೇತನ ಬುಕ್‌ಹೌಸ್, ನಾರಾಯಣಶಾಸ್ತ್ರಿ ರಸ್ತೆ, ಮೈಸೂರು, ೧೯೯೧

ಜವರೇಗೌಡ ದೇ. (ಸಂ), ಜನಪದ ಗೀತಾಂಜಲಿ, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೮೭

ತಪಸ್ವಿಕುಮಾರ್ ಜಿ., ಕನ್ನಡ ಗಾದೆಗಳ ಸಮೀಕ್ಷೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೨

ತಿಪ್ಪೇಸ್ವಾಮಿ ಜಿ.ಆರ್., ರಂಗಾರೆಡ್ಡಿ ಕೋಡಿರಾಂಪುರ, (ಸಂ), ಜಾನಪದ ಅನ್ವಯಿಕತೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೩

ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೬೮

ತಿಪ್ಪೇರುದ್ರಸ್ವಾಮಿ ಎಚ್., ಜನಪದ ಕಾವ್ಯ ಸಂಚಯ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೪

ತಾಳ್ತಜೆ ವಸಂತಕುಮಾರ, ಸಾರಸ ಸಂಶೋಧನಾತ್ಮಕ ಪ್ರಬಂಧಗಳು ಚಿರ ಸಾಹಿತ್ಯ ಪ್ರಕಾಶನ, ಬೆಂಗಳೂರು

ದಾಸೇಗೌಡ ಜಿ.ವಿ., ನಮ್ಮ ಜನಪದ ನಂಬಿಕೆಗಳು, ಮೈಸೂರು, ೧೯೭೩

ಕುವೆಂಪು, ಸವಿನೆನಪು, ಪಂ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೦

ಕೇಶವನ್ ಪ್ರಸಾದ್ ಕೆ. (ಸಂ), ಮಾದೇಶ್ವರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೯೭

ಕೃಷ್ಣಮೂರ್ತಿ ಹನೂರು (ಸಂ), ಜನಪದ ವೀರಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೭

ಕೃಷ್ಣಮೂರ್ತಿ ಹನೂರು (ಸಂ), ಕತ್ತಾಲದಾರಿ ದೂರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೧

ಕೃಷ್ಣಮೂರ್ತಿ ಹನೂರು, ಕರ್ನಾಟಕ ಸಾಹಿತ್ಯ ಪ್ರವೇಶಿಕೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೧

ಕೃಷ್ಣಸ್ವಾಮಿ ಕ.ರಾ., ಜನಪದ ಕಥನಗೀತೆಗಳು, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೫೯

ಕೃಷ್ಣಸ್ವಾಮಿ ಕ.ರಾ., ಜನಪದ ಪ್ರೇಮ ಗೀತೆಗಳು, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ಮೈಸೂರು, ೧೯೫೭

ಕೃಷ್ಣಸ್ವಾಮಿ ಕ.ರಾ., ಶ್ರೀ ಆದಿ ಚುಂಚನಗಿರಿ, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ಮೈಸೂರು, ೧೯೬೦

ಕೃಷ್ಣಸ್ವಾಮಿ ಕ.ರಾ., ಜನಪದ ಗೀತೆಗಳಲ್ಲಿ ಮಹಾಭಾರತ, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೬೩

ಕೃಷ್ಣಸ್ವಾಮಿ ಕ.ರಾ., ಅಂಬಿಗರ ಗಂಗ, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೬೩

ಕೃಷ್ಣಸ್ವಾಮಿ ಕ.ರಾ., ಸೂಸಿ ಹರಿದಾಳೆ ಶಿವಗಂಗೆ, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೬೩

ಕೃಷ್ಣಸ್ವಾಮಿ ಕ.ರಾ., ಚೆನ್ನಿಗ ಚೆಲುವಯ್ಯ, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೬೩

ಕೃಷ್ಣಮೂರ್ತಿ ಸಿ.ಪಿ., ಜಾನಪದ ಪ್ರತಿಭೆ, ಪ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೩

ಕೋಸಾಂಬಿ ಡಿ.ಡಿ., ಪುರಾಣ ಮತ್ತು ವಾಸ್ತವ ಕನ್ನಡಕ್ಕೆ ಟಿ.ಎಸ್. ವೇಣುಗೋಪಾಲ ಮತ್ತು ಶೈಲಜಾ ಚಿಂತನ ಪ್ರಕಾಶನ, ಉತ್ತರ ಕನ್ನಡ, ೨೦೦೩

ಕರೀಂಖಾನ್ ಎಸ್.ಕೆ., ಜನಪದ ಗೀತೆ, ರಾಮರಾಜ್ಯ ಪ್ರಕಾಶನ, ಬೆಂಗಳೂರು, ೧೯೫೫

ಗದ್ದಗೀಮಠ ಬಿ.ಎಸ್., ಕನ್ನಡ ಜಾನಪದ ಗೀತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೩

ದೇವೇಂದ್ರ, ಜನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ, ಕುಮಾರ ಹಕಾರಿ ನಿರೂಪಣೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

ದೇವುಡು ನರಸಿಂಹಶಾಸ್ತ್ರಿ, ಕರ್ನಾಟಕ ಸಂಸ್ಕೃತಿ, ಶಾರದಾ ಪ್ರಕಟಣಾಲಯ, ಬೆಂಗಳೂರು, ೧೯೬೧

ನರಸಿಂಹಶಾಸ್ತ್ರಿ ಕೆ.ಎಲ್., ಪಂಪಮಹಾಕವಿ ವಿರಚಿತ ಆದಿಪುರಾಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

ನರಸಿಂಹಚಾರ್ ಆರ್., ಕರ್ನಾಟಕ ಕವಿಚರಿತ ಸಂ.೧, ಬೆಂಗಳೂರು ೧೯೭೨

ನರಸಿಂಹಯ್ಯ ಹೆಚ್., ಮೂಢ ನಂಬಿಕೆಗಳು ಮತ್ತು ವೈಜಆನಿಕ ಮನೋಭಾವ, ಬೆಂಗಳೂರು, ೧೯೯೨

ನಳನಿ ಎಂ.ಬಿ., ಕಾಡುಮಲ್ಲಿಗೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೨

ನರಸಿಂಹಗೌಡ, ನಾರಾಯಣಪುರ, (ಸಂ), ಮೆಲುಕೋಟೆ ಸುತ್ತಿನ ಜನಪದ ಕತೆಗಳು, ಹೊಂಗಿರಣ, ಪ್ರಕಾಶನ, ಕೆ.ಜಿ.ಎಫ್., ೧೯೮೯

ನಾಯಕ ಹಾ.ಮಾ., ಜಾನಪದ ಸ್ವರೂಪ, ತಂ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೧

ನಾಯಕ ಹಾ.ಮಾ., ಜಾನಪದ ಸಂವಾದ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೧

ನಾಯಕ ಎನ್.ಆರ್., (ಸಂ), ಪಾಠಾಂತರ ಕಥನ ಕವನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭

ನಾಗಭೂಷಣ ಸ್ವಾಮಿ ಓ.ಎಲ್., ಪುರಾಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩

ನಾಗರತ್ನ ಬಿ.ಎಸ್., ಜಾನಪದ ಸ್ವರೂಪ, ತಂ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೧

ನಾಗರಾಜ ಡಿ.ಆರ್., ಅಮೃತ ಮತ್ತು ಗರುಡ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

ನಾಗರಾಜ ಡಿ.ಆರ್., ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ, ಅಕ್ಷರ ಪ್ರಕಶಾನ, ಹೆಗ್ಗೋಡು, ಸಾಗರ

ನಾಗರಾಜ ಡಿ.ಆರ್., ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೬

ನಾಗರಾಜಯ್ಯ ಹಂ.ಪ., ಆಕಾಶ ಜಾನಪದ, ಬೆಂಗಳೂರು, ೧೯೮೫

ನಾಗೇಗೌಡ ಎಚ್.ಎಲ್., ಸೋಬಾನೆ ಚಿಕ್ಕಮ್ಮನ ಪದಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೨

ನಾಗೇಗೌಡ ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ ಸಂಪುಟ ೩, ಮಾನಸ ಗಂಗೋತ್ರಿ, ಮೈಸೂರು, ೧೯೬೬

ಪರಮಶಿವಯ್ಯ ಜೀ.ಶಂ. (ಸಂ), ದೊಂಬಿದಾಸರ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೪

ಪರಮಶಿವಯ್ಯ ಜೀ.ಶಂ. (ಸಂ), ಮಂಟೇಸ್ವಾಮಿ ಕಾವ್ಯ, ಸಾಹಿತ್ಯ, ಸದನ ಮಾನಸ ಗಂಗೋತ್ರಿ, ಮೈಸೂರು, ೧೯೭೩

ಪರಮಶಿವಯ್ಯ ಜೀ.ಶಂ. (ಸಂ), ಕನ್ನಡ ಒಗಟುಗಳು, ಮೈಸೂರು, ೧೯೬೩

ಪರಮಶಿವಯ್ಯ ಜೀ.ಶಂ., ಆಯ್ದ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦

ಪರಮಶಿವಯ್ಯ ಜೀ.ಶಂ., ಅವರ ನೆನೆದೇವು, ಶ್ರೀ ಆದಿಚುಂಚನಗಿರಿ ಗ್ರಂಥಮಾಲೆ, ಆದಿಚುಂಚನಗಿರಿ, ೧೯೬೦

ಪರಮಶಿವಯ್ಯ ಜೀ.ಶಂ., ಸಾಹಿತ್ಯ ಸಮೀಕ್ಷೆ, ಮೋಹನ ಪ್ರಕಾಶನ, ಮೈಸೂರು, ೧೯೬೭

ಪರಮಶಿವಯ್ಯ ಜೀ.ಶಂ., ಜಾನಪದ ಕೆಲವು ಮುಖಗಳು, ಬೆಂಗಳೂಕು, ೧೯೭೫

ಪರಮಶಿವಯ್ಯ ಜೀ.ಶಂ., ನಮ್ಮ ಜನಪದ ಸಾಹಿತ್ಯ ಸಾಹಿತ್ಯ ಸದನ, ಮೈಸೂರು, ೧೯೬೭

ಪುರುಷೋತ್ತಮ ಬಿಳಿಮಲೆ, ಕರಾವಳಿ ಜಾನಪದ, ಮಂಗಳ ಗಂಗೋತ್ರಿ, ದಕ್ಷಿಣ ಕನ್ನಡ ಜಿಲ್ಲೆ.

ಪುರುಷೋತ್ತಮ ಬಿಳಿಮಲೆ, ಬಂಡಾಯ ದಲಿತ ಸಾಹಿತ್ಯ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯

ಪುರುಷೋತ್ತಮ ಬಿಳಿಮಲೆ, ಕೂಡುಕಟ್ಟು ಜಾನಪದ ಅಧ್ಯಯನ ಲೇಖನಗಳು, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ

ಪಂಚಮುಖಿ ಆರ್.ಎಸ್., ಕರ್ನಾಟಕ ಜಾನಪದ ಗೀತೆಗಳು, ಕನ್ನಡ ರಿಸರ್ಚ್ ಇನ್ಸಿಟ್ಯೂಟ್, ಧಾರವಾಡ, ೧೯೬೩

ಪ್ರಹ್ಲಾದ ಅಗಸನಕಟ್ಟೆ, ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು, ಹರ್ಷ ಪ್ರಕಾಶನ, ಕಿಮ್ಸ್ ಕ್ವಾಟರ್ಸ್, ಹುಬ್ಬಳ್ಳಿ, ೨೦೦೪

ಬಸವರಾಜ ಕಲ್ಗುಡಿ, ಮಾಸಿತಿ ಒಂದು ಆಚರಣೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨

ಬೆಟಗೇರಿ ಕೃಷ್ಣಶರ್ಮ, ನಮ್ಮ ಸಂಸ್ಕೃತಿ ಪರಂಪರೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೬

ಬೆಟಗೇರಿ ಕೃಷ್ಣಶರ್ಮ (ಸಂ), ಕನ್ನಡ ಬಾವುಡ, ಕರ್ನಾಟಕ ಸಂಘ, ಧಾರವಾಡ, ೧೯೭೮

ಭೈರಪ್ಪ ಎಸ್.ಎಲ್. (ಸಂ), ಮಾನ, ಗೀತಾ ಬುಕ್‌ಹೌಸ್, ಮೈಸೂರು, ೧೯೯೨

ಬರಗೂರು ರಾಮಚಂದ್ರಪ್ಪ (ಸಂ), ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪುನರ್ ಮೌಲ್ಯೀಕರಣ ಮಾಲೆ, ಕರ್ನಾಟಕ ಸಾಹಿದ್ಯ ಅಕಾಡೆಮಿ, ಬೆಂಗಳೂರು, ೧೯೯೭

ಬರಗೂರು ರಾಮಚಂದ್ರಪ್ಪ (ಸಂ), ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ, ಪುನರ್ ಮೌಲ್ಯೀಕರಣ ಮಾಲೆ, ಕರ್ನಾಟಕ ಸಾಹಿದ್ಯ ಅಕಾಡೆಮಿ, ಬೆಂಗಳೂರು, ೧೯೯೩

ಬರಗೂರು ರಾಮಚಂದ್ರಪ್ಪ (ಸಂ), ಶಿಷ್ಟ ಸಾಹಿತ್ಯದಲ್ಲಿ ಜನಪದ, ಪುನರ್ ಮೌಲ್ಯೀಕರಣ ಮಾಲೆ, ಕರ್ನಾಟಕ ಸಾಹಿದ್ಯ ಅಕಾಡೆಮಿ, ಬೆಂಗಳೂರು, ೧೯೯೩

ಬಸವರಾಜ ಸಬರದ, ಬಂಡಾಯ ಸಾಹಿತ್ಯದ ತಾತ್ವಿಕ ನಿಲುವುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

ಬಂಡಾಯ ಕಾವ್ಯ ಮತ್ತು ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭

ಬಸವರಾಜ ನೆಲ್ಲಿಸರ (ಸಂ), ಜಾನಪದ ೧೯೯೫, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೬

ಬೋರಲಿಂಗಯ್ಯ ಹಿ.ಚಿ., ದಾಸಪ್ಪ, ಜೋಗಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೧

ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧

ಬೋರಲಿಂಗಯ್ಯ ಹಿ.ಚಿ., ಸಿದ್ಧಿಯವರ ಸಂಸ್ಕೃತಿಕ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ಬೋರಲಿಂಗಯ್ಯ ಹಿ.ಚಿ. (ಸಂ), ಮಂಟೇಸ್ವಾಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಬೋರಲಿಂಗಯ್ಯ ಹಿ.ಚಿ., ಸಿದ್ಧಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೫

ಬೋರಲಿಂಗಯ್ಯ ಹಿ.ಚಿ., ಕಾಂಕ್ರೀಟ್ ಕಾಡು ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫

ಬುದ್ದಣ್ಣ ಹಿಂಗಮರೆ (ಸಂ), ಕನ್ನಡದಲ್ಲಿ ಶೋಕ ಕಾವ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೨

ಭಟ್ಟ ಜಿ.ಎಸ್., ಜಾನಪದ ೧೯೯೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೩

ಭಗವತ್ ಶರಣ ಉಪಾಧ್ಯಾಯ, ಭಾರತೀಯ ಬಹುಮುಖೀ ಸಂಸ್ಕೃತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೫

ಮರಳ ಸಿದ್ದಪ್ಪ ಕೆ., ಷಟ್ಪದಿ ಸಾಹಿತ್ಯ, ಸಾಮಾನ್ಯನಿಗೆ ಕನ್ನಡ ಸಾಹಿತ್ಯ ಚರಿತ್ರೆ, ಸಂ.೬, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೦

ಮರಳ ಸಿದ್ದಪ್ಪ ಕೆ., ಲಾವಣಿಗಳು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೨

ಮಾಸ್ತಿ ವೆಂಕಟೇಶ್ ಅಯ್ಯಾಂಗಾರ್, ಕರ್ನಾಟಕ ಜಾನಪದ ಸಾಹಿತ್ಯ ಜೀವನ ಕಾರ್ಯಲಯ, ಬೆಂಗಳೂರು, ೧೯೫೬

ಮಲ್ಲಾಪುರ ಡಿ.ವಿ., ಜನಪದ ಕಾವ್ಯದಲ್ಲಿ ಜೀವನಧರ್ಮ, ಧಾರವಾಡ, ೧೯೭೦

ಮುಗಳಿ ರಂ.ಶ್ರೀ., ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್‌ಹೌಸ್, ಮೈಸೂರು, ೨೦೦೦

ಮಣಿಪಾಲ್ ಆರ್.ಕೆ., ಬಂಡಾಯ ಕಥೆಗಳು, ಅಭಯ ಪ್ರಕಾಶನ, ಧಾರವಾಡ, ೧೯೮೦

ಮಂಜುನಾಥ ಬೇವಿನಕಟ್ಟಿ (ಸಂ), ಜನಪದ ಸಂಸ್ಕೃತಿ, ತೇಜಸ್ವಿ ಪ್ರಕಾಶನ, ಹ್ಯಾರಡ, ೧೯೯೩

ಮಂಜುನಾಥ ಬೇವಿನಕಟ್ಟಿ (ಸಂ), ಮೈಲಾರಲಿಂಗನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೯

ಮೃತ್ಯುಂಜಯ ಹೊರಕೇರಿ, ಮಧುರ ಜಾನಪದ, ಅಮರ ಪ್ರಕಾಶನ, ಗುಲಬರ್ಗಾ, ೨೦೦೫

ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೯

ಮೊಗಳ್ಳಿ ಗಣೇಶ್ (ಸಂ). ಮಲೆಮಾದೇಶ್ವರ ಕಾವ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

ಮೈಲಹಳ್ಳಿ ರೇವಣ್ಣ (ಸಂ), ಅಡವಿಗುಮಾರ ಮತ್ತು ಇತರ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೫

ಮೈಲಹಳ್ಳಿ ರೇವಣ್ಣ (ಸಂ), ಚಿತ್ರದುರ್ಗ ಜಿಲ್ಲೆಯ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೪

ರಮೇಶ ಸ.ಚಿ. (ಸಂ), ಸ್ವಾಸಿ ಚೆನ್ನಮ್ಮನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ರಮೇಶ ಸ.ಚಿ. (ಸಂ), ಮಾಟ, ಮಂತ್ರ ಮೋಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ರಮೇಶ ಸ.ಚಿ., ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ರಮೇಶ ಸ.ಚಿ. (ಸಂ), ದಕ್ಷಿಣ ಭಾರತೀಯ ಜಾನಪದ ಕೋಶ ಸಂ. ೧, ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

ರಹಮತ್ ತರೀಕೆರೆ, ಕರ್ನಾಟಕ ಸೂಫಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೮

ರಹಮತ್ ತರೀಕೆರೆ, ಕನ್ನಡ ಸಾಹಿತ್ಯ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೧

ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೩

ರಂಗಾರೆಡ್ಡಿ ಕೋಡಿರಾಂಪುರ, ತಿಪ್ಪೇಸ್ವಾಮಿ ಜಿ.ಆರ್. (ಸಂ), ಜಾನಪದ ಸಿದ್ಧಾಂತಗಳು ೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೩

ರಂಗಾರೆಡ್ಡಿ ಕೋಡಿರಾಂಪುರ (ಸಂ), ಜಾನಪದ ೧೯೯೩, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೫

ರಾಮಚಂದ್ರೇಗೌಡ ಹಿ.ಶಿ. (ಸಂ), ಜಾನಪದ ೧೯೯೫, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೫

ರಾಮಚಂದ್ರೇಗೌಡ ಹಿ.ಶಿ., ಜಾನಪದ ಸಾಂಸ್ಕೃತಿಕ ಆಯಾಮಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೭೮

ರಾಜಶೇಖರ ಪಿ.ಕೆ. (ಸಂ), ಜನಪದ ಮಹಾಕಾವ್ಯ ಮಲೆಮಾದೇಶ್ವರ, ಪ್ರಕಾಶಕರು, ಪಿ.ಕೆ. ರಾಜಶೇಖರ, ಮೈಸೂರು, ೧೯೭೩

ರಾಜಶೇಖರ ಪಿ.ಕೆ., ಜಾನಪದ ಸಂಭ್ರಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

ರಾಜಪ್ಪ ಟಿ.ಎಸ್. (ಸಂ), ಧಾರವಾಡ ಜಿಲ್ಲೆಯ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೮

ರಾಜಪ್ಪ ಟಿ.ಎಸ್. (ಸಂ), ಬಳ್ಳಾರಿ ಜಿಲ್ಲೆಯ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೬

ರಾಜಪ್ಪ ಟಿ.ಎಸ್. (ಸಂ), ಬೆಳಗಾಂ ಜಿಲ್ಲೆಯ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೭

ರಾಜಪ್ಪ ಟಿ.ಎಸ್., ಕೆರೆಹೊನ್ನಮ್ಮ ಮತ್ತು ಇತರೆ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೪

ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

ರೇವಣ್ಣ ಮೈಲಹಳ್ಳಿ, ಗುಣಸಾಗರಿ, ಚಿತ್ರದುರ್ಗದ ಸುತ್ತಿನ ಜನಪದ ಕಾವ್ಯಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಲಕ್ಕಪ್ಪಗೌಡ ಎಚ್.ಜೆ. (ಸಂ), ಮಲೆನಾಡು ಜನಪದ, ಮೈಸೂರು, ೧೯೮೩

ಲಕ್ಷ್ಮಣ್ ತೆಲಗಾವಿ, ಸಂಶೋಧನ, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು, ೧೯೯೧

ಲಿಂಗಯ್ಯ ಡಿ., ಬಯಲು ಸೀಮೆಯ ಜನಪದ ಗೀತೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೩

ಲಿಂಗಯ್ಯ ಡಿ., ಕೊಂತಿಪೂಜೆ, ದಿನಕರ ಪ್ರಕಾಶನ, ಪೀಹಳ್ಳಿ, ೧೯೬೭

ಲಿಂಗಯ್ಯ ಡಿ., ಜನಪದ ಸಾಹಿತ್ಯ ಸಂವಾದ, ದಿನಕರ ಪ್ರಕಾಶನ, ಚಾಮರಾಜ ನಗರ, ಬೆಂಗಳೂರು, ೧೯೮೨

ವೀರಣ್ಣದಂಡೆ, ಕನ್ನಡ ಜನಪದ ಪ್ರಜ್ಞೆ, ಬೆಂಗಳೂರು, ೧೯೯೩

ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಬೆಂಗಳೂರು, ೧೯೯೭

ಸುಂಕಾಪುರ ಎಂ.ಎಸ್., ಜೀವನ ಜೋಕಾಲಿ ಪದಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧

## ಇತರೆ ಗ್ರಂಥಗಳು

ಕರ್ನಾಟಕ (ಕನ್ನಡ ನಿಘಂಟು ವಿಶ್ವಕೋಶ), (ಪ್ರಸಂ) ಹಾ.ಮಾ.ನಾಯಕ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ೧೯೭೯

ಕನ್ನಡ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩

ಕನ್ನಡ ರತ್ನಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

ಜಾನಪದ (ಕರ್ನಾಟಕ ಜಾನಪದ ಪರಿಷತ್ತಿನ ಅಂಗ ಪತ್ರಿಕೆ)

# ವಕ್ತೃಗಳ ವಿವರ

| ಸಂ. | ಹೆಸರು | ವಯಸ್ಸು | ವಿದ್ಯಾರ್ಹತೆ | ವೃತ್ತಿ | ವಿಳಾಸ |
|---|---|---|---|---|---|
| ೧. | ತೀರ್ಥೇಶ್ ಕೆ.ಎಸ್. | ೪೮ | ಎಂ.ಎ.ಬಿಎಡ್. | ಉಪನ್ಯಾಸಕರು | ಮಳಗೇರಿ, ಶಿಕಾರಿಪುರ, ಶಿವಮೊಗ ಜಿಲ್ಲೆ |
| ೨. | ಹನುಮಂತಪ್ಪ ಬಿಂಗಿ | ೩೮ | ಎಂ.ಎ.ಬಿಎಡ್. | ಶಿಕ್ಷಕರು | ಕಾಟಪುರ, ಕುಷ್ಟಗಿ ತಾ., ಕೊಪ್ಪಳ ಜಿಲ್ಲೆ |
| ೩. | ಗಂಗನಾಯಕ ಎಲ್.ಎಸ್. | ೪೦ | ಪಿಎಚ್.ಡಿ, | ಪೋಲಿಸ್ | ನೀರಲಗುಡ್ಡ ಶಿರಾ ತಾ., ತುಮಕೂರು ಜಿಲ್ಲೆ |
| ೪. | ಲಕ್ಷ್ಮಣ ನಾಯಕ | ೬೦ | ೩ನೇ ತರಗತಿ | ಕೂಲಿ | ನೀರಲಗುಡ್ಡ ಶಿರಾ ತಾ., ತುಮಕೂರು ಜಿಲ್ಲೆ |
| ೫. | ಸಚ್ಚಿದಾನಂದ ಜಿ.ಪಿ. | ೩೫ | ೧೦ನೇ ತರಗತಿ | ಕಲಾವಿದ | ಗಟ್ಟದಹಳ್ಳಿ, ಹಾಸನ ಜಿಲ್ಲೆ |
| ೬. | ಶಿವಯೋಗಿ ರಾಚಯ್ಯ ಹಿರೇಮಠ | ೪೦ | ಎಂ.ಎಸ್.ಸಿ. | ಶಿಕ್ಷಕ | ಗುಲಬರ್ಗಾ, |
| ೭. | ಶಿವಶರಣಪ್ಪ ಎನ್. ಪಾಟೀಲ | ೩೫ | ಬಿ.ಇ | ಶಿಕ್ಷಕ | ಬೀದರ |
| ೮. | ಶ್ವೇತಾ ಬಿ.ಎಸ್. | ೩೬ | ಬಿ.ಎ. | ನಿರುದ್ಯೋಗಿ | ಸೂನಗಹಳ್ಳಿ, ಮಂಡ್ಯ |
| ೯. | ವಿದ್ಯಾ ಎನ್.ವಿ. | ೪೫ | ಬಿ.ಇ. | ಕಲಾವಿದೆ | ಶ್ರೀರಂಗಪಟ್ಟಣ |
| ೧೦. | ತುಳಜಪ್ಪ ಶೇಖಪ್ಪ ಲಮಾಣಿ | ೬೫ | ೨ನೇ ತರಗತಿ | ಕಲಾವಿದ | ಗೋವನಾಳ, ಶಿರಹಟ್ಟಿ, ಗದಗ |
| ೧೧. | ವೀರಯ್ಯ ಪಿ. ಮಠಪತಿ | ೫೨ | ಬಿ.ಎ. | ಕಲಾವಿದ | ಮಾಗಡಿ, ಶಿರಹಟ್ಟಿ ತಾ. ಗದಗ |
| ೧೨. | ಶಾಂತದೇವಿ ಬಿರಾದರ | ೪೫ | ಎಂ.ಎ. | ನಿರುದ್ಯೋಗಿ | ಬೀದರ |
| ೧೩. | ಮಾರುತಿ ಯಲ್ಲಪ್ಪ ಪೊನ್ನಣ್ಣವರ್ | ೫೪ | ೧೦ನೇ ತರಗತಿ | ಕೃಷಿ | ಉಂಡೇನಹಳ್ಳಿ ಶಿರಹಟ್ಟಿ ತಾ. ಗದಗ ಜಿ. |
| ೧೪. | ಚಂದ್ರಪ್ಪ ಪುಟ್ಟಪ್ಪ ಭಜಂತ್ರಿ | ೪೦ | ಅನಕ್ಷರಸ್ಥ | ಕೂಲಿ | ದೊಡ್ಡೂರು, ಶಿರಹಟ್ಟಿ ಗದಗ ಜಿಲ್ಲೆ |
| ೧೫. | ಫಕ್ಕೀರಪ್ಪ ಡೊಳ್ಳಿನ | ೬೦ | ೪ನೇ ತರಗತಿ | ಕೂಲಿ | ಶಿಗ್ಲಿ, ಶಿರಹಟ್ಟಿ ತಾ. ಗದಗ ಜಿಲ್ಲೆ |
| ೧೬. | ಅಶೋಕ ಚನ್ನಪ್ಪ ಹುಲಗೂರು | ೫೩ | ಬಿ.ಎ. | ಕೃಷಿ | ಶಿಗ್ಲಿ, ಶಿರಹಟ್ಟಿ ತಾ. ಗದಗ ಜಿಲ್ಲೆ |

| ಸಂ. | ಹೆಸರು | ವಯಸ್ಸು | ವಿದ್ಯಾರ್ಹತೆ | ವೃತ್ತಿ | ವಿಳಾಸ |
|---|---|---|---|---|---|
| ೧೭. | ತಿಪ್ಪಣ್ಣ ಎನ್. ಬದಾಮಿ | ೬೦ | ಪಿ.ಯು.ಸಿ. | ಕೃಷಿ | ಶಿಗ್ಗಿ, ಶಿರಹಟ್ಟಿ ತಾ. ಗದಗ ಜಿಲ್ಲೆ |
| ೧೮. | ಲಕ್ಷ್ಮಣ್ | ೪೭ | ಅನಕ್ಷರಸ್ಥ | ಕೂಲಿ | ತಮ್ಮೇನಹಳ್ಳಿ, ಮೊಳಕಾಲ್ಮೂರು, ಚಿತ್ರದುರ್ಗ |
| ೧೯. | ಭೀಮಕ್ಕ | ೫೪ | ಅನಕ್ಷರಸ್ಥೆ | ಕೂಲಿ | ತಮ್ಮೇನಹಳ್ಳಿ, ಮೊಳಕಾಲ್ಮೂರು, ಚಿತ್ರದುರ್ಗ |
| ೨೦. | ಲಕ್ಷ್ಮಣ | ೩೭ | ಪಿ.ಯು.ಸಿ. | ಕೂಲಿ | ತಮ್ಮೇನಹಳ್ಳಿ, ಮೊಳಕಾಲ್ಮೂರು, ಚಿತ್ರದುರ್ಗ |
| ೨೧. | ನಿಂಗಣ್ಣ | ೪೫ | ಅನಕ್ಷರಸ್ಥ | ಕೂಲಿ | ಹುರಡಿಹಳ್ಳಿ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ. |
| ೨೨. | ಹನುಮಜ್ಜಿ | ೭೦ | ಅನಕ್ಷರಸ್ಥೆ | ಕೂಲಿ | ಹುರಡಿಹಳ್ಳಿ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ. |
| ೨೩. | ನಾಗಮ್ಮ | ೬೫ | ಅನಕ್ಷರಸ್ಥೆ | ಕೂಲಿ | ಗುಡ್ಡದಹಳ್ಳಿ, ಮೊಳಕಾಲ್ಮೂರು, ಚಿತ್ರದುರ್ಗ |
| ೨೪. | ಹನುಮಕ್ಕ | ೬೮ | ಅನಕ್ಷರಸ್ಥೆ | ಕೂಲಿ | ಗುಡ್ಡದಹಳ್ಳಿ, ಮೊಳಕಾಲ್ಮೂರು, ಚಿತ್ರದುರ್ಗ |
| ೨೫. | ದುರುಗಮ್ಮ | ೭೨ | ಅನಕ್ಷರಸ್ಥೆ | ಕೂಲಿ | ಅಂಬೇಡ್ಕರ್ ನಗರ ಮೊಳಕಾಲ್ಮೂರು ಚಿತ್ರದುರ್ಗ ಜಿಲ್ಲೆ. |
| ೨೬. | ಸಾಕಮ್ಮ | ೩೪ | ೨ನೆ ತರಗತಿ | ಕೂಲಿ | ರಾಯದುರ್ಗ, ಆಂ.ಪ್ರ |
| ೨೭. | ತಿಪ್ಪೇಸ್ವಾಮಿ | ೩೬ | ೫ನೇ ತರಗತಿ | ಕೂಲಿ | ಬೊಮ್ಮಕನಹಳ್ಳಿ ರಾಯದುರ್ಗ, ಆಂ.ಪ್ರ |
| ೨೮. | ಗಂಗಮ್ಮ | ೭೮ | ಅನಕ್ಷರಸ್ಥೆ | ಕೂಲಿ | ಹನುಮಾಪುರ ಮೊಳಕಾಲ್ಮೂರು ಚಿತ್ರದುರ್ಗ ಜಿಲ್ಲೆ. |
| ೨೯. | ತಿಮ್ಮಜ್ಜಿ | ೭೪ | ಅನಕ್ಷರಸ್ಥೆ | ಕೂಲಿ | ಗುಡೇಕೋಟೆ, ಕೂಡ್ಲಿಗಿ ಬಳ್ಳಾರಿ ಜಿಲ್ಲೆ |
| ೩೦. | ಪದ್ಮಾವತಿ | ೮೦ | ಅನಕ್ಷರಸ್ಥೆ | ವಯೋವೃದ್ಧೆ | ಗುಡೇಕೋಟೆ, ಕೂಡ್ಲಿಗಿ ಬಳ್ಳಾರಿ ಜಿಲ್ಲೆ |

| ಸಂ. ಹೆಸರು | ವಯಸ್ಸು | ವಿದ್ಯಾರ್ಹತೆ | ವೃತ್ತಿ | ವಿಳಾಸ |
|---|---|---|---|---|
| ೩೧. ತಿಪ್ಪಕ್ಕ | ೮೮ | ಅನಕ್ಷರಸ್ಥೆ | ವಯೋವೃದ್ಧೆ | ಗುಡೇಕೋಟೆ, ಕೂಡ್ಲಿಗಿ ಬಳ್ಳಾರಿ ಜಿಲ್ಲೆ |
| ೩೨. ದುರುಗಮ್ಮ | ೬೦ | ಅನಕ್ಷರಸ್ಥೆ | ಕೂಲಿ | ಭಟ್ರಹಳ್ಳಿ, ಮೊಳಕಾಲ್ಮೂರು |
| ೩೩. ಶಿವಲಿಂಗಮ್ಮ | ೪೫ | ಅನಕ್ಷರಸ್ಥೆ | ಕೂಲಿ | ದೇವಸಮುದ್ರ ಮೊಳಕಾಲ್ಮೂರು |
| ೩೪. ಮಹೇಶ್ ನಿಟ್ಟೂರು | ೩೧ | ೧೦ನೇ ತರಗತಿ | ಕಲಾವಿದ | ನಿಟ್ಟೂರು, ರಾಣಿಬೆನ್ನೂರು ಹಾವೇರಿ ಜಿಲ್ಲೆ |
| ೩೫. ಮಂಜುನಾಥ ರವೀಂದ್ರ ರಾಜನಹಳ್ಳಿ | ೧೬ | ಪಿ.ಯು.ಸಿ. | ವಿದ್ಯಾರ್ಥಿ | ಕರೂರ, ರಾಣಿಬೆನ್ನೂರು ಹಾವೇರಿ ಜಿಲ್ಲೆ |
| ೩೬. ಪಾರ್ವತಿ ಪಾಟೀಲ | ೪೩ | ೭ನೇ ತರಗತಿ | ಕಲಾವಿದೆ | ಮಾಸೂರ, ಹಿರೇಕೆರೂರು ಹಾವೇರಿ ಜಿಲ್ಲೆ |
| ೩೭. ಭೋಜರಾಜ ಪಾಟೀಲ | ೪೩ | ಎಂ.ಎ. | ನಿ.ಪ್ರಾಚಾರ್ಯರು | ಹಂಸಬಾವಿ, ಹಿರೇಕೆರೂರು ಹಾವೇರಿ ಜಿಲ್ಲೆ |
| ೩೮. ಸುರೇಶ | ೨೯ | ೯ನೇ ತರಗತಿ | ಕೂಲಿ | ಕುದುರೆಹಾಳ, ರಾಣಿಬೆನ್ನೂರು ತಾಲೂಕು ಹಾವೇರಿ ಜಿಲ್ಲೆ |
| ೩೯. ಹಾಲೇಶ್ ಗುಂಗೇರ | ೪೩ | ಬಿ.ಎ. | ಕಲಾವಿದ | ಅರೇಮಲ್ಲಾಪುರ ರಾಣಿಬೆನ್ನೂರು ತಾಲೂಕು ಹಾವೇರಿ ಜಿಲ್ಲೆ |
| ೪೦. ಸುರೇಶ ಕಬನೂರ | ೩೪ | ಎಂ.ಎ. | ಕೃಷಿ | ಕಬನೂರ, ಶಿಗ್ಗಾವಿ ತಾ. ಹಾವೇರಿ ಜಿಲ್ಲೆ |
| ೪೧. ಸುರೇಶ ಲಮಾಣಿ | ೨೯ | ಎಂ.ಎ. | ನಿರುದ್ಯೋಗಿ | ಧುಂಡಸಿ, ಶಿಗ್ಗಾವಿ ತಾ. ಹಾವೇರಿ ಜಿಲ್ಲೆ |
| ೪೨. ದುರುಗಪ್ಪ ತಿಮ್ಮಣ್ಣವರ್ | ೨೫ | ಬಿ.ಎ. | ವಿದ್ಯಾರ್ಥಿ | ನೆಗಳೂರು, ಹಾವೇರಿ ತಾ. ಹಾವೇರಿ ಜಿಲ್ಲೆ |
| ೪೩. ಮರಿಯಪ್ಪ ಕಾಳೆ | ೮೦ | ಅನಕ್ಷರಸ್ಥ | ಯಜಮಾನ | ಕಳ್ಳಿಹಾಳ್, ಹಾವೇರಿ ತಾ. ಹಾವೇರಿ ಜಿಲ್ಲೆ |

# ಛಾಯಾಚಿತ್ರಗಳು



ಎರಡುಕೆರೆ ಗ್ರಾಮದ ಒಂದು ದೃಶ್ಯ



ಬಂದಮ್ಮನ ಸಮಾಧಿಗುಡಿ: ಮುಂಭಾಗ



ಬಂದಮ್ಮನ ಸಮಾಧಿಗುಡಿ: ಪಾರ್ಶ್ವ ನೋಟ



ಬಂದಮ್ಮನ ಸಮಾಧಿಗುಡಿಯ ಬಳಿ ಲೇಖಕರು ಮರಿಗೌಡರು ಮತ್ತಿತರರು



ದಾಸಪ್ಪನ ಗುಡಿ



ಮಗದದ ಕೆರೆ



ಜನಪದ ಗೀತೆಯ ಧ್ವನಿಮುದ್ರಣ ಸಂದರ್ಭ

ಬಿ.ಆರ್. ಶಿವಕುಮಾರ್ ಮತ್ತು ಗಾಯಕಿಯರು



ಬಂದಮ್ಮನ ವಂಶಸ್ಥರು: ತಿಪ್ಪೇಸ್ವಾಮಿ, ಎಲ್ಲಪ್ಪ ಮತ್ತು

ತಿಪ್ಪೇಸ್ವಾಮಿ, ಬಂದಪ್ಪ ಮತ್ತು ರಾಮಾಂಜಿನಪ್ಪ



ಬಂದಮ್ಮನ ವಂಶಸ್ಥರು: ಹೊನ್ನೂರಮ್ಮ, ಗಿರಿಜಮ್ಮ, ಈರಮ್ಮ ಮತ್ತು

ಹೊನ್ನೂರಮ್ಮ, ಮೀನಾಕ್ಷಮ್ಮ, ನಿಂಗಮ್ಮ ಹಾಗೂ ಶಿವಮ್ಮ

